# ಏಕೀಕರಣೋತ್ತರ ಕರ್ನಾಟಕದ ಬಯಲುಸೀಮೆಯ ರೈತರ ಪ್ರತಿಭಟನೆಗಳು : ಚಾರಿತ್ರಿಕ ಅಧ್ಯಯನ

(ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಕೆ. ಎನ್. ವಿಶ್ವನಾಥ

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು






ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯

# ಏಕೀಕರಣೋತ್ತರ ಕರ್ನಾಟಕದ ಬಯಲುಸೀಮೆಯ ರೈತರ ಪ್ರತಿಭಟನೆಗಳು : ಚಾರಿತ್ರಿಕ ಅಧ್ಯಯನ

(ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ
ಕೆ.ಎನ್. ವಿಶ್ವನಾಥ

ಮಾರ್ಗದರ್ಶಕರು
ಡಾ.ವಿರೂಪಾಕ್ಷಿ ಪೂಜಾರಹಳ್ಳಿ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೯

## ಮಾರ್ಗದರ್ಶಕರ ಪ್ರಮಾಣ ಪತ್ರ

**ಶ್ರೀ ಕೆ.ಎನ್. ವಿಶ್ವನಾಥ** ಅವರು ನನ್ನ ಮಾರ್ಗದರ್ಶನದಲ್ಲಿ **ಏಕೀಕರಣೋತ್ತರ ಕರ್ನಾಟಕದ ಬಯಲುಸೀಮೆಯ ರೈತರ ಪ್ರತಿಭಟನೆಗಳು : ಚಾರಿತ್ರಿಕ ಅಧ್ಯಯನ** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೇ ಪ್ರಕಟಣೆಗಾಗಿ ಸಲ್ಲಿಸಿರುವದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 21/03/2019

# ಸಂಶೋಧಕರ ಪ್ರಮಾಣ ಪತ್ರ

**ಡಾ.ವಿರೂಪಾಕ್ಷಿ ಪೂಜಾರಹಳ್ಳಿ** ಅವರ ಮಾರ್ಗದರ್ಶನದಲ್ಲಿ **ಏಕೀಕರಣೋತ್ತರ ಕರ್ನಾಟಕದ ಬಯಲುಸೀಮೆಯ ರೈತರ ಪ್ರತಿಭಟನೆಗಳು : ಚಾರಿತ್ರಿಕ ಅಧ್ಯಯನ** ಎಂಬ ಈ ಮಹಾ ಪ್ರಬಂಧದವನ್ನು ಸಿದ್ಧಪಡಿಸಿ, ಪಿಎಚ್.ಡಿ.ಪದವಿಗಾಗಿ **ಚರಿತ್ರೆ ವಿಭಾಗಕ್ಕೆ** ಸಾದರಪಡಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಕೆ.ಎನ್. ವಿಶ್ವನಾಥ**
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 21/03/2019

# ಪರಿವಿಡಿ

ಅಧ್ಯಾಯ – ೧

# ಉದ್ದೇಶ, ವ್ಯಾಪ್ತಿ, ವಿಧಾನ, ಈವರೆಗಿನ ಅಧ್ಯಯನಗಳ ಸಮೀಕ್ಷೆ ಮತ್ತು ಸ್ವರೂಪ

ಅಧ್ಯಾಯ – ೧

# ಉದ್ದೇಶ, ವ್ಯಾಪ್ತಿ, ವಿಧಾನ, ಈವರೆಗಿನ ಅಧ್ಯಯನಗಳ ಸಮೀಕ್ಷೆ ಮತ್ತು ಸ್ವರೂಪ

**ಪ್ರಸ್ತಾವನೆ**

ಪ್ರಪಂಚದ ಮಾನವನ ಇತಿಹಾಸವನ್ನು ಅನಾದಿಕಾಲದಿಂದಲೂ ಕಾಣಬಹುದು. ಪ್ರಾಗೈತಿಹಾಸ ಕಾಲದಿಂದ ಆರಂಭವಾದ ಮಾನವನ ಜೀವನ ಅನಾಗರೀಕತೆಯಿಂದ ಕೂಡಿತ್ತು. ಅಲೆಮಾರಿಯಾಗಿ ಅಲೆಯುತ್ತಾ ಹಸಿಮಾಂಸ, ಗೆಡ್ಡೆ–ಗೆಣಸುಗಳನ್ನು ತಿಂದು ಜೀವನ ನಿರ್ವಹಿಸುತ್ತಿದ್ದನು. ನಂತರ ಹಂತ ಹಂತವಾಗಿ ಜೀವನವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿ ನಾಗರೀಕತೆಗಳ ಉಗಮಕ್ಕೆ ಕಾರಣನಾದನು. ಆ ನಾಗರೀಕತೆಗಳೆಂದರೆ ಈಜಿಪ್ಟ್ ನಾಗರೀಕತೆ, ಅಸ್ಸೀರಿಯಾ ನಾಗರೀಕತೆ, ಇಂಕ ನಾಗರೀಕತೆ, ಈಜಿಯನ್ ನಾಗರೀಕತೆ, ಸುಮೇರಿಯನ್ ನಾಗರೀಕತೆ, ಸಿಂಧೂಕಣಿವೆ ನಾಗರೀಕತೆ ಮೊದಲಾದವು.

ಈ ನಗರಗಳ ಉಗಮದೊಡನೆ ಸಂಸ್ಕೃತಿ ಮತ್ತು ರಾಜಕೀಯ ಸಂಘಟನೆಗಳು ಬೆಳೆದು ಬಂದವು. ಇದರೊಡನೆ ಪ್ರಾರಂಭವಾದುದು ಮಾನವ ಇತಿಹಾಸದ ಬೆಳವಣಿಗೆಗೆ ಕಾರಣವಾದ ಬೇಟೆ ಮತ್ತು ಪಶುಪಾಲನೆ. ಭೂಮಿಯ ಮೇಲೆ ಮಾನವನ ಹಿಡಿತ ಆರಂಭವಾದ ಮೇಲೆ ಸ್ವಂತಕ್ಕೆ ಆಸ್ತಿಯನ್ನು ಹೊಂದುವ ಪರಿಕಲ್ಪನೆ ಬಂದಿತು. ಅದರಲ್ಲೂ ವ್ಯವಸಾಯ ಉತ್ಪನ್ನದ ಹೆಚ್ಚಳದಿಂದ ಮಾನವನ ಆರ್ಥಿಕ ಸ್ಥಿತಿಯ ಮೇಲೆ ಗಣನೀಯವಾದ ಬದಲಾವಣೆಗಳಾದವು. ಮಾನವನು ಬೇಟೆ, ಪಶುಪಾಲನೆ ಮತ್ತು ವ್ಯವಸಾಯ ಮಾತ್ರವಲ್ಲದೆ ಪಶುಸಂಗೋಪನೆ ಮತ್ತು ವ್ಯಾಪಾರ ವಾಣಿಜ್ಯದ ಮೇಲೂ ಅವಲಂಬಿತನಾದನು. ಆ ಮೂಲಕ ಹೊಸ ಜೀವನವನ್ನು ರೂಪಿಸಿಕೊಂಡನು.

ಕೃಷಿ ಕ್ಷೇತ್ರವು ಆರ್ಥಿಕವಾಗಿ ಸುಧಾರಣೆಗೊಂಡಾಗ ಹಳ್ಳಿಗಳು, ನಗರಗಳು, ರಾಜ್ಯಗಳು, ಸಾಮ್ರಾಜ್ಯಗಳು, ರಾಜಕೀಯ ಚಟುವಟಿಕೆಗಳು, ರಾಜರು, ಸಾಮಂತರು, ಮಂತ್ರಿಗಳು, ಅಧಿಕಾರಿ

ವರ್ಗ, ಸೈನಿಕ ಎಂಬ ಹೊಸ ವ್ಯವಸ್ಥೆ ಹುಟ್ಟಿಕೊಂಡಿತು. ನಂತರದ ಸಮಯದಲ್ಲಿ ಸಾಮ್ರಾಜ್ಯದ ವಿಸ್ತರಣೆಗೆ ಅನೇಕ ಯುದ್ಧಗಳು ನಡೆದವು. ಹಾಗೆಯೇ ಸಾಮ್ರಾಜ್ಯದ ಬೆಳವಣಿಗೆ ಹಾಗೂ ಅಭಿವೃದ್ಧಿಗಾಗಿ ಆಡಳಿತ ವ್ಯವಸ್ಥೆಯನ್ನು ಅಳವಡಿಸಿಕೊಂಡು ಶಾಸನಗಳನ್ನು ಜಾರಿಗೆ ತರುವುದರ ಮೂಲಕ ರೈತರ ಮೇಲೆ ಅನೇಕ ಬಗೆಯ ಕಂದಾಯ, ತೆರಿಗೆಗಳನ್ನು ವಿಧಿಸಿ ವಸೂಲಿ ಮಾಡಲು ಪ್ರಾರಂಭಿಸಿದರು. ಅಂದಿನಿಂದ ರೈತ ಮತ್ತು ತೆರಿಗೆ ವಸೂಲಿ ಅಧಿಕಾರಿಗಳ ನಡುವೆ ಕಲಹಗಳು ಏರ್ಪಟ್ಟವು. ಅಧಿಕಾರಿಗಳು ತೆರಿಗೆ ವಸೂಲಿ ಮಾಡುವಾಗ ಅನುಸರಿಸುತ್ತಿದ್ದ ಕಠೋರ ಕ್ರಮಗಳು ರೈತರನ್ನು ಹೋರಾಡುವಂತೆ, ದಂಗೆ ಏಳುವಂತೆ ಪ್ರೇರೇಪಿಸಿದವು. ಈ ರೀತಿಯ ಹೋರಾಟಗಳೇ ಮುಂದೆ ಪ್ರತಿಭಟನೆಗಳಾಗಿ ಪರಿವರ್ತನೆಯಾದವು.

ಭೂಮಿಯನ್ನು ಉಳುಮೆ ಮಾಡಿ, ಬಿತ್ತಿ, ಬೆಳೆ ತೆಗೆಯುವ ಕಾಯಕವೇ ಬೇಸಾಯ. ಇದು ಮಾನವನ ಹೊಟ್ಟೆಗೆ ತುತ್ತು ಕೊಡುವ ಒಂದು ಮುಖ್ಯ ಉದ್ಯೋಗವಾಗಿದೆ. ಮಾನವನು ಬೇಸಾಯದಲ್ಲಿ ಸುಮಾರು ಹದಿನೈದು ಸಾವಿರ ವರ್ಷಗಳ ಈಚೆಗೆ ತೊಡಗಿಸಿಕೊಂಡ ಎಂದು ಹೇಳುತ್ತಾರೆ. ಅದರಲ್ಲೂ 'ಹೆಣ್ಣೇ ವ್ಯವಸಾಯದ ತಾಯಿ' ಎಂಬ ಮಾತಿದೆ. ಸ್ತ್ರೀಯರು ನೆಲಸಂಬಂಧಿ ಕೆಲಸಗಳಲ್ಲಿ ತೊಡಗಿದ್ದವರಲ್ಲಿ ಮೊದಲಿಗರಾಗಿದ್ದ ಕಾರಣ ಅವರೇ ಅತ್ಯಂತ ಪ್ರಾಚೀನ ರೈತರು ಎಂದು ತಾಟೆ ಎಂಬ ವಿದ್ವಾಂಸ ಹೇಳಿದ್ದಾರೆ. ವಿದ್ವಾಂಸರಾದ ಬೀಲ್ಸ್ ಮತ್ತು ಹೋಯ್ಜರ್ ಅವರು ಹೆಣ್ಣೇ ಮೊದಲ ಬೇಸಾಯಗಾರ್ತಿ ಎಂದಿದ್ದಾರೆ.[೧]

ರೈತರೆಂದರೆ ಪ್ರತ್ಯಕ್ಷವಾಗಿ ಬೇಸಾಯದಲ್ಲಿ ತೊಡಗಿರುವವರನ್ನು, ಕೃಷಿ ಮಾಡುವವರನ್ನು, ಬೆಳೆ ಬೆಳೆಯುವವರನ್ನು, ಬೇಸಾಯ ಮಾಡುವವರನ್ನು ರೈತ ಎಂದು ಕರೆಯುತ್ತಾರೆ. ಕ್ರಿ.ಶ. ೧೭ನೇ ಶತಮಾನದ ಕಾಡಸಿದ್ದೇಶ್ವರರು ತಮ್ಮ ವಚನದಲ್ಲಿ ಸ್ವತಂತ್ರ್ಯ ಹೊಲವುಳ್ಳ, ಬಿಟ್ಟಿಬೇಗಾರ ಮಾಡದ, ಖಾತೆ ಮಂಜೂರಾತಿ ಇರುವ ಭೂಮಿಯ ಒಡೆಯನಾಗಿ ಉಳುಮೆ ಮಾಡುವಾತ ರಾಜಾರೈತ, ಹಾಗಿಲ್ಲದವ ಸಾಮಾನ್ಯ ರೈತ ಎಂದಿದ್ದಾರೆ. ಈ ಬಗ್ಗೆ 'ಕೃಷಿ ಜ್ಞಾನ ಪ್ರದೀಪಿಕೆ' ಎಂಬ ಕೃತಿಯಲ್ಲಿ ವಿವರಗಳಿರುವುದು ಗಮನಾರ್ಹ.

'ರೈತ' ಎಂಬ ಪದಕ್ಕೆ ಒಕ್ಕಲಿಗ, ಕೃಷಿಕ, ಭೂಮಿಕಾರ, ಬೆಸವೊಕ್ಕಲು, ಬೇಸಾಯಗಾರ ಎಂಬ ಅರ್ಥಗಳಿವೆ, ಈ ರೈತರು ಅನಾದಿಕಾಲದಿಂದ ಜಮೀನ್ದಾರರು ಹಾಗೂ ಭೂಮಾಲೀಕರಿಂದ ಶೋಷಣೆಗೆ ಒಳಗಾಗಿದ್ದಾರೆ. ಶೋಷಣೆಯಿಂದ ಮುಕ್ತವಾಗಲು ರೈತರು ಪ್ರತಿಭಟನೆ ಮಾಡುತ್ತಾ ಬಂದಿದ್ದಾರೆ. ಈ ರೀತಿಯ ಪ್ರತಿಭಟನೆಗಳು ಪ್ರಾಚೀನ ಕಾಲದಿಂದ ಆರಂಭವಾಗಿ ಮಧ್ಯಕಾಲೀನ ಮುಸ್ಲಿಂರ ಆಳ್ವಿಕೆಯ ಕಾಲದವರೆಗೂ ಮುಂದುವರೆದವು. ಆಧುನಿಕ ಕಾಲದಲ್ಲಿ ಬ್ರಿಟೀಷರ ಕಠೋರ ನೀತಿಗಳಿಂದಾಗಿ ರೈತ ಪ್ರತಿಭಟನೆಗಳು ರಾಷ್ಟ್ರವ್ಯಾಪಿ ತೀವ್ರ ಸ್ವರೂಪವನ್ನು ಪಡೆದುಕೊಂಡವು.

ಈ ರೀತಿಯ ರೈತ ಪ್ರತಿಭಟನೆಗಳು ಕರ್ನಾಟಕದಿಂದ ಹೊರತೇನಾಗಿಲ್ಲ. ಮೊಟ್ಟಮೊದಲ ಬಾರಿಗೆ ಚಿಕ್ಕದೇವರಾಯರ(೧೬೭೨-೧೭೦೪) ಕಾಲದಲ್ಲಿ ಕಂದಾಯ ಹೆಚ್ಚಳದ ನಿಬಂಧನೆ ಹೊಸ ತೆರಿಗೆಗಳ ಕಾರಣದಿಂದ ಪ್ರತಿಭಟನೆ ನಡೆಯಿತು. ನಂತರ ೧೮೦೦ರಲ್ಲಿ ದಕ್ಷಿಣ ಕನ್ನಡ

ಜಿಲ್ಲೆಯಲ್ಲಿ ರೈತ ಪ್ರತಿಭಟನೆ ನಡೆದಿದ್ದು ಹತ್ತು ಹಲವು ಕಾರಣಗಳಿದ್ದವು. ಅವುಗಳೆಂದರೆ: ಬಲತ್ಕಾರದ ತೆರಿಗೆ ವಸೂಲಿ, ಪದಾರ್ಥಗಳ ಮೇಲಿನ ಹೆಚ್ಚಿನ ಕರ, ಹೆಚ್ಚುತ್ತಿರುವ ಗೇಣಿ ಮುಂತಾದವುಗಳ ವಿರುದ್ಧ ಪ್ರಥಮ ಬಾರಿಗೆ ಕೂಟಗಳನ್ನು ರಚಿಸಿ ಪ್ರತಿಭಟನೆ ಮಾಡಿದರು. ಇದೇ ಸಮಯದಲ್ಲಿ ಮೈಸೂರು ಪ್ರಾಂತ್ಯದ ಶಿವಮೊಗ್ಗ ಜಿಲ್ಲೆಯ ನಗರ ಪ್ರದೇಶದಲ್ಲಿ ರೈತರು ವಸಾಹತುಶಾಹಿ ಹಾಗೂ ಪ್ರಾಂತೀಯ ರಾಜರೊಂದಿಗೆ ನೇರವಾಗಿ ಸಂಘರ್ಷಕ್ಕೆ ಇಳಿದಿದ್ದು ಪ್ರಾಂತ್ಯದ ಅಧಿಕಾರ ಅವನತಿಗೂ ಕಾರಣವಾಯಿತು. ಈ ಪ್ರತಿಭಟನೆಗಳನ್ನು ವಸಾಹತುಶಾಹಿ ಸರ್ಕಾರ ತೀವ್ರ ದಮನಕಾರಿ ನೀತಿ ಅನುಸರಿಸಿ ಹತ್ತಿಕ್ಕಿತು.

೧೮೩೦ರ ದಶಕದಲ್ಲಿ ಅಧಿಕ ತೆರಿಗೆ ವಿಧಿಸಿದ ಕಾರಣ ತರೀಕೆರೆ ಪಾಳೆಯಗಾರ ಸರ್ಜಾಹನುಮಪ್ಪ ನಾಯಕ ಬ್ರಿಟೀಷರೊಂದಿಗೆ ಪ್ರತಿಭಟನೆ ಮಾಡುತ್ತಾನೆ. ತದನಂತರ ಒಂದು ಶತಮಾನಗಳ ಕಾಲ ದೊಡ್ಡ ಪ್ರಮಾಣದ ಪ್ರತಿಭಟನೆಗಳು ನಡೆದಿದ್ದು ಹೆಚ್ಚಾಗಿ ಕಂಡುಬರುವುದಿಲ್ಲ. ೧೯೩೦ರ ಕಾಲಘಟ್ಟದಲ್ಲಿ ಗಾಂಧೀಜಿಯವರ ಕರೆಗೆ ಓಗೊಟ್ಟ ಕರ್ನಾಟಕದ ರೈತರು, ಉತ್ತರ ಕನ್ನಡ ಜಿಲ್ಲೆಯ ಶಿರಸಿ, ಸಿದ್ದಾಪುರ, ಅಂಕೋಲ ಮತ್ತಿತರ ಪ್ರದೇಶಗಳಲ್ಲಿ ಕರಾನಿರಾಕರಣ ಚಳವಳಿ ಮತ್ತು ಅರಣ್ಯ ಸತ್ಯಾಗ್ರಹವನ್ನು ಕೈಗೊಂಡರು. ಈ ರೀತಿಯ ರಾಷ್ಟ್ರೀಯ ಪ್ರತಿಭಟನೆಗಳಲ್ಲಿ ಕರ್ನಾಟಕದ ರೈತರು ಪಾಲ್ಗೊಂಡಿದ್ದು ಪ್ರಥಮಬಾರಿಯಾಗಿತ್ತು. ಈ ರೀತಿಯ ಪ್ರತಿಭಟನೆಗಳು ವಸಾಹತುಶಾಹಿ ಸರ್ಕಾರದ ವಿರುದ್ಧ ನಡೆದವು.

ಸ್ವಾತಂತ್ರ್ಯದ ನಂತರ ಈ ರೈತ ಪ್ರತಿಭಟನೆಗಳು ಹೊಸ ಆಯಾಮಗಳನ್ನು ಪಡೆದುಕೊಂಡವು. ಹೊಸ ಬದಲಾವಣೆಯೊಂದಿಗೆ ವೈರುಧ್ಯಗಳು ಬದಲಾಗಿ ಪ್ರಥಮ ಬಾರಿಗೆ ಪ್ರಜಾಪ್ರಭುತ್ವ ಸರ್ಕಾರ, ಊಳಿಗಮಾನ್ಯ ಪದ್ಧತಿ, ಉಳುವವನೆ ಭೂಮಿಯ ಒಡೆಯ ಇತ್ಯಾದಿ ವಿಷಯಗಳ ಕುರಿತು ರೈತ ಪ್ರತಿಭಟನೆಗಳು ಆರಂಭವಾದವು. ನಂತರ ಈ ವಿಷಯಗಳ ಜೊತೆಗೆ ಸಾಲದ ವಸೂಲಾತಿ, ಗೇಣಿದಾರರಿಗೆ ನೀಡುತ್ತಿರುವ ಕಿರುಕುಳ, ಬೆಂಬಲ ಬೆಲೆ ನಿಗದಿ, ಲೇವಾದೇವಿ ವಿರೋಧ, ರಸಗೊಬ್ಬರ ಅಭಾವ ಇನ್ನೂ ಹಲವಾರು ಕಾರಣಗಳ ಹಿನ್ನೆಲೆಯಲ್ಲಿ ರೈತ ಪ್ರತಿಭಟನೆಗಳು ನಡೆಯುತ್ತಿದ್ದು, ಬಯಲುಸೀಮೆಯ ಪ್ರದೇಶಗಳಾದ ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ರೈತ ಪ್ರತಿಭಟನೆಗಳು ವಿಶೇಷವಾಗಿ ನಡೆದಿದ್ದು, ಅವುಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗಿದೆ.

ಒಂದು ಪ್ರದೇಶದ ಚರಿತ್ರೆಯನ್ನು ರಚಿಸುವ ಮೊದಲು, ಅ ಪ್ರದೇಶದ ಭೌಗೋಳಿಕತೆಯನ್ನು ತಿಳಿಯುವುದು ಅತ್ಯಂತ ಅವಶ್ಯಕ. ಹಾಗೇಯೆ ಕರ್ನಾಟಕದ ಬಯಲುಸೀಮೆ ಪ್ರದೇಶವು ತನ್ನದೇಯಾದ ಮಹತ್ವದ ಸ್ಥಾನವನ್ನು ಪಡೆದಿದೆ. ಬಯಲು ಎಂದರೆ ಮೈದಾನ, ತೆರವಾದ ದೊಡ್ಡಸ್ಥಳ, ಎತ್ತರವಾದ ಜಾಗ ಎಂಬ ಅರ್ಥಗಳಿವೆ. ಸೀಮೆ ಎಂದರೆ ಗಡಿ, ಹದ್ದು, ದಂಡೆ, ದೇಶ, ವಿದೇಶ ಎಂಬ ನಾನಾರ್ಥಗಳಿವೆ. ಸೀಮೆ ಎಂಬ ಪದ ಬಯಲು ಹಾಗೂ ಸುತ್ತಮುತ್ತ ಎಂಬ ಅರ್ಥವನ್ನು ಕೊಡುತ್ತದೆ. ಸೀಮೆ ಎಂಬ ಪ್ರದೇಶವಾಚಕ ಪದವನ್ನು ನಾಡಿಗೆ ಪರ್ಯಾಯವಾಗಿ

ಬಳಸಿರುವುದುಂಟು. ಸೀಮೆಯನ್ನು ತೆಲುಗಿನಲ್ಲಿ ಗಡಿ, ಜಮ್ಮಾ, ಎಲ್ಲೆ, ಸೀಮಾ ಎಂದು ಕರೆಯುವರು.

ಪ್ರಾಕೃತಿಕವಾಗಿ ಕರ್ನಾಟಕವು ಉತ್ತರ ಕರ್ನಾಟಕದ ಪ್ರಸ್ಥಭೂಮಿ, ಮಧ್ಯ ಕರ್ನಾಟಕದ ಪ್ರಸ್ಥಭೂಮಿ, ದಕ್ಷಿಣ ಕರ್ನಾಟಕದ ಪ್ರಸ್ಥಭೂಮಿ ಹಾಗೂ ಕರ್ನಾಟಕ ಕರಾವಳಿ ಪ್ರದೇಶವನ್ನು ಹೊಂದಿದೆ. ಮಧ್ಯ ಕರ್ನಾಟಕದ ಪ್ರಸ್ಥಭೂಮಿಯು ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ರಾಯಚೂರು, ಕೊಪ್ಪಳ, ಶಿವಮೊಗ್ಗ ಜಿಲ್ಲೆಗಳನ್ನು ಒಳಗೊಂಡಿದ್ದು 'ಬಯಲುಸೀಮೆ' ಎಂದು ಗುರುತಿಸಲಾಗಿದೆ. ಈ ಭಾಗವು ಬಹುಪಾಲು ತುಂಗಾಭದ್ರಾ ನದಿ ಕಣಿವೆ ಪ್ರದೇಶದಿಂದ ಪ್ರತಿನಿಧಿಸಲ್ಪಟ್ಟಿದೆ. ಬಯಲುಸೀಮೆಯಲ್ಲಿ ಸರಾಸರಿ ಮಳೆಯ ಪ್ರಮಾಣ ಕಡಿಮೆ. ಈ ಪ್ರದೇಶದಲ್ಲಿ ಮಳೆಯ ಪ್ರಮಾಣ ೪೦ ದಿನಗಳಿಗಿಂತಲೂ ಕಡಿಮೆ. ಬಯಲುಸೀಮೆಯ ಮಧ್ಯಭಾಗದಲ್ಲಿನ ರೈತರು ಅನೇಕ ಸಮಸ್ಯೆಗಳಿಗೆ ಒಳಗಾಗಿದ್ದು ಪ್ರತಿಭಟನೆಯಲ್ಲಿ ನಿರತರಾಗಿದ್ದಾರೆ. ಅದರಲ್ಲೂ ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ರೈತ ಪ್ರತಿಭಟನೆಗಳು ಹೆಚ್ಚಾಗಿ ಕಂಡುಬರುತ್ತವೆ.

**ಅಧ್ಯಯನದ ಉದ್ದೇಶ**

ಪ್ರಸ್ತುತ ಸಂಶೋಧನೆ ಚರಿತ್ರೆ (ಕೃಷಿ ಚರಿತ್ರೆ) ಅಧ್ಯಯನದ ವಿಧಿವಿಧಾನವನ್ನು ಹೊಂದಿದೆ. ಕರ್ನಾಟಕದ ಬಯಲುಸೀಮೆಯ ರೈತರು ಹೆಚ್ಚಾಗಿ ಮಳೆಯಾಶ್ರಿತ ಕೃಷಿಯನ್ನು ಅವಲಂಬಿಸಿದ್ದು, ನಾನಾ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳಲ್ಲಿ ಬೆಲೆ ಕುಸಿತ, ವರ್ತಕರ ಮೋಸ, ಕಬ್ಬು ಬೆಳೆಗಾರರ ಸಮಸ್ಯೆಗಳು, ಭೂಮಾಲೀಕರಿಂದ ಗೇಣಿದಾರರಿಗಾದ ಅನ್ಯಾಯ, ಬೆಳೆಗಳಿಗೆ ಅನಿಶ್ಚಿತ ಬೆಲೆಗಳು, ಬ್ಯಾಂಕಿನ ಸಾಲದ ತಕರಾರುಗಳು, ನೀರಿನ ಸಮಸ್ಯೆಗಳು, ಗೊಬ್ಬರಗಳ ಅಭಾವ ಹಾಗೂ ಬೆಲೆಗಳ ಹೆಚ್ಚಳ, ಬೆಂಬಲ ಬೆಲೆ ಸಿಗದಿದ್ದಾಗ, ಕೃಷಿ ಕಾರ್ಖಾನೆಗಳು ಭ್ರಷ್ಟಾಚಾರವೆಸಗಿದಾಗ, ಅನ್ಯಾಯದ ತೆರಿಗೆ ವಿರುದ್ಧ, ಬೆಳೆಗಳಿಗೆ ಹಾನಿಯುಂಟಾದಾಗ, ಪ್ರಾಕೃತಿಕ ವಿಕೋಪಗಳುಂಟಾದಾಗ, ಭೂಮಿಗಳನ್ನು ಕಳೆದುಕೊಂಡಾಗ, ವಿದ್ಯುತ್ ಅಭಾವ ಉಂಟಾದಾಗ, ಮಾರುಕಟ್ಟೆಯಲ್ಲಿ ಸರಕುಗಳನ್ನು ಕೊಳ್ಳದಿದ್ದಾಗ, ವ್ಯಾಪಾರದ ಅವ್ಯವಹಾರಗಳು, ಭೂ ಸ್ವಾದೀನ ಮುಂತಾದ ಹಲವು ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ದೇಶದ ಬಹಳಷ್ಟು ಭಾಗಗಳಲ್ಲಿ ಪ್ರತಿಭಟನೆಗಳು ಸಂಭವಿಸಿವೆ. ಇದೇ ರೀತಿಯಲ್ಲಿ ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲೂ ಹಲವಾರು ರೈತ ಪ್ರತಿಭಟನೆಗಳು ನಡೆದಿವೆ. ಆದರೆ ಅವುಗಳ ಸ್ವರೂಪ ಭಿನ್ನ-ಭಿನ್ನವಾಗಿವೆ. ಈ ನಿಟ್ಟಿನಲ್ಲಿ ಕಂಡುಬರುವ ಪ್ರತಿಭಟನೆಗಳ ಪ್ರಾಮುಖ್ಯತೆ, ವಿಶೇಷತೆ, ಮಹತ್ವ ಹಾಗೂ ಅದರಿಂದಾದ ಬದಲಾವಣೆಗಳನ್ನು ಗುರುತಿಸಿ, ಅವುಗಳ ಹಿಂದಿರುವ ವಿಷಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ರೈತ ಪ್ರತಿಭಟನೆಯಿಂದಲೇ ಅಸ್ತಿತ್ವಕ್ಕೆ ಬಂದ ಭೂ ಸುಧಾರಣಾ ಶಾಸನಗಳು ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಆದಂತಹ ಬದಲಾವಣೆಗಳನ್ನು ತಿಳಿಸುವ ಪ್ರಯತ್ನವಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ರೈತ ಪ್ರತಿಭಟನೆಗಳು ಹಾಗೂ ಸ್ವಾತಂತ್ರ್ಯ ನಂತರದಲ್ಲಿ ನಡೆದ ರೈತ ಪ್ರತಿಭಟನೆಗಳ ನಡುವೆ ಇರುವ ಭಿನ್ನತೆಗಳು, ಸಮಸ್ಯೆಗಳು ಹಾಗೂ ಈ ಹೋರಾಟಗಳು ಹಂತ ಹಂತವಾಗಿ ಬದಲಾವಣೆಯಾಗುತ್ತ ಬಂದ ಬಗೆಯನ್ನು ಪರಿಚಯಿಸಲಾಗಿದೆ.

ಬಯಲುಸೀಮೆಯ ರೈತ ಪ್ರತಿಭಟನೆಗಳಿಗೆ ಕಾರಣವಾದ ಅಂಶಗಳನ್ನು ಇಲ್ಲಿ ಗುರುತಿಸುವ ಪ್ರಯತ್ನವಿದೆ.

ಬಯಲುಸೀಮೆಯಲ್ಲಿ ಅನೇಕ ರೈತ ಪ್ರತಿಭಟನೆಗಳು ನಡೆದಿದ್ದು ಇಂತಹ ಪ್ರತಿಭಟನೆಗಳು ಕುರಿತು ಪತ್ರಿಕೆಗಳಲ್ಲಿ ಹಾಗೂ ಸೀಮಿತ ಪ್ರದೇಶಕ್ಕೆ ಸಂಬಂಧಿಸಿದ ಅಧ್ಯಯನಗಳಲ್ಲಿ ಕಾಣಬಹುದಾಗಿದ್ದು, ಬಯಲು ಸೀಮೆಯಲ್ಲಿ ವಿಶೇಷವಾಗಿ ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ಜಿಲ್ಲೆಯ ರೈತ ಪ್ರತಿಭಟನೆಗಳ ಕುರಿತು ಮಾಹಿತಿ ಕಲೆ ಹಾಕಿ, ಅದರಿಂದಾದ ಬದಲಾವಣೆಗಳನ್ನು ಹಾಗೂ ಪರಿಣಾಮಗಳನ್ನು ಚರ್ಚಿಸಲಾಗಿದೆ.

ರೈತ ಪ್ರತಿಭಟನೆಗಳು ಆರ್ಥಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿವೆ ಎಂಬ ಮಾತುಗಳು ಕೇಳಿಬರುತ್ತಿವೆ. ಆದರೆ ಬಯಲುಸೀಮೆಯಲ್ಲಿ ನಡೆಯುವ ಪ್ರತಿಭಟನೆಗಳು ಆರ್ಥಿಕ ಕ್ಷೇತ್ರಕ್ಕೆ ಸೀಮಿತವಾಗಿರದೇ ವಿಭಿನ್ನವಾಗಿದ್ದು ಅವುಗಳನ್ನು ಗುರುತಿಸಲಾಗಿದೆ.

ಬಯಲುಸೀಮೆಯ ರೈತರ ಪ್ರಮುಖ ಬೆಳೆ ಶೇಂಗಾ ಮತ್ತು ಈರುಳ್ಳಿ. ಈ ಬೆಳೆಗಳಿಗೆ ಬೆಂಬಲ ಬೆಲೆ ಸಿಗದಿದ್ದಾಗ ರೈತ ಮಾಡಿರುವ ಪ್ರತಿಭಟನೆಗಳನ್ನು ಹಾಗೂ ಅದಕ್ಕೆ ಸರ್ಕಾರ ಸ್ಪಂದಿಸಿದ ಅಂಶಗಳನ್ನು ನಿರೂಪಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಆಧುನಿಕ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ರೈತ ಪ್ರತಿಭಟನೆಗಳ ಪಾತ್ರವನ್ನು ತಿಳಿಯುವುದಾಗಿದೆ. ಒಟ್ಟಾರೆಯಾಗಿ ರೈತ ಪ್ರತಿಭಟನೆಗಳ ಹುಟ್ಟು, ಬೆಳವಣಿಗೆ, ವಿವಿಧ ಕ್ಷೇತ್ರಗಳಲ್ಲಿ ವಹಿಸಿದ ಪಾತ್ರಗಳು ಹಾಗೂ ಅವರ ಸಾಧನೆಗಳ ಕುರಿತು ಮಾಹಿತಿಯನ್ನು ಕಲೆ ಹಾಕಲಾಗಿದೆ.

ಬಯಲುಸೀಮೆಯಲ್ಲಿ ರೈತರ ಸಮಸ್ಯೆಗಳಿಗೆ ಸ್ಪಂದಿಸುವ ಪ್ರಮುಖ ರೈತ ಸಂಘಟನೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಸ್ವಾತಂತ್ರ್ಯ ನಂತರದ ರೈತ ಪ್ರತಿಭಟನೆಗಳು ವಿಭಿನ್ನ ಸ್ವರೂಪಗಳನ್ನು ಪಡೆದಿದ್ದು, ಈ ಪ್ರತಿಭಟನೆಗಳಲ್ಲಿ ರೈತರು ಸಕ್ರೀಯವಾಗಿ ಪಾಲ್ಗೊಳ್ಳುವಂತೆ ಮಾಡಲು ರೈತ ಸಂಘಗಳು ವಹಿಸುವ ಪಾತ್ರವನ್ನು ಪರಿಚಯಿಸಲಾಗಿದೆ.

ರಾಜಪ್ರಭುತ್ವದ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜ, ಮುಖಂಡ, ನಾಯಕನಿಗೆ ತನ್ನದೇಯಾದಂತಹ ಮಹತ್ವವಿದೆ. ಘಟನೆಗಳು, ಸಾಧನೆಗಳು ಯಾವುದೇ ಕ್ಷೇತ್ರದಲ್ಲಿ ಸಂಭವಿಸಿದರೂ ಅದಕ್ಕೆ ಕಾರಣ ಈ ನಾಯಕತ್ವ. ಹಾಗೆಯೇ ರೈತರಿಗೆ ಸಮಸ್ಯೆಗಳು ಉಂಟಾದಾಗ, ಅದಕ್ಕೆ ಸ್ಪಂದಿಸಿ ಪ್ರತಿಭಟನೆಯ ಮೂಲಕ ನ್ಯಾಯ ದೊರಕಿಸಿ ಕೊಡುವ ಪ್ರಯತ್ನ ಈ ರೈತ ನಾಯಕರು ಹಾಗೂ ಮುಖಂಡರಿಂದ ಆಗುತ್ತಿದೆ. ಇಂತಹ ರೈತ ನಾಯಕರ ಹುಟ್ಟು, ಜೀವನ, ಬೆಳವಣಿಗೆ, ಅವರು ನಡೆದುಕೊಂಡು ಬಂದ ಮಾರ್ಗ, ಸ್ಫೂರ್ತಿ, ಪ್ರೇರಣೆ, ಆರ್ಥಿಕ ಮಟ್ಟ, ತಮ್ಮ ನಾಯಕತ್ವದಲ್ಲಿ ಮಾಡಿದ ರೈತ ಪ್ರತಿಭಟನೆಗಳನ್ನು ಚರ್ಚಿಸಲಾಗಿದೆ.

ರೈತ ಹೋರಾಟಗಳ ಮುಂದಿರುವ ಸಮಸ್ಯೆಗಳು, ಸವಾಲುಗಳು, ಸಾಧ್ಯತೆಗಳನ್ನು ಚರ್ಚಿಸಿ, ಪರಿಹಾರೋಪಾಯಗಳನ್ನು ಕಂಡುಕೊಂಡಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ವಿವೇಚಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಈ ಅಧ್ಯಯನವು ಕರ್ನಾಟಕ ಏಕೀಕರಣದ ನಂತರದಿಂದ ಸಮಕಾಲೀನವರೆಗೆ ಅಂದರೆ ಕ್ರಿ.ಶ. ೧೯೫೬ ರಿಂದ ೨೦೧೮ರವರೆಗೆ ವಿಷಯದ ವ್ಯಾಪ್ತಿಯನ್ನು ಹೊಂದಿದೆ. ಪೂರಕವಾಗಿ ಕರ್ನಾಟಕ ರೈತ ಚಳವಳಿಗಳನ್ನು ಅವಲೋಕಿಸುವ ಮೂಲಕ ಬಯಲುಸೀಮೆಯ ಪ್ರದೇಶಗಳಾದ ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ಜಿಲ್ಲೆಯ ರೈತ ಪ್ರತಿಭಟನೆಗಳನ್ನು ವಿಶೇಷವಾಗಿ ಶೇಂಗಾ ಮತ್ತು ಈರುಳ್ಳಿ ಬೆಳೆಗಾರರ ಸಮಸ್ಯೆ, ಬೆಂಬಲ ಬೆಲೆ, ಪ್ರತಿಭಟನೆಗಳ ಸ್ವರೂಪ ಹಾಗೂ ಬೆಳವಣಿಗೆಯ ವಿವಿಧ ಹಂತಗಳ ಪ್ರಮುಖ ಹಾಗೂ ಆಯ್ದ ಕೆಲವು ಸಂಗತಿಗಳನ್ನು ವಿಶ್ಲೇಷಿಸಲಾಗಿದೆ. ಮೂರು ಜಿಲ್ಲೆಗಳಲ್ಲಿನ ಶೇಂಗಾ ಮತ್ತು ಈರುಳ್ಳಿ ಬೆಳೆದ ರೈತರನ್ನು ಆಯ್ದ ಕೆಲವು ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಚರ್ಚಿಸಲಾಗಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಕರ್ನಾಟಕದ ಬಯಲುಸೀಮೆಯ ರೈತ ಪ್ರತಿಭಟನೆಗಳ ಕುರಿತು ಸಂಶೋಧನೆಯನ್ನು ಮಾಡುವುದಾಗಿದೆ. ಇದು ಚರಿತ್ರೆಯ ಅಧ್ಯಯನದ ಸಂಶೋಧನಾ ವಿಧಿ-ವಿಧಾನಗಳನ್ನು ಒಳಗೊಂಡಿದೆ. ಪ್ರಸ್ತುತ ಈ ಅಧ್ಯಯನಕ್ಕೆ ಲಭ್ಯವಿರುವ ಸಂಶೋಧನಾ ಕೃತಿಗಳು, ಮೂಲಕೃತಿಗಳು, ಪ್ರಕಟಿತ ಹಾಗೂ ಅಪ್ರಕಟಿತ ಪಿಎಚ್.ಡಿ, ಎಂ.ಫಿಲ್ ಪ್ರಬಂಧಗಳು, ಗ್ಯಾಸೆಟಿಯರ್‌ಗಳು, ಸರ್ಕಾರದ ದಾಖಲೆ ಪತ್ರಗಳು, ಕೃಷಿ ಇಲಾಖೆ ದಾಖಲೆಗಳು, ನೀರಾವರಿ ಇಲಾಖೆಯ ಪತ್ರಗಳು, ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯಿತಿಯ ದಾಖಲೆಗಳು, ಪೊಲೀಸ್ ಇಲಾಖೆಯ ಮೊಕದ್ದಮೆ ಹಾಗೂ ಇತರ ದಾಖಲೆಗಳು, ಪ್ರಾಥಮಿಕ ಆಕರಗಳು, ಅನುಷಂಗಿಕ ಆಕರಗಳು ಹಾಗೂ ಅಂತರ್‌ಜಾಲದ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ವಿಷಯದ ನಿರೂಪಣೆಗಾಗಿ ಕ್ಷೇತ್ರ ಕಾರ್ಯ ಕೈಗೊಂಡು ವಿಶ್ಲೇಷಿಸಲಾಗಿದೆ. ವಿವಿಧ ಕೃಷಿ ಇಲಾಖೆಯ ಅಧಿಕಾರಿಗಳು, ವಿದ್ವಾಂಸರು, ರೈತ ನಾಯಕರನ್ನು ಭೇಟಿಯಾಗಿ ಮಾಹಿತಿ ಪಡೆದು ವಿಶ್ಲೇಷಿಸಲಾಗಿದೆ. ಬಯಲುಸೀಮೆಯ ರೈತ ಪ್ರತಿಭಟನೆಗಳು ಅವರ ಸ್ಥಿತಿಗತಿಗಳನ್ನು ತಿಳಿಯಲು, ರೈತರನ್ನು ಸಂದರ್ಶಿಸಿ ಪಡೆದ ಮಾಹಿತಿಯನ್ನು ಬಾಹ್ಯ ವಿಮರ್ಶೆ ಮತ್ತು ಆಂತರಿಕ ವಿಮರ್ಶೆಯನ್ನು ಮಾಡುವುದರ ಮೂಲಕ ಚರ್ಚಿಸಲಾಗಿದೆ. ಸಾಂಪ್ರದಾಯಿಕ ಹಾಗೂ ಸಬಾಲ್ಟರ್ನ್ ಚಿಂತನಾ ಕ್ರಮಗಳ ಮೂಲಕ ರೈತ ಪ್ರತಿಭಟನೆಗಳನ್ನು ಅಧ್ಯಯನ ಮಾಡಿ ಹೊಸ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಉದ್ದೇಶವಿದೆ.

ಅಲಕ್ಷತೆಗೆ ಒಳಗಾಗಿರುವ ರೈತ ಪ್ರತಿಭಟನೆಗಳನ್ನು ದಾಖಲಿಸುವ ದೃಷ್ಟಿಯಲ್ಲಿ ಬಯಲುಸೀಮೆಯ ಸ್ಥಳೀಯ ಪತ್ರಿಕೆಗಳು ಗಮನಾರ್ಹವಾದ ಪಾತ್ರವಹಿಸಿವೆ. ಇವುಗಳು ಸಮಕಾಲೀನ ಸಂದರ್ಭದ ಸಮಾಜ ಹಾಗೂ ರೈತ ಪ್ರತಿಭಟನೆಗಳ ನೈಜ ಸಂಗತಿಯನ್ನು ಪ್ರಕಟಿಸಿರುತ್ತವೆ. ಈ ಪತ್ರಿಕೆಗಳ

ಮೂಲಕ ವಿಷಯದ ಸ್ಪಷ್ಟತೆಯನ್ನು ಕಂಡುಕೊಳ್ಳಬಹುದಾಗಿದೆ. ಅಲಕ್ಷತೆಗೆ ಒಳಗಾಗಿರುವ ಬಯಲುಸೀಮೆಯ ರೈತ ಪ್ರತಿಭಟನೆಗಳನ್ನು ದಾಖಲಿಸುವ ದೃಷ್ಟಿಯಲ್ಲಿ ಇದು ಮೊದಲ ಪ್ರಯತ್ನವಾಗಿದೆ. ಈವರೆಗೆ ಕೇವಲ ಪತ್ರಿಕೆಗಳಲ್ಲಿ ಮಾತ್ರ ಸುದ್ದಿ ಪ್ರಕಟವಾಗಿದ್ದವು. ಆದರೆ ಅಧ್ಯಯನಗಳಾಗಿರಲಿಲ್ಲ. ಇದರಿಂದಾಗಿ ಎಲ್ಲಾ ಬಗೆಯ ಮಾಹಿತಿಗಳನ್ನು ಕ್ರೋಢೀಕರಿಸಿ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ. ಅಧ್ಯಯನದ ಅನುಕೂಲತೆಗಾಗಿ ಕೊನೆ ಟಿಪ್ಪಣಿಗಳನ್ನು ಪೂರಕವಾಗಿ ಅನುಬಂಧಗಳಲ್ಲಿ ಛಾಯಚಿತ್ರ, ನಕ್ಷೆ, ವ್ಯಕ್ತಿಗಳ ವಿವರ, ಗ್ರಂಥಋಣವನ್ನು ಕೊಡಲಾಗಿದೆ.

**ಈವರೆಗಿನ ಅಧ್ಯಯನಗಳ ಸಮೀಕ್ಷೆ**

ರೈತ ಪ್ರತಿಭಟನೆ ಕುರಿತಂತೆ ಅಂತರಾಷ್ಟ್ರೀಯ, ರಾಷ್ಟ್ರೀಯ ಹಾಗೂ ರಾಜ್ಯ ಮಟ್ಟದಲ್ಲಿ ಸಂಶೋಧನೆ ಮತ್ತು ಅಧ್ಯಯನ ಪರಿಚಯದ ಹಿನ್ನೆಲೆಯಲ್ಲಿ ಹಲವು ಕೃತಿಗಳು ಹೊರಬಂದಿವೆ. ಹಾಗೂ ರೈತರಿಗೆ ಸಂಬಂಧಿಸಿದಂತೆ ಚರ್ಚಿಸಿ ಲಭ್ಯವಿರುವ ಪ್ರಕಟಿತ ಕೃತಿಗಳು, ಪಿಹೆಚ್.ಡಿ. ಮಹಾಪ್ರಬಂಧಗಳು, ಎಂ.ಫಿಲ್ ನಿಬಂಧಗಳು, ಲೇಖನಗಳನ್ನು ಇಲ್ಲಿ ಸಮೀಕ್ಷೆ ಮಾಡುವ ಪ್ರಯತ್ನವಿದೆ.

ರಣಜಿತ್ ಗುಹಾರವರ 'ಆನ್ ಸಮ್ ಆಸ್‌ಪೆಕ್ಟ್ಸ್ ಆಫ್ ದಿ ಹಿಸ್ಟೋರಿಯೋಗ್ರಫಿ ಆಫ್ ಕಲೋನಿಯಲ್ ಇಂಡಿಯಾ' ಲೇಖನದಲ್ಲಿ, ಭಾರತೀಯ ರಾಷ್ಟ್ರೀಯವಾದಿ ಮತ್ತು ವಸಾಹತುಶಾಹಿ ಚರಿತ್ರೆ ಲೇಖನಾ ಪರಂಪರೆಯನ್ನು ವಿರೋಧಿಸಿದ್ದಾರೆ.[೨] ರಾಷ್ಟ್ರೀಯವಾದಿ ಮತ್ತು ವಸಾಹತುಶಾಹಿ ಚರಿತ್ರೆಕಾರರ ಬರವಣಿಗೆಗಳಲ್ಲಿ ವಸಾಹತುಶಾಹಿ ಪ್ರಭುತ್ವ, ಭಾರತೀಯ ಉಚ್ಚವರ್ಗದ ವ್ಯಕ್ತಿಗಳು, ಬಂಡವಾಳಶಾಹಿ ರಾಷ್ಟ್ರೀಯವಾದಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದನ್ನು ಹಾಗೂ ಕೃಷಿ ಕಾರ್ಮಿಕರನ್ನು, ಜನಸಾಮಾನ್ಯರನ್ನು ನಿರ್ಲಕ್ಷಿಸಿರುವುದನ್ನು ರಣಜಿತ್ ಗುಹಾರವರು ತಮ್ಮ ಲೇಖನದ ಮೂಲಕ ಗುರುತಿಸಿದ್ದಾರೆ.

ಡೇವಿಡ್ ಹರ್ಡಿಮನ್‌ರವರ 'ಆದಿವಾಸಿ ಅಸ್ಸರ್ಶನ್ ಇನ್ ಸೌತ್ ಗುಜರಾತ್: ದಿ ದೇವಿ ಮೂವ್ಮೆಂಟ್ ಆಫ್ ೧೯೨೨-೨೩' ಲೇಖನದಲ್ಲಿ, ಅದಿವಾಸಿಗಳು ಭೂಮಾಲೀಕರ ತುಳಿತಕ್ಕೆ ಹಾಗೂ ಶೋಷಣೆಗೆ ಒಳಗಾಗಿ ಅದರಿಂದ ಹೊರ ಬಂದು ಜಮೀನ್ದಾರರ ಪ್ರಭಾವವನ್ನು ಕಿತ್ತೊಗೆದು, ತಮ್ಮ ಹಕ್ಕಿಗಾಗಿ ನಡೆಸಿದ ಹೋರಾಟವಾಗಿದೆ. ಈ ಹೋರಾಟ ಆರಂಭವಾದಾಗ ಯಾವುದೇ ಪ್ರಬಲ ಸಂಘಟನೆಗಳು, ಪ್ರಬಲ ನಾಯಕರ ಪ್ರಭಾವವಿರದೆ, ಆದಿವಾಸಿಗಳು ಮಾಡಿದ ಹೋರಾಟವಾಗಿದ್ದು ಗಮನಾರ್ಹವಾಗಿದೆ.[೩]

ಪಾರ್ಥ ಚಟರ್ಜಿರವರ 'ದಿ ನೇಶನ್ ಆಂಡ್ ಇಟ್ಸ್ ಪೆಸೆಂಟ್ಸ್' ಎಂಬ ಲೇಖನದಲ್ಲಿ, ರೈತ ವರ್ಗಕ್ಕೆ ಸಂಬಂಧಿಸಿದಂತೆ ವಸಾಹತು ಮತ್ತು ರಾಷ್ಟ್ರೀಯವಾದಿಗಳ ನಿಲುವು ವಿಭಿನ್ನವಾಗಿರದೆ ಒಂದೇ ರೀತಿಯಲ್ಲದ್ದು, ರೈತರನ್ನು ತಮ್ಮ ಇಚ್ಚೆಗೆ ತಕ್ಕಂತೆ ಬಳಸಿಕೊಂಡಿರುವುದನ್ನು ಈ ಲೇಖನದಲ್ಲಿ ಟೀಕಿಸಿದ್ದಾರೆ.[೪]

ಗ್ಯಾನೇಂದ್ರ ಪಾಂಡೆರವರ 'ಪೆಸೆಂಟ್ ರಿವೋಲ್ಟ್ ಅಂಡ್ ಇಂಡಿಯನ್ ನ್ಯಾಶಿನಲಿಸಂ: ದಿ ಪೆಸೆಂಟ್ ಮೂವ್‌ಮೆಂಟ್ ಇನ್ ಔದ್' ಲೇಖನದಲ್ಲಿ ಔಧ್ ರೈತರು ತಮ್ಮ ಶೋಷಣೆಗೆ ಪ್ರತ್ಯುತ್ತರವಾಗಿ ಹಾಗೂ ಅದರ ವಿರುದ್ಧವಾಗಿ, ಭೂಮಾಲಿಕರು ಮತ್ತು ಬ್ರಿಟೀಷರ ವಿರುದ್ಧ ನಡೆದ ದಂಗೆಯನ್ನು ವಿವರಿಸಿದ್ದಾರೆ.

ಪಾರ್ಥ ಚಟರ್ಜಿಯವರ 'ಅಗ್ರೇರಿಯನ್ ರಿಲೇಶನ್ಸ್ ಆಂಡ್ ಕಮ್ಯುನಲಿಸಂ ಇನ್ ಬೆಂಗಾಲ್, ೧೯೨೬-೩೫' ಲೇಖನದಲ್ಲಿ ಬಂಗಾಳದ ಮುಸ್ಲಿಂ ರೈತರು, ಹಿಂದು ವ್ಯಾಪಾರಿಗಳು ಮತ್ತು ಭೂಮಾಲೀಕರ ವಿರುದ್ಧ ಹೋರಾಟ ಮಾಡಿದರು. ಈ ಹೋರಾಟವು ರೈತ ಮತ್ತು ಭೂಮಾಲೀಕರ ನಡುವಿನ ಹೋರಾಟವಾಗಿದೆ ಆದರೆ ಈ ಹೋರಾಟವನ್ನು ರಾಷ್ಟ್ರೀಯವಾದಿಗಳು ಕೋಮುಗಲಭೆಗಳೆಂದು ಬಿಂಬಿಸಿರುವುದನ್ನು ಇಲ್ಲಿ ಗಮನಿಸಬಹುದು.

ಕೆ.ಎಂ. ಕುಮಾರ್‌ರವರು ಬರೆದಿರುವ 'ಕರ್ನಾಟಕದಲ್ಲಿನ ರೈತ ಚಳವಳಿ' ಎಂಬ ಗ್ರಂಥದಲ್ಲಿ ಭಾರತದಲ್ಲಿ ನಡೆದ ಭೂಸುಧಾರಣ ಚಳವಳಿಗಳು, ಕರ್ನಾಟಕ ರಾಜ್ಯ ರೈತ ಸಂಘದ ಸ್ವಾಯತ್ತತೆ ಹಾಗೂ ಕರ್ನಾಟಕದಲ್ಲಿನ ರೈತ ಚಳವಳಿ, ರೈತ ಮಹಿಳೆಯರ ಮಧ್ಯ ವಿರೋಧಿ ಚಳವಳಿ, ಪರಿಸರ ಸಂಬಂಧಿ ವಿಚಾರಗಳ ಬಗ್ಗೆ ಅಧ್ಯಯನ ಮಾಡಿರುವುದು ಗಮನಿಸಬೇಕಾದ ಸಂಗತಿ.

ಡಾ. ಎಂ.ಜಿ. ನಾಗರಾಜ್ ರವರ 'ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು', (ಸಂಪುಟ-೧,೨,೩,೪,೫) ಎಂಬ ಗ್ರಂಥದಲ್ಲಿ ಕೃಷಿ ಮತ್ತು ರೈತರ ಪ್ರಾಚೀನ ಹಿನ್ನೆಲೆ, ಭಾರತದಲ್ಲಿ ನಡೆದ ರೈತ ಹೋರಾಟಗಳು, ಸ್ವಾತಂತ್ರ್ಯ ಪೂರ್ವ ಕಾಲದ ರಾಜ್ಯ ರೈತ ಚಳವಳಿಗಳು, ಸ್ವಾತಂತ್ರೋತ್ತರ ಕಾಲದ ರಾಜ್ಯ ರೈತ ಚಳವಳಿಗಳು ಕರ್ನಾಟಕ ಏಕೀಕರಣೋತ್ತರ ರೈತ ಚಳವಳಿಗಳು, ಸಹಸ್ರಮಾನ ಸಂದರ್ಭದಲ್ಲಿ ನಡೆದ ರೈತ ಚಳವಳಿ, ಅಕ್ರಮ ಸಾಗುವಳಿಯ ಸಕ್ರಮ ಮಾಡುವಿಕೆ, ಭೂ ಸುಧಾರಣೆಗಳ ತಿದ್ದುಪಡಿ, ರೈತರ ಮೇಲಿನ ಗೋಲಿಬಾರ್, ರೈತ ಪರಿಹಾರ, ರೈತರ ಹಿತರಕ್ಷಣೆಗೆ ಸಂಬಂಧಿಸಿ ಸೂಕ್ತ ಕ್ರಮಗಳು, ರೈತರ ಆತ್ಮಹತ್ಯೆ, ವಿಧಾನಸಭೆಯಲ್ಲಿ ನಡೆದ ಚರ್ಚೆಗಳು ಇವುಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಡಾ. ಮುಜಾಫರ್ ಅಸ್ಸಾದಿಯವರು ಬರೆದಿರುವ 'ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ ರೈತ, ರೈತ ಹೋರಾಟ, ಹಾಗೂ ಸಾಮಾಜಿಕ ಚಳವಳಿ' ಎಂಬ ಕೃತಿಯಲ್ಲಿ ಕರ್ನಾಟಕದ ಕೃಷಿ ವ್ಯವಸ್ಥೆಯಲ್ಲಿ ಬಂಡವಾಳಶಾಹಿ ಮತ್ತು ಬೂರ್ಜ್ವಾ ವರ್ಗದ ಬೆಳವಣಿಗೆ, ಭಾರತ ಮತ್ತು ಕರ್ನಾಟಕದಲ್ಲಿ ನಡೆದ ರೈತ ಹೋರಾಟಗಳ ಐತಿಹಾಸಿಕ ಹಿನ್ನೆಲೆಗಳು, ಕರ್ನಾಟಕ ರಾಜ್ಯ ರೈತ ಸಂಘದ ರಾಜಕೀಯ ಧೋರಣೆ, ರೈತರ ಆತ್ಮಹತ್ಯೆ ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ. ಕಡಿದಾಳು ಶಾಮಣ್ಣ ರವರ 'ಆ ದಶಕ' ಎಂಬ ಕೃತಿಯಲ್ಲಿ ರೈತ ಸಂಘವನ್ನು ಕಟ್ಟಿದ ಕಡಿದಾಳು ಶಾಮಣ್ಣನವರು ಬರೆದ ಪತ್ರಗಳು, ವರದಿಗಳು, ಲೇಖನಗಳು, ಸಂದರ್ಶನ ಮತ್ತಿತರ ಬರಹಗಳನ್ನು ಇಲ್ಲಿ ಕ್ರೋಢೀಕರಿಸಲಾಗಿದೆ.

ಸವಿತ ಬಿ.ಸಿ. ರವರು ಬರೆದಿರುವ 'ರೈತ ಹೋರಾಟಗಾರ ಪ್ರೊ.ಎಂ.ಡಿ. ನಂಜುಂಡಸ್ವಾಮಿ' ಎಂಬ ಮಂಟಪಮಾಲೆ ಪುಸ್ತಿಕೆಯಲ್ಲಿ ಪ್ರೊ.ಎಂ.ಡಿ.ಎನ್‌ರವರ ಕರ್ನಾಟಕ ರಾಜ್ಯ ರೈತ ಸಂಘದ ಸಂಚಾಲಕರಾಗಿ, ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ, ರೈತ ಚಳವಳಿಯ ನೇತೃತ್ವವನ್ನು ವಹಿಸಿಕೊಂಡು ರೈತರ ಬದುಕಿನಲ್ಲಿ ಹಲವು ಬದಲಾವಣೆಗಳನ್ನು ಉಂಟುಮಾಡಿದ ವಿವರಗಳನ್ನು ಪರಿಚಯಿಸಿದ್ದಾರೆ. ಈ ದಿಸೆಯಲ್ಲಿ ಅವರ ಜೀವನ ಹಾಗೂ ನಡೆಸಿದ ಚಳವಳಿಗಳನ್ನು ಅರಿಯುವ ಕಿರುಪ್ರಯತ್ನವಿದೆ. ವಿಜಯ ಪೂಣಚ್ಚ ತಂಬಡ (ಪ್ರ.ಸಂ), ಎನ್. ಚಿನ್ನಸ್ವಾಮಿ ಸೋಸಲೆ (ಸಂ.ಸಂ) ರವರ 'ಸಮಕಾಲೀನ ಕರ್ನಾಟಕ' ಚರಿತ್ರೆ ಸಂಪುಟ ೬ ರಲ್ಲಿ ರೈತ ಚಳವಳಿಯ ಚಾರಿತ್ರಿಕ ಆಯಾಮಗಳು, ಸೈದ್ಧಾಂತಿಕ ಹೋರಾಟಗಳು, ಇತ್ತೀಚಿಗೆ ನಡೆದ ರೈತ ಹೋರಾಟಗಳು ಹಾಗೂ ಭೂ ಸುಧಾರಣೆ ಕಾಯ್ದೆಗಳ ಬಗ್ಗೆ ವಿವರಿಸಲಾಗಿದೆ. ಎಂ.ಜಿ. ನಾಗರಾಜ್ ರವರ 'ಕರ್ನಾಟಕ ರೈತ ಚಳವಳಿ – ಸತ್ಯಾಗ್ರಹಗಳು' ಸಂಪುಟ ೫ ಕೃತಿಯಲ್ಲಿ ಕಾವೇರಿ ನದಿಯ ಅಸ್ತಿತ್ವ ಐತಿಹಾಸಿಕ ಸ್ವರೂಪಗಳು, ರಾಜ್ಯ ಪುನರ್‌ವಿಂಗಡಣೆಯ ನಂತರದ ಕಾವೇರಿಯ ಸಮಸ್ಯೆಗಳು, ತೀರ್ಪುಗಳು ಮುಂತಾದ ವಿಷಯಗಳನ್ನು ವಿಶೇಷವಾಗಿ ಚರ್ಚಿಸಿದ್ದಾರೆ.

ಎಂ.ಜಿ. ನಾಗರಾಜ್‌ರವರ 'ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು' ಸಂಪುಟ–೬ರಲ್ಲಿ ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು, ಧರಣಿಗಳು, ರೈತ ಸತ್ಯಾಗ್ರಹಗಳು, ರೈತರ ಆತ್ಮಹತ್ಯೆಯ ಕುರಿತು ಚರ್ಚೆಗಳು, ರೈತರ ವಿವಿಧ ಸಮಸ್ಯೆಗಳಿಗೆ ಪರಿಹಾರಗಳು, ಕೃಷಿ ನೀತಿಗಳು ಹಾಗೂ ರೈತ ಹೋರಾಟಗಳ ಇತ್ತೀಚಿನ ಬೆಳವಣಿಗೆಗಳನ್ನು ಕುರಿತು ವಿವರಿಸಲಾಗಿದೆ. ವೀರಭದ್ರಪ್ಪ ಬಿಸ್ಲಳ್ಳಿಯವರು ಸಂಪಾದಿಸಿರುವ 'ಪ್ರೊಫೆಸರ್ ಎಂ.ಡಿ.ಎನ್.' ಎಂಬ ಗ್ರಂಥದಲ್ಲಿ ಹಸಿರು ಟವೆಲ್ಲಿನ ಹರಿಕಾರ ಹಾದು ಹೋದ ಹಾದಿ, ಚಳವಳಿಗಳು ಸಾಗಿ ಬಂದ ದಾರಿಗಳು, ಈ ರೀತಿಯ ಹಲವಾರು ಲೇಖನಗಳು ಪ್ರೊಫೆಸರ್ ಎಂ.ಡಿ.ಎನ್.ರವರ ಕುರಿತು ನಿಖರವಾದ ವಿವರಣೆಯನ್ನು ನೀಡುತ್ತವೆ. ಹಿ.ಶಿ. ರಾಮಚಂದ್ರೇಗೌಡರವರು 'ರೈತ ಹೋರಾಟ ಸಾಹಿತ್ಯ' ಎಂಬ ಕೃತಿಯಲ್ಲಿ ರೈತ ಚಳವಳಿಯನ್ನು ಆಧರಿಸಿದ ಹೊಸ ಚಿಂತನೆ, ಹೊಸ ಗೀತೆಗಳನ್ನು ಕಲೆ ಹಾಕಿದ್ದಾರೆ.

ನಟರಾಜ್ ಹುಳಿಯಾರ್‌ರವರ (ಸಂ) 'ಹಸಿರು ಸೇನಾನಿ ಪ್ರೊ.ಎಂ.ಡಿ. ನಂಜುಂಡಸ್ವಾಮಿ : ಹೋರಾಟ ಮತ್ತು ಚಿಂತನೆ', ಎಂಬ ಕೃತಿಯಲ್ಲಿ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರ ವ್ಯಕ್ತಿತ್ವ, ಬದುಕು, ಹೋರಾಟದ ಘಟ್ಟಗಳು, ಹೋರಾಟದ ಹಾದಿ, ಜಾಗತಿಕ ಹೋರಾಟದಲ್ಲಿ ಪ್ರೊ. ನಂಜುಂಡಸ್ವಾಮಿ, ರಾಜಕೀಯ ಪ್ರಜ್ಞೆ ಹಾಗೂ ಸಾಂಸ್ಕೃತಿಕ ಪ್ರಜ್ಞೆ ಕಲಿಸಿದ ಎಂ.ಡಿ.ಎನ್. ಎಂ.ಡಿ.ಎನ್ ಕೊಟ್ಟ ಚಾಟಿ ಏಟುಗಳು, ಅರ್ಥಪೂರ್ಣ ಸಂಘಟನೆಗಳನ್ನು ಕಟ್ಟಿದ ಎಂ.ಡಿ.ಎನ್. ಎಂ.ಡಿ.ಎನ್ ಮತ್ತು ರೈತ ಸಂಘ. ಎಂ.ಡಿ. ನಂಜುಂಡಸ್ವಾಮಿಯವರ ಸಂದರ್ಶನಗಳು ಹಾಗೂ ಮುಂತಾದ ಲೇಖನಗಳನ್ನು ಕಲೆಹಾಕಿ ವಿಶ್ಲೇಷಿಸಲಾಗಿದೆ. ಹಿ.ಶಿ. ರಾಮಚಂದ್ರೇಗೌಡರವರ 'ರೈತ ಚಳವಳಿ ಸುಮ್ಮನೆ' ಎಂಬ ಕೃತಿಯಲ್ಲಿ ರೈತರು ತಮ್ಮನ್ನು ರಕ್ಷಿಸಿಕೊಳ್ಳುವ ತಮ್ಮನ್ನು ತಾವು ಉದ್ಧಾರ ಮಾಡಿಕೊಳ್ಳುವ, ಎಲ್ಲರನ್ನು ಸಮಾನವಾಗಿ ಕಾಣುವ ಮನೋಧರ್ಮ ಬಂದರೆ ಅವರ ದೇವರಂತೆ,

ಇಲ್ಲದಿದ್ದರೆ ರೈತರನ್ನು ಕಚ್ಚಾಡಿ ಸಾಯುವಂತೆ ಮಾಡುತ್ತಾರೆ ಎಚ್ಚರಿಕೆ! ಈ ಚಳವಳಿಗೆ ಬೇಕಾದ ಆರ್ಥಿಕತೆ, ರೈತರ ಆರ್ಥಿಕ ಪರಿಸ್ಥಿತಿ, ರೈತ ಸಂಘಟನೆ ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ.

ಅಕ್ಷತಾ ಕೆ. ರವರು ಬರೆದಿರುವ 'ಕಡಿದಾಳು ಶಾಮಣ್ಣನ ಕಾಡತೊರೆಯ ಜಾಡು' ಕೃತಿಯು ಕಡಿದಾಳು ಶಾಮಣ್ಣನವರ ಜೀವನ, ಬದುಕು, ಹೋರಾಟಗಳ ಕಥನವಾಗಿದೆ. ಎಂ. ಚಂದ್ರಪೂಜಾರಿಯವರ 'ಯಾಕೀಗ ಭೂಮಿ ಪ್ರಶ್ನೆ' ಎಂಬ ಕೃತಿಯಲ್ಲಿ ೯೦ರ ದಶಕದ ನಂತರ ಭೂಮಿ ಪ್ರಶ್ನೆ, ಭೂಮಿಯನ್ನು ಭೂಮಿ ಇಲ್ಲದವರಿಗೆ ಹಂಚುವುದಾಗಿದ್ದು, ಇದು ಸಂಪೂರ್ಣವಾಗಿ ತಿರುವು ಮುರುವಾಗಿದೆ. ಈಗಾಗಲೇ ಹಂಚಿಕೆಯಾದ ಅಲ್ಪಸ್ವಲ್ಪ ಭೂಮಿಯನ್ನು ರೈತರಿಂದ ಕಿತ್ತುಕೊಂಡು ಉದ್ದಿಮೆದಾರರಿಗೆ ಕೊಡುವುದು ಸ್ಪೆಷಲ್ ಎಕಾನಮಿಕ್ ಜೋನ್ ಮಾಡುವ ಮುಂತಾದ ವಿಷಯಗಳನ್ನು ಶೋಧನಾತ್ಮಕ ನೆಲೆಗಳಲ್ಲಿ ಚರ್ಚಿಸಿದ್ದಾರೆ. ಬಸವರಾಜು ತಂಬಾಕೆರವರ 'ನಾಕಂಡ ಪ್ರೊಫೆಸರ್ ನಂಜುಂಡಸ್ವಾಮಿ' ಎಂಬ ಗ್ರಂಥದಲ್ಲಿ ಪ್ರೊ. ನಂಜುಂಡಸ್ವಾಮಿಯವರ ಭೇಟಿ, ಕರ್ನಾಟಕ ರಾಜ್ಯ ರೈತ ಸಂಘದ ಹುಟ್ಟು, ಬೆಳವಣಿಗೆ, ಈ ಸಂಘದ ಸಂಘಟನೆಗೆ ನಂಜುಂಡಸ್ವಾಮಿಯವರು ವಹಿಸಿದ ಸಕ್ರೀಯ ಪಾತ್ರ, ರಾಜಕೀಯ ಪಕ್ಷವಾಗಿ ರೈತಸಂಘ, ರಾಜ್ಯ ರೈತ ಸಂಘದಲ್ಲಿ ಆದಂತಹ ಒಡಕು, ರೈತ ಸಂಘದ ಪ್ರಮುಖ ಸಾಧನೆಗಳು, ರೈತ ಸಂಘದ ಪ್ರಣಾಳಿಕೆ ಮುಂತಾದ ವಿಷಯಗಳನ್ನು ಅರ್ಥೈಸುವ ನಿಟ್ಟಿನಲ್ಲಿ, ರೈತ ಪ್ರತಿಭಟನೆಗಳಿಗೆ ಆತ್ಮಬಲ ತುಂಬುವಂತಹ ಬರಹಗಳಾಗಿವೆ.

ಶಿವರಾಮಯ್ಯ ರವರ 'ಕತ್ತಿಯಾವುದಾದರೇನು?' ಎಂಬ ಕೃತಿಯಲ್ಲಿ ರೈತ ರಾಷ್ಟ್ರದ ಬೆನ್ನೆಲುಬೆಂದು ಕೊಂಡಾಡಲಾಗಿದ್ದು, ವಾಸ್ತವವಾಗಿ ರೈತನ ಬದುಕು ಎಂತಿತ್ತು? ಈಗ ಯಾಕೆ ಹೀಗಾಗಿದೆ? ಎಂಬುದನ್ನು ವಿವರಿಸಿದ್ದಾರೆ. ಮೇಲಿನ ವಿಷಯಕ್ಕೆ ಪೂರಕವಾಗಿ ರೈತರ ಆತ್ಮಹತ್ಯೆ ಆಯಿತೇಕೆ? ಎಂಬ ವಿಚಾರವನ್ನು ಕುರಿತ ಕರ್ನಾಟಕದಲ್ಲಿ ಇತ್ತೀಚೆಗೆ ನಡೆದ ಆತ್ಮಹತ್ಯೆಗಳ ವಿಶ್ಲೇಷಣಾ ವರದಿಯನ್ನು, ಕರ್ನಾಟಕದ ಕೃಷಿ ಬಿಕ್ಕಟ್ಟಿನ ರೈತ ಆತ್ಮಹತ್ಯೆಗಳ ಸ್ಥೂಲ ವಿವರ, ರೈತರ ಆತ್ಮಹತ್ಯೆಗೆ ರೈತರ ಪಾಲೆಷ್ಟು? ಸರಕಾರದ ಪಾಲೆಷ್ಟು? ಜಾಗತೀಕರಣ–ಪ್ರಜಾಪ್ರಭುತ್ವದ ಹಿನ್ನಡೆ ಮತ್ತು ಕೃಷಿ ಬಿಕ್ಕಟ್ಟು ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.

ಯಡಿಯೂರಪ್ಪ ತುಮಕೂರು ಇವರ 'ಸಕ್ಕರೆ ವಲಯದಿಂದ ಕಬ್ಬು ಬೆಳೆಗಾರರೆಡೆಗೆ' ಎಂಬ ಕೃತಿಯಲ್ಲಿ ಭಾರತೀಯ ರೈತರ ದುರಂತ ಸ್ಥಿತಿ, ರೈತರ ಆತ್ಮಹತ್ಯೆಗಳನ್ನು ನಿರ್ಬಂಧಿಸಲು ಪರಿಹಾರೋಪಾಯಗಳು, ಭಾರತೀಯ ಕೃಷಿ ಭವಿಷ್ಯದ ಅಭಿವೃದ್ಧಿ ನೀತಿಗಳು ಮತ್ತು ಕಾರ್ಯಕ್ರಮಗಳು ಮುಂತಾದ ವಿಷಯಗಳನ್ನು ಗಮನಿಸಬಹುದು. ಬಿ.ಎಸ್. ಸೊಪ್ಪಿನರವರು 'ಮಲಪ್ರಭೆಯ ಮಡಿಲಿನಿಂದ ಸಿಡಿದೆದ್ದ ರೈತ' ಎಂಬ ಕೃತಿಯಲ್ಲಿ ನರಗುಂದ, ನವಲಗುಂದ ರೈತ ಪ್ರತಿಭಟನೆಯ ಕಾರಣಗಳನ್ನು, ಶಾಂತಿಯುತ ರೈತ ಹೋರಾಟ ಹಿಂಸಾಚಾರಕ್ಕೆ ಪರಿವರ್ತನೆಗೊಂಡ ಬಗೆಯನ್ನು ಮತ್ತು ದಂಗೆಯ ಪರಿಣಾಮಗಳನ್ನು ವಿವರಿಸಿದ್ದಾರೆ. ಮುಜಾಫರ್ ಅಸ್ಸಾದಿಯವರ 'ಇನ್ನೊಂದು ಮುಖ' ಎಂಬ ಕೃತಿಯ ಲೇಖನಗಳಲ್ಲಿ ಐಡೆಂಟಿಟಿಯ ತಾಕಲಾಟಗಳು, ದೇಶೀಯತೆಯ ಪ್ರೀತಿ ಹಾಗೂ

ಪರ್ಯಾಯಗಳ ಹುಡುಕುವಿಕೆ, ಆತ್ಮಹತ್ಯೆಯ ದಾರಿ ಹಿಡಿದ ರೈತರ ಗೋಳು, ರೈತರ ಆತ್ಮಹತ್ಯೆಗಳು ಹಾಗೂ ಸರ್ಕಾರದ ಸಬ್ಸಿಡಿ, ಭೂಮಿ ಕಳೆದುಕೊಳ್ಳುವ ನೋವು ಹಾಗೂ ಐಡೆಂಟಿಟಿ ಮುಂತಾದ ಲೇಖನಗಳು ರೈತರ ಆತ್ಮಹತ್ಯೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸಿವೆ.

ರಾಮಾಶ್ರಯರವರ 'ಕರ್ನಾಟಕ ಭೂಸ್ವಾಧೀನ ಅಧಿನಿಯಮ' ಎಂಬ ಕೃತಿಯಲ್ಲಿ ಕೇಂದ್ರ ಅಧಿನಿಯಮ ೧೮೯೪ ರಿಂದ ೧೯೯೪ರ ವರೆಗಿನ ತಿದ್ದುಪಡಿಗಳ ವಿಷಯಾನುಕ್ರಮಣಿಕೆಯನ್ನು, ಭೂಸ್ವಾಧೀನ ಅಧಿನಿಯಮದ ವ್ಯಾಪ್ತಿ, ಪ್ರಾರಂಭ, ಪರಿಭಾಷೆಗಳು, ಪ್ರಾರಂಭಿಕ ಅಧಿಸೂಚನೆಯ ಪ್ರಕಟಣೆ, ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಅಡ್ಡಿಯುಂಟು ಮಾಡುವ ಬಗ್ಗೆ ದಂಡನೆ ಮುಂತಾದ ವಿಷಯಗಳನ್ನು ಕುರಿತು ಬರೆದಿದ್ದಾರೆ. ತಿಮ್ಮನಹಳ್ಳಿ ವೇಣುಗೋಪಾಲ್‌ರವರ 'ರೈತರು, ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳವಳಿ' (೧೮೮೧-೧೯೭೪) ಕೃತಿಯಲ್ಲಿ ರೈತರು ಮತ್ತು ಮೈಸೂರು ಸಂಸ್ಥಾನದ ಸರ್ಕಾರದ ಸಂಬಂಧವನ್ನು ಕುರಿತು ರಾಜಕೀಯ ದೃಷ್ಟಿಕೋನದಲ್ಲಿ ವಿಶ್ಲೇಷಿಸಿದ್ದಾರೆ. ಡಿ.ಎನ್. ಧನಗೆರೆರವರ 'ಭಾರತದಲ್ಲಿ ರೈತ ಚಳವಳಿಗಳು', ಎಂಬ ಕೃತಿಯಲ್ಲಿ ಬ್ರಿಟೀಷರ ಕಾಲದಲ್ಲಿ ಭೂಸ್ವಾಮಿತ್ವದ ಸ್ವರೂಪ ಮತ್ತು ವ್ಯವಸಾಯೀ ವರ್ಗ ಸಂಬಂಧಗಳಲ್ಲಾದ ಬದಲಾವಣೆ, ೧೮೭೯ರ ದಕ್ಷಿಣದ ವ್ಯವಸಾಯೀ ಪರಿಹಾರ ಮಸೂದೆ, ಭಾರತ ರಾಷ್ಟ್ರೀಯ ಚಳವಳಿ ಮತ್ತು ವ್ಯವಸಾಯದ ಸಮಸ್ಯೆಗಳನ್ನು ಕುರಿತು ಚರ್ಚಿಸಲಾಗಿದೆ. ಹಿ.ಶಿ. ರಾಮಚಂದ್ರೇಗೌಡರವರು 'ರೈತ ಹೋರಾಟ ಸಾಹಿತ್ಯ' ಎಂಬ ಕೃತಿಯಲ್ಲಿ ರೈತ ಚಳವಳಿಯನ್ನು ಆಧರಿಸಿದ ಹೊಸ ಚಿಂತನೆ, ಹೊಸ ಗೀತೆಗಳನ್ನು ಕಲೆ ಹಾಕಿದ್ದಾರೆ, ಹಿ.ಶಿ. ರಾಮಚಂದ್ರೇಗೌಡರವರ 'ರೈತ ಚಳವಳಿ ಸುಮ್ಮನೆ' ಎಂಬ ಕೃತಿಯಲಿ ರೈತ ಚಳವಳಿಗಳು ಈ ಚಳವಳಿಗೆ ಬೇಕಾದ ಆರ್ಥಿಕತೆ, ರೈತರ ಆರ್ಥಿಕ ಪರಿಸ್ಥಿತಿ, ರೈತ ಸಂಘಟನೆ ಮುಂತಾದ ವಿಷಯಗಳನ್ನು ನಮೂದಿಸಿದ್ದಾರೆ.

ಬಸವರಾಜು ತಂಬಾಕೆರವರ 'ನಾಕಂಡ ಪ್ರೊಫೆಸರ್ ನಂಜುಂಡಸ್ವಾಮಿ' ಎಂಬ ಗ್ರಂಥದಲ್ಲಿ ಪ್ರೊ, ನಂಜುಂಡಸ್ವಾಮಿಯವರ ಭೇಟಿ, ಕರ್ನಾಟಕ ರಾಜ್ಯ ರೈತ ಸಂಘದ ಹುಟ್ಟು, ಬೆಳವಣಿಗೆ ಈ ಸಂಘದ ಸಂಘಟನೆಗೆ ನಂಜುಂಡಸ್ವಾಮಿಯವರು ವಹಿಸಿದ ಸಕ್ರೀಯ ಪಾತ್ರ, ರಾಜಕೀಯ ಪಕ್ಷವಾಗಿ ರೈತಸಂಘ, ರಾಜ್ಯ ರೈತಸಂಘದಲ್ಲಿ ಆದಂತಹ ಒಡಕು, ರೈತ ಸಂಘದ ಪ್ರಮುಖ ಸಾಧನೆಗಳು, ರೈತ ಸಂಘದ ಪ್ರಣಾಳಿಕೆ ಮುಂತಾದ ವಿಷಯಗಳನ್ನು ಒಳಗೊಂಡಿದೆ. ಎಸ್. ಚಂದ್ರಶೇಖರ್‌ರವರ 'ಆಧುನಿಕ ಕರ್ನಾಟಕದ ಆಂದೋಲನಗಳು' ಎಂಬ ಕೃತಿಯಲ್ಲಿ ೧೮೮೧ ರಿಂದ ೧೯೧೦ರ ಸಂದರ್ಭದಲ್ಲಿ ಮೈಸೂರು ಜನರಲ್ಲಿ ಹುಟ್ಟಿದ ರಾಷ್ಟ್ರೀಯತೆ ಮತ್ತು ಬೆಳವಣಿಗೆ, ೧೮೮೧ ರಿಂದ ೧೯೦೦ ಕಾಲಾವಧಿಯಲ್ಲಾದ ಮೈಸೂರು ಸಂಸ್ಥಾನದಲ್ಲಾದ ಸುಧಾರಣೆಗಳು ಮತ್ತು ಪ್ರಕ್ರಿಯೆಗಳು, ಇಪ್ಪತ್ತನೆಯ ಶತಮಾನದಲ್ಲಿ ೧೯೪೨ ರಿಂದ ೧೯೮೦ರವರೆಗೆ ನಡೆದ ಕರ್ನಾಟಕದ ಪ್ರಮುಖ ಜನಾಂದೋಲನಗಳು ಮುಂತಾದ ವಿಷಯಗಳನ್ನು ಕುರಿತಂತೆ ಚರ್ಚಿಸಿದ್ದಾರೆ. ಜಿ.ಹೋ. ನಾರಾಯಣಸ್ವಾಮಿರವರ 'ಭಾರತದ ರೈತ' ಎಂಬ ಕೃತಿಯನ್ನು ಡಾ. ರಾಮಮನೋಹರ ಲೋಹಿಯಾರವರ Fragments of a world mind ಕೃತಿಯಲ್ಲಿ ಬರುವ 'The Farmer of India'

ಲೇಖನದ ಅನುವಾದವಾಗಿದೆ. ಈ ಕೃತಿಯಲ್ಲಿ ರೈತರ ಸಮಸ್ಯೆಗಳು ಹಾಗೂ ಪರಿಹಾರಗಳ ಬಗ್ಗೆ ಚಿಂತಿಸಲಾಗಿದೆ. ಸಿ. ಯತಿರಾಜು ಚಂದ್ರಶೇಖರ್ ಬಾಳೆ ರವರ 'ಕಾಯದ ಕೃಷಿ' ಎಂಬ ಕೃತಿಯಲ್ಲಿ ಡಾ.ಎಂ.ಎಸ್. ಸ್ವಾಮಿನಾಥನ್ ವರದಿಯನ್ನು ಚರ್ಚಿಸಿದ್ದು, ಈ ವರದಿಯಲ್ಲಿ ನವಉದಾರೀಕರಣ, ರಾಜಕೀಯ ಮತ್ತು ಆರ್ಥಿಕ ಚೌಕಟ್ಟಿನಲ್ಲಿ ಭಾರತೀಯ ಕೃಷಿ ಬಿಕ್ಕಟ್ಟುಗಳನ್ನು ಪರಿಹರಿಸಬಹುದಾದ ಉಪಾಯಗಳಿವೆ.

ಜಿ. ಶರಶ್ಚಂದ್ರ ರಾನಡೆ ರವರ 'ಕೃಷಿ ಸಂಚಯ' ಮತ್ತು 'ಕೃಷಿ ಸಂದರ್ಶನ' ಎಂಬ ಕೃತಿಯಲ್ಲಿ ಕೃಷಿ ಕ್ಷೇತ್ರದಲ್ಲಿ ಸಾಧನೆ ಸಲ್ಲಿಸಿದ ಅನೇಕ ರೈತಮುಖಂಡರು ಹಾಗೂ ಕೃಷಿ ವಿಜ್ಞಾನಿಗಳ ಜೊತೆ ನೇರ ಸಂದರ್ಶನ ನಡೆಸಿದ ಲೇಖನಗಳು ಹಾಗೂ ಕೃಷಿ ಕುರಿತು ದೂರದರ್ಶನದಲ್ಲಿ ಪ್ರಸಾರವಾದ ಸಂದರ್ಶನದ ಲೇಖನಗಳನ್ನು ಕಲೆ ಹಾಕಿದ್ದಾರೆ. ಆರ್.ವಿ.ಚಂದ್ರಶೇಖರ್ ರವರ 'ಭೂಮಿ ಮತ್ತು ಬದುಕು' ಎಂಬ ಕೃತಿಯಲ್ಲಿ ಭೂಮಿ ಮತ್ತು ಬದುಕಿನ ಕ್ರಮಗಳ ಬಗ್ಗೆ ಭೂಮಿ ಏಕೆ ಮುಖ್ಯ, ಭೂಮಿ ಏಕೆ ಬೇಕು, ಭೂಮಿ ಮತ್ತು ಬದುಕಿನ ಕ್ರಮಗಳಿಗೆ ಇರುವ ಸಂಬಂಧವೇನು, ಭೂಮಿ ಯಾರ ಬಳಿ ಇದೆ, ಭೂಮಿಗೆ ಇರುವ ದಾಖಲೆ ಪತ್ರಗಳು ಯಾವುವು, ಅಭಿವೃದ್ಧಿಯ ಹೆಸರಿನಲ್ಲಿ ಸರ್ಕಾರವು ಭೂಮಿಯನ್ನು ಹೇಗೆ ಸ್ವಾಧೀನ ಮಾಡಿಕೊಳ್ಳುತ್ತಿದೆ, ಭೂಸುಧಾರಣ ಕಾಯ್ದೆ ಮತ್ತು ಕಾನೂನುಗಳು ಹೇಗೆ ಕಾರ್ಯ ನಿರ್ವಹಿಸುತ್ತಾ ಬಂದಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಸಿದ್ಧರಾಮಯ್ಯ ಬಿ.ಎಸ್ ರವರ 'ಸಾವಯವ ಕೃಷಿ' ಎಂಬ ಕೃತಿಯು ಪುರಾತನ, ಮಧ್ಯಕಾಲೀನ ಮತ್ತು ಆಧುನಿಕ ಕಾಲದಲ್ಲಿ ಕೃಷಿಯ ಮುನ್ನಡೆ, ಹಸಿರು ಕ್ರಾಂತಿಯ ದುಷ್ಪರಿಣಾಮಗಳು, ಪರ್ಯಾಯ ಕೃಷಿ ಮಾರ್ಗಗಳು, ಭೂಮಿಯ ಜೀವಂತಿಕೆ, ಮಳೆ ನೀರಿನ ಸಂರಕ್ಷಣೆ, ಬೀಜ ವೈವಿಧ್ಯತೆ, ತಳಿ ಅಭಿವೃದ್ಧಿ ವಿಧಾನಗಳು, ಬಿತ್ತನೆ ಬೇಸಾಯ ಪದ್ಧತಿಗಳು, ಸಾವಯವ ಗೊಬ್ಬರದ ಮಹತ್ವ, ಜೈವಿಕ ಗೊಬ್ಬರಗಳು, ಸಸ್ಯ ಸಂರಕ್ಷಣೆಯ ದೇಶೀಯ ಪದ್ಧತಿಗಳು, ಸಾವಯವ ಕೃಷಿಯಲ್ಲಿ ಬೆಳೆಗಳ ಸಂರಕ್ಷಣೆ, ಸಾವಯವ ಕೃಷಿಯ ಬೇಕು-ಬೇಡಗಳು ಮುಂತಾದ ವಿಷಯಗಳನ್ನು ವಿವರಿಸುತ್ತದೆ.

ಪರಮೇಶ್ವರನಾಯ್ಕರವರು ಬರೆದಿರುವ 'ಸಣ್ಣ ರೈತರ ಮೇಲೆ ಕ್ರಮಬದ್ಧ ಮಾರುಕಟ್ಟೆಗಳ ಪರಿಣಾಮ: ಶಿವಮೊಗ್ಗ ಜಿಲ್ಲೆ ಕುರಿತು ಒಂದು ಅಧ್ಯಯನ', ಹನುಮಂತಪ್ಪ ರವರ 'ಚಿತ್ರದುರ್ಗ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿನ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ-ಒಂದು ಅಧ್ಯಯನ'. ಸ್ಮಿತಾ ಎಂ ಭಾವಿನಕಟ್ಟಿರವರ 'ರಾಮನಗರ ಜಿಲ್ಲೆಯ ರೈತ ಚಳವಳಿಗಳು', ರಾಮಾಪ್ಪ್ನಾ ರಾಯ್‌ರವರ 'ಕಿಸಾನ್ ಆಂದೋಲನ ಹೌರ್ ಹಿಂದಿ ಕವಿತ' ರಾಜಶೇಖರಪ್ಪ. ಬಿ ರವರ 'ಪ್ರಾಚೀನ ಚಿತ್ರದುರ್ಗ', ಧನಂಜಯ್‌ರವರ 'ಕರ್ನಾಟಕ ರಾಜ್ಯ ರೈತ ಸಂಘ-ಎ ಸೋಶಿಯಾಲಾಜಿಕಲ್ ಸ್ಟಡಿ ಆಫ್ ಫೀರ್ಮೆಂಟ್ ಆರ್ಗನೈಝೇಶನ್', ಕೆ.ಸಿ.ಬಸವರಾಜುರವರ 'ಆ್ಯನ್ ಎಕನಾಮಿಕ್ ಎನಾಲಿಸಿಸ್ ಆಫ್ ಫಾರ್ಮರ್ಸ್ ಮೂಮೆಂಟ್ಸ್ : ಎ ಕೇಸ್ ಸ್ಟಡಿ ಆಫ್ ಕರ್ನಾಟಕ ರಾಜ್ಯ ರೈತ ಸಂಘ', ಸುಶಾಂತ್ ಕುಮಾರ್ ರವರ

'ಪೀಝೆಂಟ್ ಮೂಮೆಂಟ್ ಇನ್ ಒರಿಸ್ಸಾ ೧೯೨೧-೧೯೫೦', ಜಿತೇಂದ್ರಸಿಂಗ್ ನೇಗಿ ರವರ 'ಪೀಝೆಂಟ್ ಮೂಮೆಂಟ್ಸ್ ಇನ್ ಉತ್ತರ ಪ್ರದೇಶ', ಕುಲಕರ್ಣಿ.ಡಿ.ಕೆ ರವರ 'ಪೀಝೆಂಟ್ ಮೂಮೆಂಟ್ಸ್ ಇನ್ ಕರ್ನಾಟಕ ಸಿನ್ಸ್ ೧೯೦೦ : ದೇರ್ ನೇಚರ್ ಆ್ಯಂಡ್ ರಿಝಲ್ಟ್ಸ್', ಶ್ರೀನಿವಾಸಲು ರವರ 'ತೆಲಂಗಾಣ ಪೀಝೆಂಟ್ ಮೂಮೆಂಟ್ ಆ್ಯಂಡ್ ಚೇಂಜ್ ಇನ್ ದ ಅಗ್ರೇರಿಯನ್ ಸ್ಟ್ರಕ್ಚರ್', ಸುಬ್ಬುಲಕ್ಷ್ಮಿ .ವಿ ರವರ 'ಕಾವೇರಿ ಡೆಲ್ಟಾ ಇರಿಗೇಶನ್ ಪರ್‌ಸ್ಪೆಕ್ಟಿವ್ ಆ್ಯಂಡ್ ಕನ್ಸರ್ನ್‌ಸ್ ೧೯೩೪-೨೦೦೪', ಅನಂತ ಕೃಷ್ಣ ಎಸ್. ರವರ 'ದ ಪೀಝೆಂಟ್ ಹಿಸ್ಟರಿ ಆಫ್ ತಮಿಳುನಾಡು ೧೯೦೦-೧೯೫೨', ಕರಣ್‌ಸಿಂಗ್ ಚೌಹಾನ್ ರವರ 'ಪೀಝೆಂಟ್ ಆರ್ಗನೈಝೇಶನ್ ಇನ್ ನೇಪಾಳ್', ರಾಕೇಶ್ ಕುಮಾರ ಗುಪ್ತ ರವರ 'ಪೀಝೆಂಟ್ ಸ್ಟ್ರಗಲ್ಸ್ – ಎ ಕೇಸ್ ಸ್ಟಡಿ ಆಫ್ ಬಿಹಾರ್', ದೇವೇಂದ್ರಪ್ಪ .ಪಿ ರವರ 'ಕರ್ನಾಟಕ ಲ್ಯಾಂಡ್ ರೀಫಾರ್ಮ್ಸ್ ೧೯೭೪–ಎ ಕೇಸ್ ಸ್ಟಡಿ ಆಫ್ ದಾವಣಗೆರೆ ಡಿಸ್ಟ್ರಿಕ್ಟ್', ಕುಮಾರ್ .ಕೆ.ಎಂ ರವರ 'ಆನ್ ಅನಲೈಸಿಸ್ ಆಫ್ ಕರ್ನಾಟಕ ರಾಜ್ಯ ರೈತ ಸಂಘ ಆ್ಯಜ್ ಮೂಮೆಂಟ್ ೧೯೮೭–೧೯೯೫', ಶ್ರೀನಿವಾಸ್ ರವರ 'ಇ–ಗವರ್ನನ್ಸ್ ಇನ್ ಕರ್ನಾಟಕ : ಎ ಕೇಸ್ ಸ್ಟಡಿ ಆಫ್ ಭೂಮಿ ಪ್ರಾಜೆಕ್ಟ್ ಇನ್ ದಾವಣಗೆರೆ ಡಿಸ್ಟ್ರಿಕ್ಟ್' ಇವು ಈವರೆಗೆ ರೈತರ ಕುರಿತು ನಡೆದ ಸಂಶೋಧನಾ ಮಹಾಪ್ರಬಂಧಗಳಾಗಿವೆ.

### ಅಧ್ಯಯನದ ಸ್ವರೂಪ

ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಒಟ್ಟು ೧೦ ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪವನ್ನು ಚರ್ಚಿಸಲಾಗಿದೆ. ಹಾಗೂ ರೈತ ಪ್ರತಿಭಟನೆಯ ಕುರಿತು ಇಲ್ಲಿಯವರೆಗೆ ಕೈಗೊಂಡಿರುವ ಅಧ್ಯಯನಗಳ ಸಮೀಕ್ಷೆಯನ್ನು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅವಲೋಕನ ಮಾಡಲಾಗಿದೆ.

ಎರಡನೆಯ ಅಧ್ಯಾಯವು ರೈತ ಪ್ರತಿಭಟನೆಗಳ ಪ್ರಾದೇಶಿಕ ವ್ಯಾಪ್ತಿಯ ಹಿನ್ನೆಲೆಯನ್ನು ಒಳಗೊಂಡಿದೆ. ಕರ್ನಾಟಕ ರಾಜ್ಯದ ಬಯಲು ಸೀಮೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಭೂ ಹಿಡುವಳಿ ಪದ್ಧತಿಯನ್ನು ವಿವರಿಸಲಾಗಿದೆ, ಹಾಗೂ ಭೂಸುಧಾರಣೆ ಕಾಯ್ದೆಗಳು ರೈತ ಪ್ರತಿಭಟನೆಯ ಫಲವಾಗಿದ್ದು, ಇವುಗಳ ರಚನೆ, ಜಾರಿಗೊಳಿಸುವಿಕೆ ಹಾಗೂ ಇದರಿಂದಾದ ಸಾಮಾಜಿಕ ಪರಿವರ್ತನೆಯನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯ ರೈತ ಪ್ರತಿಭಟನೆಯ ಸ್ವರೂಪವನ್ನು ಒಳಗೊಂಡಿದ್ದು, ಸ್ವಾತಂತ್ರ್ಯ ಪೂರ್ವ ಕರ್ನಾಟಕ ರೈತ ಪ್ರತಿಭಟನೆಗಳು ಹಾಗೂ ಸ್ವಾತಂತ್ರ್ಯಾ ನಂತರದ ಕರ್ನಾಟಕ ರೈತ ಪ್ರತಿಭಟನೆಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಬಯಲುಸೀಮೆಯ ರೈತ ಪ್ರತಿಭಟನೆಗೆ ಕಾರಣವಾದ ಅಂಶಗಳನ್ನು ಕ್ರೋಢೀಕರಿಸಲಾಗಿದೆ.

ಆರನೆಯ ಅಧ್ಯಾಯವು ಬಯಲುಸೀಮೆಯ ರೈತ ಪ್ರತಿಭಟನೆಗಳ ಕುರಿತಂತೆ ವಿಶೇಷವಾಗಿ ದಾವಣಗೆರೆ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಯ ರೈತರುಗಳು ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮಾಡಿದ ಪ್ರತಿಭಟನೆಗಳನ್ನು ಅವಲೋಕನ ಮಾಡಲಾಗಿದೆ. ಶೇಂಗಾ ಮತ್ತು ಈರುಳ್ಳಿ ಬೆಳೆಗಳು ಬಯಲು ಸೀಮೆಯ ಪ್ರಮುಖ ಬೆಳೆಗಳಾಗಿದ್ದು, ಈ ಬೆಳೆಗಳಿಗೆ ಬೆಂಬಲ ಬೆಲೆ ಸಿಗದೆ ರೈತರು ಅನೇಕ ಸಂಕಷ್ಟಕ್ಕೆ ಒಳಗಾಗಿದ್ದು, ಇದರಿಂದ ರೈತರು ಬೆಂಬಲ ಬೆಲೆ ಸಿಗದಿದ್ದಾಗ ಅನೇಕ ಪ್ರತಿಭಟನೆಗಳನ್ನು ಮಾಡಿದ್ದು, ಅವುಗಳ ಅವಲೋಕನ ಮಾಡಲಾಗಿದೆ.

ಏಳನೆಯ ಅಧ್ಯಾಯದಲ್ಲಿ ರೈತರು ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮಾಡಬೇಕಾದ ಪ್ರತಿಭಟನೆಗಳು ಹಾಗೂ ಈ ಪ್ರತಿಭಟನೆಗಳಲ್ಲಿ ರೈತರು ಸಕ್ರೀಯವಾಗಿ ಪಾಲ್ಗೊಳ್ಳುವಂತೆ ಮಾಡುವಲ್ಲಿ ರೈತ ಸಂಘಟನೆಗಳು ಪ್ರಮುಖ ಪಾತ್ರ ವಹಿಸಿದ್ದು, ಇಂತಹ ರೈತ ಸಂಘಟನೆಗಳ ಬಗ್ಗೆ ಮಾಹಿತಿ ಕಲೆ ಹಾಕಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಬಯಲುಸೀಮೆಯ ರೈತ ಪ್ರತಿಭಟನೆಗಳ ರುವಾರಿಗಳಾದ ಪ್ರಮುಖ ಮುಖಂಡರನ್ನು, ನಾಯಕರನ್ನು ಸಂದರ್ಶಿಸಿ ವಿವರಗಳನ್ನು ಬೆಳಕಿಗೆ ತರುವ ಪ್ರಯತ್ನ ಮಾಡಲಾಗಿದೆ.

ಒಂಭತ್ತನೆಯ ಅಧ್ಯಾಯದಲ್ಲಿ ಸಮಕಾಲೀನ ಸಂದರ್ಭದ ರೈತರ ಸಮಸ್ಯೆಗಳು ಸವಾಲು ಹಾಗೂ ಸಾಧ್ಯತೆಗಳನ್ನು ತಿಳಿಸಲಾಗಿದೆ.

ಹತ್ತನೆಯ ಅಧ್ಯಾಯ ಸಮಾರೋಪವಾಗಿದ್ದು, ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ವಿವರಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಎಂ.ಜಿ. ನಾಗರಾಜ್, **ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು**, ಸಂಪುಟ-೧, ೨೦೦೬, ಪು.೦೧

೨. ಮೇಟಿ ಮಲ್ಲಿಕಾರ್ಜುನ್, **ಸಬಾಲ್ಟರ್ನ್ ಓದು**, ೨೦೧೩, ಪು.೩೧

೩. ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ವಿರೂಪಾಕ್ಷಿ ಪೂಜಾರಹಳ್ಳಿ(ಸಂ.ಸಂ), **ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ**,೨೦೧೦, ಪು.೨೫೯

೪. ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ವಿರೂಪಾಕ್ಷಿ ಪೂಜಾರಹಳ್ಳಿ(ಸಂ.ಸಂ), **ಪೂರ್ವೋಕ್ತ**, ಪು.೨೬೩

# ಅಧ್ಯಾಯ – ೨

# ಬಯಲುಸೀಮೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

೨.೧ ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕಹಿನ್ನೆಲೆ
೨.೨ ದಾವಣಗೆರೆ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ
೨.೩ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

## ಅಧ್ಯಾಯ – ೨

# ಬಯಲುಸೀಮೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತವಾಗಿ ೩೦ ಜಿಲ್ಲೆಗಳಿವೆ. ಇವುಗಳನ್ನು ಆಡಳಿತಕ್ಕನುಗುಣವಾಗಿ ಹೈದ್ರಾಬಾದ್ ಕರ್ನಾಟಕ, ಮುಂಬಾಯಿ ಕರ್ನಾಟಕ, ಕರಾವಳಿ ಕರ್ನಾಟಕ, ಬಯಲುಸೀಮೆ, ಮಲೆನಾಡು ಎಂದು ವಿಭಾಗಿಸಲಾಗಿದೆ. ಒಂದೊಂದು ಪ್ರದೇಶಕ್ಕೂ ಮಹತ್ವ ಇರುವುದು ಗಮನಾರ್ಹ. ಹಾಗೆಯೇ ಬಯಲುಸೀಮೆಗೂ ಚಾರಿತ್ರಿಕ ಹಾಗೂ ಭೌಗೋಳಿಕ ಮಹತ್ವವಿದೆ. ರಾಜ್ಯ ಸರ್ಕಾರ ಬಯಲುಸೀಮೆ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಿ, ಆ ಮೂಲಕ ಹಿಂದುಳಿದ ಪ್ರದೇಶಾಭಿವೃದ್ಧಿಯನ್ನು ಮಾಡಲು ಮುಂದಾಗಿದೆ. ಆ ಹಿನ್ನೆಲೆಯಲ್ಲಿ ತುಮಕೂರು, ಕೋಲಾರ, ಚಿತ್ರದುರ್ಗ, ದಾವಣಗೆರೆ, ಹಾಸನ, ಹಾವೇರಿ ಮೊದಲಾದ ಜಿಲ್ಲೆಗಳು ಈ ವ್ಯಾಪ್ತಿಯಲ್ಲಿವೆ. ಬಳ್ಳಾರಿ ಜಿಲ್ಲೆಯು ಹೈದ್ರಾಬಾದ್ ಕರ್ನಾಟಕದಲ್ಲಿ ಒಂದಾಗಿದೆ. ಈ ಪ್ರದೇಶದಲ್ಲಿ ಕೂಲಿ ಕಾರ್ಮಿಕರು ಹಾಗೂ ರೈತರ ಜೀವನ ಶೋಚನೀಯವಾಗಿದೆ. ಹಾಗಾಗಿ ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

### ೨.೧ ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ:

ಕರ್ನಾಟಕ ರಾಜ್ಯದ ಪ್ರಾಚೀನ ಹಾಗೂ ಐತಿಹಾಸಿಕ ನೆಲೆಗಳಲ್ಲಿ ಒಂದಾಗಿರುವ ಚಿತ್ರದುರ್ಗ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಸಂಸ್ಕೃತಿಯನ್ನು ಬೆಸೆಯಲಿದೆ. ಮೊದಲು ಚಿತ್ರದುರ್ಗ, ಹೊಳಲ್ಕೆರೆ, ಹೊಸದುರ್ಗ, ಮೊಳಕಾಲ್ಮೂರು, ಹಿರಿಯೂರು, ಚಳ್ಳಕೆರೆ, ಜಗಳೂರು, ದಾವಣಗೆರೆ, ಹರಿಹರ ಒಟ್ಟು ೯ ತಾಲೂಕುಗಳನ್ನು ಒಳಗೊಂಡಿತ್ತು. ೧೯೯೭ರ ನಂತರ ದಾವಣಗೆರೆ ಹೊಸ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಾಗ, ಚಿತ್ರದುರ್ಗ ತನ್ನ ವಿಸ್ತೀರ್ಣದಲ್ಲಿ ಕಡಿಮೆ ಆಯಿತು. ಪ್ರಸ್ತುತವಾಗಿ ಜಿಲ್ಲೆಯು ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು,

ಹೊಳಲ್ಕೆರೆ, ಹೊಸದುರ್ಗ ಒಟ್ಟು ೬ ತಾಲ್ಲೂಕುಗಳು, ೬ ನಗರ ಪಾಲಿಕೆಗಳು, ೧೦೬೩ ಗ್ರಾಮಗಳನ್ನು ಒಳಗೊಂಡಿದೆ.[೧]

**ವಿಸ್ತೀರ್ಣ ಮತ್ತು ಜನಸಂಖ್ಯೆ:** ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯು ಒಟ್ಟು ೮೪೩೬ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೧೬,೫೯,೪೫೬ ಜನಸಂಖ್ಯೆಯನ್ನು ಹೊಂದಿವೆ.[೨] ಚಿತ್ರದುರ್ಗ ತಾಲೂಕು ೧೩೮೩ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೪,೨೩,೮೭೯ ಜನಸಂಖ್ಯೆಯನ್ನು, ಚಳ್ಳಕೆರೆಯು ೨೦೭೪ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೩,೬೫,೭೮೪ ಜನಸಂಖ್ಯೆಯನ್ನು, ಹಿರಿಯೂರು ೧೭೦೩ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೨,೮೬,೧೩೩ ಜನಸಂಖ್ಯೆಯನ್ನು, ಹೊಳಲ್ಕೆರೆಯು ೧೦೯೯ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೨,೦೭,೨೬೦ ಜನಸಂಖ್ಯೆಯನ್ನು, ಹೊಸದುರ್ಗವು ೧೪೩೮ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೨,೩೫,೧೧೬ ಜನಸಂಖ್ಯೆಯನ್ನು, ಮೊಳಕಾಲ್ಮೂರು ೭೫೯ ಚ.ಕಿ.ಮೀ. ವಿಸ್ತೀರ್ಣವನ್ನು ಹಾಗೂ ೧,೪೧,೨೮೪ ಜನಸಂಖ್ಯೆಯನ್ನು ಹೊಂದಿವೆ.

**ಮೇರೆಗಳು:** ಜಿಲ್ಲೆಯ ಉತ್ತರಕ್ಕೆ ಬಳ್ಳಾರಿ, ಪೂರ್ವದಲ್ಲಿ ಅನಂತಪುರ, ಆಗ್ನೇಯಕ್ಕೆ ತುಮಕೂರು, ಪಶ್ಚಿಮಕ್ಕೆ ಶಿವಮೊಗ್ಗ ಮತ್ತು ದಾವಣಗೆರೆ, ವಾಯುವ್ಯಕ್ಕೆ ಧಾರವಾಡ, ನೈರುತ್ಯಕ್ಕೆ ಚಿಕ್ಕಮಗಳೂರು ಜಿಲ್ಲೆಯಿಂದ[೩] ಸುತ್ತುವರಿಯಲ್ಪಟ್ಟಿದೆ.

**ಮಳೆ:** ಜಿಲ್ಲೆಯಲ್ಲಿ ನೈರುತ್ಯ ಮಾರುತಗಳು ಮೇ ತಿಂಗಳ ಕೊನೆಯಲ್ಲಿ ಆರಂಭವಾಗಿ ಕೆಲವೊಮ್ಮೆ ಸೆಪ್ಟಂಬರ್‌ನಿಂದ ಅಕ್ಟೋಬರ್ ತಿಂಗಳವರೆಗೆ ಇರುತ್ತದೆ. ಚಿತ್ರದುರ್ಗದಲ್ಲಿ ಪ್ರತೀ ವರ್ಷ ೫೮೨ ಮಿ.ಮೀನಷ್ಟು ಸರಾಸರಿ ಮಳೆಯಾಗುತ್ತಿದ್ದು, ವರ್ಷದಲ್ಲಿ ೪೦ ದಿನಗಳು ಮಾತ್ರ ಮಳೆ ಬರುತ್ತದೆ.[೪] ಜಿಲ್ಲೆಯ ಹೊಳಲ್ಕೆರೆ ತಾಲೂಕಿನಲ್ಲಿ ಸರಾಸರಿ ೭೧೮ ಮಿ.ಮೀ. ಅತೀ ಹೆಚ್ಚು ಮಳೆ ಬೀಳುವ ತಾಲೂಕಾಗಿದ್ದು, ವರ್ಷದಲ್ಲಿ ೪೦ ದಿನ ಮಳೆಯಾದರೆ, ಚಳ್ಳಕೆರೆಯಲ್ಲಿ ಸರಾಸರಿ ೪೬೫ ಮಿ.ಮೀ. ಅತೀ ಕಡಿಮೆ ಮಳೆಯಾಗುತ್ತಿದ್ದು, ವರ್ಷದಲ್ಲಿ ೨೩ ದಿನಗಳು ಮಾತ್ರ ಮಳೆಯಾಗುತ್ತದೆ.[೫]

**ವ್ಯವಸಾಯ :** ಚಿತ್ರದುರ್ಗ ಜಿಲ್ಲೆಯ ಜನರ ಮುಖ್ಯ ಕಸುಬು ಕೃಷಿಯಾಗಿದೆ ಇಲ್ಲಿ ಒಟ್ಟು ೨,೯೦,೫೭೭ ಭೂ ಹಿಡುವಳಿದಾರರಿದ್ದು, ೫೬,೦೭೭ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಜಿಲ್ಲೆಯಲ್ಲಿ ೧ ಹೆಕ್ಟೇರ್‌ಗಿಂತ ಕಡಿಮೆ ಭೂಮಿಯನ್ನು ಹೊಂದಿದ ೧,೦೯,೧೭೭ ಅತೀ ಸಣ್ಣ ಭೂ ಹಿಡುವಳಿದಾರರಿದ್ದು, ೫೯,೧೩೮ ಹೆಕ್ಟೇರ್ ಭೂಮಿಯನ್ನು ಹೊಂದಿದ್ದಾರೆ. ೧ ರಿಂದ ೨ ಹೆಕ್ಟೇರ್ ಭೂಮಿಯನ್ನು ಹೊಂದಿದ ೯೦,೩೭೦ ಸಣ್ಣ ಭೂ ಹಿಡುವಳಿದಾರರಿದ್ದು, ೧,೨೭,೫೮೭ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ೨ ರಿಂದ ೪ ಹೆಕ್ಟೇರ್‌ನವರೆಗೆ ಭೂಮಿಯನ್ನು ಹೊಂದಿದ ೬೦,೦೬೩ ಅರೆ ಮಧ್ಯಮ ಭೂ ಹಿಡುವಳಿದಾರರಿದ್ದು, ೧,೫೮,೭೭೭ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ೪ ರಿಂದ ೧೦ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿರುವ ೨೬,೭೯೫ ಮಧ್ಯಮ ಭೂ ಹಿಡುವಳಿದಾರರಿದ್ದು, ೧,೫೨,೮೩೪ ಹೆಕ್ಟೇರ್ ಭೂಮಿಯನ್ನು

ಹೊಂದಿದ್ದಾರೆ. ೧೦ ಹೆಕ್ಟೇರ್‌ಗಿಂತ ಹೆಚ್ಚು ಭೂಮಿಯನ್ನು ಹೊಂದಿದ ೪,೧೭೨ ದೊಡ್ಡ ಭೂ ಹಿಡುವಳಿದಾರರಿದ್ದು, ೭೨,೪೪೧ ಹೆಕ್ಟೇರ್ ಭೂಮಿಯನ್ನು ಹೊಂದಿದ್ದಾರೆ.[೬]

**ಅರಣ್ಯ ಪ್ರದೇಶ** : ಬಯಲುಸೀಮೆಯಾಗಿರುವ ಈ ಜಿಲ್ಲೆಯು ೭೩,೭೮೯ ಹೆಕ್ಟೇರ್ ಅರಣ್ಯ ಪ್ರದೇಶವನ್ನು ಹೊಂದಿದ್ದು.[೭] ಎಲ್ಲಾ ಜಿಲ್ಲೆಗಳಿಗಿಂತ ಹಿಂದುಳಿದಿದೆ. ಈ ಭಾಗದಲ್ಲಿ ಹೆಚ್ಚಾಗಿ ಕುರುಚಲು ಗಿಡ, ಹುಣಸೆಮರ, ಜಾಲಿಗಿಡಗಳು, ಕರಿಜಾಲಿ, ಬೇವು ಮುಂತಾದ ಮರಗಳು ಕಂಡುಬರುತ್ತವೆ. ಅರಣ್ಯ ಪ್ರದೇಶ ಕಡಿಮೆಯಾಗಿದ್ದು ಬೆಟ್ಟಗುಡ್ಡಗಳಲ್ಲಿ ಚಿರತೆ, ಕರಡಿ, ಕಾಡುಹಂದಿ, ಕತ್ತೆಕಿರುಬ, ನವಿಲುಗಳನ್ನು ಕಾಣಬಹುದು.

**ಖನಿಜ ಸಂಪತ್ತು:** ಜಿಲ್ಲೆಯಲ್ಲಿ ತಾಮ್ರದ ನಿಕ್ಷೇಪಗಳಿದ್ದು, ಇಂಗಳದಾಳು ತಾಮ್ರದ ಗಣಿ ಕರ್ನಾಟಕದ ಅತ್ಯಂತ ಪ್ರಾಚೀನ ಗಣಿಯಾಗಿದೆ. ಈ ಪ್ರದೇಶವು ಪುರಾತನ ಗಣಿ ಉದ್ಯಮದಿಂದಾಗಿ ಬೆಳ್ಳಿಗುಡ್ಡ ಎಂದು ಹೆಸರು ಪಡೆದಿದೆ.[೮] ಹಿರಿಯೂರು ತಾಲ್ಲೂಕು ಜವಗೊಂಡನಹಳ್ಳಿ, ಅನೆಸಿದ್ರಿ, ದಿಂಡಾವರ ಹಾಗೂ ಗುಡ್ಡದರಂಗನಹಳ್ಳಿಯಲ್ಲಿ ಚಿನ್ನದ ನಿಕ್ಷೇಪಗಳು ಕಂಡುಬಂದಿವೆ. ಹಾಗೆಯೇ ಇಂಗಳದಾಳಿನ ತಾಮ್ರದ ಗಣಿ. ಗಾದರಿಮಲೆ ಬೆಟ್ಟದಲ್ಲಿ ಮ್ಯಾಂಗನೀಸ್ ಅದಿರಿನ ಗಣಿಗಳು ಕಂಡುಬರುತ್ತವೆ. ಚಳ್ಳಕೆರೆ, ಮೊಳಕಾಲ್ಮೂರು ತಾಲೂಕಿನಲ್ಲಿ ಕಣ ಶಿಲೆಯ ಬೆಟ್ಟಗಳಿವೆ. ಹಾಗೂ ಮನೆ ಕಟ್ಟಲು ಬಳಸುವ ಕಲ್ಲಿನ ನಿಕ್ಷೇಪಗಳು ಹೇರಳವಾಗಿವೆ.[೯]

**ಬೆಳೆಗಳು** : ಚಿತ್ರದುರ್ಗದಲ್ಲಿ ಬೆಳೆಯುವ ಪ್ರಮುಖ ಬೆಳೆಗಳೆಂದರೆ ಮುಸುಕಿನ ಜೋಳ, ಜೋಳ, ರಾಗಿ, ಗೋಧಿ, ತೊಗರಿ, ಹುರುಳಿ, ಶೇಂಗಾ, ಅವರೆ, ಹಲಸಂಧಿ, ಸೂರ್ಯಕಾಂತಿ, ಹತ್ತಿ, ಈರುಳ್ಳಿ ಮುಂತಾದವು.

**ಜಲಮೂಲ** : ಕೃಷ್ಣಾ ಜಲಾನಯನ ಪ್ರದೇಶದಲ್ಲಿರುವ ಈ ಜಿಲ್ಲೆಯ ಪ್ರಮುಖ ನದಿ ವೇದಾವತಿ. ಈ ನದಿಗೆ ಹಿರಿಯೂರು ತಾಲೂಕಿನ ಕೇಂದ್ರದ ಬಳಿ ವಾಣಿವಿಲಾಸಪುರದಲ್ಲಿ ೧೯೦೭ರಂದು ಅಣೆಕಟ್ಟನ್ನು ನಿರ್ಮಿಸಲಾಯಿತು. ಇದನ್ನು 'ಮಾರಿಕಣಿವೆ ಜಲಾಶಯ'ವೆಂದು ಕರೆಯಲಾಗುತ್ತದೆ. ಈ ನದಿಯು ಬಾಬಾ ಬುಡನ್‌ಗಿರಿಯಲ್ಲಿ ವೇದ ಮತ್ತು ಆವತಿ ಎಂಬ ೨ ತೊರೆಗಳಾಗಿ ಹುಟ್ಟಿ, ಕಡೂರಿನ ಮುಖಾಂತರ ೧೨೫ ಮೈಲಿ ವಿಸ್ತಾರವಾಗಿ ಹರಿದು ತುಂಗಾಭದ್ರಾ ನದಿಯನ್ನು ಸೇರುತ್ತದೆ. ಇದೇ ಮುಂದೆ ಕೃಷ ನದಿಯಾಗಿ ಮಂತ್ರಾಲಯದಲ್ಲಿ ಹರಿಯುತ್ತದೆ.

ಜಿಲ್ಲೆಯ ಪ್ರಮುಖ ದೊಡ್ಡ ಹಳ್ಳವೆಂದರೆ ಜನಗಿಹಳ್ಳ, ಇದನ್ನು ಚಿಕ್ಕಹಗರಿ ಎಂದು ಕರೆಯಲಾಗುತ್ತದೆ. ಈ ಹಳ್ಳವು ಹೊಳಲ್ಕೆರೆಯಲ್ಲಿ ಹುಟ್ಟಿ ೮೦ ಮೈಲಿ ಜಿಲ್ಲೆಯಲ್ಲಿ ಹರಿಯುತ್ತದೆ. ತುಮಕೂರಿನಲ್ಲಿ ಹುಟ್ಟುವ ಸ್ವರ್ಣಮುಖಿ ಹಳ್ಳವು ಹಿರಿಯೂರು ತಾಲೂಕಿನ ಮೂಲಕ ೯ ಮೈಲಿ ಹರಿಯುತ್ತದೆ. ಈ ನದಿಗೆ ಗಾಯಿತ್ರಿ ಜಲಾಶಯ ನಿರ್ಮಿಸಲಾಗಿದೆ. ಒಟ್ಟಾರೆಯಾಗಿ ಈ ಎಲ್ಲಾ ಜಲಮೂಲಗಳು ಕೃಷ್ಣ ನದಿಗೆ ಸೇರುವುದರಿಂದ, ಈ ಪ್ರದೇಶವನ್ನು ಕೃಷ್ಣಜಲಾನಯನ ಪ್ರದೇಶವೆಂದು ಕರೆಯಲಾಗುತ್ತದೆ.[೧೦] ಜಿಲ್ಲೆಯಲ್ಲಿ ೧೪೨ ಕಿ.ಮೀ. ಉದ್ದದ ಕಾಲುವೆಗಳು, ೩೦೯ ಕೆರೆಗಳು, ೧೧,೯೯೭ ಬಾವಿಗಳಿವೆ.[೧೧]

**ಮಣ್ಣು :** ಜಿಲ್ಲೆಯು ನೈಸರ್ಗಿಕವಾಗಿಯೇ ಫಲವತ್ತಾದ ಭೂಮಿಯನ್ನು ಹೊಂದಿದೆ. ಕ್ರಿ.ಶ. ೧೮೦೧ರಲ್ಲಿ ಭೇಟಿ ನೀಡಿರುವ ಬುಕಾನಾನ್‌ರವರ ಪ್ರಕಾರ, ಈ ಪ್ರದೇಶವು ಎರೆ, ಕೆಂಗಲು ಮತ್ತು ಕಲ್‌ಮರಡಿಯೆಂಬ ೩ ರೀತಿಯ ಗುಣಗಳುಳ್ಳ ನೆಲವಿದೆ ಎಂದಿದ್ದಾರೆ.[೧೨] ದಕ್ಷಿಣ ಮತ್ತು ಪಶ್ಚಿಮ ಭಾಗಗಳಲ್ಲಿ ಕೆಂಪು ಮಣ್ಣಿನ ಭೂಮಿಯು ಹೆಚ್ಚಾಗಿದ್ದು, ಪೂರ್ವದಲ್ಲಿ ಮರಳು ಮಣ್ಣು, ಮಧ್ಯಭಾಗದ ಉತ್ತರ ಹಾಗೂ ಈಶಾನ್ಯ ಭಾಗಗಳಲ್ಲಿ ಕಪ್ಪು ಮಣ್ಣು, ವಾಯುವ್ಯದಲ್ಲಿ ಕಪ್ಪುಮಿಶ್ರಿತ ಬೂದುಬಿಳಿ ಮಣ್ಣು ಕಂಡುಬರುತ್ತದೆ.

ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್ ಪ್ರಕಾರ ಜಿಲ್ಲೆಯಲ್ಲಿ ಒಟ್ಟಾರೆ ಕಪ್ಪು, ಕೆಂಪು ಮಣ್ಣಿದ್ದು ರಾಗಿ ಬೆಳೆಯಲು ಯೋಗ್ಯವಾಗಿದೆ. ಕಪ್ಪುಮಣ್ಣು ಜಿಲ್ಲೆಯಲ್ಲಿ ಹೆಚ್ಚು ವ್ಯಾಪಿಸಿದ್ದು ನೀರು ಸಂರಕ್ಷಣಾ ಗುಣ ಹೊಂದಿದೆ.[೧೩]

**ಬೆಟ್ಟಗುಡ್ಡಗಳು:** ಚಿತ್ರದುರ್ಗವು ಬೃಹತ್ತಾದ ಬೆಟ್ಟಗುಡ್ಡಗಳ ಸಾಲುಗಳನ್ನು ಹೊಂದಿದ್ದು, ದಕ್ಷಿಣದ ಆಗ್ನೇಯ ಉತ್ತರದ ವಾಯುವ್ಯ ದಿಕ್ಕಿನ ಕಡೆಗೆ ಒಂದೇ ಅಂತರದಲ್ಲಿದ್ದು ಸ್ವಾಭಾವಿಕ ರಕ್ಷಣೆ ಗೋಡೆಯಂತಿದೆ. ಚಿತ್ರದುರ್ಗ ತಾಲೂಕಿನಲ್ಲಿ ಭೈರನಕಲ್ಲುಗುಡ್ಡ (೩೮೬೩ ಅಡಿ), ಈಚಲುಗುಡ್ಡ (೩೮೦೪ ಅಡಿ), ಜೋಗಿಮಟ್ಟಿಗುಡ್ಡ (೩೮೦೩ ಅಡಿ), ಓಬಳೇದೇವರಗುಡ್ಡ (೩೭೦೦ ಅಡಿ), ಧವಳಪ್ಪನಗುಡ್ಡ (೩೨೮೫ ಅಡಿ). ಮೊಳಕಾಲ್ಮೂರು ತಾಲೂಕಿನಲ್ಲಿ ಜಟ್ಟಂಗಿರಾಮೇಶ್ವರಗುಡ್ಡ (೩೪೯೯ ಅಡಿ), ನುಂಕೆಮಲೆಪರ್ವತ (೩೦೨೨ ಅಡಿ), ಜೋಗಪ್ಪನಗುಡ್ಡ (೨೯೩೬ ಅಡಿ), ಬ್ರಹ್ಮಗಿರಿಬೆಟ್ಟ (೨೩೪೭ ಅಡಿ). ಹೊಳಲ್ಕೆರೆ ತಾಲೂಕಿನ ರಂಗಪ್ಪನಗುಡ್ಡ (೩೭೫೧ ಅಡಿ), ಬಡ್ಡೇರಗುಡ್ಡ (೩೧೩೮ ಅಡಿ). ಹೊಸದುರ್ಗ ತಾಲೂಕಿನಲ್ಲಿ ಹಾಲುರಾಮೇಶ್ವರಬೆಟ್ಟ (೩೮೭೫ ಅಡಿ), ಕೋಟಿಕಲ್‌ಗುಡ್ಡ (೩೩೨೨ ಅಡಿ), ನೀರ್‌ಗುಡ್ಡ (೩೧೭೨ ಅಡಿ), ತಿರುಮಲದೇವರಗುಡ್ಡ (೩೦೭೮ ಅಡಿ), ದೊಡ್ಡರಸಿಗುಡ್ಡ (೩೦೬೨ ಅಡಿ), ಹಿರಿಯೂರು ತಾಲೂಕಿನಲ್ಲಿ ಮಾರಿಕಣಿವೆಗುಡ್ಡ (೩೬೭೫ ಅಡಿ)ಗಳಿದ್ದು ಜಿಲ್ಲೆಯು ಸಮುದ್ರಮಟ್ಟದಿಂದ ೨೦೦೦ ಅಡಿ ಎತ್ತರದಲ್ಲಿದೆ.[೧೪]

**ಐತಿಹಾಸಿಕ ಹಿನ್ನೆಲೆ**

**ತ್ರೇತಾಯುಗದಲ್ಲಿ ಚಿತ್ರದುರ್ಗ :** ಈ ಪ್ರದೇಶವು ತ್ರೇತಾಯುಗದ ಜೊತೆ ಹೊಂದಿರುವ ಸಂಬಂಧವನ್ನು ಈ ಕೆಳಗಿನಂತೆ ಕಾಣಬಹುದು. ಲಂಕಾದ ರಾವಣಾಸುರನು ಈಶ್ವರನನ್ನು ಕಾಣಬೇಕೆಂದು ಕೈಲಾಸಕ್ಕೆ ಬಂದಾಗ, ಈಶ್ವರನ ಅರಮನೆಯ ಬಾಗಿಲಲ್ಲಿ ಕಾವಲಿದ್ದ ಬಸವ ರಾವಣನನ್ನು ನಿಲ್ಲಿಸಿ, ಸಮಯ ನೋಡಿ ಹೇಳುತ್ತೇನೆ ಎಂದನು. ಆ ಮಾತಿನಿಂದ ರಾವಣನಿಗೆ ಕೋಪಬಂದು, ನೀನು ನನ್ನನ್ನು ತಡೆಯುತ್ತಿಯಾ ಎಂದು ಎಡಗೈಯಿಂದ ಅವನನ್ನು ನೂಕಿದನು. ಇದರಿಂದ ಕೋಪಗೊಂಡ ಬಸವೇಶ್ವರ, ಕೋಡಗ ರೂಪದಲ್ಲಿ ಬಂದು ನಿನ್ನನ್ನು ಸಂಹಾರ ಮಾಡುತ್ತೇನೆಂದು ಶಾಪಕೊಟ್ಟು, ರಾವಣನು ನಿಂತಿದ್ದ ಶಿಖರ ಮುರಿದು ಬೀಳುವ ಹಾಗೆ ತನ್ನ ಕೊಂಬಿನಿಂದ ಚಿಮ್ಮಿಬಿಟ್ಟನು. ಹಾಗಾಗಿ ಇದು 'ಚಿನ್ಮಲಗಿರಿ'[೧೫] ಎಂದು ಹೆಸರು ಪಡೆಯಿತು.

**ದ್ವಾಪರ ಯುಗದಲ್ಲಿ ಚಿತ್ರದುರ್ಗ :** ಕೌರವರ ದಾಯಾದಿ ಮತ್ಸರ ಪಾಂಡವರನ್ನು ಲಾಕ್ಷಾಗೃಹ ಪ್ರವೇಶ ಮಾಡುವಂತೆ ಮಾಡಿ, ಸುಡುವ ಪ್ರಯತ್ನ ಮಾಡಿದರು. ಕುಂತಿ ಪುತ್ರ ಭೀಮ ತನ್ನ ಸಹೋದರರು ಹಾಗೂ ತಾಯಿಯನ್ನು ಹೊತ್ತುಕೊಂಡು ರಾತ್ರಿ ವೇಳೆ ಹೊರಟು ಹೋಗುತ್ತಾ ದಾರಿಯಲ್ಲಿ ಹಿಡಂಬಿ ಪ್ರದೇಶ ಸೇರಿದನಂತೆ. ಈ ಪ್ರದೇಶದಲ್ಲಿದ್ದ ಹಿಡಿಂಬೆ ಭೀಮನನ್ನು ನೋಡಿ ಮೋಹಿತಗೊಂಡು ಸ್ವೀಕರಿಸಬೇಕೆಂದಾಗ ತಿರಸ್ಕರಿಸಿದನು. ಆಗ ಇವಳ ಸಹೋದರ ಹಿಡಂಬಾಸುರನು ಪಾಂಡವರನ್ನು ತಿನ್ನಬೇಕೆಂದು ಬಂದಾಗ, ಭೀಮ ರಾಕ್ಷಸನನ್ನು ಗುದ್ದಿ ಸಂಹಾರ ಮಾಡಿ ಹಲ್ಲುಗಳನ್ನು ಕಿತ್ತುಬಿಟ್ಟನು. ತರುವಾಯ ಪಾಂಡವರು ಬೆಟ್ಟಕ್ಕೆ ಸಮೀಪದಲ್ಲಿ ಇಳಿದುಕೊಂಡರು. ಆ ಸ್ಥಳಕ್ಕೆ ಪಾಂಡವರಹಳ್ಳಿ ಎಂದು ಹೆಸರಾಯಿತಂತೆ. ಹುಲಿಗೊಂದಿ ಎಂಬ ಸ್ಥಳದಲ್ಲಿ ಪಾಂಡವರು ಪಂಚಲಿಂಗಗಳನ್ನು ಪ್ರತಿಷ್ಠಾಪನೆ ಮಾಡಿದರಂತೆ. ಈಗಲೂ ಈ ಸ್ಥಳದಲ್ಲಿ ಐದು ದೇವಾಲಯಗಳಿವೆ.[೧೬]

ಮತ್ತೊಂದು ಐತಿಹ್ಯದ ಪ್ರಕಾರ ಮೊಳಕಾಲ್ಮೂರು ತಾಲೂಕಿನ ಜಟಿಂಗರಾಮೇಶ್ವರ ಬೆಟ್ಟದ ದೇವಾಲಯದ ಪಕ್ಕದಲ್ಲಿ ಶ್ರೀ ರಾಮಚಂದ್ರ ಜಟಾಯುವಿನ ಅಗ್ನಿ ಸಂಸ್ಕಾರ ಮಾಡಿ, ಜಟಾಯುವಿನ ಹೆಸರಿನಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡಿದನು. ಹಾಗಾಗಿ ಜಟಾಯು, ರಾಮ, ಈಶ್ವರ ಹೆಸರಿನಲ್ಲಿ ಜಟ್ಟಿಂಗರಾಮೇಶ್ವರ ಎಂದು ಕರೆಯಲಾಗಿದೆ.

**ಶಿಲಾಯುಗದ ಕಾಲ :** ಜಿಲ್ಲೆಯಲ್ಲಿ ಆದಿ ಹಳೆಶಿಲಾಯುಗ, ಮಧ್ಯೆ ಹಳೆಶಿಲಾಯುಗ, ನವ ಶಿಲಾಯುಗದ ನೆಲೆಗಳು ಪತ್ತೆಯಾಗಿದ್ದು, ಮಾನವನ ಆಶ್ರಯದ ತಾಣಗಳಾಗಿದ್ದವು. ಅವುಗಳೆಂದರೆ: ಚಂದ್ರವಳ್ಳಿ, ಬ್ರಹ್ಮಗಿರಿ, ತುರುವನೂರು ಪ್ರಮುಖವಾದುವು. ಡಾ. ಎಮ್. ಶೇಷಾದ್ರಿಯವರ ಪ್ರಕಾರ ಬ್ರಹ್ಮಗಿರಿ ಅತೀ ಪ್ರಾಚೀನ ಸಂಸ್ಕೃತಿಯಾಗಿದ್ದು, ಮಧ್ಯ ಹಳೆ ಶಿಲಾಯುಗದ ನೆಲೆಯಾಗಿದೆ ಎಂದಿದ್ದಾರೆ. ಬೃಹತ್ ಶಿಲಾಸಂಸ್ಕೃತಿಯ ನೆಲೆಯಾಗಿರುವ ಬ್ರಹ್ಮಗಿರಿಯಲ್ಲಿ ಗುಂಡಿವೃತ್ತಗಳು, ತೂತುಕೋಣೆ, ಕಲ್ಗೋರಿ ವೃತ್ತಗಳು ಪತ್ತೆಯಾಗಿವೆ.[೧೭]

**ಮೌರ್ಯರ ಕಾಲ:** ಮೌರ್ಯರ ಆಳ್ವಿಕೆಯ ಕಾಲದಲ್ಲಿ ಚಿತ್ರದುರ್ಗವು ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು, ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಿಂದ ತಿಳಿಯಬಹುದು. ಅವುಗಳೆಂದರೆ: ಬ್ರಹ್ಮಗಿರಿ,[೧೮] ಸಿದ್ದಾಪುರ, ಜಟಿಂಗರಾಮೇಶ್ವರ. ಚರಿತ್ರೆಕಾರರ ಪ್ರಕಾರ ಶಾಸನಗಳು ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ. ಬೌದ್ಧ ಧರ್ಮದ ಅವಶೇಷಗಳು ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗರಾಮೇಶ್ವರಗಳಲ್ಲಿ ಪತ್ತೆಯಾಗಿದ್ದು ಮೌರ್ಯರ ಕಾಲದ ಕುರುಹುಗಳಾಗಿವೆ.

**ಶಾತವಾಹನರ ಕಾಲ:** ಸುಮಾರು ೪ ಶತಮಾನಗಳ ಕಾಲ ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿರುವ ಈ ಮನೆತನ, ಚಿತ್ರದುರ್ಗದ ಇತಿಹಾಸದಲ್ಲಿ ಮಹತ್ತರವಾದ ಪಾತ್ರವಹಿಸಿದ್ದು, ಇದನ್ನು ಸಮರ್ಥಿಸುವ ಮಾಹಿತಿಗಳು ದೊರೆತಿವೆ. ವ್ಹೀಲರ್‌ರವರು ಬ್ರಹ್ಮಗಿರಿಯಲ್ಲಿರುವ ಕಟ್ಟಡಗಳನ್ನು ಉತ್ಖನನ ಮಾಡಿ ಇವುಗಳು ಶಾತವಾಹನರ ಕಟ್ಟಡಗಳನ್ನು ಹೋಲುತ್ತವೆ ಎಂದಿದ್ದಾರೆ. ಮಹಾರಥಿಗಳು ಶಾತವಾಹನ ಸಾಮ್ರಾಜ್ಯದ ಸಾಮಂತ ಅರಸರಾಗಿದ್ದು

ಚಿತ್ರದುರ್ಗವನ್ನು ಆಳ್ವಿಕೆ ಮಾಡುತ್ತಿದ್ದಾಗ ಅವರು ಅಚ್ಚು ಹಾಕಿಸಿದ ಸೀಸದ ನಾಣ್ಯಗಳು, ಉತ್ಖನನದ ಸಮಯದಲ್ಲಿ ಚಂದ್ರವಳ್ಳಿಯಲ್ಲಿ ದೊರೆತಿವೆ.

**ಕದಂಬರ ಕಾಲ:** ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗೆ ಭದ್ರ ಬುನಾದಿ ಹಾಕಿದ ಈ ಸಾಮ್ರಾಜ್ಯ ಚಿತ್ರದುರ್ಗವನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡಿರುವುದು ಶಾಸನಗಳಿಂದ ದೃಡಪಡುತ್ತದೆ. ಮಯೂರವರ್ಮನ ಶಾಸನ ಚಂದ್ರವಳ್ಳಿಯಲ್ಲಿ ದೊರೆತಿದ್ದು, ಇವನು ತ್ರೈಕೂಟ, ಅಭೀರ, ಪಲ್ಲವ, ಪಾರಿಯಾತ್ರಿಕ, ಸಯಿನ್ದಕ, ಪುಣಾಟ, ಮೋಕರಿಗಳನ್ನು ಸೋಲಿಸಿದನೆಂದು ತಿಳಿದುಬರುತ್ತದೆ. ಮತ್ತೊಂದು ಶಾಸನ ಮೊಳಕಾಲ್ಮೂರಿನಲ್ಲಿದ್ದು, ನುಂಕೆಮಲೆಯ ಬೆಟ್ಟದಲ್ಲಿ ನುಂಕೇಶ್ವರನನ್ನು ಹಾಗೂ ನುಂಕೆ ಕೋಟೆಯನ್ನು ಕಟ್ಟಿಸಿದರೆಂಬ ಉಲ್ಲೇಖವಿದೆ.[೧೯]

**ಬಾದಾಮಿ ಚಾಲುಕ್ಯರ ಕಾಲ:** ಬಾದಾಮಿ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಚಿತ್ರದುರ್ಗವು ಈ ಸಾಮ್ರಾಜ್ಯ ಮತ್ತು ಪಲ್ಲವರ ಗಡಿಯಲ್ಲಿನ ಪ್ರದೇಶವಾಗಿತ್ತು. ಹಾಗಾಗಿ ಇವರಿಬ್ಬರ ನಡುವೆ ಪದೇ ಪದೇ ಯುದ್ಧವಾಗಿ ಈ ಪ್ರದೇಶದಲ್ಲಿ ಅಶಾಂತಿಯುಂಟಾಗಿತ್ತು. ನಂತರ ಚಾಲುಕ್ಯರು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡರು. ಆಗ ಈ ಪ್ರದೇಶವನ್ನು ಸೂಳ್ಗಲ್ಲುನಾಡೆಂದು ಕರೆಯಲಾಗುತ್ತಿತ್ತು.[೨೦]

**ರಾಷ್ಟ್ರಕೂಟರ ಕಾಲ :** ಕ್ರಿ.ಶ. ೮ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಆಳ್ವಿಕೆ ಮಾಡಿದ ರಾಷ್ಟ್ರಕೂಟರ ಕಾಲಾವಧಿಯಲ್ಲಿ ಚಿತ್ರದುರ್ಗವನ್ನು ಸೂಳ್ಗಲ್ಲು ೭೦ರ ನಾಡೆಂದು ಹಾಗೂ ಕದಂಬಳಿಗೆ ೧೦೦೦[೨೧] ಮಂಡಲದ ಭಾಗವಾಗಿದ್ದು ಇವರ ಆಳ್ವಿಕೆಗೆ ಒಳಪಟ್ಟಿರುವುದು ದೃಢಪಡುತ್ತದೆ.

**ಕಲ್ಯಾಣಿ ಚಾಲುಕ್ಯರ ಕಾಲ :** ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಆಳ್ವಿಕೆ ಮಾಡಿರುವ ಈ ಮನೆತನದ ಕಾಲಾವಧಿಯಲ್ಲಿ ದುರ್ಗವನ್ನು ನೊಳಂಬವಾಡಿ ೩೨೦೦೦ ಪ್ರಾಂತವೆಂದು ಕರೆಯಲಾಗುತ್ತಿದ್ದು.[೨೨] ಇವರ ಆಡಳಿತಕ್ಕೆ ಒಳಪಟ್ಟಿತ್ತು.

**ಹೊಯ್ಸಳರ ಕಾಲ :** ಹೊಯ್ಸಳರ ಆಡಳಿತ ವ್ಯವಸ್ಥೆಯಲ್ಲಿ ದುರ್ಗವು ಚಿಕ್ಕ ಪ್ರಾಂತ್ಯಗಳಲ್ಲಿ ಒಂದಾಗಿದ್ದು, ಪ್ರಾಂತ್ಯ ಪ್ರಭುಗಳು ಆಳ್ವಿಕೆ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಈ ಪ್ರದೇಶವನ್ನು ಬೆಮ್ಮತ್ತನ ಕಲ್ಲು, ಬ್ರಹ್ಮಪುರಿಗಿರಿ, ಪೆರುಮಾಳೆಪುರವೆಂದು ಕರೆಯಲಾಗುತ್ತಿತ್ತು.[೨೩]

**ಗಂಗರು :** ಚಿತ್ರದುರ್ಗ ಮತ್ತು ಹೊಳಲ್ಕೆರೆಗಳಲ್ಲಿ[೨೪] ದೊರೆತಿರುವ ಶಾಸನಗಳಿಂದ ಈ ಪ್ರದೇಶವನ್ನು ಆಳ್ವಿಕೆ ಮಾಡಿರುವ ಬಗ್ಗೆ ಮಾಹಿತಿ ಪಡೆಯಬಹುದು.

**ಚೋಳರು :** ಈ ಪ್ರದೇಶವನ್ನು ಚೋಳರು ಆಳ್ವಿಕೆ ಮಾಡಿರುವುದರ ಕುರಿತು ಸಿಂಧೂರು,[೨೫] ಚಳ್ಳಕೆರೆ,[೨೬] ಮೊಳಕಾಲ್ಮೂರು[೨೭] ಶಾಸನಗಳು ಮಾಹಿತಿ ನೀಡುತ್ತವೆ.

**ವಿಜಯನಗರ ಸಾಮ್ರಾಜ್ಯ :** ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಚಿತ್ರದುರ್ಗವನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡಿದ್ದು, ಇವರ ಸಾಮಂತ ಅರಸರಾಗಿ ಚಿತ್ರದುರ್ಗದ ನಾಯಕರು ಆಳ್ವಿಕೆ ಮಾಡಿದ್ದಾರೆ. ತಿಮ್ಮಣ್ಣನಾಯಕನಿಗೆ ವಿಜಯನಗರದ ಅರಸರು 'ಹಗಲುಕಗ್ಗೊಲೆಯ ಮಾನ್ಯ'[೨೮] ಎಂಬ ಬಿರುದನ್ನು ನೀಡಿದ್ದರು.

**ಪಾಳೆಯಗಾರರ ಕಾಲ :** ತಾಳಿಕೋಟೆ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಸೋತು ಅವನತಿಯ ಹಾದಿ ಹಿಡಿದಾಗ, ಅಮರನಾಯಕರು ಸ್ವತಂತ್ರ್ಯ ಸಂಸ್ಥಾನ ಸ್ಥಾಪಿಸಿಕೊಂಡರು. ಅದರಲ್ಲಿ ಚಿತ್ರದುರ್ಗ ಪಾಳೆಯಗಾರರು ಪ್ರಮುಖರು. ಚಿತ್ರನಾಯಕನಿಂದ ಸ್ಥಾಪನೆಯಾದ ಈ ಮನೆತನದ ಆಳ್ವಿಕೆ ಮತ್ತಿ ತಿಮ್ಮನಾಯಕ, ಒಬಣ್ಣನಾಯಕ, ಕಸ್ತೂರಿಂಗಪ್ಪನಾಯಕ, ೨ನೇ ಮದಕರಿನಾಯಕ, ಚಿಕ್ಕಣ್ಣನಾಯಕ, ೩ನೇ ಲಿಂಗಣ್ಣನಾಯಕ, ಬಿಚ್ಚುಗತ್ತಿ ಭರಮಣ್ಣನಾಯಕ, ಹಿರೇಮದಕರಿನಾಯಕ, ಕಸ್ತೂರಿ ರಂಗಪ್ಪನಾಯಕ, ರಾಜಮದಕರಿನಾಯಕನವರೆಗೂ ಆಳ್ವಿಕೆ ಮಾಡಿದ್ದು ಇವರ ಆಳ್ವಿಕೆಯ ಕಾಲದ ಕೋಟೆಗಳು ದೇವಾಲಯಗಳನ್ನು ಚಿತ್ರದುರ್ಗದಲ್ಲಿ ಇಂದಿಗೂ ಕಾಣುತ್ತೇವೆ.

**ಹೈದರಾಲಿ ಮತ್ತು ಟಿಪ್ಪುವಿನ ಕಾಲ :** ಹೈದರಾಲಿ ಸರ್ವಾಧಿಕಾರಿಯಾಗಿ ಮೈಸೂರಿನ ಆಡಳಿತವನ್ನು ಆರಂಭಿಸಿದನು. ಚಿತ್ರದುರ್ಗವನ್ನು ವಶಪಡಿಸಿಕೊಳ್ಳಲು ನಾಲ್ಕು ಬಾರಿ ಯುದ್ಧವನ್ನು ಹೂಡಿದ. ೧೭೭೯ರ ಫೆಬ್ರವರಿಯಲ್ಲಿ ಕೊನೆಯ ಬಾರಿಗೆ ವಶಪಡಿಸಿಕೊಂಡನು.[೨೯] ನಂತರ ಈ ಸ್ಥಳಕ್ಕೆ ಫರ್ರಕಾಬಾದ್ ಎಂದು ಹೆಸರಿಟ್ಟನು. ಹೈದರಾಲಿಯ ಮರಣಾ ನಂತರ ಟಿಪ್ಪು ಆಡಳಿತಕ್ಕೆ ಒಳಪಟ್ಟು ೧೭೯೯ರ ನಂತರ ಮೈಸೂರಿನ ಒಡೆಯರ ಆಳ್ವಿಕೆಗೆ ಸೇರಿಕೊಂಡಿತು.

**ಚಿತ್ರದುರ್ಗ ಪದದ ನಿಷ್ಪತ್ತಿ :** ಹುಲ್ಲೂರು ಶ್ರೀನಿವಾಸ ಜೋಯಿಸರವರು ಚಿತ್ರದುರ್ಗವನ್ನು ಚಿನ್ಮೂಲಾದ್ರಿ, ಹಿಡಂಬಿಪಟ್ಟಣ, ಚಂದ್ರವಳ್ಳಿ, ಸೂಳ್ಗಲ್ಲೂ, ಬೆಮ್ಮತ್ತನೂರ ಪಟ್ಟಣ, ಪೆರುಮಾಳೆಪುರ, ಬ್ರಹ್ಮಪುರಿ, ಚಿತ್ರದುರ್ಗ, ಫರ್ರಕಾಬಾದ್ ಹೀಗೆ ವಿವಿಧ ಹೆಸರುಗಳಿಂದ ಕರೆದಿದ್ದಾರೆ.

ತೆಲುಗು ಭಾಷೆಯಲ್ಲಿ ಚಿತ್ರಕಲ್ಲುದುರ್ಗವೆಂದು ಕ್ರಿ.ಶ. ೧೨೮೬ರಲ್ಲಿ ಚಿಮ್ಮತ್ತನೂರು ದುರ್ಗವೆಂದು, ಕ್ರಿ.ಶ. ೧೬೯೮ರ ೧೬೪ನೇ ಶಾಸನದಲ್ಲಿ ಚಿಂನ್ಮನ ಗಿರಿದುರ್ಗವೆಂದು, ಕ್ರಿ.ಶ. ೧೭೦೦ರ ಚಿತ್ರದುರ್ಗದ  ೩೭ನೇ ಶಾಸನದಲ್ಲಿ ಶಿಂಗನಗಿರಿದುರ್ಗವೆಂದು, ೧೭೧೪ರ ಚಿತ್ರದುರ್ಗದ ೩೧ನೇ ಶಾಸನದಲ್ಲಿ ಚಿಂನ್ಮನ ಗಿರಿದುರ್ಗವೆಂದು ಕ್ರಿ.ಶ. ೧೭೩೦ರ ಚಿತ್ರದುರ್ಗದ ೫೪ನೇ ಶಾಸನದಲ್ಲಿ ಚಿಂತಲ ಕಲದುರ್ಗ ನಂತರ ಚಿತ್ರದುರ್ಗವೆಂದು ಕರೆಯಲ್ಪಟ್ಟಿತು.

೧೮೭೦ರಲ್ಲಿ ಭೇಟಿ ನೀಡಿದ ಬುಕನ್ನನ್‌ರವರ ಪ್ರಕಾರ 'ಛತ್ರಕಲ್' ದುರ್ಗವೆಂದು ಕರೆದಿದ್ದಾರೆ. ಕೃಷ್ಣದೇವರಾಯನ ದಿನಚರಿಯಲ್ಲಿ "ಚಿಮಟಿದುರ್ಗವೆಂದು" ಹೈದರಾಲಿಯ ಆಕ್ರಮಣದ ನಂತರ 'ಫರ್ರಕಾಬಾದ್' ಎಂದು ಹೆಸರು ಪಡೆಯಿತು.

ರಾಜಶೇಖರಪ್ಪರವರ ಪ್ರಕಾರ ಚಿಮ್ಮಚನೂರ್(ರು) ಎಂಬುದೇ ಕಾಲಕ್ರಮದಲ್ಲಿ ಅನೇಕ ಬದಲಾವಣೆಗಳಾಗಿ ಚಿತ್ರದುರ್ಗವಾಗಿದೆ ಎಂದು ತಿಳಿಸಿದ್ದಾರೆ.

ಚಿತ್ರದುರ್ಗ ಸ್ಥಳನಾಮದ ಪ್ರಾಚೀನ ರೂಪ ಚಿಮ್ಮಚನೂರ್(ರು), ಈ ಚಿಮ್ಮಚನೂರ್(ರು) ಎಂಬುದು ಚಿಮ್ಮಚ ಎಂಬುವನೊಬ್ಬನ ಹೆಸರಲ್ಲಿ ಕರೆಯಲಾದ ಊರು.

ಟಿ. ಗಿರಿಜರವರ ಚಿತ್ರದುರ್ಗದ ನಾಮಾವಳಿಯಲ್ಲಿ ಈ ಪ್ರದೇಶದ ಅರಸರ ವಂಶಾವಳಿಯನ್ನು ಉಲ್ಲೇಖಿಸುವ ಒಂದು ವಂಶಾವಳಿಯಲ್ಲಿ ಚಿಂಚನಕಲ್ಲು ಎಂದಿದೆ. ಚಿತ್ರದುರ್ಗ ಪಾಳೆಯಗಾರರ

ಮೂಲ ಪುರುಷನಾದ ಚಿತ್ರನಾಯಕನ ಹೆಸರಿನಲ್ಲಿ ಚಿತ್ರದುರ್ಗವೆಂದು, ಕೃಷ್ಣದೇವರಾಯನ ದಿನಚರಿಯಲ್ಲಿ ಚಿಮಟದುರ್ಗವೆಂದು, ಚಿತ್ರದುರ್ಗದ ಆಯಗಾರರ ವಿವರದಲ್ಲಿ 'ಚಿನ್ಮೂಲಗಿರಿ ದುರ್ಗವೆಂದು' ಕರೆಯಲಾಗಿದೆ.

ಹುಲ್ಲೂರು ಶ್ರೀನಿವಾಸ ಜೋಯಿಸ್‌ರವರು ಚಂದ್ರವಳ್ಳಿ ಸಮೀಪದಲ್ಲಿರುವ ಧವಳೇಶ್ವರನ ಗುಡ್ಡವು ದೂರಕ್ಕೆ ಪ್ರಸರಿಸಿದ ಛತ್ರಿಯಂತೆ ಕಾಣುವುದು. ಈ ಗುಡ್ಡಕ್ಕೆ ಪೂರ್ವದಲ್ಲಿ ಛತ್ರಿಕಲ್ಲು ಎಂದು ಹೆಸರಿದ್ದು, ಆದುದರಿಂದ ಇದರ ಸಮೀಪದಲ್ಲಿದ್ದ ಈ ನಗರಕ್ಕೆ 'ಛತ್ರಕಲ್ಲು' ಎಂದು ಹೆಸರು ಬಂದು, ಆ ನಂತರ 'ಚಿತ್ರಕಲ್ಲು' ದುರ್ಗವೆಂದು ಕರೆಯಲ್ಪಟ್ಟಿರಬಹುದು ಎಂದಿದ್ದಾರೆ.

### ೨.೨ ದಾವಣಗೆರೆ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕರ್ನಾಟಕದ ಹೃದಯ ಭಾಗದಲ್ಲಿರುವ ದಾವಣಗೆರೆಯು ಮೆಂಚೆಸ್ಟರ್ ನಗರ, ವಿದ್ಯಾಕಾಶಿ, ಹೈಟೆಕ್ ನಗರವಾಗಿದ್ದು ೧೯೯೭ ಕ್ಕಿಂತ ಪೂರ್ವದಲ್ಲಿ ಚಿತ್ರದುರ್ಗ ಜಿಲ್ಲೆಯ ಒಂದು ತಾಲೂಕಾಗಿತ್ತು. ಜೆ.ಹೆಚ್.ಪಾಟೇಲರು ಮುಖ್ಯಮಂತ್ರಿಗಳಾಗಿದ್ದಾಗ ಆಗಸ್ಟ್ ೧೫, ೧೯೯೭ರ ಅಕ್ಟೋಬರ್‌ನಲ್ಲಿ ದಾವಣಗೆರೆಯನ್ನು ಜಿಲ್ಲೆಯನ್ನಾಗಿ ಘೋಷಿಸಿದರು. ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಾಗ ೬ ತಾಲೂಕುಗಳಿದ್ದು, ಶಿವಮೊಗ್ಗದಿಂದ ಚನ್ನಗಿರಿ ಮತ್ತು ಹೊನ್ನಾಳಿಯನ್ನು, ಚಿತ್ರದುರ್ಗದಿಂದ ದಾವಣಗೆರೆ, ಹರಿಹರ ಮತ್ತು ಜಗಳೂರನ್ನು, ಬಳ್ಳಾರಿಯಿಂದ ಹರಪನಹಳ್ಳಿಯನ್ನು ಜಿಲ್ಲೆಯ ವ್ಯಾಪ್ತಿಗೆ ಒಳಪಡಿಸಿದರು. ಪ್ರಸ್ತುತವಾಗಿ ಹರಪನಹಳ್ಳಿಯನ್ನು ಬಳ್ಳಾರಿ ಜಿಲ್ಲೆಗೆ ಮರು ಸೇರ್ಪಡೆ ಮಾಡಲಾಗಿದ್ದು, ದಾವಣಗೆರೆ ಜಿಲ್ಲೆಗೆ ನ್ಯಾಮತಿಯನ್ನು ಹೊಸ ತಾಲೂಕಾಗಿ ಸೇರಿಸಲಾಗಿದೆ.

**ವಿಸ್ತೀರ್ಣ ಮತ್ತು ಜನಸಂಖ್ಯೆ :** ದಾವಣಗೆರೆ ಜಿಲ್ಲೆಯು ಒಟ್ಟಾರೆಯಾಗಿ ೫,೯೭,೫೯೭ ಚ.ಕಿ.ಮೀ ಭೌಗೋಳಿಕ ವಿಸ್ತೀರ್ಣವನ್ನು[೩೦] ಹಾಗೂ ೧೭,೯೦,೯೫೨ ಜನಸಂಖ್ಯೆಯನ್ನು ಹೊಂದಿದೆ.[೩೧] ಜಿಲ್ಲೆಯಲ್ಲಿ ಎಲ್ಲಾ ಧರ್ಮದವರಿದ್ದು ವಿವಿಧತೆಯಲ್ಲಿ ಏಕತೆಯಿದೆ. ೬ ತಾಲೂಕು, ೨೪ ಹೋಬಳಿ, ೯೨೩ ಗ್ರಾಮಗಳು, ೧ ಮಹಾನಗರ ಪಾಲಿಕೆ, ೧ ನಗರಸಭೆ, ೧ ಪುರಸಭೆ, ೩ ಪಟ್ಟಣ ಪಂಚಾಯ್ತಿಗಳಿವೆ.

**ಮೇರೆಗಳು ಮತ್ತು ಹವಾಗುಣ :** ದಾವಣಗೆರೆಯ ಪೂರ್ವಭಾಗಕ್ಕೆ ಚಿತ್ರದುರ್ಗ ಜಿಲ್ಲೆ, ಪಶ್ಚಿಮಕ್ಕೆ ಹಾವೇರಿ ಮತ್ತು ಶಿವಮೊಗ್ಗ, ಉತ್ತರಕ್ಕೆ ಬಳ್ಳಾರಿ ದಕ್ಷಿಣಕ್ಕೆ ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲೆಗಳು ಸುತ್ತುವರೆದಿವೆ. ರಾಜ್ಯದ ಮಧ್ಯಭಾಗದಲ್ಲಿರುವ ಜಿಲ್ಲೆಯು ೭೫೦-೩೦೦ ರಿಂದ ೭೬೦-೩೦೦ ಅಕ್ಷಾಂಶ ಮತ್ತು ೧೩೦-೪೫೦ ರಿಂದ ೧೪೦ - ೫೦೦ ರೇಖಾಂಶಗಳವರೆಗೆ ಪಸರಿಸಿದೆ.[೩೨]

**ಬೆಟ್ಟಗುಡ್ಡಗಳು :** ಜಿಲ್ಲೆಯು ಭೌಗೋಳಿಕವಾಗಿ ಬೆಟ್ಟಗುಡ್ಡಗಳಿಂದ ಆವೃತ್ತವಾಗಿದೆ. ದಾವಣಗೆರೆ ತಾಲೂಕಿನ ಮಾಯಕೊಂಡದಿಂದ ಗುಡ್ಡಗಳ ಸಾಲು ಆರಂಭವಾಗಿ ಅಣಜಿಯವರೆಗೆ ಹರಡಿದೆ. ಅವುಗಳಲ್ಲಿ ನರಗನಹಳ್ಳಿಗುಡ್ಡ, ನೀರ್ಥಡಿಗುಡ್ಡ, ಬಾವಿಹಾಳುಗುಡ್ಡ, ಕರಡಿಗುಡ್ಡ, ಜೇನುಮಟ್ಟಿಗುಡ್ಡ,

ಅಡ್ಡಮಟ್ಟಿ, ಗಾಳಿಮಟ್ಟಿ, ಅಲೆಕಲ್ಲುಗುಡ್ಡಗಳಿದ್ದು ಸಮುದ್ರಮಟ್ಟದಿಂದ ೬೦೦ ಮೀಟರ್ ಎತ್ತರದಲ್ಲಿವೆ. ಚನ್ನಗಿರಿಯ ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿ ೬೦೦ ಮೀ ಎತ್ತರವಿರುವ ಬೆಟ್ಟಗುಡ್ಡಗಳ ಸಾಲುಗಳಿವೆ. ಹೊನ್ನಾಳಿಯಲ್ಲಿ ಬೆಟ್ಟಗಳ ಸಾಲುಗಳಿದ್ದು ೧೦೩೧ ಮೀ ಎತ್ತರವಿರುವ ಕಲ್ಪರಂಗನಗಿರಿ ಶಿಖರವು ಜಿಲ್ಲೆಯಲ್ಲಿಯೇ ಅತ್ಯಂತ ಎತ್ತರವಾದ ಶಿಖರವಾಗಿದೆ. ಜಗಳೂರು ತಾಲ್ಲೂಕಿನ ಬೆಟ್ಟಗಳಲ್ಲಿ ಕೊಡದಗುಡ್ಡ-ವೀರಭದ್ರಸ್ವಾಮಿ ಬೆಟ್ಟವೆಂದು ಹೆಸರು ಪಡೆದು ತಾಲೂಕಿನಲ್ಲಿಯೇ ಅತ್ಯಂತ ಎತ್ತರವಾದ ಬೆಟ್ಟವಾಗಿದೆ. ಈ ಜಿಲ್ಲೆಯ ಅತ್ಯಧಿಕ ಬೆಟ್ಟಗುಡ್ಡಗಳು ಹರಪನಹಳ್ಳಿ ತಾಲೂಕಿನಲ್ಲಿದ್ದು ಅವುಗಳಲ್ಲಿ ಮಲ್ಲಪ್ಪನಗುಡ್ಡ ಕಲ್ಲಹಾಳಗುಡ್ಡ (೮೪೫ ಮೀ), ತೆಲಗಿಗುಡ್ಡ (೮೫೩ ಮೀ), ನರಸಿಂಹದೇವರಗುಡ್ಡ (೮೨೦ ಮೀ), ಉಚ್ಚಂಗಿದುರ್ಗದಗುಡ್ಡ (೮೬೧ ಮೀ)[೩೩] ಮುಂತಾದವುಗಳನ್ನು ಕಾಣಬಹುದಾಗಿದೆ.

**ಮಣ್ಣಿನ ಸ್ವರೂಪ** : ಜಿಲ್ಲೆಯ ದಾವಣಗೆರೆ ತಾಲೂಕು ಹೆಚ್ಚು ಬೆಟ್ಟಗುಡ್ಡಗಳಿಲ್ಲದ ಬಯಲು ಪ್ರದೇಶವಾಗಿದೆ. ಎಲ್ಲಾ ಕಡೆ ಕಪ್ಪು ಎರೆಮಣ್ಣಿನ ಭೂಮಿ, ನೈರುತ್ಯದಲ್ಲಿ ಕೆಂಪು ಮಣ್ಣಿನಿಂದ ಕೂಡಿದೆ. ಹೊನ್ನಾಳಿ ತಾಲೂಕಿನಲ್ಲಿ ಮರಳು ಮಿಶ್ರಿತ ಜೇಡಿಮಣ್ಣು ಮತ್ತು ಮಧ್ಯಮ ಕಪ್ಪು ಮಣ್ಣಿನ ಭೂಮಿಯಿದೆ. ಚನ್ನಗಿರಿ ತಾಲೂಕಿನ ಸೂಳೆಕೆರೆಯ ಉತ್ತರ ಭಾಗದಲ್ಲಿ ಫಲವತ್ತಾದ ಕಪ್ಪು ಮಣ್ಣು, ದಕ್ಷಿಣದಲ್ಲಿ ಕಲ್ಲು ಮಿಶ್ರಿತ ಕೆಂಪು ಮಣ್ಣು ಉಳಿದ ಭಾಗ ಕಪ್ಪು ಮತ್ತು ಕೆಂಪು ಮಿಶ್ರಿತ ಮಣ್ಣಿನ ಭೂಮಿಯನ್ನು ಹೊಂದಿದೆ. ಹರಪನಹಳ್ಳಿ ತಾಲೂಕಿನಲ್ಲಿ ಮರಳು ಮಿಶ್ರಿತ ಕೆಂಪು ಜೇಡಿ ಮಣ್ಣು, ಕಪ್ಪು ಜೇಡಿ ಮಣ್ಣಿನ ಭೂಮಿಯು, ಹರಿಹರ ತಾಲೂಕಿನಲ್ಲಿ ಕಪ್ಪು ಮತ್ತು ಕೆಂಪು ಮಿಶ್ರಿತ ಭೂಮಿ, ಜಗಳೂರು ತಾಲೂಕಿನಲ್ಲಿ ಕಪ್ಪು ಮಣ್ಣಿನ ಭೂಮಿ ಹಾಗೂ ಉಳಿದ ಭಾಗ ಫಲವತ್ತಾದ ಕೆಂಪು ಮರಳಿನ ಭೂಮಿಯನ್ನು ಹೊಂದಿದೆ.[೩೪]

**ಮಳೆ** : ಜಿಲ್ಲೆಯಲ್ಲಿ ಒಟ್ಟು ೪೩ ಮಳೆಯ ಮಾಪನ ಕೇಂದ್ರಗಳಿದ್ದು, ಇದರಲ್ಲಿ ೩೮ ಮಳೆಯ ಮಾಪನ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಜಿಲ್ಲೆಯ ವಾಡಿಕೆ ಮಳೆಯು ೬೫೭ ಮಿ.ಮೀ, ಅತೀ ಹೆಚ್ಚು ವಾಡಿಕೆ ಮಳೆ ಚನ್ನಗಿರಿ ತಾಲೂಕಿನಲ್ಲಿ ೭೬೭ ಮಿ.ಮೀ, ಮತ್ತು ಅತೀ ಕಡಿಮೆ ವಾಡಿಕೆ ಮಳೆ ಜಗಳೂರು ತಾಲೂಕಿನಲ್ಲಿ ೫೦೬ ಮಿ.ಮೀಟರ್‌ಗಳಾಗಿರುತ್ತದೆ. ಜಿಲ್ಲೆಯ ಒಟ್ಟು ಮಳೆಯ ದಿನಗಳು ೬೬.[೩೫]

**ವ್ಯವಸಾಯ** : ಭೂ ಹಿಡುವಳಿದಾರರು: ಕೃಷಿಯು ದಾವಣಗೆರೆ ಜಿಲ್ಲೆ ಜನರ ಮುಖ್ಯ ಕಸುಬಾಗಿದ್ದು, ೨೦೦೫-೦೬ರ ಕೃಷಿ ಗಣತಿಯ ಪ್ರಕಾರ ಒಟ್ಟು ೨,೬೪,೭೨೦ ಭೂ ಹಿಡುವಳಿದಾರರಿದ್ದು, ೪,೧೬,೨೬೫ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಜಿಲ್ಲೆಯಲ್ಲಿ ಒಂದು ಹೆಕ್ಟೇರ್‌ಗಿಂತ ಕಡಿಮೆ ಭೂಮಿಯನ್ನು ಹೊಂದಿದ ೧,೨೦,೦೭೪ ಅತೀ ಸಣ್ಣ ಭೂ ಹಿಡುವಳಿದಾರರಿದ್ದು, ೬೨,೩೨೧ ಹೆಕ್ಟೇರ್ ಭೂಮಿಯನ್ನು ಹೊಂದಿದ್ದಾರೆ. ೧ ರಿಂದ ೨ ಹೆಕ್ಟೇರ್ ಭೂಮಿಯನ್ನು ಹೊಂದಿದ ೮೦,೪೨೮ ಸಣ್ಣ ಭೂಹಿಡುವಳಿದಾರರಿದ್ದು ೧,೧೩,೦೭೨ ಹೆಕ್ಟೇರ್ ಭೂಮಿಯ ವಿಸ್ತೀರ್ಣ ಹೊಂದಿದ್ದಾರೆ. ೨ ರಿಂದ ೪ ಹೆಕ್ಟೇರ್ ಭೂಮಿಯನ್ನು

ಹೊಂದಿದ ೪೫,೫೯೩ ಅರೆ ಮಧ್ಯಮ ಭೂ ಹಿಡುವಳಿದಾರರಿದ್ದು, ೧,೨೨,೮೨೫ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ೪ ರಿಂದ ೧೦ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿರುವ, ೧೬,೯೩೧ ಮಧ್ಯಮ ಭೂ ಹಿಡುವಳಿದಾರರಿದ್ದು, ೯೪,೯೯೯ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ೧೦ ಹೆಕ್ಟೇರ್‌ಗಿಂತ ಹೆಚ್ಚು ಭೂಮಿಯನ್ನು ಹೊಂದಿದ ೧,೬೯೪ ದೊಡ್ಡ ಭೂ ಹಿಡುವಳಿದಾರರಿದ್ದು, ೨೩,೦೪೮ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದಾರೆ.[೩೬]

**ಬೆಳೆಗಳು:–** ದಾವಣಗೆರೆ ಜಿಲ್ಲೆಯ ಪ್ರಮುಖ ಬೆಳೆಗಳೆಂದರೆ, ಮೆಕ್ಕೆಜೋಳ ಭತ್ತ, ಜೋಳ, ರಾಗಿ, ತೊಗರಿ, ಹೆಸರು, ಶೇಂಗಾ, ಸೂರ್ಯಕಾಂತಿ, ಹತ್ತಿ, ಕಬ್ಬು, ಈರುಳ್ಳಿ, ಅಡಕೆ ಮುಂತಾದವು

**ಜಲಮೂಲಗಳು :** ದಾವಣಗೆರೆ ಜಿಲ್ಲೆಯಲ್ಲಿ ತುಂಗಾಭದ್ರಾ ನದಿಯು ಪ್ರಮುಖ ನದಿಯಾಗಿದೆ. ಈ ನದಿಯು ಶಿವಮೊಗ್ಗ ಜಿಲ್ಲೆಯ ಕೂಡ್ಲಿ ಎಂಬಲ್ಲಿ, ತುಂಗಾ–ಭದ್ರಾ ಎರಡು ನದಿಗಳು ಕೂಡಿ ಮುಂದೆ ಹೊನ್ನಾಳಿ ತಾಲೂಕಿನಿಂದ, ಹರಿಹರ ಮತ್ತು ಹರಪನಹಳ್ಳಿ ತಾಲೂಕುಗಳ ಮೂಲಕ ಬಳ್ಳಾರಿ ಜಿಲ್ಲೆಗೆ ಸೇರುತ್ತದೆ. ಈ ಜಿಲ್ಲೆಯು ಕೃಷ್ಣಾ ಜಲಾನಯನ ಪ್ರದೇಶಕ್ಕೆ ಒಳಪಟ್ಟಿದ್ದು, ಭದ್ರಾ ಜಲಾಶಯದಿಂದ ೨ ಪ್ರಮುಖ ಕಾಲುವೆಗಳ ಮೂಲಕ ನೀರನ್ನು ಪ್ರವಹಿಸಿ ನೀರಾವರಿಗೆ ಅನುಕೂಲ ಮಾಡಿಕೊಟ್ಟಿದೆ. ಜಿಲ್ಲೆಯಲ್ಲಿ ಒಟ್ಟು ೨೦೩ ಕಿ.ಮೀ. ಉದ್ದದ ಕಾಲುವೆಗಳಿವೆ. ದೇವರಬೆಳಕೆರೆಯಲ್ಲಿ ಶ್ಯಾಗಲಿ ಹಳ್ಳವಿದ್ದು ೧೯೮೬ರಲ್ಲಿ ಡ್ಯಾಂ ನಿರ್ಮಿಸಲಾಗಿದೆ. ಹರಿದ್ರಾ ನದಿಗಳ (ಸೂಳಿಕೆರೆ) ಸಂಗಮ ಸ್ಥಳದಲ್ಲಿ ಅಣೆಕಟ್ಟು ನಿರ್ಮಿಸಲಾಗಿದೆ. ಕೃಷ್ಣ ನದಿಯ ಉಪಜಲಾನಯನ ಪ್ರದೇಶದಲ್ಲಿ ಬರುವ ನದಿಗಳೆಂದರೆ ತುಂಗಾ, ಭದ್ರಾ, ಹರಿದ್ರಾ, ವೇದಾವತಿ. ಉಪ ಜಲಾಶಯದಲ್ಲಿ ಬರುವ ನದಿಗಳೆಂದರೆ ಹಗರಿ, ಚಿಕ್ಕಹಗರಿ, ಚಿನ್ನಹಗರಿ, ಜಗಳೂರು ತಾಲೂಕಿನಲ್ಲಿ ಹುಟ್ಟುವ ಜನಿಗೆಹಳ್ಳ ಮುಂದೆ ಹರಿದು ಬಳ್ಳಾರಿಯಲ್ಲಿ ತುಂಗಾಭದ್ರಾ ಜಲಾಶಯದ ಹಿನ್ನೀರಿಗೆ ಕೂಡುತ್ತದೆ. ಜಿಲ್ಲೆಯ ಪ್ರತಿ ಗ್ರಾಮಗಳಲ್ಲೂ ತನ್ನದೇ ಆದ ಐತಿಹಾಸಿಕ ಕೆರೆಗಳನ್ನು ಹೊಂದಿದ್ದು ತುಪ್ಪದಹಳ್ಳಿಕೆರೆ, ಸಂಗನಹಳ್ಳಿಕೆರೆ, ಅಣಜಿಕೆರೆ, ಕೊಡಗನೂರುಕೆರೆ.[೩೭] ಬಹುಮುಖ್ಯವಾಗಿದ್ದು ೪೧೧ ಕೆರೆಗಳಿವೆ೨೨. ೪,೬೮೩ ಬಾವಿಗಳು, ಸುಮಾರು ೩೫,೬೩೭ಕ್ಕೂ ಅಧಿಕ ಕೊಳವೆ ಬಾವಿಗಳಿವೆ.[೩೮]

**ಅರಣ್ಯ ಸಂಪತ್ತು :** ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ೮೯,೯೧೮ ಹೆಕ್ಟೇರ್‌ಗಳಷ್ಟು ಅರಣ್ಯ ಪ್ರದೇಶವಿದ್ದು, ಒಟ್ಟು ವಿಸ್ತೀರ್ಣದಲ್ಲಿ ಶೇಕಡ ೧೫ ರಷ್ಟಿದೆ.[೩೯] ಈ ಪ್ರದೇಶದಲ್ಲಿ ಮಳೆಯ ಪ್ರಮಾಣ ಕಡಿಮೆ ಇರುವುದರಿಂದ ಸ್ವಾಭಾವಿಕ ಸಸ್ಯವರ್ಗವನ್ನು ಹೊಂದಿದ್ದು ಹುಣಸೆ, ಬೇವು, ಜಾಲಿ, ಗೊಬ್ಬರದ ಗಿಡ, ನೀಲಗಿರಿ, ಮಾವು, ಹೊಂಗೆ ಮರಗಳನ್ನು ಕಾಣಬಹುದು. ಚನ್ನಗಿರಿ ಮತ್ತು ಹೊನ್ನಾಳಿಯು ಅರೆ ಮಲೆನಾಡು ಹಾಗೂ ನೀರಾವರಿಯ ಸೌಲಭ್ಯವಿರುವುದರಿಂದ ತೇಗ, ಹೊನ್ನೆ, ಬೀಟೆ ಮರಗಳಿರುವುದು ಕಂಡುಬರುತ್ತದೆ.

**ಖನಿಜ ಸಂಪತ್ತು :** ಜಿಲ್ಲೆಯು ಖನಿಜ ಸಂಪತ್ತನ್ನು ಹೊಂದಿದ್ದು, ಮಾಯಕೊಂಡದ ಬಳಿ ಗಟ್ಟಿ ಎಳೆಯ ಕಲ್ನಾರು ಸುಣ್ಣ, ಅಣಜಿಯ ಬಳಿ ಮ್ಯಾಂಗ್‌ನೀಸ್, ಸುದ್ದೆಮಣ್ಣು, ಕಬ್ಬಿಣ, ಗುಮ್ಮನೂರಿನ ಬೆಟ್ಟದ ಸಾಲಿನಲ್ಲಿ ಕಬ್ಬಿಣ, ದೇವರಬೆಳಕೆರೆ ಬಳಿ ಸುಣ್ಣ ದೊರೆಯುತ್ತದೆ.

ಹರಪನಹಳ್ಳಿಯಲ್ಲಿ ಮ್ಯಾಂಗನೀಸ್, ಸಿಮೆಂಟ್ ತಯಾರಿಸಲು, ಮನೆಯನ್ನು ಕಟ್ಟಲು ಉಪಯೋಗಿಸುವ ಸುಣ್ಣದಕಲ್ಲು ದೊರೆಯುತ್ತದೆ. ಕೈದಾಳದಲ್ಲಿ ತಾಮ್ರದ ಅದಿರು, ಚಿಗಟೇರಿ, ಕಲ್ಲಳ್ಳಿ, ಕೊನಗನ ಹೊಸೂರು ಬಳಿ ಚಿನ್ನದ ಅದಿರು, ಹರಪನಹಳ್ಳಿ ಹತ್ತಿರ ತಾಮ್ರದ ನಿಕ್ಷೇಪಕಗಳು, ಆಲೂರು, ಮಲ್ಲಾಪುರದಲ್ಲಿ ಕಲ್ಲಿನ ಗಣಿಗಾರಿಕೆಗಳು, ಹೊನ್ನಾಳಿಯಲ್ಲಿ ಬೆಣಚು ಕಲ್ಲುಗಳಿವೆ.[೨೦]

**ರಾಜಕೀಯ ಇತಿಹಾಸ**

**ಪ್ರಾಗೈತಿಹಾಸ ಕಾಲ :** ದಾವಣಗೆರೆ ಜಿಲ್ಲೆಯಲ್ಲಿ ಪುರಾತತ್ವ ನೆಲೆಗಳು ಪತ್ತೆಯಾಗಿವೆ. ಜಗಳೂರು ತಾಲೂಕಿನ ನಂದಿಹಳ್ಳಿ, ಅರಸೂರು, ಹೆಮ್ಮನಗಟ್ಟ, ದೇವಿಕೆರೆಗಳಲ್ಲಿ ನವಶಿಲಾಯುಗದ ನೆಲೆಗಳು. ಅಸಗೋಡು, ಮಾಚಿಕೇರೆಯಲ್ಲಿ ಬೃಹತ್ ಶಿಲಾಯುಗದ ನೆಲೆಗಳು ಪತ್ತೆಯಾಗಿದೆ. ಹೊನ್ನಾಳಿ ತಾಲೂಕಿನ ಹರಗನಹಳ್ಳಿ, ಹನುಮನಹಳ್ಳಿ, ಸೌಳಂಗ, ಸಿದ್ದಾಪುರ, ಕಮ್ಮಾರಗಟ್ಟೆಯಲ್ಲಿ ಬೃಹತ್ ಶಿಲಾಯುಗದ ನೆಲೆಗಳು, ಹರಿಹರ ತಾಲೂಕಿನ ಕೊಮಾರನಹಳ್ಳಿಯಲ್ಲಿ ಬೃಹತ್ ಶಿಲಾಸಮಾಧಿಗಳು, ದಾವಣಗೆರೆ ತಾಲೂಕಿನ ಬಾತಿಯಲ್ಲಿ ಕುಳಿಭರಿತ ಶಿಲಾ ಸಮಾದಿಗಳು, ನೂತನ ಶಿಲಾಯುಗಕ್ಕೆ ಸೇರಿದ ಮಡಿಕೆ ಚೂರುಗಳು ಲಭ್ಯವಾಗಿವೆ. ಹರಪನಹಳ್ಳಿ ತಾಲೂಕಿನ ಮಾಡಲಗೇರಿ, ತೆಲಗಿ, ನೀಲಗುಂದ, ಬಾಗಳಿಯಲ್ಲಿ ಮಧ್ಯಶಿಲಾಯುಗ, ನೂತನ ಶಿಲಾಯುಗ, ಬೃಹತ್ ಶಿಲಾಯುಗದ ನೆಲೆಗಳು ದೊರೆತಿದ್ದು[೨೧] ದಾವಣಗೆರೆ ಜಿಲ್ಲೆಯ ಐತಿಹಾಸಿಕತೆಯನ್ನು ಪ್ರಾಗೈತಿಹಾಸಕಾಲದವರೆಗೆ ಕೊಂಡೊಯ್ಯಬಹುದು.

**ಮೌರ್ಯರ ಕಾಲ :** ಈ ಜಿಲ್ಲೆಯು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದು, ಜಗಳೂರು ತಾಲೂಕಿನ ಅಸಗೋಡು ಅಶೋಕನ ಹೆಸರಿನಲ್ಲಿ ನಿರ್ಮಾಣವಾಗಿ ಅಶೋಕ ಪಟ್ಟಣವೆಂದು ಕರೆಯಲಾಗುತ್ತಿತ್ತು.[೨೨] ಅಸಗ ಎಂದರೆ ಪಾಳಿ ಭಾಷೆಯಲ್ಲಿ ಅಶೋಕ ಎಂದರ್ಥ. ದಾವಣಗೆರೆ ತಾಲೂಕಿನ ಹಳ್ಳಿಗಳಾದ ಬೇತೂರು, ಶಾಮನೂರುಗಳಲ್ಲಿ ಬುದ್ಧನ ವಿಗ್ರಹಗಳು ಹಾಗೂ ಅವರಿಗೆ ಸಂಬಂಧಿಸಿದ ಅವಶೇಷಗಳು ದೊರೆತಿರುವುದರಿಂದ ಈ ಭಾಗವು ಮೌರ್ಯ ಸಾಮ್ರಾಜ್ಯದ ಆಳ್ವಿಕೆಗೆ ಒಳಗಾಗಿರುವುದು ಧೃಡಪಡುತ್ತದೆ.[೨೩]

**ಶಾತವಾಹನರ ಕಾಲ :** ಕರ್ನಾಟಕವನ್ನು ಆಳ್ವಿಕೆ ಮಾಡಿರುವ ಈ ಮನೆತನದ ಕೊನೆಯ ಅರಸರ ಕಾಲವಧಿಯಲ್ಲಿ ಸಾಮ್ರಾಜ್ಯ ದಾವಣಗೆರೆಯವರೆಗೆ ವಿಸ್ತರಿಸಿತ್ತೆಂಬುದಕ್ಕೆ, ಜಗಳೂರು ತಾಲೂಕಿನ ಆಕನೂರು ಗ್ರಾಮದ ಬಳಿ ಇವರ ಕಾಲದ ಬಿಳಿ ಬಣ್ಣದ ರೇಖಾಚಿತ್ರಗಳನ್ನು ಒಳಗೊಂಡ ಮಡಿಕೆಗಳು ದೊರೆತಿವೆ.[೨೪]

**ಕದಂಬರ ಕಾಲ :** ಕ್ರಿ.ಶ. ೩೪೫ ರಿಂದ ೫೪೦ರ ವರೆಗೆ ಆಳ್ವಿಕೆ ನಡೆಸಿರುವ ಕದಂಬರರು, ಕನ್ನಡದ ಮೊಟ್ಟಮೊದಲನೆಯ ಸಾಮ್ರಾಜ್ಯವಾಗಿದ್ದು ಜಿಲ್ಲೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವುದು ಕೆಳಗಿನ ಆಧಾರಗಳಿಂದ ಧೃಡಪಡುತ್ತದೆ. ಜಿಲ್ಲೆಯ ದಾವಣಗೆರೆ ತಾಲೂಕಿನ ಅಣಜಿಯಲ್ಲಿ ಶಿವಸ್ಕಂದವರ್ಮನ ಶಾಸನವಿದ್ದು, ನೊಣಕ್ಕಸ ಪಲ್ಲವನಿಗೂ ಮತ್ತು ಕೃಷ್ಣವರ್ಮನಿಗೂ ನಡೆದ ತುಮುಲಯುದ್ಧವನ್ನು ವಿವರಿಸುತ್ತದೆ.[೪೫] ಕಾಶೀಪುರದಲ್ಲಿ ೩ ಹಲಗೆಯುಳ್ಳ ಸಿಂಹರಾಜ ಲಾಂಛನವುಳ್ಳ ರವಿವರ್ಮನ ತಾಮ್ರ ಶಾಸನವಿದೆ. ಹರಿಹರದ ಶಾಸನದಿಂದ ಕದಂಬ ವಂಶದ ಐತಿಹಾಸಿಕ ಹಿನ್ನಲೆಯ ಕಥೆಯನ್ನು ತಿಳಿಯಬಹುದು. ಹರಪನಹಳ್ಳಿಯ ಉಚ್ಚಂಗಿದುರ್ಗದ ಹತ್ತಿರವಿರುವ ನಂದಿಕಂಬ ಗ್ರಾಮದಲ್ಲಿ ದೊರೆತ ಶಾಸನದಿಂದ ನಾಗತಿಯರಸ ಕದಂಬ ಚಕ್ರವರ್ತಿ ಮಯೂರವರ್ಮನ ವಂಶದವನೆಂದು ಹಾಗೂ ಉಚ್ಚಂಗಿ ಗಿರಿನಾಥನೆಂದು ಪ್ರಸಿದ್ಧಿ ಪಡೆದಿದ್ದನೆಂದು ಉಲ್ಲೇಖವಿದೆ.

**ಬಾದಾಮಿ ಚಾಲುಕ್ಯರು :** ಕ್ರಿ.ಶ. ೫೪೩ ರಿಂದ ೭೫೩ರವರೆಗೆ ಆಳ್ವಿಕೆ ಮಾಡಿರುವ ಈ ಸಾಮ್ರಾಜ್ಯ, ದಾವಣಗೆರೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವುದು ಇಲ್ಲಿ ಸಿಕ್ಕಿರುವ ಶಾಸನಗಳಿಂದ ಧೃಡಪಡುತ್ತದೆ. ಹರಿಹರ ತಾಲೂಕಿನಲ್ಲಿ ವಿನಯಾದಿತ್ಯನ ಕಾಲದ ಶಾಸನ ದೊರೆತಿದ್ದು, ಇದರಿಂದ ಚಾಲುಕ್ಯರ ವಂಶದ ಮೂಲ, ಆಳ್ವಿಕೆ ಮಾಡಿದ ಅರಸರು, ಪುಲಕೇಶಿಯ ಅಶ್ವಮೇಧಯಾಗ ಹಾಗೂ ವಿನಯಾದಿತ್ಯನ ರಾಜ್ಯವಿಸ್ತಾರವನ್ನು ತಿಳಿಯಬಹುದು. ಚನ್ನಗಿರಿಯಲ್ಲಿ ಸಿಕ್ಕಿರುವ ಶಾಸನದಿಂದ ವಿನಯಾದಿತ್ಯನು ವೆಂಗಿಯ ಮಂಡಲೇಶ್ವರನೆಂಬ ಬಿರುದು ಧರಿಸಿದ್ದನೆಂಬುದು ತಿಳಿಯುತ್ತದೆ.[೪೬]

**ರಾಷ್ಟ್ರಕೂಟರ ಕಾಲ :** ಕ್ರಿ.ಶ. ೭೩೭ ರಿಂದ ೯೭೩ರವರೆಗೆ ಆಳ್ವಿಕೆ ನಡೆಸಿರುವ ರಾಷ್ಟ್ರಕೂಟರು, ಜಿಲ್ಲೆಯನ್ನು ತಮ್ಮ ಅಧಿಪತ್ಯಕ್ಕೆ ಒಳಪಡಿಸಿಕೊಂಡಿದ್ದು, ಇವರ ಕಾಲದ ಶಾಸನಗಳು ಈ ಪ್ರದೇಶದಲ್ಲಿ ಪತ್ತೆಯಾಗಿವೆ. ಅವುಗಳೆಂದರೆ ಬಾಗಳಿ ಶಾಸನ (ಕ್ರಿ.ಶ. ೯೯೧) ೩ನೇ ಕೃಷ್ಣನು ಕ್ರಿ.ಶ. ೯೯೩ ರಿಂದ ೯೬೭ರವರೆಗೆ ಕೋಗಳಿ ೫೦೦ಕ್ಕೆ ಒಡೆಯನಾಗಿದ್ದನೆಂದು (ಹರಪನಹಳ್ಳಿ ಮತ್ತು ಹೂವಿನಹಡಗಲಿ) ಮಾಹಿತಿ ನೀಡುತ್ತದೆ. ಹೊನ್ನಾಳಿಯಲ್ಲಿ ದೊರೆತ ಶಾಸನದಿಂದ ಅಮೋಘವರ್ಷನಿಗೆ ಮಾರತಸ್ಯನೆಂಬ ಬಿರುದಿತ್ತೆಂಬುದು ಹಾಗೂ ಇಂದ್ರನ ಆಳ್ವಿಕೆಯನ್ನು ತಿಳಿಯಬಹುದು. ಹರಪನಹಳ್ಳಿಯ ಚಿರಸ್ತಹಳ್ಳಿ ಶಾಸನದಿಂದ ಯುದ್ಧದಲ್ಲಿ ಮಡಿದವರಿಗೆ ಭೂಧಾನ ನೀಡಿದ ವಿವರವನ್ನು ಹಾಗು ದಾವಣಗೆರೆ ತಾಲೂಕಿನ ಕಾಡಜ್ಜಿಯ ಶಾಸನದಿಂದ ಈ ಪ್ರದೇಶವು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯಬಹುದಾಗಿದೆ.[೪೭]

**ಕಲ್ಯಾಣಿ ಚಾಲುಕ್ಯರು :** ಕ್ರಿ.ಶ. ೯೭೩ ರಿಂದ ೧೧೯೮ರವರೆಗೆ ಆಳ್ವಿಕೆ ಮಾಡಿರುವ ಕಲ್ಯಾಣಿ ಚಾಲುಕ್ಯರು, ದಾವಣಗೆರೆಯನ್ನು ತಮ್ಮ ಅಧಿಪತ್ಯಕ್ಕೆ ಒಳಪಡಿಸಿಕೊಂಡಿದ್ದು, ಇವರ ಶಾಸನಗಳು ಪತ್ತೆಯಾಗಿವೆ. ಹರಪನಹಳ್ಳಿ ತಾಲೂಕಿನ ಬಾಗಳಿಯಲ್ಲಿ ೨ನೇ ತೈಲಪನಿಗೆ ಸೇರಿದ ೨ ಶಾಸನಗಳು ಹಾಗೂ ಮೊದಲನೇ ಸೋಮೇಶ್ವರನಿಗೆ ಸೇರಿದ ಶಾಸನಗಳು ದಾವಣಗೆರೆ ಜಿಲ್ಲೆಯ ಸತ್ತೂರು,

ಚಿರಸ್ತಹಳ್ಳಿ, ಹೊನ್ನಾಳಿ, ಅರಸೀಕೆರೆ, ಅಸಗೋಡಿನಲ್ಲಿ ಪತ್ತೆಯಾಗಿವೆ. ೬ನೇ ವಿಕ್ರಮಾದಿತ್ಯನ ಹಿರೇವುಡ ಗ್ರಾಮದ ಶಾಸನದಿಂದ, ನೊಳಂಬವಾಡಿಗೆ ದಾವಣಗೆರೆಯಲ್ಲಿರುವ ಬೇತೂರು, ಆಡಳಿತದ ಕೇಂದ್ರವಾಗಿತ್ತೆಂದು ತಿಳಿಯುತ್ತದೆ.[೪೮] ಹಾಗೂ ಇವನ ಕಾಲದ ಶಾಸನಗಳು ಜಿಲ್ಲೆಯ ಬಾಗಳಿ ಮತ್ತು ಹರಿಹರಗಳಲ್ಲಿವೆ.

ಕಲ್ಯಾಣಿ ಚಾಲುಕ್ಯರ ಸಾಮಂತ ಅರಸನಾದ ವಿಜಯಪಾಂಡ್ಯದೇವನು ನೊಳಂಬವಾಡಿಯನ್ನು ಆಳ್ವಿಕೆ (೧೧೫೫-೧೧೮೫) ಮಾಡುತ್ತಿದ್ದಾಗ ಉಚ್ಚಂಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂಬುದು ಉಲ್ಲೇಖವಿದೆ.

**ಸೇವುಣರ ಕಾಲ** : ಕ್ರಿ.ಶ. ೮೩೦ ರಿಂದ ೧೩೧೩ರವರೆಗೆ ಕರ್ನಾಟಕವನ್ನು ಆಳ್ವಿಕೆ ಮಾಡಿರುವ ಈ ಸಾಮ್ರಾಜ್ಯದ ಅನೇಕ ಶಾಸನಗಳು ದಾವಣಗೆರೆ ಜಿಲ್ಲೆಯಲ್ಲಿ ದೊರೆತಿರುವುದರಿಂದ ಇವರ ಆಳ್ವಿಕೆಗೆ ಒಳಪಟ್ಟಿತ್ತೆಂಬುದಕ್ಕೆ ಸಾಕ್ಷಿಯಾಗಿವೆ. ಹೊನ್ನಾಳಿ ತಾಲೂಕಿನ ಬೆಳಗುತ್ತಿ ಮತ್ತು ಬಲ್ಲೇಶ್ವರ ಶಾಸನದಲ್ಲಿ[೪೯] ಈಶ್ವರ ದೇವರಿಗೆ ನೀಡಿದ ಭೂದಾನ ಹಾಗೂ ದಾವಣಗೆರೆ ತಾಲೂಕಿನ ಅಣಜಿಯಲ್ಲಿ ಸಿಕ್ಕಿರುವ ೨ ಶಾಸನಗಳಲ್ಲಿ ವಿಠ್ಠಲದೇವರಸನಿಗಿದ್ದ ಬಿರುದು ಹಾಗೂ ಅಣಜಿಯ ದೇವರಿಗೆ ನೀಡಿದ ಭೂದಾನದ ಮಾಹಿತಿಯಿದೆ.[೫೦]

**ಹೊಯ್ಸಳರ ಕಾಲ** : ಕ್ರಿ.ಶ. ೧೧ ರಿಂದ ೧೪ನೇ ಶತಮಾನದವರೆಗೆ ಆಳ್ವಿಕೆ ಮಾಡಿದ್ದು, ಇವರ ಕಾಲದ ಶಾಸನಗಳು ಜಿಲ್ಲೆಯಲ್ಲಿ ಪತ್ತೆಯಾಗಿವೆ. ದಾವಣಗೆರೆ ಜಿಲ್ಲೆಯಲ್ಲಿ ೨ನೇ ಬಲ್ಲಾಳನ ಕಾಲದ ಶಾಸನಗಳು ಬಾಗಳಿ, ಕುಂದವಾಡ, ಅಣಜಿಗೆರೆಯಲ್ಲಿ ದೊರೆತಿವೆ. ಹರಿಹರದಲ್ಲಿ ಇವರ ಕಾಲದ ಹೊಯ್ಸಳ ಶೈಲಿಯ ಹರಿಹರೇಶ್ವರ ದೇವಾಲಯ ಹಾಗು ಅದರಲ್ಲಿರುವ ಶಾಸನ ದೇವಾಲಯದ ನಿರ್ಮಾಣ, ಸಾಮ್ರಾಜ್ಯದ ಮೂಲ, ವಂಶಾವಳಿ ಬಲ್ಲಾಳನ ಪರಾಕ್ರಮವನ್ನು ವರ್ಣಿಸುತ್ತದೆ.[೫೧]

**ವಿಜಯನಗರ ಸಾಮ್ರಾಜ್ಯ** : ಕ್ರಿ.ಶ. ೧೩೩೬ ರಿಂದ ೧೫೬೫ರವರೆಗೆ ಆಳ್ವಿಕೆ ಮಾಡಿರುವ ವಿಜಯನಗರ ಸಾಮ್ರಾಜ್ಯ ಈ ಜಿಲ್ಲೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದು ಇಲ್ಲಿ ಸಿಕ್ಕಿರುವ ಶಾಸನಗಳಿಂದ ದೃಡಪಡುತ್ತದೆ. ಹರಿಹರದ ಶಾಸನದಿಂದ ೨ನೇ ಹರಿಹರ ಶಂಕರಪುರ ಗ್ರಾಮವನ್ನು ದಾನ ಕೊಟ್ಟಿರುವ ಮಾಹಿತಿಯಿದೆ. ಈ ಗ್ರಾಮ ಕೊಟ್ಟೂರು ಚಾವಡಿಗೆ ಸೇರಿದ್ದು, ಕೊಟ್ಟೂರು ಚಾವಡಿ ಈಗಿನ ದಾವಣಗೆರೆ ಮತ್ತು ಹರಿಹರ ಪ್ರದೇಶಗಳಾಗಿದ್ದವೆಂಬ ಅಭಿಪ್ರಾಯವಿದೆ. ಬಿಳಿಚೋಡಿನ ಶಾಸನ[೫೨] ಕೃಷ್ಣದೇವರಾಯನ ಆಳ್ವಿಕೆಯಲ್ಲಿ ತಿಮ್ಮಯ್ಯ ಸ್ಥಳ ಭಂಡಾರದ ಅಧಿಕಾರಿಯಾಗಿದ್ದನೆಂಬುದು ತಿಳಿದುಬರುತ್ತದೆ.

**ಪಾಳೆಯಗಾರರ ಕಾಲ** : ದಾವಣಗೆರೆಯನ್ನು ಚಿತ್ರದುರ್ಗದ ಪಾಳೆಯಗಾರರು, ಹರಪನಹಳ್ಳಿ ಪಾಳೆಯಗಾರರು, ಸಂತೇಬೆನ್ನೂರಿನ ಪಾಳೆಯಗಾರರು, ಆಳ್ವಿಕೆ ಮಾಡಿರುವುದು ಇಲ್ಲಿ ಸಿಕ್ಕಿರುವ ಉಚ್ಚಂಗಿದುರ್ಗದ ಕೋಟೆ, ದಾವಣಗೆರೆ ಜಿಲ್ಲೆಯ ಆಲೂರು, ಕೆಂಚಾಪುರ ಮುಂತಾದ ಸ್ಥಳಗಳಲ್ಲಿರುವ ಬತೇರಿಗಳು, ಬುರುಜುಗಳು, ಮಾಯಕೊಂಡದಲ್ಲಿರುವ ಹಿರೇಮದಕರಿನಾಯಕನ ಕಾಲದ ಸಮಾಧಿ,[೫೩] ಸಂತೇಬೆನ್ನೂರಿನ ಪುಷ್ಕರಣಿ ಹಾಗೂ ಶಾಸನಗಳಿಂದ ಧೃಡಪಡುತ್ತದೆ.

**ಹೈದರಾಲಿ ಮತ್ತು ಟಿಪ್ಪುವಿನ ಕಾಲ :** ಮೈಸೂರಿನ ಒಡೆಯರ ಕಾಲದಲ್ಲಿ ಸರ್ವಾಧಿಕಾರಿಗಳಾಗಿ ಅಧಿಕಾರಕ್ಕೆ ಬಂದ ಹೈದರ್ ಹಾಗೂ ಟಿಪ್ಪುವಿನ ಕಾಲದಲ್ಲಿಯೂ ದಾವಣಗೆರೆ ಇವರ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಗಿತ್ತು. ೧೭೭೯ರಲ್ಲಿ ನಡೆದ ಯುದ್ಧದಲ್ಲಿ ಹೈದರಾಲಿ ಮದಕರಿನಾಯಕನನ್ನು ಸೋಲಿಸಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು. ಆ ಸಂದರ್ಭದಲ್ಲಿ ದಾವಣಗೆರೆ ಚಿತ್ರದುರ್ಗದ ಜಹಗೀರಾಗಿದ್ದು, ಮರಾಠ ಸರದಾರ ಅಪ್ಪೋಜಿರಾಯನಿಗೆ ನೀಡಿದ್ದನು. ನಂತರ ಟಿಪ್ಪುವಿನ ಆಳ್ವಿಕೆಯಲ್ಲಿ ಸರದಾರ ಮಕ್ಕಳಿಲ್ಲದೆ ಮರಣ ಹೊಂದಿದಾಗ ಈ ಜಹಗೀರನ ಆಡಳಿತ ನೋಡಿಕೊಳ್ಳಲು ಷೇಕ್ ಆಯಾಜ್ ಎಂಬ ಗೌರ್ನರ್‌ನನ್ನು ನೇಮಕ ಮಾಡಿದನು.

**ಮೈಸೂರಿನ ಒಡೆಯರು :** ಒಡೆಯರ ಕಾಲಾವಧಿಯಲ್ಲಿ ಚಿತ್ರದುರ್ಗ ತುಕಡಿಯು ಆಡಳಿತ ಘಟಕದ ಒಂದು ಭಾಗವಾಗಿದ್ದು, ಇದರಲ್ಲಿ ದಾವಣಗೆರೆಯು ಸೇರಿಕೊಂಡಿದ್ದು ಮೈಸೂರಿನ ಗಡಿಯಾಗಿದ್ದಿತು. ೧೯೨೬ರಲ್ಲಿ ರಾಜನಹಳ್ಳಿ ಹನುಮಂತಪ್ಪನವರು ನಿರ್ಮಿಸಿದ ಆಸ್ಪತ್ರೆಯ ಉದ್ಘಾಟನಾ ಸಮಾರಂಭಕ್ಕೆ ಶ್ರೀ ಕಂಠೀರವ ನರಸರಾಜ ಒಡೆಯರು ಬಂದಿದ್ದರು. ಹಾಗೂ ಶ್ರೀ ಜಯಚಾಮರಾಜೇಂದ್ರ ಒಡೆಯರು ದಾವಣಗೆರೆ ಕಾಟನ್‌ಮಿಲ್ ಬೆಳ್ಳಿಹಬ್ಬದ ಮಹೋತ್ಸವಕ್ಕೆ ಆಗಮಿಸಿದ್ದು.[೫೪] ಒಡೆಯರು ಈ ಭಾಗದೊಂದಿಗೆ ಹೊಂದಿರುವ ಸಂಬಂಧಕ್ಕೆ ಸ್ಪುಷ್ಟಿ ನೀಡುತ್ತದೆ.

**ದಾವಣಗೆರೆ ಪದದ ಉಲ್ಲೇಖ**

ಕ್ರಿ.ಶ. ೧೧೨೧ರ ತುಂಬಿಗೆರೆ ಶಾಸನದಲ್ಲಿ "ದಾವಣಗೆರ್ಯ-ಸೀಮೆಯ" ಎಂಬ ಉಲ್ಲೇಖವಿದ್ದು. ಇಂದಿನ ದಾವಣಗೆರೆ ಅಂದು ದಾವಣಗೆರ್ಯಯಾಗಿತ್ತು. ಈ ಪ್ರದೇಶದ ಹೆಸರನ್ನು ಉಲ್ಲೇಖಿಸುವ ಮೊಟ್ಟ ಮೊದಲ ಶಾಸನ ಇದಾಗಿದೆ.

ದಾವಣಗೆರೆ ಪ್ರದೇಶ ಯಾವಾಗಲೂ ನೀರಿನಿಂದ ತುಂಬಿರುತ್ತಿದ್ದು, ದೊಡ್ಡ ಕೆರೆಯಾಗಿತ್ತು. ಈ ಕೆರೆಯಂಗಳದಲ್ಲಿ ದೊಡ್ಡ ಹುಲ್ಲುಗಾವಲಿದ್ದು ಆಗಿನ ಕಾಲದಲ್ಲಿ ಕುದುರೆ ಸವಾರರು ಹಾಗೂ ಎತ್ತಿನಗಾಡಿ ಮುಂತಾದವುಗಳು ಈ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿರುವಾಗ, ಈ ಕೆರೆಯಂಗಳದ ಹುಲ್ಲುಗಾವಲಿನಲ್ಲಿ ಕುದುರೆಗಳು, ಎತ್ತುಗಳನ್ನು ಒಂದೇ ಹಗ್ಗದಲ್ಲಿ ಕಟ್ಟುತ್ತಿದ್ದರು. ಇದೊಂದು ರೀತಿಯ ಕಟ್ಟಾಗಿದ್ದು 'ದವಣಿಕಟ್ಟು' ಎಂದು ಹೇಳುತ್ತಿದ್ದುದು ಪ್ರಚಲಿತದಲ್ಲಿದೆ. ದಾವಣಿಕಟ್ಟು ಬಿಗಿದು ದನಗಳನ್ನು ಕಟ್ಟುವ ಸ್ಥಳದಲ್ಲಿ ಕೆರೆ ಇದ್ದುದರಿಂದ ದವಣಕೆರೆ ಎಂದು ಹೇಳುತ್ತಿದ್ದರೆಂದು, ಕಾಲ ಕಳೆದಂತೆ ದಾವಣಕೆರೆಯು ದಾವಣಗೆರೆ ಎಂದು ಹೆಸರು ಪಡೆಯಿತು.

ರಾಕೇಶ್ ಪೂಜಾರ್‌ರವರು ಪ್ರಜಾವಾಣಿ ಪತ್ರಿಕೆಯಲ್ಲಿ (ದಿನಾಂಕ: ೨೮-೦೮-೨೦೧೩) ದಾಖಲಿಸಿರುವ ಪ್ರಕಾರ, ಇಂದಿನ ದಾವಣಗೆರೆಯು ಹಿಂದೆ ದಾನದ ಊರಾಗಿತ್ತು. ಉಚ್ಚಂಗಿದುರ್ಗದ ಪಾಂಡ್ಯರು ಅವರ ಕುಲದೇವ ತ್ರಿಭುವನೇಶ್ವರ ದೇವರಿಗೊಂದು ಭವ್ಯ ದೇವಾಲಯ ಕಟ್ಟಿಸಲು ಪಕ್ಕದ ಬೇತೂರಿನ ವರ್ತಕ ದೇವಿಶೆಟ್ಟಿ ಎಂಬಾತ ದಾನವಾಗಿ ನೀಡಿದ್ದ ದೇವಣ್ಣ+ಕೆರೆ-ದ್ಯಾವಣ್ಣನಕೆರೆ-ದಾವಣಗೆರೆಯಾಗಿದೆ ಎಂದಿದ್ದಾರೆ.

ನೂರಾರು ದೇವಾಲಯಗಳನ್ನು ಹೊಂದಿರುವ ಈ ಜಿಲ್ಲೆಯನ್ನು ದೇವನಕೆರೆ ಎಂದು ಕರೆದಿರಬಹುದಾಗಿದ್ದು, ಉಚ್ಚಂಗಿದುರ್ಗವನ್ನು ಆಳ್ವಿಕೆ ಮಾಡುತ್ತಿದ್ದ ತ್ರಿಭುವನಮಲ್ಲ ಪಾಂಡ್ಯನು ತನ್ನ ಹೆಸರಿನಲ್ಲಿಯೇ ಶಿಬಾರದ ಬಳಿ ಕೆರೆಯೊಂದನ್ನು ಕಟ್ಟಿಸಿದನೆಂದು, ಇವನ ಶಾಸನಗಳಲ್ಲಿ ಉಲ್ಲೇಖವಿದೆ. ತ್ರಿಭುವನ ಮಲ್ಲನ ಹೆಸರಿನಲ್ಲಿಯೇ ಕಟ್ಟಿಸಿದ ಕೆರೆಯ ಸಮೀಪ ಈ ಗ್ರಾಮವಿದೆ. ಹಾಗಾಗಿ ಇದನ್ನು ದೇವನಕೆರೆ ಎಂದು ಕರೆದು ನಂತರ ದಾವಣಗೆರೆಯಾಗಿ ಅಸ್ತಿತ್ವಕ್ಕೆ ಬಂದಿದೆ.

ಲೇಖಕರಾದ ಹಿ.ಚಿ. ಶಾಂತವೀರಯ್ಯನವರು ದಾವಣಗೆರೆ ಹೆಸರನ್ನು ಹೀಗೆ ವಿವೇಚಿಸಿದ್ದಾರೆ:

ದಾವಣ+ಕೆರೆ

ದಾವಣ=ದಾವಣಿ, ಹಗ್ಗ

ಕಣ್ಣಿದಾವ=ಅಡವಿ, ಕಾಡು, ಕಾಡ್ಗಿಚ್ಚು

ದಾವಣ=ದಾವಣಿ, ಸಂಸ್ಕೃತ–ದಾಮನಿ=ಕಟ್ಟುವ ಹಗ್ಗ

ದವಣಿ=ಗುಂಪು, ಸಮೂಹ

ಕೆರೆ ಪ್ರವಾಹವನ್ನು ತಡೆದು ಏರಿಹಾಕಿ (ಒಡ್ಡುಹಾಕಿ) ನಿಲ್ಲಿಸಿದ ಪ್ರದೇಶ (ಜಲಾಶಯ) ದೇವನಕೆರೆ.

ದೇವ ಒಂದು ಹೆಸರು, ಆ ಹೆಸರಿನ ಸೂಚಕವಾಗಿ ಕಟ್ಟಿದ ಕೆರೆ ಅಥವಾ ದೇವನು ಕಟ್ಟಿಸಿದ ಕೆರೆ.

ದಾವ+ನಗರಿ, ನಗರಿ=ನಗರಗಳಲ್ಲಿ ದೊಡ್ಡದು,

ದಾವನ+ಕೇರಿ, ದಾವನ ಎಂಬುವವನ ಕೇರಿ, ಬೀದಿ.

ದೇವನ+ಕೇರಿ, ದೇವರು ನೆಲೆಸಿದ ಬೀದಿ, ರಸ್ತೆ

ದೇನವಕರೆ–ದ್ಯಾವನಕೆರೆ–ದ್ಯಾವನಗೆರೆ–ದ್ಯಾವಣಗೆರೆ–ದಾವಣಗೆರೆಯಾಗಿದೆ.

ದಾವಣಗೆರೆ ಎಂಬುದರ ರೂಪಾಂತರ "ದೇವನಕೆರೆ" ಎಂಬುದರಿಂದ ಬಂದಿದೆ. ದೇವನಕೆರೆ–ದೇವನಗರೆ, ದೇವನಗರೆ–ದೇವಣಗೆರೆ, ದ್ಯಾವಣಗೆರೆ–ದ್ಹಾವಣಗೆರೆಯು ಕಾಲಾನುಕ್ರಮವಾಗಿ ದಾವಣಗೆರೆಯಾಗಿದೆ.

ಸಂಶೋಧಕರಾದ ಬಿ. ರಾಜಶೇಖರಪ್ಪರವರ ಪ್ರಕಾರ ದಾವಣಗೆರೆ, ದಾವಣ+ಕೆರೆ ಎಂಬ ಎರಡು ಭಾಗಗಳಿಂದ ಕೂಡಿದ್ದು, ದಾವಣ ಎಂಬುದು ದಾವಣಿ ಅರ್ಥದ ಶಬ್ದವಾಗಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಮಂಡ್ಯ ಜಿಲ್ಲೆಯ ೧೨ನೇ ಶತಮಾನದ ದಾನ ಶಾಸನವೊಂದರಲ್ಲಿ 'ದಾವಣ್ಣಕೇರಿ' ಎಂದು ಉಲ್ಲೇಖವಿರುವ ಕಾರಣ ದಾವಣಗೆರೆ, ದಾವಣ ಎನ್ನುವ ವ್ಯಕ್ತಿಯೊಬ್ಬನ ಹೆಸರಿನ ಊರು ಎಂದು ಅಭಿಪ್ರಾಯಪಟ್ಟಿದ್ದಾರೆ.

ಫ್ರಾನ್ಸಿಸ್ ಬುಕನನ್ ಬ್ರಿಟೀಷ್ ಸರ್ವೇಕ್ಷಣಾಧಿಕಾರಿಯಾಗಿದ್ದು ಇವರ ಕೃತಿಯಾದ **Journey from madras through Canara and malbar**ನಲ್ಲಿ ದಾವಣಗಿರಿ **(Davanagiri)** ಎಂಬ ಹೆಸರಿನ ಉಲ್ಲೇಖವಿದ್ದು, ೧೮೦೭ರಲ್ಲಿ ಈ ಜಿಲ್ಲೆಗೆ ಭೇಟಿ ನೀಡಿದ್ದಾರೆ.

ಜನಾಭಿಪ್ರಾಯದಂತೆ "ಈ ನಗರದಲ್ಲಿ ಬಹಳಷ್ಟು ದಾನಿಗಳಿದ್ದು ಈಗಲೂ ಈ ಊರು ದಾನಿಗಳ ತವರಾಗಿದ್ದು. ದಾನಿಗಳ ಕೇರಿ ಎನಿಸಿಕೊಂಡು ದಾವಣಗೆರೆಯಾಗಿದೆ".

ಹೀಗೆ ದಾವಣಗೆರೆ ಪದದ ನಿಷ್ಪತ್ತಿಯ ಬಗ್ಗೆ ಇತಿಹಾಸಕಾರರು ಹಾಗೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

## ೨.೩ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಬಯಲು ಸೀಮೆಯಾಗಿರುವ ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಪೂರ್ವ ಭಾಗದ ಮಧ್ಯದಿಂದ ದಕ್ಷಿಣದವರೆಗೆ ಹಬ್ಬಿದ್ದು ೮೪೫೦ ಚ.ಕಿ.ಮೀ ವಿಸ್ತೀರ್ಣವಿದೆ. ಈ ಜಿಲ್ಲೆಯು ಬಳ್ಳಾರಿ ಹಡಗಲಿ, ಹೆಚ್.ಬಿ.ಹಳ್ಳಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು ಮತ್ತು ಸಿರಗುಪ್ಪ ಒಟ್ಟು ೬ ತಾಲೂಕುಗಳು, ೫೫೨ ಗ್ರಾಮಗಳನ್ನು ಒಳಗೊಂಡಿದ್ದು, ೨೪,೫೨,೫೯೫ ಜನಸಂಖ್ಯೆಯಿದೆ.[೫೫]

**ಬಳ್ಳಾರಿ ಜಿಲ್ಲೆಯ ಮೇರೆಗಳು ಮತ್ತು ವಾಯುಗುಣ :** ಜಿಲ್ಲೆಯ ಉತ್ತರದಲ್ಲಿ ರಾಯಚೂರು, ಪಶ್ಚಿಮದಲ್ಲಿ ಹಾವೇರಿ, ದಕ್ಷಿಣದಲ್ಲಿ ಚಿತ್ರದುರ್ಗ, ಪೂರ್ವದಲ್ಲಿ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರಿಯಲ್ಪಟ್ಟಿದೆ. ೧೪೦-೧೩೦ ಮತ್ತು ೧೫೦-೫೦೦ ಉತ್ತರ ಅಕ್ಷಾಂಶ ಹಾಗೂ ೭೦೦-೪೦೦ ಮತ್ತು ೭೭೦- ೧೧೦ ಪೂರ್ವರೇಖಾಂಶಗಳ ಮಧ್ಯಭಾಗದಲ್ಲಿದೆ. ಸಮುದ್ರ ಮಟ್ಟದಿಂದ ೩೪೦೦ ಅಡಿ ಎತ್ತರವಿದ್ದು, ಸರಾಸರಿ ೬೩೮.೧ ಮೀಟರ್‌ನಷ್ಟು ವಾರ್ಷಿಕ ಮಳೆಯಾಗುತ್ತದೆ.[೫೬]

**ಮಣ್ಣು :** ಜಿಲ್ಲೆಯು ಕಪ್ಪು ಮತ್ತು ಕೆಂಪು ಮಣ್ಣನ್ನು ಹೊಂದಿದ್ದು, ನೀರಿನ ಅಂಶವನ್ನು ಹಿಡಿದಿಟ್ಟುಕೊಳ್ಳುವ ಗುಣವಿದೆ. ಹೊಸಪೇಟೆ, ಕೂಡ್ಲಿಗಿ, ಸಂಡೂರು ತಾಲೂಕಿನಲ್ಲಿ ಮರಳು ಮಿಶ್ರಿತ ಕೆಂಪು-ಮಣ್ಣು ಹರಡಿದೆ, ಹಡಗಲಿಯಲ್ಲಿ ಕಪ್ಪು ಜೇಡಿಮಣ್ಣು, ಬಳ್ಳಾರಿಯಾದ್ಯಂತ ಕಪ್ಪು ಮಣ್ಣು ಕಂಡಬರುತ್ತದೆ.[೫೭]

**ವ್ಯವಸಾಯ :** ೨೦೦೫-೦೬ರ ಕೃಷಿಗಣತಿಯಂತೆ ಜಿಲ್ಲೆಯಲ್ಲಿ ಒಟ್ಟು ೫,೪೮,೫೦೦ ಹೆಕ್ಟೇರ್ ಭೂ ವಿಸ್ತೀರ್ಣವಿದ್ದು, ೨,೬೧,೯೫೦ ಭೂಹಿಡುವಳಿದಾರರಿದ್ದಾರೆ. ಅದರಲ್ಲಿ ೯೬,೧೨೧ ಅತೀ ಸಣ್ಣ ಭೂಹಿಡುವಳಿದಾರರು ೪೯,೬೨೫ ಹೆಕ್ಟೇರ್ ಭೂ ವಿಸ್ತೀರ್ಣ ಹೊಂದಿದ್ದು, ೧ ಹೆಕ್ಟೇರ್‌ಗಿಂತ ಕಡಿಮೆ ಭೂಮಿಯನ್ನು ಹೊಂದಿದ್ದಾರೆ. ೭೬,೧೧೦ ಸಣ್ಣ ಭೂಹಿಡುವಳಿದಾರರು, ೧,೦೮,೯೨ ಹೆಕ್ಟೇರ್ ಭೂಮಿಯನ್ನು ಹೊಂದಿದ್ದು, ತಲಾ ಒಬ್ಬೊಬ್ಬ ರೈತರು ೧ ರಿಂದ ೨ ಹೆಕ್ಟೇರ್ ಭೂಮಿಯ ಒಡೆಯರಾಗಿದ್ದಾರೆ. ೫೫,೫೪೪ ಅರೆ ಮಧ್ಯಮ ಹಿಡುವಳಿದಾರರು ೧,೫೧,೬೫೪ ಹೆಕ್ಟೇರ್ ಭೂಮಿಯನ್ನು ಹೊಂದಿದ್ದು, ತಲಾ ಒಬ್ಬೊಬ್ಬ ರೈತರು ೨ ರಿಂದ ೪ ಹೆಕ್ಟೇರ್ ಭೂಮಿಯ ಒಡೆಯರಾಗಿದ್ದಾರೆ. ೨೯,೮೨೮ ಮಧ್ಯಮ ಹಿಡುವಳಿದಾರರು ೧,೭೩,೪೭೬ ಹೆಕ್ಟೇರ್ ಭೂಮಿಯನ್ನು ಹೊಂದಿದ್ದು, ತಲಾ ಒಬ್ಬೊಬ್ಬ ರೈತರಿಗೆ ೪ ರಿಂದ ೧೦ ಹೆಕ್ಟೇರ್ ಭೂಮಿ ಲಭ್ಯವಾಗಿದೆ. ೪,೩೪೭ ದೊಡ್ಡ ಹಿಡುವಳಿದಾರರು ೬೪,೭೫೩ ಹೆಕ್ಟೇರ್ ಭೂಮಿ ಹೊಂದಿದ್ದು, ತಲಾ ಒಬ್ಬೊಬ್ಬ ರೈತರಿಗೆ ೧೦ ಹೆಕ್ಟೇರ್‌ಗಿಂತ ಹೆಚ್ಚು ಭೂಮಿಯಿದೆ. ಜಿಲ್ಲೆಯ ಒಟ್ಟು

ಭೂಮಿಯಲ್ಲಿ ೧,೮೮,೩೫೯ ಹೆಕ್ಟೇರ್ ಭೂಮಿಯು ನೀರಾವರಿಯಾಗಿದ್ದು, ಉಳಿದ ೨,೪೭,೭೧೮ ಹೆಕ್ಟೇರ್ ಭೂಮಿಯು ಮಳೆಯಾಶ್ರಿತ ಭೂಮಿಯಾಗಿದೆ.[೫೮]

**ಬೆಳೆಗಳು :** ಈ ಜಿಲ್ಲೆಯ ಪ್ರಮುಖ ಬೆಳೆಗಳೆಂದರೆ ಭತ್ತ, ಜೋಳ, ಸಜ್ಜೆ, ಮುಸುಕಿನಜೋಳ, ರಾಗಿ, ಗೋಧಿ, ತೊಗರಿ, ಉದ್ದು, ಅಲಸಂಧಿ, ಕಡಲೆ, ಶೇಂಗಾ, ಹತ್ತಿ, ಕಬ್ಬು, ಸೂರ್ಯಕಾಂತಿ ಮುಂತಾದವು.

**ಅರಣ್ಯ ಪ್ರದೇಶ :** ಜಿಲ್ಲೆಯು ೯೭,೦೧೭ ಹೆಕ್ಟೇರ್ ಅರಣ್ಯ ಪ್ರದೇಶವನ್ನು ಹೊಂದಿದ್ದು,[೫೯] ಸಂಡೂರಿನಲ್ಲಿ ಶ್ರೀಗಂಧ ಮತ್ತು ಬೀಟೆ ಮರಗಳಿವೆ.

**ಜಲಮೂಲಗಳು :** ಬಳ್ಳಾರಿಯಲ್ಲಿಯೇ ಅತ್ಯಂತ ಪ್ರಮುಖ ನದಿ ತುಂಗಾಭದ್ರಾ, ಈ ನದಿಗೆ ಪುರಾಣಗಳ ಕಾಲದಲ್ಲಿ 'ಪಂಪ' ಎಂದು ಕರೆಯಲಾಗುತ್ತಿದ್ದು, ಹಂಪಿಯಲ್ಲಿ ಪಂಪತೀರ್ಥವೆಂದು ಕರೆಯುತ್ತಾರೆ. ಈ ನದಿಯು ಚಿಕ್ಕಮಂಗಳೂರಿನ ಪಶ್ಚಿಮ ಬೆಟ್ಟಗಳಲ್ಲಿ ಒಂದಾದ ವರಹಾ ಪರ್ವತದಲ್ಲಿ ತುಂಗಾ ಮತ್ತು ಭದ್ರಾ ನದಿಗಳು ಹುಟ್ಟಿ ಹರಿಯುತ್ತವೆ. ಶಿವಮೊಗ್ಗ ಜಿಲ್ಲೆಯಿಂದ ೮ ಮೈಲಿ ದೂರದಲ್ಲಿರುವ ಕೂಡಲಿಯಲ್ಲಿ ಸೇರಿ, ಹರಿಹರ ಹರಪನಹಳ್ಳಿಯ ಮೂಲಕ ಬಳ್ಳಾರಿ ಜಿಲ್ಲೆಯಿಂದ ಆಂಧ್ರಪ್ರದೇಶಕ್ಕೆ ಹರಿಯುತ್ತದೆ. ಈ ನದಿಗೆ ಬಳ್ಳಾರಿಯ ಮಲ್ಲಾಪುರದಲ್ಲಿ ತುಂಗಾಭದ್ರಾ ಅಣೆಕಟ್ಟು ನಿರ್ಮಿತವಾಗಿದೆ. ನದಿಯ ನೀರು ತುಂಬಾ ರುಚಿಯುತಕರವಾಗಿದ್ದು 'ಗಂಗಾಸ್ನಾನ ತುಂಗಾಪಾನ' ಎಂಬ ನಾಣ್ನುಡಿಯಿದೆ.[೬೦] ಈ ನದಿಯ ಜೊತೆಗೆ ಹಗರಿ (ವೇದಾವತಿ) ಚಿನ್ನಹಗರಿ ಹಳ್ಳಗಳು ಹರಿಯುತ್ತಿದ್ದು, ಹಗ್ಗನೂರು ತೊರೆ, ಹಂಪಸಾಗರ ಹೊಳೆ, ಚೆಲ್ಲ ಹುಣಸಿಹೊಳೆ, ಗೌರಿಪುರ ಹೊಳೆ, ನಾರಿಹಳ್ಳ ಪ್ರಮುಖ ತೊರೆಗಳಾಗಿವೆ. ಜಿಲ್ಲೆಯಲ್ಲಿ ೪೫೬ ಕಿ.ಮೀ ಉದ್ದದ ಕಾಲುವೆಗಳಿದ್ದು ೯೧,೮೬೨ ಹೆಕ್ಟೇರ್ ಭೂಮಿಗೆ, ೭,೬೫೯ ಬಾವಿಗಳಿಂದ ೫,೩೩೦ ಹೆಕ್ಟೇರ್ ಭೂಮಿಗೆ, ೧೪೯ ಕೆರೆಗಳಿಂದ ೨,೫೨೦ ಹೆಕ್ಟೇರ್ ಭೂಮಿಗೆ ನೀರನ್ನು ಒದಗಿಸಲಾಗಿದೆ.[೬೧]

**ಖನಿಜ ಸಂಪತ್ತು :** ಬಳ್ಳಾರಿ ಜಿಲ್ಲೆಯು ಸಂಪತ್ತಿನ ನೆಲೆವೀಡಾಗಿದ್ದು, ದೇವಗಿರಿ, ರಾಮಘಡ, ಸುಬ್ರಾಯನಹಳ್ಳಿಯಲ್ಲಿ ಮ್ಯಾಂಗನೀಸ್. ಸಂಡೂರು, ನಂದಿಹಳ್ಳಿ, ಹೊಸಪೇಟೆ ತಾಲ್ಲೂಕಿನಾದ್ಯಂತ ಕಬ್ಬಿಣದ ಅದಿರು. ಚಿನ್ನಾಪುರ, ರಾಮಘಟ್ಟದಲ್ಲಿ ತಾಮ್ರ. ತೋರಣಗಲ್ಲಿನಲ್ಲಿ ಮ್ಯಾಗ್ನಸೈಟ್. ಚಿನ್ನಹಳ್ಳಿ, ಹಿರೇಹಡಗಲಿ, ಉತ್ತನೂರು, ತಾಳೂರಲ್ಲಿ ಜಿಪ್ಸಮ್. ಮಲ್ಲಪ್ಪನಗುಡ್ಡ, ತೋರಣಗಲ್ಲು, ದೇವಾಲಾಪುರದಲ್ಲಿ ಸುಣ್ಣದಕಲ್ಲು. ಅರಸಾಪುರ, ನೀಲಗುಂದದಲ್ಲಿ ಬಳಪದ ಕಲ್ಲು. ಜಂಬುನಾಥಹಳ್ಳಿ, ವ್ಯಾಸನಕೆರೆ, ಕರಡಿಕೊಳ್ಳದಲ್ಲಿ ರೆಡ್ ಓಕರ್. ಗಾದಿಗನೂರು, ಅಂಕಮನಾಳ, ರಾಜಪುರ, ನಾಗಲಾಪುರದಲ್ಲಿ ಬೆಣಚುಕಲ್ಲು.[೬೨] ದೇವಗೊಂಡನಹಳ್ಳಿ, ಮಲ್ಲಪ್ಪನ ಗುಡ್ಡದಲ್ಲಿ ವಜ್ರದ ನಿಕ್ಷೇಪಗಳು ದೊರೆಯುತ್ತವೆ.[೬೩]

**ಪ್ರಾಗೈತಿಹಾಸ ಕಾಲ :** ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆಯನ್ನು ಪ್ರಾಗೈತಿಹಾಸದ ಕಾಲದವರೆಗೆ ಅಲ್ಲಿ ಸಿಕ್ಕಿರುವ ಪುರಾತತ್ವ ನೆಲೆಗಳಿಂದ ತಿಳಿಯಬಹುದಾಗಿದೆ. ಬಳ್ಳಾರಿ ತಾಲೂಕಿನ

ಬಾದನಹಟ್ಟಿಗುಡ್ಡ, ಬಳ್ಳಾರಿ, ಬೆಳಗಲ್ಲು, ಕಕ್ಕಬೇವಿನಹಳ್ಳಿ, ಕುಡಿತಿನಿ, ಕಪ್ಪಗಲ್ಲು, ಸಂಗನಕಲ್ಲು, ಹಳಕುಂದಿ, ಹಳೆನೆಲ್ಲುಡಿ, ಕುರಗೋಡು. ಹೊಸಪೇಟೆ ತಾಲೂಕಿನ ಕಮಲಾಪುರ, ಗಾದಿಗನೂರು, ಕಾರಿಗನೂರು, ತಿಮ್ಮಲಾಪುರ, ಭುವನಹಳ್ಳಿ, ಹಂಪಿ, ಇಂಗಳಗಿ, ಕಾಕುಬಾಳ, ಬೆಳಗೋಡುಹಾಳು, ನಿಂಬಾಪುರ, ವೆಂಕಟಾಪುರ, ಹಳಕುಂದಿ. ಶಿರಗುಪ್ಪ ತಾಲೂಕಿನ ನಿಟ್ಟೂರು, ಕೊಂಚಗೇರಿ, ಕೋಟೆಕೊಲ್ಲುದುರ್ಗ, ತೆಕ್ಕಲಕೋಟೆ, ನಿಟ್ಟೂರು. ಸಂಡೂರು ತಾಲೂಕಿನ ಕುರೆಕುಪ್ಪ. ಜೋಗ, ಮಲ್ಲಾಪುರ, ಅಪ್ಪಲಾಪುರ, ಅಯ್ಯನಹಳ್ಳಿ, ಕೋಳಾಳು, ತೋರಣಗಲ್ಲು, ಮಾದರಹಳ್ಳಿ, ಯಶವಂತಪುರ, ರಾಜಾಪುರ, ರಾಂಪುರ, ದಾರೋಜಿ, ಲಿಂಗದಹಳ್ಳಿ, ಬೈರನಾಯಕನಹಳ್ಳಿ. ಹಡಗಲಿ ತಾಲೂಕಿನ ಕುರುವತ್ತಿ, ಮಾಗಳ, ಮೈಲಾರ, ರಾಜವಾಳ, ಕೊಟ್ನಕಲ್ಲು, ಹುಲಿಗುಡ್ಡ. ಹಗರಿಬೊಮ್ಮನಹಳ್ಳಿ ತಾಲೂಕಿನ ಹಂಪಸಾಗರ, ಕೊಗಳಿ ಮುಂತಾದ ಆದಿ ಹಳೆಶಿಲಾಯುಗ, ಮಧ್ಯ ಶಿಲಾಯುಗ, ನೂತನ ಶಿಲಾಯುಗ, ತಾಮ್ರಯುಗ, ಬೃಹತ್ ಶಿಲಾಯುಗದ ನೆಲೆಗಳು ದೊರೆತಿವೆ.[೬೪]

**ಪೌರಾಣಿಕ ಹಿನ್ನೆಲೆ:** ಪಂಪಾಕ್ಷೇತ್ರವೆಂದೇ ಹೇಳಲಾಗುವ ಈ ಜಿಲ್ಲೆಯ ಅನೇಕ ಸ್ಥಳಗಳ ಉಲ್ಲೇಖ ಪುರಾಣಗಳಲ್ಲಿ ಹಾಗೂ ಧಾರ್ಮಿಕ ಗ್ರಂಥಗಳಲ್ಲಿದೆ. ಅವುಗಳಲ್ಲಿ ಮಾಲ್ಯವಂತಗಿರಿ, ಋಷ್ಯಮುಖಿ ಕಿಷ್ಕಿಂದಾದ್ರಿ, ಹೇಮಕೂಟ, ವಿಪ್ರಕೂಟ, ಗಂಧರ್ವಗಿರಿ, ಜಂಬುನಾಥಗಿರಿ, ಸೋಮಪರ್ವ, ಪಂಪಸರೋವರ ಕಾರ್ತಿಕೇಯನವನ, ಶಬರಿಗುಹೆ, ಅಂಜನಾದ್ರಿ, ಆನೆಗೊಂದಿ, ಸುಗ್ರೀವಗುಹೆ, ಸೀತೆಸೆರಗು, ಮತಂಗಪರ್ವತ, ರತ್ನಕೂಟ ಕಿಷ್ಕಿಂದೆ[೬೫] ಮುಂತಾದವುಗಳು ಕಂಡುಬರುತ್ತವೆ.

**ಮೌರ್ಯರ ಕಾಲ :** ಪ್ರಾಚೀನ ಭಾರತವನ್ನು ಏಕಚಕ್ರಾಧಿಪತ್ಯಕ್ಕೆ ಒಳಪಡಿಸಿ, ಆಳ್ವಿಕೆ ಮಾಡಿದ ಮೌರ್ಯರು ಬಳ್ಳಾರಿ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವುದು, ಈ ಜಿಲ್ಲೆಯಲ್ಲಿ ಸಿಕ್ಕಿರುವ ಉದಯಗೊಳಂ, ನಿಟ್ಟೂರು, ಶಾಸನಗಳಿಂದ ದೃಡಪಡುತ್ತದೆ. ಉದಯಗೊಳಂ ಶಾಸನಗಳಲ್ಲಿ 'ರಾಜಾ ಅಸೋಕೊ' ಎಂದು ಬರೆಯಲಾಗಿದೆ.[೬೬]

**ಶಾತವಾಹನರ ಕಾಲ :** ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿದ ಶಾತವಾಹನರ ಕಾಲದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರದ ಭಾಗಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವು. ಬಳ್ಳಾರಿ ಪ್ರದೇಶ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತೆನ್ನುವುದನ್ನು ಪಲ್ಲವರಿಗೆ ಸಂಬಂಧಿಸಿದ ಹಿರೆಹಡಗಲಿಯ ಪ್ರಾಕೃತ ಶಾಸನದಲ್ಲಿ 'ಶಾತವಾಹನೀರಠ್ಠ' ಮತ್ತು ಈ ಪ್ರದೇಶಕ್ಕೆ ಹೊಂದಿಕೊಂಡ ಮೆಕಡೋಣಿ ಶಾಸನದಲ್ಲಿ 'ಶಾತವಾಹನೀಹಾರ'ವೆಂಬ ಉಲ್ಲೇಖವಿರುವ ಪುರಾವೆಯಾಗಿದೆ.[೬೭]

**ಪಲ್ಲವರ ಕಾಲ :** ಕಂಚಿಯನ್ನು ರಾಜಧಾನಿಯಾಗಿಟ್ಟುಕೊಂಡು ಆಳ್ವಿಕೆ ನಡೆಸಿರುವ ಪಲ್ಲವ ಸಾಮ್ರಾಜ್ಯದ ಶಾಸನಗಳು, ಹಿರೇಹಡಗಲಿ ಮತ್ತು ಬೆಳಗಲ್ಲಿಗಳಲ್ಲಿ ಸಿಕ್ಕಿರುವುದರಿಂದ ಈ ಪ್ರದೇಶವು ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ.೯೮೧ರ ಕಂಚಗೂರು ಬೆಳಗಲ್ಲು ಶಾಸನದಲ್ಲಿ ಈ ವಂಶದ ವೀರನೊಳಂಬ ಪಲ್ಲವಪೆರ್ಮಾನಡಿಯನ್ನು 'ಪಲ್ಲವಾನ್ವಯ ಶ್ರೀ

ಪೃಥ್ವೀವಲ್ಲಭ ಪಲ್ಲವ ಕುಳತಿಳಕನೇಕವ್ಯಾಕ್ಯಂ ಕಾಂಚೀಪುರವರೇಶ್ವರಂ ಶ್ರೀಮನ್ವೀರನೊಳಂಬಪಲ್ಲವ ಪೇರ್ಮಾಡಿದೇವರು' ಎಂದು ಉಲ್ಲೇಖವಿದೆ.

**ಕದಂಬರ ಕಾಲ** : ಬನವಾಸಿಯನ್ನು ರಾಜಧಾನಿಯನ್ನಾಗಿಟ್ಟುಕೊಂಡು ಆಳ್ವಿಕೆ ನಡೆಸಿರುವ, ಕದಂಬರ ಕಾಲದಲ್ಲಿ ಸಂಡೂರನ್ನು ಸ್ವಾಮಿಮಲೆ ಎಂದು ಕರೆಯಲಾಗುತ್ತಿದ್ದು,[೧೮] ಈ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿತ್ತು.

**ಗಂಗರ ಕಾಲ** : ಗಂಗರ ಆಳ್ವಿಕೆಯ ಕಾಲದಲ್ಲಿ ಈ ಪ್ರದೇಶ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿತ್ತೆಂದು ೧೦೫೫ರ ಕೋಗಳಿ ಶಾಸನ, ೧೦೮೩ರ ಅಂಬಳಿ ಶಾಸನ ಪುಷ್ಠಿ ನೀಡುತ್ತದೆ.

**ಬಾದಾಮಿ ಚಾಲುಕ್ಯರ ಕಾಲ** : ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿದ ಈ ಮನೆತನ, ಹಾಗೂ ಪ್ರಸಿದ್ಧ ಅರಸನಾದ ಇಮ್ಮಡಿ ಪುಲಿಕೇಶಿಯು ಈ ಪ್ರದೇಶವನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡಿದ್ದನೆಂದು ಕುರುಗೋಡಿನ ಶಾಸನದಿಂದ[೧೯] ತಿಳಿಯುತ್ತದೆ.

**ರಾಷ್ಟ್ರಕೂಟರ ಕಾಲ** : ರಾಷ್ಟ್ರಕೂಟರ ಕಾಲದಲ್ಲಿ ಬಳ್ಳಾರಿ ಜಿಲ್ಲೆಯು ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು, ಕ್ರಿ.ಶ.೯೨೨ರ ಕಡಬಗೆರೆ ವೀರಗಲ್ಲು ಶಾಸನ, ಕ್ರಿ.ಶ.೯೩೧ರ ಚಿರಸ್ತಿಹಳ್ಳಿ ಶಾಸನ, ಕ್ರಿ.ಶ.೯೪೭ರ ಕುಡುತಿನಿ ಶಾಸನ, ಕೋಳಗಲ್ಲು ಶಾಸನ, ಸಂಡೂರಿನ ಕುಮಾರ ಸ್ವಾಮಿ ಬೆಟ್ಟದಲ್ಲಿ ಸಿಕ್ಕಿರುವ ಮೂರನೇ ಬಲ್ಲಾಳನ ಶಾಸನಗಳಿಂದ ಧೃಡಪಡುತ್ತದೆ.[೨೦]

**ಕಲ್ಯಾಣಿ ಚಾಲುಕ್ಯರು** : ಕಲ್ಯಾಣಿ ಚಾಲುಕ್ಯರು ಈ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿದ್ದರೆಂದು, ಇವರ ಕಾಲದ ಕುಡುತಿನಿ ಶಾಸನ, ಬೆಳಗಲಿ ಶಾಸನ, ಕೊಗಳಿ ಶಾಸನ, ಹಾಗೂ ೨ನೇ ಜಯಸಿಂಹನ ಕತ್ತೆಬೆನ್ನೂರು ಶಾಸನ, ತಲವಾಗಿಲು ಶಾಸನ, ಚಿಮ್ಮನಹಳ್ಳಿ ಶಾಸನ, ಓರವಾಯಿ ಶಾಸನ, ಮಸಲವಾಡ ಶಾಸನ. ಸೋಗಿ ಶಾಸನ, ನಾರಿಹಳ್ಳಿ ಶಾಸನಗಳಿಂದ ತಿಳಿದುಬರುತ್ತದೆ

**ಕಲಚೂರಿಗಳು** : ೩೫ ವರ್ಷಗಳ ಕಾಲ ಆಳ್ವಿಕೆ ಮಾಡಿರುವ ಈ ಮನೆತನದ ಬಿಜ್ಜಳನ ಶಾಸನಗಳು ನೀಲಗುಂದ ಮತ್ತು ತೆಕ್ಕಲಕೋಟೆಯಲ್ಲಿ ಲಭ್ಯವಾಗಿದ್ದು, ಇವರು ಆಳ್ವಿಕೆ ಮಾಡಿರುವುದು ದೃಡಪಡುತ್ತದೆ.[೨೧]

**ಸೇವುಣರು** : ಈ ಪ್ರದೇಶವನ್ನು ಸೇವುಣರು ಆಳ್ವಿಕೆ ಮಾಡಿರುವುದು ಇಲ್ಲಿ ಸಿಕ್ಕಿರುವ ಶಾಸನಗಳಿಂದ ಧೃಡಪಡುತ್ತದೆ. ಅವುಗಳೆಂದರೆ ಸಿಂಘಣನ ಕುರುವತ್ತಿ ಶಾಸನ, ಕೊಟ್ನಕಲ್ಲು ಶಾಸನ, ಚಿಮ್ಮನಹಳ್ಳ ಶಾಸನ, ಹಲುವಾಗಲು ಶಾಸನ.

**ಕುಮ್ಮಟದುರ್ಗದ ನಾಯಕ ಅರಸರು** : ಹೊಯ್ಸಳರು ಮತ್ತು ಸೇವುಣರ ಕಾಲದಲ್ಲಿ ಮಧ್ಯಗಾಮಿ ರಾಜ್ಯದಂತಿದ್ದ ಕುಮ್ಮಟದುರ್ಗದ ನಾಯಕರು ಕಂಪಲಿಯಿಂದ ಬಳ್ಳಾರಿ ಜಿಲ್ಲೆಯಿಂದ ಆಳ್ವಿಕೆ ಮಾಡುತ್ತಿದ್ದರು. ದೆಹಲಿಯ ಸುಲ್ತಾನರು ಆನೆಗೊಂದಿಗೆ ಮುತ್ತಿಗೆ ಹಾಕಿದಾಗ ಅಲ್ಲಿಯ ಒಡೆಯನಾದ ಕಂಪಿಲನು ವೀರಾವೇಶದಿಂದ ಹೋರಾಡಿ ಹತ್ತಿಕ್ಕಿದನು. ಕಂಪಲಿರಾಯನು ತನ್ನ ಮಗನಾದ ಕುಮಾರರಾಮನ ಸಹಾಯದಿಂದ ಯುದ್ಧದಲ್ಲಿ ಜಯಗಳಿಸಿ ಮುಸ್ಲಿಂರಿಗೆ

ಸಿಂಹಸ್ವಪ್ನವಾಗಿದ್ದನು. ಈ ಕಂಪಲಿರಾಯನಿಗೆ ಕುಮ್ಮಟದುರ್ಗದ ಕೋಟೆಯಂತೆ, ಸಂಡೂರು ತಾಲೂಕಿನಲ್ಲಿರುವ ಹೊಸಮತಿದುರ್ಗವೂ ಒಂದು ಶಕ್ತಿಯುತವಾದ ಕೋಟೆಯಾಗಿತ್ತೆಂದು ಹೊಸಮತಿದುರ್ಗದಲ್ಲಿರುವ ಶಾಸನಗಳಿಂದ ತಿಳಿಯಬಹುದು.

**ಹೊಯ್ಸಳರ ಕಾಲ :** ಹೊಯ್ಸಳರು ಬಳ್ಳಾರಿಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವುದು. ಇಲ್ಲಿ ಸಿಕ್ಕಿರುವ ಹೊಳಲು ಶಾಸನ, ಕುರುವತ್ತಿ ಶಾಸನ, ಬೆಣ್ಣೆಹಳ್ಳಿ ಶಾಸನದಿಂದ ತಿಳಿಯಬಹುದು.

**ನೊಳಂಬರ ಕಾಲ :** ಕ್ರಿ.ಶ. ೮ನೇ ಶತಮಾನದಲ್ಲಿ ಆಳ್ವಿಕೆ ಮಾಡಿರುವ ನೊಳಂಬರು ಬಳ್ಳಾರಿ ಜಿಲ್ಲೆಯ ಕಂಪಲಿಯನ್ನು ಆಡಳಿತ ಕೇಂದ್ರವಾಗಿಟ್ಟುಕೊಂಡಿದ್ದರು.

**ವಿಜಯನಗರ ಸಾಮ್ರಾಜ್ಯ :** ಹರಿಹರ ಹಕ್ಕಬುಕ್ಕರಿಂದ ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ ಆನೆಗೊಂದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಸಾಮ್ರಾಜ್ಯ ಬೆಳೆಯುತ್ತಾ ಸಮೃದ್ಧವಾದಂತೆ ರಾಜಧಾನಿಯನ್ನು ಹಂಪಿಗೆ ವರ್ಗಾಯಿಸಲಾಯಿತು. ಈ ಸಾಮ್ರಾಜ್ಯವು ಬಳ್ಳಾರಿ ಜಿಲ್ಲೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವುದಕ್ಕೆ ಹಂಪಿಯಲ್ಲಿರುವ ವಿರೂಪಾಕ್ಷ ದೇವಾಲಯ, ಹಜಾರ ರಾಮ ದೇವಾಲಯ, ವಿಜಯವಿಠಲ ದೇವಾಲಯ, ಲೋಟಸ್ ಮಹಲ್, ಪುಷ್ಕರಣಿ, ಆನೆಲಾಯಗಳು, ರಾಣಿಯರ ಸ್ನಾನಗೃಹ ಮುಂತಾದ ವಾಸ್ತುಶಿಲ್ಪದ ಕೊಡುಗೆಗಳು ಕೈಗನ್ನಡಿಯಂತಿವೆ.[೨]

**ಪಾಳೆಯಗಾರರು:** ಜಿಲ್ಲೆಯನ್ನು ಪಾಳೆಯಗಾರರಾದ ಗುಡೇಕೋಟೆ, ಜರಿಮಲೆ, ಹರಪನಹಳ್ಳಿ, ಉಜ್ಜಿನಿ, ಬಾಂಡ್ರಾವಿ, ಕುಡುತಿನಿ, ದಾರೋಜಿ ವೀರನದುರ್ಗ ಮೊದಲಾದ ಪಾಳೆಯಪಟ್ಟಗಳು ೧೫೬೫ ರಿಂದ ೧೮೦೦ರವರೆಗೆ ಆಳ್ವಿಕೆ ನಡೆಸಿವೆ. ೧೮೭೮ ರಲ್ಲಿ ಶಿವಾಜಿಯು ಈ ಪ್ರದೇಶವನ್ನು ಆಳ್ವಿಕೆ ಮಾಡಿದ್ದು, ನಂತರದ ೧೨ ವರ್ಷಗಳ ಕಾಲ ಔರಂಗಜೇಬ್‌ನ ಆಳ್ವಿಕೆಗೆ ಒಳಪಟ್ಟು, ಪಾಳೆಯಗಾರರ ಮರು ಆಳ್ವಿಕೆ ಆರಂಭವಾಯಿತು, ಕೊನೆಗೆ ಹೈದರನ ವಶವಾದ ಈ ಪ್ರದೇಶವನ್ನು ಟಿಪ್ಪುಸುಲ್ತಾನ್ ಆಳ್ವಿಕೆ ನಡೆಸಿದನು. ಈ ಅವಧಿಯಲ್ಲಿ ಮರಾಠರು, ನಿಜಾಮ ಮೊದಲಾದವರೊಂದಿಗೆ ನಡೆದ ಯುದ್ಧ ಮತ್ತು ಒಪ್ಪಂದಗಳನ್ನು ನೋಡುತ್ತೇವೆ. ನಂತರ ಕುರಗೋಡಿನ ಸಿಂಧರು, ಸೊಂಡೂರು ಸಂಸ್ಥಾನಿಕರು ಹೀಗೆ ಸಣ್ಣಪುಟ್ಟ ರಾಜಮನೆತನಗಳು ಆಳ್ವಿಕೆ ನಡೆಸಿವೆ.

**ವಸಾಹತುಶಾಹಿ ಕಾಲ:** ಕ್ರಿ.ಶ. ೧೭೯೯ ಮೇ ೪ರಂದು ಟಿಪ್ಪು ಮರಣದ ತರುವಾಯ ಈ ಪ್ರದೇಶವನ್ನು ಬ್ರಿಟೀಷರು ವಶಪಡಿಸಿಕೊಂಡಿರುತ್ತಾರೆ. ಅನಂತರ ಮದ್ರಾಸ್ ಅಧಿಪತ್ಯಕ್ಕೆ ಸೇರಿದ ಬಳ್ಳಾರಿ, ಅನಂತಪುರ, ಕರ್ನೂಲು, ಕಡಪಗಳನ್ನು ದತ್ತಮಂಡಲವಾಗಿ ಬ್ರಿಟೀಷರಿಗೆ ಹೈದರಬಾದ್‌ನ ನಿಜಾಮ ಬಿಟ್ಟುಕೊಟ್ಟು ಸಹಾಯಕ ಸೈನ್ಯ ಪದ್ಧತಿಗೆ ಸಹಿ ಹಾಕುತ್ತಾನೆ. ಅಂದಿನಿಂದ ಪ್ರಧಾನ ಕಲೆಕ್ಟರ್ ಆಗಿ ಸರ್. ಥಾಮಸ್ ಮನ್ರೋ ೧೮೦೭ರವರೆಗೆ ಆಳ್ವಿಕೆ ನಡೆಸುತ್ತಾನೆ. ಹೀಗೆ ೧೯೪೭ರವರೆಗೆ ಹಾಗೂ ೧೯೪೭ ರಿಂದ ೧೯೫೬ರವರೆಗೆ ೧೧೩ ಕಲೆಕ್ಟರ್‌ಗಳು ಇಲ್ಲಿ ಆಳ್ವಿಕೆ ಮಾಡುತ್ತಾರೆ.[೩] ಹಾಗೆಯೇ ಇವರ ವಿರುದ್ಧ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣದ ಚಳವಳಿಗಳು ನಡೆದಿವೆ.

ಕ್ರಿ.ಶ. ೧೦ನೇ ಶತಮಾನದ ಪೂರ್ವದಲ್ಲಿ ಬಳ್ಳಾರಿಯ ಹೆಸರು ಶಾಸನ ಹಾಗೂ ಕಾವ್ಯಗಳಲ್ಲಿ, ಉಲ್ಲೇಖಿತವಾಗಿದೆ. ಹಾಗೇಯೆ ಈ ಭಾಗದ ಚರಿತ್ರೆಯು ಸಹಾ ವಿಸ್ತೃತ ಅಧ್ಯಾಯನಕ್ಕೆ ಆಸ್ಪದ ನೀಡಿದೆ. ವಿವಿಧ ಕಾಲಘಟ್ಟಗಳಲ್ಲಿ ಬಳ್ಳಾರಿ ಪ್ರದೇಶವನ್ನು ಸ್ಥಳೀಯ ಪಾಳೆಗಾರರು, ಮರಾಠರು, ನಿಜಾಮ ಹಾಗೂ ಬ್ರಿಟಿಷರು ಆಳ್ವಿಕೆ ನಡೆಸಿರುವುದು ಸ್ಪಷ್ಟ.

## ಕೊನೆ ಟಿಪ್ಪಣಿಗಳು

೧. ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ ಬುಕ್, ಚಿತ್ರದುರ್ಗ, ೨೦೧೧, ಪು.೧೪
೨. ೨೦೧೫-೧೬ರ ಚಿತ್ರದುರ್ಗ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.೧೬
೩. ಅದೇ, ಪು.೧೩೬
೪. ಅದೇ, ಪು.೧೪೦
೫. ಅದೇ, ಪು.೧೪೪
೬. ಅದೇ, ಪು.೧೪೮
೭. ಅದೇ, ಪು.೧೫೨
೮. ಕನ್ನಡ ವಿಷಯ ವಿಶ್ವಕೋಶ, ಪು,೭೧
೯. ಅದೇ, ಪು.೬
೧೦. ಸೆಂಟ್ರಲ್ ಗ್ರೌಂಡ್ ವಾಟರ್ ಬೋರ್ಡ್ ರಿಪೋರ್ಟ್, ೨೦೦೭, ಚಿತ್ರದುರ್ಗ, ಪು,೦೩
೧೧. ೨೦೧೫-೧೬ರ ಚಿತ್ರದುರ್ಗ ಜಿಲ್ಲಾ ಅಂಕಿ-ಅಂಶಗಳ ನೋಟ, ಪು.೨೦
೧೨. ಎಂ.ಜಿ. ಈಶ್ವರಪ್ಪ, ಚಿತ್ರದುರ್ಗ ಜಿಲ್ಲಾ ವ್ಯವಸಾಯ ಜಾನಪದ,೧೯೯೫, ಪು,೧೧೨
೧೩. ಬಿ.ಎಸ್.ಸತ್ಯನ್, ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್,೧೯೬೭, ಪು,೧೨೨
೧೪. ಟಿ. ಗಿರಿಜ, ಚಿತ್ರದುರ್ಗ ಜಿಲ್ಲಾ ದರ್ಶಿನಿ,೧೯೯೧, ಪು,೩-೪
೧೫. ಬಿ. ರಾಜಶೇಖರಪ್ಪ, ಪ್ರಾಚೀನ ಚಿತ್ರದುರ್ಗ, ೨೦೦೩, ಪು,೭೭
೧೬. ಎಂ.ಎಸ್. ಪುಟ್ಟಣ್ಣ, ಚಿತ್ರದುರ್ಗ ಪಾಳಯಗಾರರು, ೧೯೨೪,ಪು,೦೮
೧೭. ಎಸ್.ಜಿ. ರಾಮದಾಸ ರೆಡ್ಡಿ, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಕ ಅಧ್ಯಯನ,೨೦೦೯, ಪು,೩
೧೮. ಇಂಡಿಯನ್ ಆರ್ಕಿಯಾಲಾಜಿಕಲ್ ರಿಪೋರ್ಟ್ಸ್. ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್, ೧೯೪೦ರ ವರದಿ, ಪು.೪
೧೯. ಕನ್ನಡ ವಿಷಯ ವಿಶ್ವಕೋಶ, ಪು.೨೦೪
೨೦. ದೀಕ್ಷಿತ್ ಸಿ.ಕೆ.ವೈ, ಚಿತ್ರದುರ್ಗದಲ್ಲಿ ಚಾಳುಕ್ಯರ ಆಳ್ವಿಕೆ, ೧೯೭೬, ಪು,೧೮
೨೧. ಸತ್ಯನ್ ಬಿ.ಎನ್., ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್, ಪು೩೫
೨೨. ಕೃಷ್ಣಮೂರ್ತಿ ಎಂ.ಎಸ್., ದಿ ನೊಳಂಬಾಸ್, ೧೯೮೦, ಪು,೧೩೬
೨೩. ಸತ್ಯನ್ ಬಿ.ಎನ್., ಪೂರ್ವೋಕ್ತ, ಪು,೪೫
೨೪. ಎಫಿಗ್ರಾಫಿಯ ಕರ್ನಾಟಿಕ, ಸಂ. ೧೧, ಹೊಳಲ್ಕೆರೆ ಶಾಸನ ಸಂಖ್ಯೆ, ೨೪
೨೫. ಅದೇ, ಹೊಳಲ್ಕೆರೆ ಶಾಸನ ಸಂಖ್ಯೆ, ೫೬

೨೬. ಅದೇ, ಚಳ್ಳಕೆರೆ, ಶಾಸನ ಸಂಖ್ಯೆ, ೧೬
೨೭. ಅದೇ, ಮೊಳಕಾಲ್ಮೂರು, ಶಾಸನ ಸಂಖ್ಯೆ, ೨೦
೨೮. ರಾಜಶೇಖರ್ ಬಿ., ಪ್ರಾಚೀನ ಚಿತ್ರದುರ್ಗ, ೨೦೦೩, ಪು, ೧೨೮
೨೯. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚಿತ್ರ, ೨೦೦೯, ಪು,೨೧
೩೦. ೨೦೧೫-೧೬ರ ದಾವಣಗೆರೆ ಜಿಲ್ಲಾ ಅಂಕಿ-ಅಂಶಗಳ ನೋಟ, ಪು. ೧೧
೩೧. ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ ಬುಕ್, ದಾವಣಗೆರೆ, ೨೦೧೧, ಪು. ೧೭
೩೨. ೨೦೧೩-೧೪ನೇ ಸಾಲಿನ ದಾವಣಗೆರೆ ಜಿಲ್ಲೆಯ ಸಾಮಾಜಿಕ-ಆರ್ಥಿಕ ಅವಲೋಕನದ ವರದಿ, ಪು.೦೧
೩೩. ನಿಟ್ಟೂರು ಶಿವಸೋಮಪ್ಪ, ದಾವಣಗೆರೆ ಜಿಲ್ಲೆಯ ಪಾರಂಪರಿಕ ಕೃಷಿ ಪದ್ಧತಿ, ೨೦೧೫, ಪು. ೨೨
೩೪. ೨೦೧೩-೧೪ನೇ ಸಾಲಿನ ದಾವಣಗೆರೆ ಜಿಲ್ಲೆಯ ಸಾಮಾಜಿಕ-ಆರ್ಥಿಕ ಅವಲೋಕನದ ವರದಿ, ಪು. ೧೧
೩೫. ಸೆಂಟ್ರಲ್ ಗ್ರೌಂಡ್ ವಾಟರ್ ಬೋರ್ಡ್ ರಿಪೋರ್ಟ್, ೨೦೦೮, ದಾವಣಗೆರೆ, ಪು. ೦೫
೩೬. ೨೦೧೩-೧೪ನೇ ಸಾಲಿನ ದಾವಣಗೆರೆ ಜಿಲ್ಲೆಯ ಸಾಮಾಜಿಕ, ಆರ್ಥಿಕ ಅವಲೋಕನದ ವರದಿ, ಪು.೨೧
೩೭. ನಿಟ್ಟೂರು ಶಿವಸೋಮಪ್ಪ, ಪೂರ್ವೋಕ್ತ, ಪು.೨೧
೩೮. ೨೦೧೫-೧೬ ರ ದಾವಣಗೆರೆ ಜಿಲ್ಲಾ ಅಂಕಿ ಅಂಶಗಳ ನೋಟ, ಪು. ೨೮
೩೯. ಅದೇ, ಪು. ೨೯
೪೦. ೨೦೧೩-೧೪ನೇ ಸಾಲಿನ ದಾವಣಗೆರೆ ಜಿಲ್ಲೆಯ ಸಾಮಾಜಿಕ, ಆರ್ಥಿಕ ಅವಲೋಕನದ ವರದಿ, ಪು.೦೯
೪೧. ಐದನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ೨೦೧೩, ಪು.೦೯
೪೨. ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾ ದರ್ಶಿನಿ, ೧೯೯೧, ಪು,೨೮೭
೪೩. ಗಿರಿಜಾ ಟಿ., ಪೂರ್ವೋಕ್ತ, ಪು.೫೬೨
೪೪. ಸೋಮಶೇಖರ್ ಎಸ್.ವೈ., ಆಕನೂರು ಗ್ರಾಮದ ಬಳಿ ಆದಿ ಇತಿಹಾಸದ ಕುರುಹುಗಳು, ಇತಿಹಾಸ ದರ್ಶನ ಸಂ,೧೨, ೧೯೯೭, ಪು,೧೨
೪೫. ಎಪಿಗ್ರಾಫಿಯ ಕರ್ನಾಟಿಕ, ಸಂ. ೧೧, ಚಿತ್ರದುರ್ಗ ಶಾಸನ ಸಂಖ್ಯೆ ೯೦, ಪು.೧೬೨
೪೬. ಅದೇ ದಾವಣಗೆರೆ ಶಾಸನ ಸಂಖ್ಯೆ ೬೬
೪೭. ಅದೇ ದಾವಣಗೆರೆ ಶಾಸನ ಸಂಖ್ಯೆ ೧೭, ಪು.೭೨
೪೮. ಅದೇ ದಾವಣಗೆರೆ ಶಾಸನ ಸಂಖ್ಯೆ ೯೦, ಪು.೧೬೨
೪೯. ಅದೇ ಹೊನ್ನಾಳಿ ಶಾಸನ ಸಂಖ್ಯೆ, ೪೮
೫೦. ಅದೇ ದಾವಣಗೆರೆ ಶಾಸನ ಸಂಖ್ಯೆ, ೧೬೨
೫೧. ಅದೇ ದಾವಣಗೆರೆ ಶಾಸನ ಸಂಖ್ಯೆ, ೨೫
೫೨. ಅದೇ ಜಗಳೂರು ಶಾಸನ ಸಂಖ್ಯೆ, ೦೧
೫೩. ಟಿ. ಗಿರಿಜಾ, ಹೆಚ್.ಜಿ. ಶೋಭ(ಸಂ), ಸರಣ ಸಂಚಿಕೆ,೨೦೦೦, ಪು,೩೬

೫೪. ಕುಮಾರ್.ಬಿ.ಪಿ, ದಾವಣಗೆರೆ ಹತ್ತಿ ಗಿರಣಿ ಕಾರ್ಮಿಕರ ಚಳವಳಿಗಳು,೨೦೦೬, ಪುಟ.೨೫
೫೫. ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೧೬, ಪು. ೦೩
೫೬. ೨೦೧೫-೧೬ನೇ ಸಾಲಿನ ಬಳ್ಳಾರಿ ಜಿಲ್ಲೆಯ ಸಾಮಾಜಿಕ-ಆರ್ಥಿಕ ಅವಲೋಕನದ ವರದಿ, ಕರ್ನಾಟಕ ಸರ್ಕಾರ, ಪು. ೦೧
೫೭. ಅದೇ, ಪು. ೦೧
೫೮. ಅದೇ, ಪು. ೧೪
೫೯. ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೧೬, ಪು. ೨೬
೬೦. ಡಬ್ಲ್ಯೂ ಫ್ರಾನ್ಸಿಸ್, ಮದ್ರಾಸ್ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ಬಳ್ಳಾರಿ,೧೯೦೪, ಪು. ೦೬
೬೧. ೨೦೧೫-೧೬ನೇ ಸಾಲಿನ ಬಳ್ಳಾರಿ ಜಿಲ್ಲೆಯ ಸಾಮಾಜಿಕ-ಆರ್ಥಿಕ ಅವಲೋಕನದ ವರದಿ, ಕರ್ನಾಟಕ ಸರ್ಕಾರ, ಪು. ೧೭
೬೨. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪು. ೦೪
೬೩. ಡಬ್ಲ್ಯೂ ಫ್ರಾನ್ಸಿಸ್, ಪೂರ್ವೋಕ್ತ, ಪು. ೧೬
೬೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೧೨
೬೫. ಅದೇ, ಪು. ೧೮
೬೬. ಅಭಿಶಂಕರ್ ಕೆ., ೧೯೭೨, ಬಳ್ಳಾರಿ ಜಿಲ್ಲಾ ಗ್ಯಾಸೆಟಿಯರ್, ಪು, ೪೨
೬೭. ಅದೇ, ಪು, ೪೩
೬೮. ಅದೇ, ಪು, ೪೪
೬೯. ಅದೇ, ಪು, ೪೪
೭೦. ಅದೇ, ಪು, ೪೪
೭೧. ಅದೇ, ಪು, ೫೮
೭೨. ತಿಪ್ಪೇಸ್ವಾಮಿ ಡಿ.ಎಸ್., ಬಳ್ಳಾರಿ ಜಿಲ್ಲೆಯ ಜನಪದ ಗೀತ ಸಂಪ್ರದಾಯಗಳು, ೨೦೦೬, ಪು, ೦೯
೭೩. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೦೯, ಪು,೧೦

## ಅಧ್ಯಾಯ – ೩

# ಭೂ ಹಿಡುವಳಿ ಪದ್ಧತಿ ಮತ್ತು ಭೂ ಸುಧಾರಣೆಗಳು

ಕರ್ನಾಟಕದ ಜನರ ಜೀವನಾಡಿ ಕೃಷಿಯಾಗಿದೆ. ಕೃಷಿಯು ಮಾನವ ಸಮಾಜದ ಪ್ರಾಚೀನ ಹಾಗೂ ಮೂಲಭೂತ ಉದ್ಯಮ. ಜನತೆಗೆ ಆಹಾರೋತ್ಪನ್ನಗಳನ್ನು ಕೈಗಾರಿಕೆಗಳಿಗೆ ಕಚ್ಚಾಸಾಮಗ್ರಿಗಳನ್ನು ಒದಗಿಸುವ ಕೃಷಿಯು ವಿಶ್ವದ ಆರ್ಥಿಕ ಜೀವನದಲ್ಲಿ ಇಂದಿಗೂ ಪಾರಮ್ಯ ಹೊಂದಿದೆ. ಕವಿ ಕುಮಾರವ್ಯಾಸರವರ ಮಾತಿನಂತೆ ಕೃಷಿ ಎಲ್ಲಾ ಉದ್ಯೋಗಗಳಿಗಿಂತಲೂ ಮುಖ್ಯವಾದ ಉದ್ಯೋಗ. ತಮಿಳು ಕವಿಯಾದ 'ತಿರುವಳ್ಳುವರ್' ಪ್ರಕಾರ 'ನೆಲವನ್ನು ಉಳುಮೆ ಮಾಡುವವರು ಮಾತ್ರ ನಿಜವಾದ ಜೀವನವನ್ನು ಸಾಗಿಸುತ್ತಾರೆ. ಉಳಿದವರೆಲ್ಲಾ ಅವರನ್ನು ಹಿಂಬಾಲಿಸುತ್ತಾರೆ ಹಾಗೂ ಆಹಾರಕ್ಕಾಗಿ ಅವಲಂಬಿತರಾಗಿರುತ್ತಾರೆ' ಎಂದು ಹೇಳಿದ್ದಾರೆ.

ಭೂ ಸುಧಾರಣಾ ಕ್ಷೇತ್ರದಲ್ಲಿ ರಾಜ್ಯವು ಗಣನೀಯ ಕೆಲಸಗಳನ್ನು ಮಾಡಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಭೂ ಒಡೆತನ ಎಂಬುದು "ಉನ್ನತ ಶ್ರೀಮಂತಿಕೆಯ ಹಾಗೂ ಅತೀ ಕಡುಬಡತನವನ್ನು ನಿರ್ಧರಿಸುವ ಮಾನದಂಡವಾಗಿದೆ. ಸಂವಿಧಾನವು ಪ್ರಜೆಗಳ ಶ್ರೀಮಂತಿಕೆ ಹಾಗೂ ಬಡತನ ಇವರೆಡರ ವೈವಿಧ್ಯತೆಯನ್ನು ಗೌರವಿಸುತ್ತದೆ. ಆದರೆ ಪ್ರಭುತ್ವಕ್ಕೆ ಮಾತ್ರ ಈ ವೈವಿಧ್ಯಗಳ ನಡುವೆ ಸಮಾನತೆ ಹಾಗೂ ನ್ಯಾಯ ದೊರಕಿಸಿಕೊಡುವ ನೀತಿಯನ್ನು ಅನುಸರಿಸಬೇಕಾದ ಗುರುತರ ಜವಾಬ್ದಾರಿಯಿದೆ. ಬಡವರ ಹತ್ತಿರವಿರುವ ಜಮೀನಿನ ಮೇಲೆ ಅವರಿಗೆ ಸಿಗಬೇಕಾದ ಒಡೆತನ ಹಾಗೂ ಭೂ ರಹಿತರಿಗೆ ಜಮೀನು ದೊರಕಿಸಿಕೊಡುವ ಜವಾಬ್ದಾರಿಯನ್ನು ಪ್ರತಿಯೊಂದು ಸರ್ಕಾರಗಳು ಹೊರಬೇಕಾಗುತ್ತದೆ. ಕಾರಣ ಭೂಮಿಯ ಒಡೆತನ ಹಾಗೂ ಭೂ ಗೇಣಿ ವ್ಯವಸ್ಥೆಗಳು ಒಂದು ದೇಶದ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಜೀವನವನ್ನು ನಿರ್ಧರಿಸುತ್ತವೆ.

ವಿಶ್ವಸಂಸ್ಥೆಯ ಪ್ರಕಾರ ಭೂಸುಧಾರಣೆಯೆಂದರೆ "ಕೃಷಿ ಚೌಕಟ್ಟಿನ ದೋಷಗಳಿಂದ ಉದ್ಭವಿಸುವ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯ ಅಡ್ಡಿ ಆತಂಕಗಳನ್ನು ನಿವಾರಿಸುವ ಒಂದು ಸಮಗ್ರ ಪರಿಹಾರಾತ್ಮಕ ಕಾರ್ಯಕ್ರಮವಾಗಿದೆ". ಭೂ ಸುಧಾರಣೆಯೆಂದರೆ ಹಿಡುವಳಿಯ ಮೇಲೆ ಮಿತಿಯನ್ನು ಏರುವುದು, ಗೇಣಿದಾರರಿಗೆ ರಕ್ಷಣೆ ಕೊಡುವುದು, ನ್ಯಾಯವಾದ ಗೇಣಿಯ ನಿರ್ಧಾರ, ಹಿಡುವಳಿ ಸಂಘಟನೆ ಇತ್ಯಾದಿಗಳ ಮೂಲಕ ಭೂಮಿಯ ಸಮಾನ ಹಂಚಿಕೆಯನ್ನು ಸಾಧಿಸಲು ಉದ್ದೇಶಿಸಿ ಕೈಗೊಂಡಿರುವ ಕ್ರಮಗಳಾಗಿವೆ. ಸರ್ಕಾರ ಮತ್ತು ಬೇಸಾಯಗಾರನ ಮಧ್ಯೆ ಮಧ್ಯವರ್ತಿಗಳಾದ ಜನರ ಒಂದು ವರ್ಗವಿದ್ದು ಇವರು ಬೇಸಾಯಗಾರನಿಗೆ ಹೆಚ್ಚೇನು ಉಳಿಯದಂತೆ ಭೂಮಿ ಉತ್ಪನ್ನದ ಹೆಚ್ಚು ಪಾಲನ್ನು ತಾವೇ ಕಬಳಿಸುತ್ತಿದ್ದರು. ಬೇಸಾಯಗಾರ ತೆರಬೇಕಾಗಿದ್ದ ಗೇಣಿ ವಿಪರೀತವಾಗಿದ್ದು ಗೇಣಿದಾರನಿಗೆ ರಕ್ಷಣೆಯೇನೂ ಇರಲಿಲ್ಲ. ಇದರ ಪರಿಣಾಮವಾಗಿ ಉಳುವವನಿಗೆ ಹೆಚ್ಚು ಉತ್ಪಾದಿಸಲು ಯಾವ ಪ್ರೋತ್ಸಾಹವಿಲ್ಲದೆ ಗೈರು ಹಾಜರಿ ಜಮೀನ್ದಾರನೇ ಅವರ ಕಷ್ಟದ ಫಲವನ್ನು ಅನುಭವಿಸುತ್ತಿದ್ದರು. ಹಾಗಾಗಿ ಉಳುವವರಿಗೆ ಹೆಚ್ಚು ಉತ್ಪಾದಿಸುವಂತೆ ಪ್ರೋತ್ಸಾಹ ಕೊಡಲು ಆರ್ಥಿಕ, ಸಾಮಾಜಿಕ ಸಮಾನತೆ ತರಲು ಈ ಭೂಸುಧಾರಣೆಗಳನ್ನು ಜಾರಿಗೆ ತಂದರು.

ಭೂ ಸುಧಾರಣೆಯ ಪ್ರಮುಖ ಉದ್ದೇಶವೇನೆಂದರೆ ಕೃಷಿಕರ ನಡುವೆ ನ್ಯಾಯಬದ್ಧ ಸಂಬಂಧ ಸಾಧಿಸುವುದು. ಭೂಮಿಯ ಬಳಕೆಯನ್ನು ಸುಧಾರಿಸಿ ಕೃಷಿಗೆ ಉತ್ತೇಜನ ನೀಡಿ ಕೃಷಿ ಬೆಳವಣಿಗೆಯನ್ನು ಪ್ರೋತ್ಸಾಹಿಸುವುದು. ಈ ಭೂ ಸುಧಾರಣಾ ಕ್ರಮಗಳು ಗ್ರಾಮೀಣ ಜನರ ಸ್ಥಾನಮಾನಗಳಲ್ಲಿ ಭೂಮಿಯ ವಿತರಣೆಯಲ್ಲಿ ಸಂಭವಿಸುವ ಬದಲಾವಣೆ, ಕೃಷಿಕರ ಸಾಮಾಜಿಕ, ರಾಜಕೀಯ ಸ್ಥಾನ-ಮಾನಗಳನ್ನು ಹೆಚ್ಚಿಸುವದರಿಂದ ಅವರ ಚಿಂತನಾ ವಿಧಾನದಲ್ಲಿ ಹಾಗೂ ಜೀವನವನ್ನು ಅವರು ನೋಡುವ ದೃಷ್ಟಿಯಲ್ಲಿ ವಿಚಾರವಂತರನ್ನಾಗಿ ಬದಲಾಯಿಸುತ್ತಿದೆ. ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಊಳಿಗಮಾನ್ಯ ಯಜಮಾನ್ಯ ಸಂಸ್ಕೃತಿಯನ್ನು ನಿರ್ಮೂಲಗೊಳಿಸಿ ರೈತರನ್ನು ಪ್ರಜಾಸತ್ತಾತ್ಮಕ ನೆಲೆಯಲ್ಲಿ ಸಂಘಟಿಸುತ್ತದೆ.

ಕರ್ನಾಟಕವು ಕೃಷಿ ಅವಲಂಬಿತ ರಾಜ್ಯವಾಗಿದ್ದು, ಪರ್ವತ ಪ್ರದೇಶಗಳನ್ನು ಹೊರತುಪಡಿಸಿ ಬಹುಪಾಲು ಎಲ್ಲ ಭೂಮಿಯು ಕೃಷಿ ಯೋಗ್ಯ ಭೂಮಿಯಾಗಿದೆ. ೨೦೧೧ರ ಜನಗಣತಿಯಂತೆ ರಾಜ್ಯದ ಒಟ್ಟು ಜನಸಂಖ್ಯೆ ೫.೨೭ ಕೋಟಿ. ಒಟ್ಟು ಜನಸಂಖ್ಯೆಯಲ್ಲಿ ಶೇ. ೪೪.೬ರಷ್ಟು ಕಾರ್ಯನಿರತ ಜನಸಂಖ್ಯೆಯಿದ್ದು, ಅದರಲ್ಲಿ ೬೯.೩೬ ಲಕ್ಷ ಜನ ರೈತರು ೬೨.೦೯ ಲಕ್ಷ ಕೃಷಿ ಕಾರ್ಮಿಕರಿದ್ದಾರೆ. ೨೦೧೦-೧೧ನೇ ಸಾಲಿನ ಕೃಷಿ ಗಣತಿಯ ಅಂಕಿ ಅಂಶಗಳಂತೆ ರಾಜ್ಯದ ಒಟ್ಟು ಭೌಗೋಳಿಕ ವಿಸ್ತೀರ್ಣ ೧೯೦.೫೦ ಲಕ್ಷ ಹೆಕ್ಟೇರ್‌ಗಳ ಪೈಕಿ, ನಿವ್ವಳ ಬಿತ್ತನೆಯಾದ ಕ್ಷೇತ್ರ ೯೯.೫೦ ಲಕ್ಷ ಹೆಕ್ಟೇರ್‌ಗಳಿಷ್ಟಿದ್ದು, ಶೇ. ೫೫ ರಷ್ಟಿದೆ. ಒಟ್ಟು ಸಾಗುವಳಿ ವಿಸ್ತೀರ್ಣ

೧೨೨.೬೭ ಲಕ್ಷ ಹೆಕ್ಟೇರ್‌ಗಳಿದ್ದು, ಇದರಲ್ಲಿ ೨೩ ಲಕ್ಷ ಹೆಕ್ಟೇರ್‌ಗಳ ವಿಸ್ತೀರ್ಣದಲ್ಲಿ ಭೂಮಿಯು ೧ ಕ್ಕಿಂತ ಹೆಚ್ಚು ಬಾರಿ ಸಾಗುವಳಿಯಾಗಿರುತ್ತದೆ. ಹಾಗಾಗಿ ಬೆಳೆ ಸಾಂದ್ರತೆಯು ೧೨೪% ರಷ್ಟಿರುತ್ತದೆ. ಸುಮಾರು ೧೬% ಭೂಮಿಯು ಅರಣ್ಯಕ್ಕೆ ಒಳಪಟ್ಟಿದೆ. ೮% ರಷ್ಟು ವಿಸ್ತೀರ್ಣ ವ್ಯವಸಾಯೇತ್ತರ ಉದ್ದೇಶಗಳಿಗೆ ಉಪಯೋಗಿಸಿಕೊಂಡಿರುವ ಭೂಮಿ. ೪% ರಷ್ಟು ಬಂಜರು ಹಾಗೂ ವ್ಯವಸಾಯ ಮಾಡಲು ಸಾಧ್ಯವಿಲ್ಲದ ಪ್ರದೇಶ. ೨% ರಷ್ಟು ವಿಸ್ತೀರ್ಣ ಸಾಗುವಳಿ ಯೋಗ್ಯವಾದ ಬಂಜರು ಪ್ರದೇಶವಾಗಿದೆ. ಖಾಯಂ ಗೋಮಾಳ, ಇತರೆ ಹುಲ್ಲುಗಾವಲು ಹಾಗೂ ವಿವಿಧ ವೃಕ್ಷ ತೋಪುಗಳಿರುವ ವಿಸ್ತೀರ್ಣ ೬% ರಷ್ಟಿರುತ್ತದೆ. ಸುಮಾರು ೧೨% ರಷ್ಟು ವಿಸ್ತೀರ್ಣ ಚಾಲ್ತಿ ಸಾಗುವಳಿಯಿಲ್ಲದ ಬೀಳು ಬಿಟ್ಟ ಜಮೀನಾಗಿರುತ್ತದೆ.[೧]

೨೦೧೦-೧೧ನೇ ಸಾಲಿನ ಕೃಷಿ ಗಣತಿಯ ಅಂಕಿ ಅಂಶಗಳ ಪ್ರಕಾರ ಭೂ ಹಿಡುವಳಿದಾರರ ಒಟ್ಟು ಸಂಖ್ಯೆ ೭೮.೩೨ ಲಕ್ಷದಷ್ಟಿದ್ದು, ಹಿಡುವಳಿಯ ಒಟ್ಟು ವಿಸ್ತೀರ್ಣ ೧೨೧.೬೧ ಲಕ್ಷ ಹೆಕ್ಟೇರ್‌ಗಳಾಗಿದೆ. ಸಣ್ಣ ಮತ್ತು ಅತೀ ಸಣ್ಣ ಭೂ ಹಿಡುವಳಿದಾರರು ಶೇ. ೭೬.೪೪% ರಷ್ಟಿದ್ದು, ಅವರ ಹಿಡುವಳಿಯ ಗಾತ್ರ ಶೇ. ೪೦.೦೫ ರಷ್ಟಿರುತ್ತದೆ. ಅರೆ ಮಧ್ಯಮ, ಮಧ್ಯಮ ಹಾಗೂ ದೊಡ್ಡ ಹಿಡುವಳಿದಾರರು ೨೩.೫೭% ರಷ್ಟಿದ್ದು, ಇವರ ಚಳುವಳಿಯ ಗಾತ್ರ ೫೯.೯೫% ರಷ್ಟು ಇರುತ್ತದೆ.[೨]

ಕರ್ನಾಟಕದ ಭೂ ಹಿಡುವಳಿಯ ಸರಾಸರಿ ಕಡಿತಗೊಳ್ಳುತ್ತಿದೆ. ೧೯೭೦-೭೧ರಲ್ಲಿ ಸರಾಸರಿ ಭೂ ೩.೨೦ ಹೆಕ್ಟೇರ್‌ದಿಂದ, ೧೯೯೫-೯೬ರಲ್ಲಿ ೧.೯೫ ೨೦೧೦-೧೧ರಲ್ಲಿ ಇಳಿಮುಖವಾಗಿ ೧.೫೫ ಹೆಕ್ಟೇರ್‌ಗೆ ಕರ್ನಾಟಕ ರಾಜ್ಯದಾದ್ಯಂತ ಏಕರೂಪದ ಭೂಸುಧಾರಣಾ ಕ್ರಮಗಳು ಜಾರಿಗೆ ಬರಬೇಕೆಂದು ವಿವಿಧ ಬೇಡಿಕೆಗಳು ಹೆಚ್ಚಾದವು. ಇದರಿಂದಾಗಿ ಕರ್ನಾಟಕ ಸರ್ಕಾರ ೧೯೫೭ರ ಮೇ ೧೦ ರಂದು ಬಿ.ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ 'ಮೈಸೂರು ಗೇಣಿ ಮತ್ತು ಕೃಷಿ ಭೂಮಿ ಕಾಯ್ದೆ' ಸಮಿತಿಯನ್ನು ನೇಮಕ ಮಾಡಲಾಯಿತು. ಈ ಸಮಿತಿಯು ಭೂ ಹಿಡುವಳಿ ಮತ್ತು ಭೂ ಸಂಬಂಧಿತ ಎಲ್ಲಾ ಸಮಸ್ಯೆಗಳನ್ನು ಪರಿಶೀಲಿಸಿತು.[೩] ಅವುಗಳೆಂದರೆ ಗೇಣಿಯನ್ನು ನಿರ್ಧರಿಸುವುದು. ಗೇಣಿದಾರ ಭೂಮಿಯನ್ನು ಖರೀದಿಸುವುದು, ಸಾಗುವಳಿಯ ಭದ್ರತೆ, ಸ್ವಂತ ಉಳುಮೆಗಾಗಿ ಭೂ ಮಾಲೀಕರು ಜಮೀನು ವಾಪಸ್ಸು ಪಡೆಯುವುದು, ಭೂ ಒಡೆಯರಿಗೆ ಕೊಡಬೇಕಾದ ಪ್ರತಿಫಲ, ಭೂಮಿಯ ಗರಿಷ್ಟ ಮಿತಿ. ಭೂ ಹಿಡುವಳಿ ಮುಂತಾದವುಗಳು.

ಈ ಸಮಿತಿಯು ೧೯೫೭ರ ಸೆಪ್ಟೆಂಬರ್‌ನಲ್ಲಿ ಈ ಮೇಲಿನ ಎಲ್ಲಾ ವಿಷಯಗಳನ್ನು ಪರಿಶೀಲಿಸಿ ವರದಿ ಸಲ್ಲಿಸಿತು. ಸರ್ಕಾರವು ಈ ವರದಿಯನ್ನು ೧೯೫೮ರಂದು ವಿಧಾನಮಂಡದಲ್ಲಿ ಮಂಡಿಸಿತು. ನಂತರ ಎರಡು ಸದನಗಳಲ್ಲಿ ಚರ್ಚೆಯಾದ ನಂತರ ೪೬ ಸದಸ್ಯರನ್ನು ಒಳಗೊಂಡ ಸಮಿತಿಯು ತನ್ನ ಒಪ್ಪಿಗೆ ನೀಡಿ, ೧೯೬೧ ಮಾರ್ಚ್ ೨೫ರಂದು ತನ್ನ ವರದಿ ಸಲ್ಲಿಸಿತು.

೧೯೬೧ ನವೆಂಬರ್ ತಿಂಗಳಲ್ಲಿ ಕೆಲವು ಮಾರ್ಪಾಡುಗಳೊಂದಿಗೆ ವಿಧಾನಮಂಡಲದಲ್ಲಿ ಅಂಗೀಕೃತವಾಗಿ, ೧೯೬೨ ಮಾರ್ಚ್ ೫ ರಂದು ರಾಷ್ಟ್ರಪತಿಗಳ ಸಮ್ಮತಿ ದೊರೆಯಿತು. ಆದರೆ ಇನ್ನೂ ಕೆಲವು ಮಾರ್ಪಾಡುಗಳನ್ನು ಮಾಡುವ ಅಗತ್ಯವಿದ್ದುದರಿಂದ ತಡೆ ಹಿಡಿದು ೧೯೬೫ರ XIV ಶಾಸನದ ಮೂಲಕ ೧೯೬೫ರಲ್ಲಿ ತಿದ್ದುಪಡಿ ಮಾಡಿ, ೧೯೬೫ರ ಅಕ್ಟೋಬರ್ ೨ ರಂದು ಗಾಂಧೀಜಯಂತಿಯ ದಿನ ರಾಜ್ಯಾದಾದ್ಯಂತ ಜಾರಿಗೆ ತರಲಾಯಿತು. "ಈ ಮಸೂದೆಯನ್ನು ಭೂ ಸುಧಾರಣೆ ಮಸೂದೆ ಎನ್ನುವುದಕ್ಕಿಂತ ಗೇಣಿ ಸುಧಾರಣಾ ಮಸೂದೆ ಎನ್ನುವುದು ಹೆಚ್ಚು ಸೂಕ್ತವೆಂದು" ಎಂ. ಚಂದ್ರಪೂಜಾರಿಯವರು ಅಭಿಪ್ರಾಯಪಟ್ಟಿದ್ದಾರೆ. ಕಾರಣ ಈ ಹಿಂದೆ ಇದ್ದ ಎಲ್ಲಾ ಮಸೂದೆಗಳನ್ನು ಅನುರ್ಜಿತಗೊಳಿಸಿ ಇಡೀ ರಾಜ್ಯಕ್ಕೆ ಏಕ ಭೂ ಮಸೂದೆಯನ್ನು ಜಾರಿಗೆ ತಂದರು.

**ಈ ಕಾಯ್ದೆಯ ಮುಖ್ಯಾಂಶಗಳು ಈ ಕೆಳಗಿನಂತಿವೆ:**[೪]

೧. ಈ ಕಾಯ್ದೆಯ ಪ್ರಕಾರ ಸರ್ಕಾರವು ಭೂ ಮಾಲೀಕರಿಂದ ಜಮೀನಿನ ಸ್ವಾಮ್ಯವನ್ನು ವಹಿಸಿಕೊಂಡ ನಂತರ ಭೂ ರಹಿತ ಗೇಣಿದಾರರಿಗೆ ವರ್ಗಾಯಿಸುವುದು.

೨. ರಾಜ್ಯದ ಎಲ್ಲಾ ಭೂಮಿಯು ಸರ್ಕಾರಕ್ಕೆ ಸೇರಿದ್ದು ಭೂಮಿಯ ಒಡೆತನಕ್ಕೆ ಸಂಬಂಧಿಸಿದಂತೆ ಅಂತಿಮ ತೀರ್ಮಾನ ಸರ್ಕಾರಕ್ಕೆ ಸೇರಿದ್ದು.

೩. ಸರ್ಕಾರದಿಂದ ಗೇಣಿದಾರರಿಗೆ ನೀಡಿದ ಭೂಮಿಗೆ ಹಣವನ್ನು ಸಂದಾಯ ಮಾಡಬೇಕಾಗಿದ್ದು, ನೀರಾವರಿ ಪ್ರದೇಶದಲ್ಲಿ ಬೆಳೆದ ಬೆಳೆಯಲ್ಲಿ ಶೇ. ೨೫ ರಷ್ಟನ್ನು ಹಾಗೂ ಒಣ ಭೂ ಪ್ರದೇಶದಲ್ಲಿ ಬೆಳೆದ ಬೆಳೆಯಲ್ಲಿ ಶೇ. ೨೦ ರಷ್ಟನ್ನು ನೀಡಬೇಕೆಂದು ತೀರ್ಮಾನಿಸಲಾಯಿತು.

೪. ಗೇಣಿ ಭೂಮಿಯನ್ನು ಸೈನಿಕರು ಮದುವೆಯಾಗದ ಸ್ತ್ರೀಯರು, ವಿಧವೆಯರು, ಅಂಗವಿಕಲರು ಬುದ್ಧಿಮಾಂದ್ಯರು ಹೊಂದಬಹುದು.

೫. ಸರ್ಕಾರ ನೀಡಿದ ಗೇಣಿ ಭೂಮಿಯನ್ನು ಪುನರ್ ಸ್ವಾಧೀನಪಡಿಸಿಕೊಳ್ಳುವಾಗಿಲ್ಲ. ಪುನರ್ ವಶಪಡಿಸಿಕೊಳ್ಳಲು ಮುಂದಾದರೆ ಭೂ ಮಾಲೀಕರೆ ಸ್ವಂತ ಬೇಸಾಯ ಮಾಡಬೇಕು. ಗೇಣಿದಾರ ಗೇಣಿ ನೀಡಲು ವಿಫಲವಾದಾಗ ೨ ವರ್ಷಕ್ಕಿಂತ ಹೆಚ್ಚು ಬೇಸಾಯ ಮಾಡದಿದ್ದಾಗ ಕೃಷಿಯೇತರ ಉದ್ದೇಶಗಳಿಗೆ ಭೂಮಿ ಬೇಕಾದ ಸಂದರ್ಭಗಳಲ್ಲಿ ಮಾತ್ರ ಸ್ವಾಧೀನ ಪಡಿಸಿಕೊಳ್ಳಬಹುದು.

೬. ಈ ಕಾಯ್ದೆಯಂತೆ ಭೂ ವ್ಯಾಖ್ಯಾಗಳನ್ನು ತೀರ್ಮಾನಿಸಲು ಭೂನ್ಯಾಯಮಂಡಳಿಗಳು ರಚನೆಯಾದವು. ಗೇಣಿದಾರರು ಸ್ವಇಚ್ಛೆಯಿಂದ ಗುತ್ತಿಗೆ ಭೂಮಿಯನ್ನು ಭೂ ಒಡೆಯನಿಗೆ ಬಿಟ್ಟು ಕೊಡುವುದಾದರೆ ಭೂನ್ಯಾಯಮಂಡಳಿಗಳ ಮೂಲಕವೇ ನಡೆಯಬೇಕಾಗಿತ್ತು.

೭. ಕೃಷಿಕರಲ್ಲದವರು ಸ್ವಂತ ಭೂಮಿಯನ್ನು ಉಳುಮೆ ಮಾಡಲು ಮುಂದಾದರೆ, ಅ ವ್ಯಕ್ತಿ ಕನಿಷ್ಠ ಐದು ವರ್ಷ ಕೃಷಿ ಮಾಡಲೇಬೇಕು ಎಂಬ ಷರತ್ತಿನೊಂದಿಗೆ ಭೂಮಿಯನ್ನು ಪಡೆಯಲು ಅನುಮತಿ ನೀಡುವುದು.

೮. ಈ ಕಾಯ್ದೆಯು ಬೇರೆ ಬೇರೆ ರೀತಿಯ ಭೂಮಿಗಳಿಗೆ ಅನುಗುಣವಾಗಿ ಒಂದು ಕುಟುಂಬ ಹೊಂದಬಹುದಾದ ಭೂಮಿಯ ಮಿತಿಯನ್ನು ನಿಗದಿಪಡಿಸಿದೆ. ಒಂದು ಕುಟುಂಬದಲ್ಲಿ ಐದು ಸದಸ್ಯರಿದ್ದರೆ, ಅ ಕುಟುಂಬವು ೨೭ ಎಕರೆ ನೀರಾವರಿ ಭೂಮಿಯನ್ನು ಹೊಂದಬಹುದು ಅಥವಾ ಒಣ ಭೂಮಿಯನ್ನು ಹೊಂದಿದ್ದರೆ ಅದರ ಮಿತಿಯನ್ನು ೨೧೬ ಎಕರೆಗೆ ನಿಗದಿಪಡಿಸಲಾಯಿತು.

೯. ಒಂದು ಕುಟುಂಬದ ಸದಸ್ಯರ ಸಂಖ್ಯೆಯು ಐದಕ್ಕಿಂತ ಹೆಚ್ಚಿದ್ದಾಗ, ಪ್ರತೀ ಒಬ್ಬಬ್ಬ ಸದಸ್ಯ ನೀರಾವರಿ ಭೂಮಿಯಾದರೆ ೫.೪ ಎಕರೆಯನ್ನು, ಒಣ ಭೂಮಿಯಾದರೆ ೪೩.೨ ಎಕರೆ ಭೂಮಿಯನ್ನು ಹೊಂದಲು ಅವಕಾಶ ನೀಡಲಾಯಿತು.

೧೦. ಭೂಮಿಯ ಮೇಲಿನ ಗರಿಷ್ಠ ಮಿತಿಯು ಟೀ, ರಬ್ಬರ್, ಕಾಫಿ, ಏಲಕ್ಕಿ, ಮೆಣಸಿನ ತೋಟದ ಎಸ್ಟೇಟ್‌ಗಳಿಗೆ ಹಾಗೂ ಶೈಕ್ಷಣಿಕ ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳು, ಸಹಕಾರಿ ಸಂಸ್ಥೆಗಳು ಸರ್ಕಾರದಿಂದ ಅನುಮತಿ ಪಡೆದ ವಾಣಿಜ್ಯ ಸಂಸ್ಥೆಗಳಿಗೆ ಅನ್ವಯಿಸುವುದಿಲ್ಲ.

ಈ ಭೂಸುಧಾರಣಾ ಶಾಸನವನ್ನು ೧೯೬೬, ೧೯೬೭, ೧೯೬೮, ೧೯೭೦, ೧೯೭೨ ಮತ್ತು ೧೯೭೪ರಲ್ಲಿ ತಿದ್ದುಪಡಿ ಮಾಡಲಾಯಿತು. ೧೯೭೪ರ ಭೂಸುಧಾರಣಾ ಶಾಸನ ೧೯೬೧ರ ಕಾಯ್ದೆಯಲ್ಲಿ ಕ್ರಾಂತಿಕಾರಿ ಬದಲಾವಣೆಯನ್ನು ಉಂಟು ಮಾಡಿತು.

**೧೯೭೪ರ ಭೂಸುಧಾರಣ ಕಾಯ್ದೆ**

೧೯೭೪ರ ಮಾರ್ಚ್ ೧ರಂದು ಜಾರಿಗೆ ಬಂದು ಉಳುವವನೆ ಭೂಮಿಯ ಒಡೆಯನನ್ನಾಗಿಸುವುದು ಈ ಕಾಯ್ದೆಯ ಪ್ರಮುಖ ಉದ್ದೇಶವಾಗಿತ್ತು. ೧೯೬೧ರ ಕಾಯ್ದೆಯು ಭೂ ಮಾಲೀಕರು ಭೂಮಿಯನ್ನು ಮರು ಸ್ವಾಧೀನ ಪಡಿಸದಂತೆ ತಡೆಯುವುದು, ಗೇಣಿ ನಿಯಂತ್ರಣ ಮುಂತಾದ ಉದ್ದೇಶಗಳನ್ನು ಈಡೇರಿಸುವಂತಿರಲಿಲ್ಲ. ಹಾಗಾಗಿ ಇದನ್ನು ಭೂಸುಧಾರಣಾ ಶಾಸನವೆಂದು ಕರೆಯಲು ಸಾಧ್ಯವಿಲ್ಲ. ಏಕೆಂದರೆ ಉಳುವವನಿಗೆ ಭೂಮಿಯ ಒಡೆತನ ಲಭ್ಯವಾಗಲಿಲ್ಲ. ಹಾಗಾದರೆ ೧೯೬೧ರ ಕಾಯ್ದೆಯನ್ನು ಗೇಣಿ ಸುಧಾರಣಾ ಕಾಯ್ದೆ ಎಂದು ಕರೆಯಬಹುದೇ? ಅದು ಸಾಧ್ಯವಿಲ್ಲ. ಕಾರಣ ಕನಿಷ್ಟ ಮಟ್ಟದ ಗೇಣಿಯ ನಿರ್ಣಯವಾಗಲಿಲ್ಲ. ಹಾಗಾಗೀ ಕರ್ನಾಟಕಕ್ಕೆ ಏಕ ಭೂ ಮಸೂದೆ ಜಾರಿಗೆ ತಂದ ಕೀರ್ತಿ ೧೯೭೪ರ ಭೂ ಸುಧಾರಣಾ ಕಾಯ್ದೆಗೆ ಸಲ್ಲುತ್ತದೆ.

೧೯೭೪ರ ಭೂಸುಧಾರಣಾ ಕಾಯ್ದೆಯು ೧೯೬೧ರ ಕಾಯ್ದೆಯಲ್ಲಿ ಹಲವಾರು ಮಹತ್ತರವಾದ ತಿದ್ದುಪಡಿಗಳನ್ನು ಜಾರಿಗೆ ತರಲಾಯಿತು.

೧೯೭೪ರ ಕಾಯ್ದೆಯ ಪ್ರಮುಖ ಮುಖ್ಯಾಂಶಗಳು:[೫]

೧. ಈ ಕಾಯ್ದೆಯ ಪ್ರಕಾರ ಕೃಷಿ ಕೂಲಿ ಕಾರ್ಮಿಕರಿಗೆ ಹಾಗೂ ಭೂರಹಿತರಿಗೆ ಭೂಮಿಯ ಒಡೆತನ ಹಕ್ಕು ಲಭ್ಯವಾಗುವಂತೆ ಮಾಡಿತು.

೨. ಭೂಮಿಯ ಗರಿಷ್ಠ ಮಿತಿಯನ್ನು ನಿರ್ಧರಿಸುವದಕ್ಕಾಗಿ ಜಮೀನನ್ನು ಮೂರು ಪ್ರಕಾರಗಳಾಗಿ ವಿಂಗಡಿಸಲಾಯಿತು. ನೀರಾವರಿ ಭೂಮಿ, ಮಳೆಯಾಶ್ರಿತ ಭೂಮಿ ಮತ್ತು ಖುಷ್ಕಿ ಭೂಮಿ.

೩. ಪ್ರತಿ ಕುಟುಂಬವು ಹೊಂದಬಹುದಾದ ಜಮೀನಿನ ಗರಿಷ್ಠ ಮಿತಿಯನ್ನು ಕಡಿಮೆ ಮಾಡಿ, 'ಕುಟುಂಬ' ಎಂದರೆ ಒಬ್ಬ ವ್ಯಕ್ತಿ, ಆ ವ್ಯಕ್ತಿಯ ಹೆಂಡತಿ, ಅಪ್ರಾಪ್ತ ವಯಸ್ಸಿನ ಗಂಡು ಮಕ್ಕಳು, ಹೆಣ್ಣು ಮಕ್ಕಳು ಸೇರಿರುವರೆಂದು, ಕುಟುಂಬದ ಪುನರ್‌ವ್ಯಾಖ್ಯಾನ ಮಾಡಿತು. ೫ ಸದಸ್ಯರಿರುವ ಒಂದು ಕುಟುಂಬ ೧೦ ಎಕರೆ ಭೂಮಿ ಹೊಂದಬಹುದು. ಹಾಗೂ ಸದಸ್ಯರ ಸಂಖ್ಯೆ ಐದಕ್ಕಿಂತ ಹೆಚ್ಚಿದ್ದರೆ ಪ್ರತೀ ಹೆಚ್ಚುವರಿ ಸದಸ್ಯ ೨ ಎಕರೆಯಂತೆ ಭೂಮಿಯನ್ನು ಹೊಂದಬಹುದು ಆದರೆ ಭೂಮಿಯನ್ನು ಹೊಂದುವ ಗರಿಷ್ಠ ಮಿತಿ ೨೦ ಎಕರೆ.

೪. ಈ ಕಾಯ್ದೆಯಂತೆ ಕೃಷಿಯೇತರ ಮೂಲಗಳಿಂದ, ಕಂಪನಿಗಳಿಂದ, ಸಂಘಗಳಿಂದ ಮತ್ತು ಕೃಷಿ ಸಂಘಗಳನ್ನು ಹೊರತುಪಡಿಸಿ ಬೇರೆ ಯಾವ ಸಹಕಾರಿ ಸಂಘಗಳಿಂದ, ೧೨,೦೦೦ಕ್ಕಿಂತ ಹೆಚ್ಚು ವಾರ್ಷಿಕ ಆದಾಯ ಪಡೆಯುವವರು, ನಿಶ್ಚಿತ ಕರಾರುಗಳು ಹೊರತಾಗಿ ಭವಿಷ್ಯದಲ್ಲಿ ಜಮೀನು ಪಡೆಯುವುದನ್ನು ನಿಷೇಧಿಸಲಾಗಿದೆ.

೫. ಈ ಕಾಯ್ದೆಯಿಂದ ಗೇಣಿದಾರರ ಮತ್ತು ಭೂಮಾಲೀಕರ ನಡುವಿನ ಸಂಬಂಧ ಅಂತ್ಯವಾಯಿತು. ಸೈನಿಕರ ಮತ್ತು ನಾವಿಕರ ಹೊಲಗಳನ್ನು ಹೊರತುಪಡಿಸಿ ಗೇಣಿಯೇ ಇರುವುದಿಲ್ಲ.

೬. ಈ ಕಾಯ್ದೆಯು ಕೇವಲ ಉಳುಮೆಯಾದ ಜಮೀನುಗಳಿಗೆ ಅನ್ವಯಿಸುತ್ತವೆಯೇ ಹೊರತು ವ್ಯವಸಾಯೇತರ ಜಮೀನುಗಳಿಗಲ್ಲ.

೭. ಈ ಕಾಯ್ದೆ ಕೇವಲ ಸ್ವತಃ ಉಳುಮೆ ಮಾಡುವವರು ಮಾತ್ರ ಭೂಮಿಯನ್ನು ಹೊಂದಲು ಅವಕಾಶ ನೀಡಿದೆ. (ಸ್ವತಃ ಉಳುಮೆಯೆಂದರೆ ಸ್ವಂತ ಶ್ರಮದಿಂದ ಉಳುವುದು. ತನ್ನ ಕುಟುಂಬದ ಸದಸ್ಯರ ಶ್ರಮದಿಂದ ಉಳುವುದು. ಕುಟುಂಬದ ಸದಸ್ಯರ ಮೇಲ್ವಿಚಾರಣೆಯಲ್ಲಿ ಕೂಲಿಯಾಳಿನ ಸಹಾಯದಿಂದ ಉಳುಮೆ ಮಾಡುವುದು.)

೮. ಈ ಶಾಸನದ ವಿರುದ್ಧವಾಗಿ ಭೂಮಿಯನ್ನು ಬೇರೆಯವರಿಂದ ಉಳುಮೆ ಮಾಡಿಸಿದ್ದಲ್ಲಿ, ಆತನ ಜಮೀನನ್ನು ಯಾವ ಪ್ರತಿಫಲವು ಇಲ್ಲದೆ ಸರ್ಕಾರ ಸ್ವಾಧೀನಪಡಿಸಿಕೊಂಡು, ಆತನ ಜಮೀನಿನ ಹಕ್ಕನ್ನು ರದ್ದುಗೊಳಿಸಿ ಈ ಭೂಮಿಯನ್ನು ಭೂರಹಿತರಿಗೆ ನೀಡಲಾಗುತ್ತದೆ.

೯. ಜಮೀನನ್ನು ಗೇಣಿ ಪಡೆದವರು, ಆ ಜಮೀನಿನ ಮೇಲೆ ಸ್ವಾಧೀನಾನುಭವದ ಹಕ್ಕನ್ನು ಪಡೆಯಲು ಅರ್ಜಿಯನ್ನು ಹಾಕಿ (ಡಿಕ್ಲರೇಶನ್ ಫಾರ್ಮ್) ಸರ್ಕಾರದಿಂದ ಪಡೆಯಬಹುದು.

೧೦. ಗೇಣಿದಾರರ ಮತ್ತು ಭೂಮಾಲೀಕರ ನಡುವಿನ ಪ್ರಕರಣಗಳನ್ನು ತೀರ್ಮಾನಿಸಲು, ಪ್ರತೀ ತಾಲೂಕಿಗೆ ಒಂದೊಂದು ಭೂ ನ್ಯಾಯ ಮಂಡಳಿ ಸ್ಥಾಪಿಸಲಾಯಿತು. ಪ್ರತಿಯೊಂದು ನ್ಯಾಯ ಮಂಡಲಿಯಲ್ಲಿ ನಾಲ್ಕು ಜನ ಸರ್ಕಾರೇತರ ಸದಸ್ಯರಿದ್ದು, ಸಹಾಯಕ ಕಮೀಷನರ್ ಈ ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. ನಾಲ್ಕು ಜನ ಸರ್ಕಾರೇತ್ತರ ಸದಸ್ಯರಲ್ಲಿ ಒಬ್ಬನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದವನಾಗಿರುತ್ತಾನೆ. ಒಬ್ಬ ತಹಶೀಲ್ದಾರರು, ಕಾರ್ಯದರ್ಶಿಗಳು, ಸ್ಥಳೀಯ ಶಾಸಕರನ್ನು ಒಳಗೊಂಡಿರುತ್ತದೆ.

೧೧. ಗೇಣಿದಾರರ ಅರ್ಜಿಗಳಿಗೆ ಹಾಗೂ ಪ್ರಮಾಣ ಪತ್ರಗಳಿಗೆ ಸ್ಟಾಂಪ್ ಶುಲ್ಕದಿಂದ ವಿನಾಯಿತಿ ನೀಡಲಾಯಿತು. ನ್ಯಾಯ ತೀರ್ಮಾನಗಳನ್ನು ವಿಳಂಬ ಮಾಡದೆ ವಿಲೇವಾರಿ ಮಾಡಲು ನ್ಯಾಯವಾದಿಗಳ ಪ್ರವೇಶಕ್ಕೆ ನಿರ್ಬಂಧ ಹಾಕಲಾಯಿತು. ಹಾಗೂ ನ್ಯಾಯಮಂಡಳಿಯ ತೀರ್ಮಾನವೇ ಅಂತಿಮವಾದುದು. ಈ ಭೂ ನ್ಯಾಯಮಂಡಳಿಯ ತೀರ್ಮಾನವನ್ನು ಪ್ರಶ್ನಿಸುವ, ವಿಚಾರಿಸುವ ಹಾಗೂ ತೀರ್ಮಾನಿಸುವ ಅಧಿಕಾರ ಯಾವ ನ್ಯಾಯಾಲಯದ ವ್ಯಾಪ್ತಿಗೆ ಸೇರುವುದಿಲ್ಲ.

೧೨. ಈ ಕಾಯ್ದೆಯಂತೆ ಗೇಣಿದಾರನು ಆರ್ಥಿಕವಾಗಿ ದುರ್ಬಲವಾಗಿದ್ದರೆ ಸರ್ಕಾರವು ಈ ಕಾಯ್ದೆಗೆ ಸಂಬಂಧಿಸಿದಂತೆ ಸಹಾಯ ಹಾಗೂ ನೆರವನ್ನು ನೀಡಬಹುದು. ಇವರ ಸಹಾಯಕ್ಕಾಗಿ ಸರ್ಕಾರವು ಸಚಿವಾಲಯದಲ್ಲಿ 'ಕಾನೂನು ಸಹಾಯ ಕೋಶ' ಸ್ಥಾಪಿಸಲಾಯಿತು. ಈ ನ್ಯಾಯಾಲಯ ಭೂಮಾಲೀಕರು ಸಲ್ಲಿಸಿದ ರಿಟ್ ಅರ್ಜಿಗಳಿಂದ ರಕ್ಷಿಸುತ್ತದೆ.

೧೩. ಈ ಕಾಯ್ದೆಯು ಗೇಣಿಯನ್ನು ನಿಗದಿಪಡಿಸಿತು. ಸರ್ಕಾರದ ಜಲಮೂಲಗಳಿಂದ ವರ್ಷಕ್ಕೆ ಎರಡು ಬಾರಿ ಬೆಳೆ ಪಡೆದರೆ ಅಂತಹ ಜಮೀನಿಗೆ ಪ್ರತೀ ಎಕರೆಗೆ ೧೬.೫೦ ರೂ. ಒಂದು ಬೆಳೆ ತೆಗೆದರೆ ೧೧.೦೦ ರೂ. ಇತರೆ ಎಲ್ಲಾ ಬಗೆಯ ಜಮೀನುಗಳಿಗೆ ಗರಿಷ್ಟ ದರ ಎಕರೆಗೆ ೫.೫೦ ರೂ.

೧೪. ಈ ಶಾಸನದ ಪ್ರಕಾರ ಭೂ ಮಾಲೀಕರಿಗೆ ಪರಿಹಾರ ಧನ ನೀಡಲಾಗುವುದು. ಇದು ಮಾರುಕಟ್ಟೆ ಮೌಲ್ಯಕ್ಕಿಂತ ಭಿನ್ನವಾಗಿತ್ತು. ಜಮೀನಿನ ನಿವ್ವಳ ಆದಾಯದ ಸ್ವಲ್ಪ ಹಣ ಅಥವಾ ವರ್ಷದ ಗುತ್ತಿಗೆಯಷ್ಟು ಹಣ ನೀಡಬೇಕಾಗುತ್ತದೆ. ಇದು ಖುಷ್ಕಿ ಜಮೀನಿಗೆ ೨೦ ಪಟ್ಟು, ನೀರಾವರಿ ಜಮೀನಿಗೆ ೧೫ ಪಟ್ಟು ನೀಡಲಾಗುತ್ತದೆ. ಅಂದರೆ ಭೂ ಕಂದಾಯದ ೨೦೦ ಪಟ್ಟು ನೀರಿನ ದರ ಇದ್ದರೆ, ಅದು ಸೇರಿ ೧೫೦ ಪಟ್ಟು ಆಗುತ್ತದೆ.

೧೫. ಭೂ ಮಾಲೀಕನಿಗೆ ನೀಡುವ ಪರಿಹಾರ ಹಣವನ್ನು ನಗದು ಸಂದಾಯವೆಂದು ೨೦೦೦ ರೂ. ಮತ್ತು ಭಾಗಷಃ ಹಣವನ್ನು ೫.೧/೨ ಬಡ್ಡಿಯಂತೆ ೨೦ ವರ್ಷಗಳ ಅವಧಿಗೆ ೨೦ ಕಂತುಗಳಲ್ಲಿ ಸಂದಾಯವಾಗುವಂತೆ ಕರಾಪತ್ರಗಳ ಮೂಲಕ ನೀಡಲಾಗುವುದು. ಅ ಭೂ ಮಾಲೀಕನು ದುರ್ಬಲ ಸ್ಥಾನದಲ್ಲಿದ್ದರೆ ೫,೦೦೦ ರೂ. ನಗದು ಹಣ ನೀಡಲಾಗುತ್ತದೆ.

೧೬. ಈ ಕಾಯ್ದೆಯ ಪ್ರಕಾರ ಭೂ ಮಾಲೀಕನಿಗೆ ಸಂದಾಯವಾಗಬೇಕಾದ ಹಣದ ಗರಿಷ್ಟ ಮಿತಿ ಎರಡು ಲಕ್ಷ ರೂಪಾಯಿಗಳಿಗೆ ಸೀಮಿತಗೊಳಿಸಿತು.

೧೭. ಗೇಣಿದಾರನು ಭೂಮಿಯ ಮೇಲಿನ ಒಡೆತನದ ಹಕ್ಕು ಪಡೆದು, ಅದಕ್ಕೆ ಪ್ರತಿಫಲವಾಗಿ ಸರ್ಕಾರಕ್ಕೆ ಖುಷ್ಕಿ ಜಮೀನುಗಳಿಂದ ವಾರ್ಷಿಕ ಆದಾಯದ ೨೦ ರಷ್ಟು, ನೀರಾವರಿ ಜಮೀನುಗಳಿಂದ ವಾರ್ಷಿಕ ಆದಾಯದಲ್ಲಿ ೧೫ ರಷ್ಟನ್ನು ಸಂದಾಯ ಮಾಡಬೇಕು.

೧೮. ಈ ಶಾಸನ ಗೇಣಿದಾರನಿಗೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿನಿಂದ ಧನ ಸಹಾಯ ಪಡೆಯುವ ಅವಕಾಶ ನೀಡಿದೆ.

೧೯. ಈ ಶಾಸನ ಕುಟುಂಬದ ಆಸ್ತಿಯನ್ನು ಮನೆಯ ವಿವಿಧ ಸದಸ್ಯರ ಹೆಸರಿನಲ್ಲಿ ಇಟ್ಟುಕೊಳ್ಳುವ ಪದ್ಧತಿಯನ್ನು ನಿಶ್ಫಲಗೊಳಿಸಿತು.

೨೦. ಈ ಕಾಯ್ದೆಯ ಪ್ರಕಾರ ಭೂ ಮಾಲೀಕರಿಂದ ಗರಿಷ್ಟ ಮಿತಿಗಿಂತ ಹೆಚ್ಚಿರುವ ಭೂಮಿಯನ್ನು ಸರ್ಕಾರ ಸ್ವಾದೀನ ಪಡಿಸಿಕೊಂಡು, ಭೂ ರಹಿತ ಗೇಣಿದಾರರಿಗೆ, ಕೃಷಿ ಕೂಲಿ ಕಾರ್ಮಿಕರಿಗೆ, ಮಾಜಿ ಸೈನಿಕರಿಗೆ ಹಂಚಿಕೆ ಮಾಡುವುದು.

೨೧. ಈ ಕಾಯ್ದೆಯ ಪ್ರಕಾರ ಸರ್ಕಾರ ಭೂಮಾಲೀಕರಿಂದ ಸ್ವಾದೀನ ಪಡಿಸಿಕೊಂಡ ಹೆಚ್ಚುವರಿ ಭೂಮಿಯ ಶೇ. ೫೦ ರಷ್ಯನ್ನು ಪರಿಶಿಷ್ಟ ಜಾತಿ, ಪರಿಶಿಷ್ಠ ಪಂಗಡಗಳ ಜನರಿಗೆ ಮೀಸಲಿಡುವುದು.

೨೨. ಈ ಕಾಯ್ದೆಯಂತೆ ಸಕ್ಕರೆ ಕಾರ್ಖಾನೆಗಳು, ಸಂಶೋಧನೆಗೆ ಹಾಗೂ ಬೀಜೋತ್ಪಾದನೆಯ ಉದ್ದೇಶಗಳಿಗಾಗಿ ಮಾತ್ರ ಗರಿಷ್ಟ ೫೦ ಎಕರೆ ಭೂಮಿಯನ್ನು ಹೊಂದಬಹುದು.

೨೩. ಬೇಸಾಯೇತರ ಮೂಲಗಳಿಂದ ಹನ್ನೆರಡು ಸಾವಿರಕ್ಕಿಂತ ಹೆಚ್ಚು ವಾರ್ಷಿಕ ಆದಾಯವುಳ್ಳವರು, ಕೃಷಿ ಭೂಮಿಯನ್ನು ಖರೀದಿಸುವುದು ಅಥವಾ ಒಡೆತನ ಹೊಂದುವುದನ್ನು ನಿಷೇಧಿಸಲಾಯಿತು.

೨೪. ಈ ಕಾಯ್ದೆಯಂತೆ ಶೈಕ್ಷಣಿಕ ಚಾರಿಟೆಬಲ್ ಹಾಗೂ ಧಾರ್ಮಿಕ ಸಂಸ್ಥೆಗಳು ೨೦ ಎಕರೆ ಭೂಮಿಯನ್ನು ಹೊಂದಬಹುದು.

೨೫. ಕಾಫಿ, ಟೀ, ಕೊಕೋ, ರಬ್ಬರ್, ಏಲಕ್ಕಿ ಇತರೆ ಸರ್ಕಾರದ ಭೂಮಿ ಮುಂತಾದ ಪ್ಲಾಂಟೇಶನ್ ಭೂಮಿಗಳ ಮೇಲಿನ ಗರಿಷ್ಠ ಮಿತಿಯನ್ನು ಸಡಿಲಿಸಲಾಗಿದೆ.

೨೬. ಈ ಕಾಯ್ದೆಯ ಪ್ರಕಾರ ಕೃಷಿ ಭೂಮಿಯನ್ನು ಮಾರಾಟ ಮತ್ತು ಖರೀದಿ ಮಾಡುವುದನ್ನು ಕಾನೂನು ಬಾಹಿರವೆಂದು ಪರಿಗಣಿಸಲಾಗುತ್ತದೆ. ಇದನ್ನು ಮೀರಿ ಮುಂದುವರೆದರೆ ಸರ್ಕಾರ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳುತ್ತದೆ. ಮುಟ್ಟುಗೋಲು ಹಾಕಿಕೊಂಡ ಭೂಮಿಗೆ ಯಾವುದೇ ಪರಿಹಾರವನ್ನು ನೀಡಲಾಗುವುದಿಲ್ಲ.

೨೭. ಈ ಕಾಯ್ದೆಯಂತೆ ಸರ್ಕಾರದಿಂದ ಭೂಮಿಯನ್ನು ಪಡೆದ ಗೇಣಿದಾರರು ಹದಿನೈದು ವರ್ಷಗಳವರೆಗೆ ಮಾರಾಟ ಮಾಡಬಾರದು.

೨೮. ೧೯೭೪ರ ಕಾಯ್ದೆ ವಿಶೇಷ ಸೆಕ್ಷನ್ ೧೯೭೯ರ ಪ್ರಕಾರ, ತನ್ನದಲ್ಲದ ಭೂಮಿಯ ಮೇಲೆ ವಾಸ ಮಾಡುತ್ತಿದ್ದ ಮನೆಯ ಕೃಷಿ ಕಾರ್ಮಿಕನೊಬ್ಬ ಆ ಮನೆಯ ಮೇಲೆ ತನ್ನ ಹಕ್ಕನ್ನು ಸ್ಥಾಪಿಸಲು ಅವಕಾಶ ನೀಡಲಾಯಿತು.

೧೯೭೪ರ ಕಾಯ್ದೆ ಈ ಹಿಂದಿನ ಎಲ್ಲಾ ಕಾಯ್ದೆಗಳಿಗಿಂತ ಪ್ರಮುಖವಾದುದಾಗಿದ್ದು ಕ್ರಾಂತಿಕಾರಿ ಬದಲಾವಣೆ ಉಂಟುಮಾಡಿತು. ಉಳುವವನೇ ಭೂಮಿ ಒಡೆಯ ಎನ್ನುವ ಘೋಷಣೆಯನ್ನು ಕಾರ್ಯ ರೂಪಕ್ಕೆ ತಂದಿತು. ಇದರಿಂದಾಗಿ ಹಲವಾರು ಭೂ ವಿವಾದಗಳು ಹುಟ್ಟಿಕೊಂಡವು. ಈ ವಿವಾದಗಳನ್ನು ನ್ಯಾಯಮಂಡಳಿಯ ಮುಂದೆ ಅರ್ಜಿ ಸಲ್ಲಿಸಲು ೧೯೭೪ ಡಿಸೆಂಬರ್ ೩೦ ಕೊನೆಯ ಗಡುವಾಗಿದ್ದಿತು. ಅನಂತರ ಉಂಟಾದ ಸಮಸ್ಯೆಗಳ ನಿವಾರಣೆಗೆ ೧೯೭೪ರ ಕಾಯ್ದೆಗೆ ತಿದ್ದುಪಡಿ ಮಾಡಿ, ಹಲವು ಉಪವಿಧಿಗಳನ್ನು ಸೇರಿಸಲಾಯಿತು. ರಾಜ್ಯ ಸರ್ಕಾರದ ಈ ದಿಟ್ಟತನದ ನಿರ್ಧಾರ ಜಮೀನ್ದಾರರ ಉದ್ಧಟತನವನ್ನು ಮುರಿದು ಗೇಣಿ ಪದ್ಧತಿಯನ್ನು ತೊಲಗಿಸಿದೆ. ಗೇಣಿದಾರನಿಗೆ ಭೂ ಒಡೆತನ, ಭೂಹೀನರಿಗೆ ಭೂಮಿಯ ಒಡೆತನ ಮಾಡಿ ಉಳುವವನೇ ಭೂ ಒಡೆಯನೆಂದು ಸಾಬೀತುಗೊಳಿಸಿತು.[೬]

**ಹೆಚ್ಚುವರಿ ಭೂಮಿಯ ಹಂಚಿಕೆ**

ಸರ್ಕಾರ ಸ್ವಾದೀನಪಡಿಸಿಕೊಂಡ ಹೆಚ್ಚುವರಿ ಭೂಮಿಯನ್ನು ಭೂರಹಿತರಿಗೆ ವಿತರಿಸುವ ಮೂಲಕ ಗ್ರಾಮಾಂತರ ಬಡಜನತೆಯ ಜೀವನವನ್ನು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉತ್ತಮ ಹಂತಕ್ಕೆ ತಂದು, ಕೆಲ ಸಾಮಾಜಿಕ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಸರ್ಕಾರ ಸ್ವಾದೀನಪಡಿಸಿಕೊಂಡ ಹೆಚ್ಚುವರಿ ಭೂಮಿಯನ್ನು ಕರ್ನಾಟಕ ಭೂ ಸುಧಾರಣಾ ಕಾಯ್ದೆ ೧೯೬೧ ಅಧಿನಿಯಮ ೭೭ರ ಅಡಿಯಲ್ಲಿ ವಿತರಿಸಲಾಗುತ್ತಿದೆ. ಈ ಮೊದಲಿದ್ದ ಹೆಚ್ಚುವರಿ ಭೂಮಿಯಲ್ಲಿ ಶೇ. ೫೦ ಭಾಗವನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಲಾಗಿತ್ತು. ನಂತರ ೨೧-೦೪-೧೯೭೨ ರಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ ನೀಡುವ ಹೆಚ್ಚುವರಿ ಭೂಮಿಯನ್ನು ಶೇ. ೭೫ಕ್ಕೆ ಏರಿಕೆ ಮಾಡಲಾಗಿದೆ.[೭]

## ಭೂ ನ್ಯಾಯಮಂಡಳಿ

ಕರ್ನಾಟಕ ಭೂ ಸುಧಾರಣಾ ಕಾಯ್ದೆ ೧೯೬೧ರ ಕಲಂ ೪೮(೧) ರ ಅನುಸಾರ ಕರ್ನಾಟಕ ಸರ್ಕಾರ ರಾಜ್ಯದಲ್ಲಿ ೧೭೭ ಭೂನ್ಯಾಯ ಮಂಡಳಿಗಳನ್ನು ರಚಿಸಲಾಗಿರುತ್ತದೆ.[೮]

ಭೂನ್ಯಾಯಮಂಡಳಿಗಳ ಪ್ರಕರಣಗಳ ವಿಲೇವಾರಿ ವಿವರ್

| ವಿಭಾಗಗಳ ಹೆಸರು | ಸ್ವೀಕರಿಸಿದ ಒಟ್ಟು ಅರ್ಜಿಗಳು | | ವಿಲೇವಾರಿಯಾದ ಒಟ್ಟು ಅರ್ಜಿಗಳು | | ತಿರಸ್ಕೃತ ಅರ್ಜಿಗಳು | | ಬಾಕಿ ಅರ್ಜಿಗಳು | |
|---|---|---|---|---|---|---|---|---|
| | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| ಮೈಸೂರು | ೨೪೩೮೨೯ | ೬೪೮೨೦೪.೦೨ | ೨೪೩೬೮೪ | ೬೪೭೫೮೧.೦೩ | ೮೨೬೪೪ | ೨೩೮೮೨೧.೨೭ | ೧೪೫ | ೬೨೪.೦೪ |
| ಬೆಂಗಳೂರು | ೬೯೬೫೯ | ೧೯೧೧೦೬.೩೬ | ೬೬೦೪೭ | ೧೭೬೨೪೦.೧೧ | ೩೬೭೬೨ | ೯೯೬೦೩.೩೭ | ೩೬೧೨ | ೧೪೮೬೬.೨೫ |
| ಬೆಳಗಾವಿ | ೨೮೨೮೦೪ | ೧೮೬೪೪೪೦.೦೫ | ೨೮೧೨೧೮ | ೧೮೪೪೬೭೯.೩೦ | ೮೩೨೧೨ | ೬೩೨೭೧೪.೦೪ | ೧೫೮೬ | ೧೯೭೬೦.೧೫ |
| ಕಲುಬುರಗಿ | ೪೪೬೩೩ | ೪೩೯೧೦೫.೨೧ | ೪೪೪೩೧ | ೪೩೪೭೨೯.೧೮ | ೨೭೩೦೪ | ೨೯೩೧೭೩.೩೩ | ೨೦೨ | ೪೪೭೫.೨೩ |

## ಇನಾಂ ರದ್ದತಿ

ಕರ್ನಾಟಕ ಕಾಯ್ದೆ ೧೯೫೪, ಕರ್ನಾಟಕ ಮತೀಯ ಮತ್ತು ಧಾರ್ಮಿಕ ಇನಾಂ ರದ್ದತಿ ಕಾಯ್ದೆ ೧೯೫೫, ೧೯೬೧ರ ಕರ್ನಾಟಕ ಗ್ರಾಮ ಕಚೇರಿ ರದ್ಧತಿ ಕಾಯ್ದೆ, ೧೯೭೬ ಕರ್ನಾಟಕ ಇನಾಂ ರದ್ದತಿ ಕಾಯ್ದೆ, ೧೯೭೭ರ ಕಾಯ್ದೆಯ ಅಡಿಯಲ್ಲಿ ಉಳುಮೆ ಮಾಡುತ್ತಿದ್ದ ಗೇಣಿದಾರರಿಗೆ ಜಮೀನನ್ನು ಮರು ಮಂಜೂರು ಮಾಡಲಾಗಿದೆ.[೧೦]

**ಕೃಷಿ ಭೂಮಿಯನ್ನು ಕೃಷಿಯೇತರ ಉದ್ದೇಶಕ್ಕಾಗಿ ಖರೀದಿಸಲು ಇರಬೇಕಾದ ಅರ್ಹತೆ**

ಒಬ್ಬ ವ್ಯಕ್ತಿ ವೈಯಕ್ತಿಕವಾಗಿ ಕೃಷಿ ಭೂಮಿಯನ್ನು ಖರೀದಿಸಲು, ಕೃಷಿ ಮಾಡುವವರನ್ನು ಹೊರತುಪಡಿಸಿ ಬೇರಾವುದೇ ವ್ಯಕ್ತಿ ಭೂಮಾಲೀಕರಾಗಿ ಅಥವಾ ಗೇಣಿದಾರರಾಗಿ ಅಥವಾ ಅಡಮಾನದಾರರಾಗಿರುವಂತಿಲ್ಲ. ಒಂದು ಕುಟುಂಬ ಭೂಮಿ ಹೊಂದುವ ಪರಿಮಿತಿಯನ್ನು ೧೦ ಯುನಿಟ್‌ಗಳೆಂದು ನಿಗದಿಪಡಿಸಲಾಯಿತು. ಶೈಕ್ಷಣಿಕ, ಧಾರ್ಮಿಕ ದತ್ತಿ ಸಂಸ್ಥೆಗಳು, ಸೊಸೈಟಿ ಹಾಗೂ ಭೂಮಿಯ ಆದಾಯವನ್ನು ಪೂರ್ಣವಾಗಿ ತನ್ನ ಸಂಸ್ಥೆಗೆ ಬಳಸಿಕೊಳ್ಳುವ ಟ್ರಸ್ಟ್‌ಗಳು ೨೦ ಯುನಿಟ್ ಭೂಮಿಗಳನ್ನು ಹೊಂದಬಹುದು. ಈ ಎಲ್ಲಾ ನಿರ್ಬಂಧ, ಪರಿಮಿತಿ ಇತ್ಯಾದಿಗಳನ್ನು ಭೂಮಿ ಹೊಂದಲು ವಿಧಿಸಿದೆ. ಆದರೂ ಸರ್ಕಾರವು ಕೃಷಿ ಭೂಮಿಯನ್ನು ಕೃಷಿಯೇತರ ಉದ್ದೇಶಗಳಾದ ಕೈಗಾರಿಕೆ, ಶಿಕ್ಷಣ, ಧಾರ್ಮಿಕ, ವಸತಿ, ತೋಟಗಾರಿಕೆ ಮತ್ತು ಹೂ ಬನಗಳ ಅವಶ್ಯಕತೆಗಾಗಿ ಕೆಲವೊಂದು ಅವಕಾಶಗಳನ್ನು ಕರ್ನಾಟಕ ಭೂ ಸುಧಾರಣಾ ಕಾಯ್ದೆ ೧೯೬೧ರ ಸೆಕ್ಷನ್ ೧೦೯(೧)ರ ಅಡಿಯಲ್ಲಿ ಕ್ರಮವಾಗಿ ೪೦ ಯುನಿಟ್, ೮ ಯುನಿಟ್, ೨ ಯುನಿಟ್, ೨೦ ಯುನಿಟ್ ಹಾಗೂ ೪೦ ಯುನಿಟ್‌ಗಳನ್ನು ಹೊಂದಲು ಅವಕಾಶ ಮಾಡಿಕೊಡಲಾಯಿತು. ಒಂದು ವೇಳೆ ಉದ್ದೇಶ ಮತ್ತು ವಿಸ್ತೀರ್ಣ ಬದಲಾದರೆ ಅಥವಾ ಮೀರಿದರೆ ಇದನ್ನು ೧೦೯(೧ಎ) ಕಲಂ ಅಡಿಯಲ್ಲಿ ಪರಿಗಣಿಸಿ ಮುಖ್ಯ ಕಾರ್ಯದರ್ಶಿಗಳ ನೇತೃತ್ವದ ಉನ್ನತ ಅಧಿಕಾರಸ್ಥ ಸಮಿತಿಯ ಶಿಫಾರಸ್ಸಿನೊಂದಿಗೆ ಮತ್ತು ಸಚಿವ ಸಂಪುಟದ ಅನುಮೋದನೆಯೊಂದಿಗೆ ಸರ್ಕಾರವು ತನ್ನ ಅಧಿಕಾರ ಬಳಸಿ ಯಾವುದೇ ವಿಸ್ತೀರ್ಣವನ್ನು ಮತ್ತು ಯಾವುದೇ ಉದ್ದೇಶಕ್ಕೆ ವಿನಾಯಿತಿ ಅಥವಾ ಅನುಮತಿ ನೀಡಬಹುದಾಗಿದೆ.[೧೧] ಈ ನಿಯಮಾನುಸಾರ ಯಾವುದೇ ನೋಂದಾಯಿತ ಸೊಸೈಟಿ ಅಥವಾ ಸಂಸ್ಥೆ ಜಿಲ್ಲಾಧಿಕಾರಿಗಳಿಂದ ಅಥವಾ ರಾಜ್ಯ ಸರ್ಕಾರದಿಂದ ಪೂರ್ವಾನುಮತಿ ಪಡೆದು ಕೃಷಿ ಭೂಮಿಯನ್ನು ಕೊಳ್ಳಬಹುದಾಗಿದೆ. ಅಥವಾ ಹೊಂದಬಹುದಾಗಿದೆ.

ಕರ್ನಾಟಕ ಭೂಸುಧಾರಣೆ ಕಾಯ್ದೆ ೧೯೬೧ರ ಕಲಂ ೧೬(೨)ಕ್ಕೆ ತಿದ್ದುಪಡಿ ತಂದು ಅದೇ ಕಾಯ್ದೆಯ ಕಲಂ ೪೮(೩) ರಂತೆ ಅದಿಭೋಗದಾರಿಕೆಯನ್ನು ಪಡೆದಂತಹ ಫಲಾನುಭವಿಗಳು ತಮ್ಮ ಮಕ್ಕಳ ಉನ್ನತ ವ್ಯಾಸಂಗಕ್ಕೆ ಅಂದರೆ ಶೈಕ್ಷಣಿಕ ಉದ್ದೇಶಕ್ಕಾಗಿ ಇಂತಹ ಜಮೀನುಗಳನ್ನು ಅಡಮಾನವಿಟ್ಟು ಅಥವಾ ಸದರಿ ಜಮೀನನ್ನು ಆಧಾರ ಕೊಟ್ಟು ಸಾಲ ಪಡೆಯಲು ೨೯ ಜುಲೈ ೨೦೧೦ರಿಂದ ಅನ್ವಯವಾಗುವಂತೆ ಅವಕಾಶ ಕಲ್ಪಿಸಲಾಗಿದೆ.

ಕೃಷಿಯೇತರ ಭೂಮಿಗಳು ಮುಖ್ಯವಾಗಿ ಮನೆ ನಿವೇಶನಗಳ ಸಂಬಂಧದಲ್ಲಿ ಮೂಲಗೇಣಿ ಗುತ್ತಿಗೆಗಳ ಕೆಲವು ಬಗೆಗಳು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಚಾಲ್ತಿಯಲ್ಲಿವೆ. ಅನೇಕ ಕಾರಣಗಳಿಂದ ಮೂಲ ಗೇಣಿದಾರರು ಅಥವಾ ಒಳಮೂಲ ಗೇಣಿದಾರರಿಗೆ ಮಾಲೀಕತ್ವವನ್ನು ಪ್ರಧಾನ ಮಾಡಲು 'ಕರ್ನಾಟಕ ಮೂಲಗೇಣಿ ಅಥವಾ ಒಳಮೂಲ ಗೇಣಿದಾರರಿಗೆ ಮಾಲೀಕತ್ವವನ್ನು ಪ್ರಧಾನ ಮಾಡುವ ಅಧಿನಿಯಮ ೨೦೧೧ನ್ನು' ದಿನಾಂಕ ೨೩ ಜುಲೈ ೨೦೧೨ರಂದು ಸರ್ಕಾರವು ರಾಜ್ಯ ಪತ್ರದಲ್ಲಿ ಪ್ರಕಟಿಸಿತ್ತು. ಈ ಅಧಿನಿಯಮದ

ಉಪಸಂಬಂಧಗಳು ದಿನಾಂಕ ೨೦ ಡಿಸೆಂಬರ್ ೨೦೧೨ರಿಂದ ಜಾರಿಗೆ ಬಂದಿರುತ್ತವೆ. ಸದರಿ ಕಾಯ್ದೆಯನ್ನು ಅನುಷ್ಠಾನಗೊಳಿಸಲು ದಿನಾಂಕ ೦೭ ನವೆಂಬರ್ ೨೦೧೬ರಂದು ಕರ್ನಾಟಕ ಮೂಲ ಗೇಣಿ ಅಥವಾ ಒಳಮೂಲ ಗೇಣಿದಾರರಿಗೆ ಮಾಲೀಕತ್ವವನ್ನು ಪ್ರಧಾನ ಮಾಡುವ ನಿಯಮಗಳನ್ನು ೨೦೧೬ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ. ೮೪, ಎಲ್.ಆರ್.ಎಂ. ೨೦೧೨, ದಿನಾಂಕ ೦೭-೧೧-೨೦೧೬ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಕೃತವಾಗಿ ಪ್ರಕಟಿಸಲಾಯಿತು.[೨]

ಕೃಷಿ ಭೂಮಿಯನ್ನು ಖರೀದಿಸಲು ಕೃಷಿಯೇತರ ಆದಾಯದ ಮಿತಿಯನ್ನು ರೂ. ೨ ಲಕ್ಷದಿಂದ, ರೂ. ೨೫ ಲಕ್ಷಗಳಿಗೆ ಹೆಚ್ಚಿಸಲಾಗಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ ೧೯೬೧ರ ಕಲಾಂ ೭೯ಕ್ಕೆ ತಿದ್ದಪಡಿ ಮಾಡಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ೨೪ ಶಾಸನ ೨೦೧೫ರ ದಿನಾಂಕ ೧೩ ಆಗಸ್ಟ್ ೨೦೧೫ರಂದು ಆದೇಶಿಸಲಾಯಿತು.

ಕರ್ನಾಟಕ ಭೂ ಸುಧಾರಣಾ ಕಾಯ್ದೆ ಕಲಂ ೮೦ಕ್ಕೆ ತಿದ್ದುಪಡಿ ತಂದು ಪ್ರಸ್ತುತ ಜಮೀನುಗಳನ್ನು ಹೊಂದಲು, ಅನುಮತಿ ನೀಡಲು ಉಪವಿಭಾಗಾಧಿಕಾರಿಗಳಿಗಿದ್ದ ಅಧಿಕಾರವನ್ನು ಆಯಾ ಜಿಲ್ಲಾಧಿಕಾರಿಗಳಿಗೆ ನೀಡಲಾಯಿತು.

೧೯೭೪ರ ಭೂಸುಧಾರಣಾ ಕಾಯ್ದೆಯು ಗುತ್ತಿಗೆ ಪದ್ಧತಿಯನ್ನು ಸಂಪೂರ್ಣವಾಗಿ ರದ್ದುಗೊಳಿಸಿದೆ. ಆದರೆ ಇದು ಪರಿಣಾಮಕಾರಿಯಾಗಿ ಜಾರಿಗೆ ಬರದೆ ಕರ್ನಾಟಕದಲ್ಲಿ ಗೇಣಿದಾರರ ಸಂಖ್ಯೆ ಶೇ. ೬.೦೪ರಷ್ಟಿದೆ. ಭೂಸುಧಾರಣೆ ಜಾರಿಗೆ ಬರುವುದಕ್ಕಿಂತ ಮುಂಚಿತವಾಗಿ ೧೯೭೦-೭೧ರಲ್ಲಿ ಗೇಣಿದಾರರ ಸಂಖ್ಯೆ ಶೇ. ೧೫.೮೦ ರಷ್ಟಿತ್ತು. ಈ ಸರ್ಕಾರ ಸೈನಿಕರಿಗೆ ಗೇಣಿಗೆ ಅವಕಾಶ ನೀಡಿದ್ದು ಇದನ್ನು ಹೊರತುಪಡಿಸಿ ಮುಚ್ಚುಮರೆಯ ಗೇಣಿಗಾರಿಕೆ ನಡೆಯುತ್ತಿದೆ. ಇದನ್ನು ಮೂರು ರೀತಿಯಲ್ಲಿ ಕಾಣಬಹುದಾಗಿದೆ.[೩]

ಭೂ ಮಾಲೀಕರು ಮತ್ತು ಗುತ್ತಿಗೆದಾರರು ಉತ್ಪಾದನಾ ವೆಚ್ಚ ಮತ್ತು ಉತ್ಪನ್ನವನ್ನು ಸಮಾನವಾಗಿ ಹಂಚಿಕೊಳ್ಳುವುದು.

ಉತ್ಪಾದನೆಯ ಎಲ್ಲಾ ವೆಚ್ಚಗಳನ್ನು ಗುತ್ತಿಗೆದಾರ ವಹಿಸಿಕೊಳ್ಳುವುದು. ಉತ್ಪನ್ನದ ಅರ್ಧ ಭಾಗ ಆತನ ಪಾಲು.

ಉತ್ಪಾದನೆಯ ಎಲ್ಲಾ ವೆಚ್ಚಗಳನ್ನು ಭೂ ಮಾಲೀಕ ವಹಿಸಿಕೊಳ್ಳುವುದು. ಉತ್ಪನ್ನದಲ್ಲಿ ಮೂರನೇ ಒಂದು ಭಾಗವನ್ನು ಗುತ್ತಿಗೆದಾರ ಪಡೆಯುತ್ತಾನೆ.

೧೯೮೧-೮೨ರಲ್ಲಿ ೨,೮೭,೯೩೭ ಗೇಣಿದಾರರು ಪ್ರಕರಣಗಳನ್ನು ಹಾಕಿದ್ದರು. ಅವುಗಳಲ್ಲಿ ೨,೭೩,೬೨೫ ಪ್ರಕರಣಗಳು ತೀರ್ಮಾನವಾಗಿ ೧೩,೩೧೨ ಪ್ರಕರಣಗಳು ಹಾಗೆಯೇ ಬಾಕಿ ಉಳಿದವು. ಈ ಕಾಯ್ದೆಯಿಂದಾಗಿ ೩,೭೦೦ ಜನರು ಹೊಲಗಳಲ್ಲಿರುವ ಮನೆಗಳಲ್ಲಿ ವಾಸ ಮಾಡುತ್ತಿದ್ದು, ಆ ಮನೆಯ ಒಡೆಯರಾದರು. ಮನೆಯ ಪಕ್ಕದಲ್ಲಿದ್ದ ತಮ್ಮದಲ್ಲದ ಭೂಮಿಯ ಅಥವಾ ಜಮೀನಿನ ಒಡೆಯರಾದರು. ಹತ್ತಾರು ವರ್ಷಗಳಿಂದ ವಿಲೇವಾರಿ ಆಗದೇ ಉಳಿದಿದ್ದ ೧.೦೮ ಲಕ್ಷ ಗೇಣಿ ವಸೂಲಿಯ ಅರ್ಜಿಗಳು ವಿಲೇವಾರಿಯಾಗಿ, ಭೂಮಾಲೀಕರ ಬೇಡಿಕೆಗಳೆಲ್ಲ

ಬಗೆಹರಿದವು. ೨.೯೦ ಲಕ್ಷ ಎಕರೆ ಹೆಚ್ಚುವರಿ ಭೂಮಿಯೆಂದು ಘೋಷಿಸಿ ಭೂರಹಿತರಿಗೆ ಹಂಚಿಕೆ ಮಾಡಲಾಯಿತು. ೪.೮೫ ಲಕ್ಷ ಗೇಣಿದಾರರು ೨೦.೯೮ ಲಕ್ಷ ಎಕರೆಯ ಭೂಮಿಯ ಒಡೆಯರಾದರು. ೧.೦೫ ಲಕ್ಷ ಎಕರೆ ಹೆಚ್ಚುವರಿ ಭೂಮಿಯಿದ್ದು, ೧೪,೭೦೦ ಎಕರೆ ಜಮೀನನ್ನು ಜಮೀನಿಲ್ಲದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮತ್ತು ೬೯,೦೦೦ ಎಕರೆ ಜಮೀನನ್ನು ಸಮಾಜದ ಇತರೆ ದುರ್ಬಲ ವರ್ಗದ ಜನರಿಗೆ ಹಂಚಿಕೆ ಮಾಡಿ ಹೊಸ ಭೂಮಾಲೀಕನನ್ನಾಗಿ ಮಾಡಲಾಯಿತು. ಈ ಶಾಸನದಿಂದಾಗಿ ಜಮೀನು ಕಳೆದುಕೊಂಡ ಭೂ ಮಾಲಿಕರಿಗೆ ೨೫.೦೩ ಕೋಟಿ ರೂಗಳಷ್ಟು ಪರಿಹಾರ ನೀಡಲಾಗಿದೆ.

**ಭೂ ಸುಧಾರಣೆಯ ಪರಿಣಾಮಗಳು**

ಕೃಷಿ ಗಣತಿಯಂತೆ ೧೯೭೧ರ ಕರ್ನಾಟಕದಲ್ಲಿ ಒಟ್ಟು ೩೫,೫೧,೨೩೦ ಕೃಷಿ ಗುತ್ತಿಗೆಗಳಲ್ಲಿ, ೪,೮೫,೪೪೬ ಗೇಣಿದಾರರು ೧೯೭೪ರ ಭೂಸುಧಾರಣಾ ಕಾಯ್ದೆಯಿಂದ ಭೂಮಿಯ ಹಕ್ಕುಗಳನ್ನು ಪಡೆಯಲು ಸಾಧ್ಯವಾಯಿತು.

ಕೃಷಿ ಗಣತಿಯ ನಂತರ ಹಾಗೂ ಗೇಣಿ ರದ್ಧತಿಯ ಘೋಷಣೆಗೂ ಮುನ್ನ ಗುತ್ತಿಗೆ ಪ್ರಮಾಣ ಹೆಚ್ಚರಬಹುದಾದರೂ ಗ್ರಾಮೀಣ ಜನರ ಮೇಲೆ ಈ ಕಾಯ್ದೆ ಹೆಚ್ಚು ಪ್ರಭಾವ ಬೀರಿತು ಇದರಿಂದ ಶೇ.೧೫ ರಷ್ಟು ಗ್ರಾಮೀಣ ಜನತೆಗೆ ಈ ಕಾಯ್ದೆಯಿಂದ ಲಾಭವಾಯಿತು.

ಈ ಕಾಯ್ದೆಯಿಂದ ಬಯಲುಸೀಮೆಯ ರೈತರಿಗೆ ತಕ್ಷಣ ಆರ್ಥಿಕ ಪ್ರಯೋಜನಗಳು ಉಂಟಾಗದೆ ಇರಬಹುದು, ಆದರೆ ಭೂಮಿಯನ್ನು ಪಡೆದ ಕಾರಣದಿಂದ ರೈತರಿಗೆ ಅತೀವ ತೃಪ್ತಿ ಉಂಟಾಯಿತು.

ಈ ಕಾಯ್ದೆಯಿಂದ ಕಾನೂನಿ ಅಡಿಯಲ್ಲಿ ಗರಿಷ್ಟ ಮಿತಿಯಲ್ಲಿದ್ದ ಹೆಚ್ಚುವರಿ ಭೂಮಿಯಲ್ಲಿ, ಬಹಳ ಕಡಿಮೆ ಪ್ರಮಾಣದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಯಿತು. ಈ ಭಾಗದ ದೊಡ್ಡ ದೊಡ್ಡ ಭೂಮಾಲೀಕರಿಗೆ ಈ ಕಾಯ್ದೆಯಿಂದ ಹೆಚ್ಚು ನಷ್ಟವಾಗಿಲ್ಲ. ಕಾರಣ ಐದು ಜನರಿರುವ ಕುಟುಂಬಗಳಿಗೆ ಹೆಚ್ಚುವರಿ ಯುನಿಟ್‌ಗಳನ್ನು ನೀಡಿದ್ದು, ಹಾಗೂ ಬೆಳೆದ ವಯಸ್ಸಿನ ಗಂಡು ಮಕ್ಕಳನ್ನು ಪ್ರತ್ತೇಖ ಕುಟುಂಬವೆಂದು ಪರಿಗಣಿಸಿದ್ದು ಅವರಿಗೆ ಹಸ್ತಕ್ಷೇಪ ಮಾಡಲು ಅವಕಾಶ ಮಾಡಿಕೊಟ್ಟಿತು.

ಈ ಕಾಯ್ದೆಯಲ್ಲಿ ಭೂಮಿಗೆ ಸಂಬಂಧಿಸಿದ ದಾಖಲೆಗಳನ್ನು ಕಾಲಕಾಲಕ್ಕೆ ಪರಿಶೀಲಿಸುವ ವ್ಯವಸ್ಥೆ ಇಲ್ಲದೇ ಇರುವದರಿಂದ, ಅವರಿಗೆ ಗರಿಷ್ಟ ಮಿತಿಗಿಂತ ಹೆಚ್ಚಿನ ಭೂಮಿ ಇದ್ದರೂ ಬೇರೆ ಯಾವ ಸಮಸ್ಯೆಗಳು ಎದುರಾಗಲಿಲ್ಲ.

ಭೂಸುಧಾರಣೆಗಳಿಂದ ಬಯಲುಸೀಮೆಯ ಹಳ್ಳಿಗಳಿಗೆ ಬ್ಯಾಂಕ್ ಮತ್ತು ಇತರ ಹಣಕಾಸು ಸಂಸ್ಥೆಗಳು ಕಾಲಿಡಲು ಸಾಧ್ಯವಾಯಿತು.

ಬಯಲುಸೀಮೆಯ ರೈತರಿಗೆ ಕರ್ನಾಟಕದ ಭೂಸುಧಾರಣೆಗಳು ಬಂಡವಾಳದ ವಹಿವಾಟಿಗೆ ಹೆಚ್ಚಿನ ಅವಕಾಶಗಳನ್ನು ಕಲ್ಪಿಸಿಕೊಟ್ಟಿತು.

## ಗೇಣಿ ಅರ್ಜಿಗಳ ವಿಶ್ಲೇಷಣೆ ಹಾಗೂ ಅವುಗಳ ವಿಲೇವಾರಿ

| ಜಿಲ್ಲೆ | ಡಿಸೆಂಬರ್ ೧೯೮೬ರ ವರೆಗೆ ವಿಲೆವಾರಿ ಆದ ಅರ್ಜಿಗಳು | ಹಳೆಯ ಗೇಣಿದಾರರ ಪರವಾಗಿ ಆದ ಅರ್ಜಿಗಳು | ಯಶಸ್ವಿಯಾದ ಅರ್ಜಿದಾರರ ಪ್ರಮಾಣ | ಸಾಗುವಳಿ ಹಕ್ಕನ್ನು ನೀಡಿದ ಪ್ರದೇಶ | ಗೇಣಿ ನೀಡಿದ ಭೂಮಿಯ ಸಂಖ್ಯೆ | ಗೇಣಿ ಭೂಮಿಯ ಒಟ್ಟು ಪ್ರದೇಶ | ಪ್ರತಿ ಗೇಣಿದಾರರ ಸರಾಸರಿ ಪ್ರದೇಶ |
|---|---|---|---|---|---|---|---|
| ಚಿತ್ರದುರ್ಗ | ೭೩೮೯ | ೨೫೪೪ | ೩೪.೪೩ | ೧೭೫೧೦ | ೨೬೨೦ | ೧೬೭೮೭ | ೬.೯ |
| ಬಳ್ಳಾರಿ | ೧೭೯೦೭ | ೬೬೨೨ | ೩೬.೯೮ | ೩೬೦೧೨ | ೭೫೦೪ | ೫೯೬೫೨ | ೫.೪ |





## ಬಯಲುಸೀಮೆಯ ಕೃಷಿ ಗುತ್ತಿಗೆಯ ಗಣತಿ ೧೯೭೦-೭೧(೧೯೭೪)

೧೯೮೧ ರಿಂದ ೧೯೮೬ರವರೆಗೆ ಚಿತ್ರದುರ್ಗದಲ್ಲಿ ೭,೩೮೯ ಅರ್ಜಿಗಳು ವೀಲೆವಾರಿಯಾಗಿವೆ. ಅದರಲ್ಲಿ ೨,೫೪೪ ಅರ್ಜಿಗಳು ಗೇಣಿದಾರರ ಪರವಾಗಿ ತೀರ್ಮಾನವಾಗಿದ್ದು, ಶೇ. ೩೪.೪೩ರಷ್ಟು ಯಶಸ್ವಿಯಾದ ಅರ್ಜಿದಾರರ ಪ್ರಮಾಣವಾಗಿದೆ. ಇದರಿಂದ ೧೭,೫೧೦ ಎಕರೆ ಭೂಮಿಗೆ ಸಾಗುವಳಿ ಹಕ್ಕನ್ನು ನೀಡಲಾಯಿತು. ಲಭ್ಯವಾದ ಗೇಣಿ ಭೂಮಿಯ ಒಟ್ಟು ಪ್ರದೇಶ ೧೬,೭೮೭ ಎಕರೆ.

೧೯೮೧ ರಿಂದ ೧೯೮೬ರವರೆಗೆ ಬಳ್ಳಾರಿಯಲ್ಲಿ ೧೭,೯೦೭ ಅರ್ಜಿಗಳು ವೀಲೆವಾರಿಯಾಗಿವೆ. ಅದರಲ್ಲಿ ೬,೬೨೨ ಅರ್ಜಿಗಳು ಗೇಣಿದಾರರ ಪರವಾಗಿ ತೀರ್ಮಾನವಾಗಿದ್ದು, ಶೇ.೩೬.೯೮ರಷ್ಟು ಯಶಸ್ವಿಯಾದ ಅರ್ಜಿದಾರರ ಪ್ರಮಾಣವಾಗಿದೆ. ಇದರಿಂದ ೩೬,೦೧೨ ಎಕರೆ ಭೂಮಿಗೆ ಸಾಗುವಳಿ ಹಕ್ಕನ್ನು ನೀಡಲಾಯಿತು. ಲಭ್ಯವಾದ ಗೇಣಿ ಭೂಮಿಯ ಒಟ್ಟು ಪ್ರದೇಶ ೫೯,೬೫೨ ಎಕರೆ.

ಈ ಮೇಲಿನ ಕೋಷ್ಟಕದಿಂದ ತಿಳಿದಿರುವಂತೆ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಗೇಣಿ ಅರ್ಜಿಗಳ ವಿಶ್ಲೇಷಣೆ ಹಾಗೂ ಅವುಗಳ ವಿಲೇವಾರಿಗಳ ವ್ಯತ್ಯಾಸವನ್ನು ಗಮನಿಸುವ ಅಗತ್ಯವಿದೆ. ಅನಂತರದಲ್ಲಿ ೧೯೭೪ರ ಭೂಸುಧಾರಣಾ ಕಾಯ್ದೆ ಜಾರಿಗೆ ಬಂದಾಗ ಲಕ್ಷಾಂತರ ಭೂಮಾಲೀಕರು ಭೂಮಿಯನ್ನು ಕಳೆದುಕೊಂಡರು. ಉಳುವವನೆ ಭೂಒಡೆಯನಾಗಿದ್ದು ಚಾರಿತ್ರಿಕ ತಿರುವನ್ನು ತಂದಿರುವುದು ಗಮನಾರ್ಹ.

**ಕೊನೆ ಟಿಪ್ಪಣಿಗಳು**

೧. ಕರ್ನಾಟಕ ಆರ್ಥಿಕ ಸಮೀಕ್ಷೆ, ೨೦೧೫-೧೬, ಕರ್ನಾಟಕ ಸರ್ಕಾರ, ಪುಟ ೨೨೦

೨. ಅದೇ, ಪುಟ ೨೨೧

೩. ಸೂರ್ಯನಾಥ್ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ-೨,೧೯೮೫, ಪುಟ,೪೪೭

೪. ಚಂದ್ರ ಪೂಜಾರಿ, ಯಾಕೀಗ ಭೂಮಿ ಪ್ರಶ್ನೆ,೨೦೧೦,ಪುಟ ೩೪-೩೫

೫. ಸೂರ್ಯನಾಥ್ ಯು. ಕಾಮತ್, ಪೂರ್ವೋಕ್ತ,ಪುಟ ೪೫೦

೬. ರಾಮಾಶ್ರಯ, 'ಕರ್ನಾಟಕದ ಭೂಸ್ವಾದೀನ ಅಧಿನಿಯಮ',೨೦೦೯, ಪುಟ ೪೮

೭. ಕೋಟಿ ಎಸ್.ವಿ., 'ಕರ್ನಾಟಕ ಭೂಕಂದಾಯ ಅಧಿನಿಯಮ,೨೦೦೯, ಪುಟ ೮೦

೮. ಕಂದಾಯ ಇಲಾಖೆಯ ವಾರ್ಷಿಕ ವರದಿ, ೨೦೧೬-೧೭, ಪುಟ ೫೨

೯. ಅದೇ, ಪುಟ ೫೩

೧೦. ಅದೇ, ಪುಟ ೫೪

೧೧. ರಾಜಶೇಖರ್ ನಾಯ್ಡು ಗುಡಿಬಂಡೆ, ಕರ್ನಾಟಕ ರಾಜ್ಯದಲ್ಲಿ ಭೂ ಹಕ್ಕು ಚಳವಳಿ,೨೦೧೫,ಪುಟ ೯೫

೧೨. ಕಂದಾಯ ಇಲಾಖೆಯ ವಾರ್ಷಿಕ ವರದಿ, ೨೦೧೬-೧೭, ಪುಟ ೫೪

೧೩. ಸೂರ್ಯನಾಥ್ ಯು. ಕಾಮತ್, ಪೂರ್ವೋಕ್ತ, ಪುಟ ೪೫೧

ಅಧ್ಯಾಯ – ೪

# ರೈತ ಚಳುವಳಿಗಳ ಉಗಮ ಮತ್ತು ಸ್ವರೂಪ

೪.೧ ಸ್ವಾತಂತ್ರ್ಯ ಪೂರ್ವದ ಕರ್ನಾಟಕ ರೈತ ಪ್ರತಿಭಟನೆಗಳು
೪.೨ ಸ್ವಾತಂತ್ರ್ಯ ನಂತರದ ಕರ್ನಾಟಕ ರೈತ ಪ್ರತಿಭಟನೆಗಳು

## ಅಧ್ಯಾಯ – ೪

# ರೈತ ಚಳುವಳಿಗಳ ಉಗಮ ಮತ್ತು ಸ್ವರೂಪ

ಪುರಾತನ ಕಾಲದಿಂದಲೂ ಕೃಷಿಯು ಜೀವನಾಧಾರ ವೃತ್ತಿ ಹಾಗೂ ಒಂದು ಸಂಸ್ಕೃತಿ. ಅದೊಂದು ಜೀವನದ ವಿಧಾನ. ಕೃಷಿಯು ಜೀವನದೊಂದಿಗೆ ನೇರ ಸಂಬಂಧ ಹೊಂದಿದ ಸರಳ ಪ್ರಕ್ರಿಯೆಯಾಗಬೇಕು. ಆಗ ಮಾತ್ರ ಆನಂದದಾಯಕವಾಗಿ ಜೀವ ಸಾರ್ಥಕತೆಗೆ ದಾರಿ ಮಾಡಿ ಕೊಡುತ್ತದೆ. ಭಾರತದ ವ್ಯವಸಾಯಕ್ಕೆ ಸುಮಾರು ೫೦೦೦ ವರ್ಷಗಳ ಭವ್ಯ ಪರಂಪರೆಯ ಇತಿಹಾಸವಿದೆ. ದುಡಿಮೆಯು ಆಯಾಸ ಮತ್ತು ಬೇಸರವನ್ನು ಕಳೆಯಲು ಲಾವಣಿ ಪದ ರಚನೆ ಆಗಿದೆ. ಈ ಲಾವಣಿ ಹಾಡುತ್ತಾ ವ್ಯವಸಾಯದ ಸಂಸ್ಕೃತಿ ಹಿರಿಮೆಯನ್ನು ಹೆಚ್ಚಿಸಿರುವ ಶ್ರೇಯಸ್ಸು ರೈತರಿಗೆ ಸಲ್ಲುತ್ತದೆ. ಸಕಲ ಜೀವರಾಶಿಗೆ ಅನ್ನ ಮತ್ತು ಆಶ್ರಯ ಕೊಡುವ ವ್ಯವಸಾಯವೇ ಈ ಭೂಮಿತಾಯಿ, ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾಚೀನ ಕಾಲದಲ್ಲಿ ಅನಾಗರಿಕತೆಯಿಂದ ನಾಗರೀಕತೆಯನ್ನು ಅಳವಡಿಸಿಕೊಂಡು ಮಾನವನಾಗಲು ಸಾಧ್ಯವಾಯಿತು. ಈ ರೀತಿ ವಿಕಸನ ಹೊಂದಿ ಆಧುನಿಕ ಕಾಲದವರೆಗೆ ವಿಸ್ತರಿಸಿಕೊಂಡು ಬಂದಿದ್ದು. ರೈತರ ನೋವು–ನಲಿವುಗಳು ಹಾಗೂ ಸಮಸ್ಯೆಗಳು ಬೆನ್ನಹಿಂದೆ ಬಿದ್ದಿವೆ. ಇವುಗಳನ್ನು ಬಗೆಹರಿಸಿಕೊಳ್ಳಲು ಮನವಿ, ದೂರುದುಮ್ಮಾನಗಳ ಮೂಲಕ ಧ್ವನಿ ಎತ್ತಿದರು. ಕೆಲವೊಮ್ಮೆ ಸ್ಪಂದಿಸದಿದ್ದಾಗ ಪ್ರತಿಭಟನೆ, ಹೋರಾಟ ಹಾಗೂ ಚಳುವಳಿಗಳ ಹಾದಿಯನ್ನು ಕಂಡುಕೊಂಡರು

### ೪.೧ ಸ್ವಾತಂತ್ರ್ಯ ಪೂರ್ವ ಕರ್ನಾಟಕ ರೈತ ಪ್ರತಿಭಟನೆಗಳು

ಕರ್ನಾಟಕದ ರೈತ ಚಳುವಳಿಗಳನ್ನು ಅವಲೋಕಿಸಿದಾಗ, ರೈತರು ಚಳುವಳಿಗಳ ಮೂಲಕ ತೆರಿಗೆ ಹೊರೆಯನ್ನು ಕಡಿಮೆ ಮಾಡಲು, ಬೆಳೆನಷ್ಟ, ಮಿತಿಮೀರಿದ ಗೇಣಿ, ಜಮೀನ್ದಾರರ ಶೋಷಣೆ, ಭೂಕಂದಾಯ ನೀತಿ ಹೀಗೆ ಬೇರೆ ಬೇರೆ ಕಾರಣ, ಹಕ್ಕು–ಬಾಧ್ಯತೆಗಳಿಗಾಗಿ ಹೋರಾಟ ಮಾಡಿರುವುದು ಗಮನಾರ್ಹ. ಈ ಬಗ್ಗೆ ವಿವರಗಳನ್ನು ಅವಲೋಕಿಸಿರುವುದು ಸ್ಪಷ್ಟ.

**ಚಿಕ್ಕದೇವರಾಜ ಒಡೆಯರ ಕಾಲದ ರೈತ ಚಳವಳಿ (ಕ್ರಿ.ಶ. ೧೬೮೩-೮೪):** ಚಿಕ್ಕದೇವರಾಜ ಒಡೆಯರು ಮೈಸೂರು ಸಂಸ್ಥಾನದ ಸಿಂಹಾಸನವೇರಿದಾಗ ಚಳವಳಿಯು ನಡೆಯಿತು. ಈ ಪ್ರತಿಭಟನೆ ನಡೆಯಲು ಪ್ರಮುಖ ಕಾರಣವೆಂದರೆ ಅಸಮರ್ಪಕ ತೆರಿಗೆಗಳನ್ನು ವಿಧಿಸಿದ್ದರು. ಇದನ್ನು ವಿರೋಧಿಸಿದ ರೈತರು "ಕಾಡು ಭೂಮಿಯನ್ನು ಬಸವಣ್ಣ ಉಳುತ್ತಾನೆ, ದೇವೇಂದ್ರನು ಮಳೆಯನ್ನು ಕರೆಯುತ್ತಾನೆ. ನಾವು ಕಷ್ಟಪಟ್ಟು ಪೈರು ಮಾಡಿ ನಿಮಗೇತಕ್ಕೆ ಕೊಡಬೇಕು"[೧] ಎಂದಾಗ ರೈತರನ್ನು ಶಿಕ್ಷಿಸಿ ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ರೈತರನ್ನು ತಗ್ಗಿಸಲು ೧೯ ತೆರಿಗೆಗಳನ್ನು ಹಾಕಿದರು. ಅವುಗಳೆಂದರೆ ಮನೆತೆರಿಗೆ, ಹುಲ್ಲುಹಣ, ದೇವರಾಯ ವಿಟ್ಟಿ, ಏರಸುಂಕ, ಸಮಯಾಚಾರ, ದನಕರು ಮಾರಿದ್ದಕ್ಕೆ ಸುಂಕ, ಕುರಿತೆರಿಗೆ, ಗುಳುವಿನ ಪೊಮ್ಮು, ಅಂಗಡಿವಸರ, ಕೂಟಾಚಾರ, ಉಬ್ಬೆಕಾಣಿಕೆ, ಅಂಗಡಿಪಟ್ಟಡಿ, ಗಿಡಕಾವಲು, ಜಾತಿಮಣಿಯ ಮಗ್ಗದ ಕಂದಾಯ, ಪಾಶವಾರ, ಮದುವೆ ತೆರಿಗೆ, ಉಪ್ಪಿನ ಮೇಳ, ಕೌದಿಯ ತೆರಿಗೆ ಇವುಗಳನ್ನು ವಸೂಲಿ ಮಾಡಲು ಗುತ್ತಿಗೆ ನೀಡಲಾಯಿತು.[೨] ಇದರಿಂದ ರೈತರು ಆಕ್ರೋಶಗೊಂಡರು. ಈ ಸಂದರ್ಭದಲ್ಲಿಯೆ ಒಡೆಯರ ಮಂತ್ರಿಯಾದ ಎಳಂದೂರು ವಿಶಾಲಾಕ್ಷ ಪಂಡಿತನು ರೈತರಿಗೆ ಬೆಂಬಲವಾಗಿದ್ದ ಜಂಗಮರನ್ನು ವಿಚಾರಿಸುವ ನಾಟಕ ಮಾಡಿ ಕೊಲ್ಲಿಸಿದನು. ಇದರಿಂದ ರೈತರ ಆಕ್ರೋಶ ದ್ವೇಷಕ್ಕೆ ಗುರಿಯಾಗಿ ವಿಶಾಲಾಕ್ಷ ಪಂಡಿತನನ್ನು ಕೊಲ್ಲಲಾಯಿತು.

**ಟಿಪ್ಪು ಕಾಲದಲ್ಲಿ ದಂಡದ ವಿರುದ್ಧ ರೈತರ ಫಿರ್ಯಾದು:** ಟಿಪ್ಪುವಿನ ಆಡಳಿತದ ಅವಧಿಯಲ್ಲಿ ನಡೆದ ರೈತರ ದೂರು ಇದಾಗಿದ್ದು ಆಡಳಿತ ಅಧಿಕಾರಿಗಳು ಇದನ್ನು ತಿರುಚಿ ಪ್ರತಿಬಿಂಬಿಸಿದ ಘಟನೆಯಾಗಿದೆ. ಶ್ರೀರಂಗಪಟ್ಟಣದ ಗ್ರಾಮಗಳಲ್ಲಿನ ರೈತರು ದಂಡಕೊಟ್ಟು ಅಸಾಹಯಕರಾಗಿ ಟಿಪ್ಪುವಿನ ಬಳಿ ದೂರು ಕೊಡಲು ಬಂದರು. ಆದರೆ ದಿವಾನ ಮೀರಸಾದಕ ಅಧಿಕಾರಿಗಳ ತಪ್ಪನ್ನು ಮುಚ್ಚಲು ಕುಟಿಲತಂತ್ರ ಮಾಡಿ, ರೈತರ ಮೇಲೆ ಟಿಪ್ಪುವಿಗೆ ಕೋಪ ಬರುವಂತೆ ಮಾಡಿ, ರೈತ ನಾಯಕನಾಗಿದ್ದ ಪಾಟೇಲ್‌ನನ್ನು ಗಲ್ಲಿಗೆ ಹಾಕಿಸಿದನು. ಆ ಸಮಯದಲ್ಲಿ ಪ್ರತಿಭಟನೆಯೆಂದರೆ ದೊರೆಯ ತನಕ ದೂರು ಒಯ್ಯುವುದಷ್ಟೆಯಾಗಿತ್ತು.[೩]

**ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ರೈತ ಪ್ರತಿಭಟನೆ (೧೮೩೦):** ನಗರವನ್ನು ಬಿದನೂರು ಎಂದು ಕರೆಯಲಾಗುತ್ತಿದ್ದು. ಇಲ್ಲಿನ ರೈತರು ೧೮೩೦ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಪ್ರತಿಭಟನೆ ಮಾಡಿದರು. ಶಿವಮೊಗ್ಗ ಜಿಲ್ಲೆಯ ಸುತ್ತಮುತ್ತ ಹುಟ್ಟಿಕೊಂಡ ಈ ಪ್ರತಿಭಟನೆಯು, ಮೈಸೂರು ಸಂಸ್ಥಾನದ ಇತಿಹಾಸದಲ್ಲಿಯೇ ಪ್ರಬಲವಾಗಿ ಹಬ್ಬಿದ ರೈತ ಹೋರಾಟ ಇದಾಗಿದೆ. ಈ ಹೋರಾಟ ವಸಾಹತುಶಾಹಿ ವಿರುದ್ಧದ ಹೋರಾಟವಾಗಬೇಕಿತ್ತು. ಬದಲಾಗಿ ಈ ಹೋರಾಟ ಮೈಸೂರಿನ ಒಡೆಯರ ಅಧಿಕಾರ ಕಿತ್ತುಕೊಂಡು, ವಸಾಹತುಶಾಹಿ ಸರ್ಕಾರದ ನೇರ ಆಡಳಿತಕ್ಕೆ ಒಳಪಡುವಂತೆ ಮಾಡಿತು.[೪]

ಪ್ರತಿಭಟನೆಗೆ ಪ್ರಮುಖ ಕಾರಣಗಳೆಂದರೆ: ಕಂದಾಯದ ಹೆಚ್ಚಳ, ಶರತ್‌ಪದ್ಧತಿ ಅಥವಾ ಶಿರ್ತಿ ವ್ಯವಸ್ಥೆ (ಕಟುಗುತ್ತಿಗೆ)ಯಿಂದಾದ ಶೋಷಣೆ, ಥಾಮಸ್ ಮನ್ರೋರವರ ಪ್ರಕಾರ

ಸಂಸ್ಥಾನದ ಕಂದಾಯವು ಕಡಿಮೆಯಾಗಿದ್ದು ಅಮಲ್ದಾರ ಮತ್ತು ಪೌಜುದಾರರಿಂದಾಗಿ ರೈತ ಶೋಷಣೆ[೭] ನಡೆಯುತ್ತಿತ್ತು ಎಂದಿದ್ದಾರೆ.

ಪೂರ್ಣಯ್ಯನವರು ಮಂತ್ರಿತ್ವ ಬಿಟ್ಟ ನಂತರ ರಾಮರಾಯನು ಸಂಬಂಧಿಗಳನ್ನೇ ಪೌಜುದಾರರಾಗಿ ನೇಮಿಸಿದ, ಇವರೆಲ್ಲರೂ ರೈತರನ್ನು ಸುಲಿಗೆ ಮಾಡಲಾರಂಭಿಸಿ ಕಂದಾಯ ದುರುಪಯೋಗಪಡಿಸಿಕೊಂಡರು. ಅದರಲ್ಲಿ ಪ್ರಮುಖನಾದವನು ನಗರ ಪ್ರದೇಶದ ಪೌಜುಧಾರ ಕೃಷ್ಣರಾಯ. ಇವನು ಹದಿಮೂರು ಲಕ್ಷ ರೂಪಾಯಿಯನ್ನು ಸಂಸ್ಥಾನಕ್ಕೆ ಕೊಡದೆ ಬಾಕಿ ಉಳಿಸಿಕೊಂಡಿದ್ದ. ಈ ವಿಷಯ ತಿಳಿದ ಒಡೆಯರು ರಾಮರಾಯನನ್ನು ವಿಚಾರಣೆಗೆ ಕಳುಹಿಸಿದಾಗ, ತನ್ನ ಸಂಬಂಧಿಯನ್ನು ಉಳಿಸಿಕೊಳ್ಳಲು ೩,೧/೨ ಲಕ್ಷ ರೂ ಬಾಕಿ ಕೊಡುವವರು ಸತ್ತು ಕೆಟ್ಟು ಹೋಗಿದ್ದಾರೆಂದು ಸುಳ್ಳು ಹೇಳುವ ಪ್ರಯತ್ನ ಮಾಡಿದನು.[೮] ಆದರೆ ಅವರು ಬಾಕಿ ಕೊಡಲು ಶಕ್ತರಿರುವುದಾಗಿ ಒಡೆಯರಿಗೆ ತಿಳಿದಾಗ, ಕೃಷ್ಣರಾಯನನ್ನು ತೆಗೆದು ಹಾಕಿ ವೀರರಾಜೇ ಎಂಬುವರನ್ನು ಪೌಜುದಾರನಾಗಿ ನೇಮಿಸಿದರು. ಇವನು ವಿಚಾರಣೆ ನಡೆಸಿ ಅನ್ಯಾಯ ಬಯಲಿಗೆಳೆದನು. ಇದರಿಂದ ಅನ್ಯಾಯ ಮಾಡಿದ ಹಣವನ್ನು ವಾಪಸ್ಸು ಕೊಡಬೇಕಾಗಿ ಬಂದಿದ್ದರಿಂದ ರೈತರನ್ನು ಒಡೆಯರ ಮೇಲೆ ಎತ್ತಿಕಟ್ಟಲು ಮುಂದಾದನು.

ಈ ಸಮಯದಲ್ಲಿ ಹೈಗಮಲ್ಲನೆಂದು ಕರೆಯುವ ದರೋಡೆಕೋರ ನಗರದಲ್ಲಿ ಮತ್ತೊಂದು ಕಡೆ ಹೋರಾಟ ಆರಂಭಿಸಿದನು. ಇವನು ಕುಂಸಿ ಎಂಬ ಸ್ಥಳದ ರೈತನ ಮಗನಾಗಿದ್ದು, ಚಿಕ್ಕಂದಿನಿಂದಲೇ ದರೋಡೆ ಮಾಡಿ ಜೈಲುಪಾಲಾಗಿದ್ದನು. ನಂತರ ಬಿಡುಗಡೆಯಾಗಿ ಜಂಗಮಸ್ವಾಮಿ ಬಳಿಯಲ್ಲಿ ಸೇವೆಗೆ ಸೇರಿ ನೆಲೆನಿಂತ, ಆದರೆ ಜಂಗಮಸ್ವಾಮಿ ಮರಣದ ತರುವಾಯ, ಅವನಲ್ಲಿದ್ದ ರಾಜಮುದ್ರೆಯನ್ನು ಕಳ್ಳತನ ಮಾಡಿ ವಲಸೆ ಹೋದನು. ದಕ್ಷಿಣ ಕನ್ನಡ ಜಿಲ್ಲೆಗೆ ಬಂದು ಕಳ್ಳತನ ಮಾಡಿ ಜೈಲಿಗೆ ಸೇರಿ ಬಿಡುಗಡೆಯಾಗುವಾಗ, ಬಿಡುಗಡೆ ಪತ್ರದಲ್ಲಿ 'ಬೂದಿಬಸಪ್ಪ ನಾಗರ ಕಾವಿಂದ' ಎಂದು ಬರೆಸಿಕೊಂಡು ನಗರ ಪ್ರದೇಶಕ್ಕೆ ಬಂದನು. ಆ ಪತ್ರವನ್ನು ರೈತರಿಗೆ ತೋರಿಸಿ ಈ ಪ್ರದೇಶದ ಆಳ್ವಿಕೆಯನ್ನು ತನಗೆ ಕೊಟ್ಟಿದ್ದಾರೆಂದು ಹೇಳಿ, ರೈತ ಕೂಟಗಳನ್ನು ರಚಿಸಿ, ಕಂದಾಯ, ಸಾಲಮನ್ನಾ ಮಾಡುವ ಭರವಸೆ ನೀಡಿ ಹೋರಾಟ ಆರಂಭಿಸಿದನು.

ರೈತರು ತಮ್ಮ ಹೋರಾಟದಲ್ಲಿ ಅಧಿಕಾರಿಗಳನ್ನು ವಿವಿಧ ಯಾತನೆಗೆ ಒಳಪಡಿಸಿದರು. ಅದು ಮುಖಕ್ಕೆ ಪಂಜು ಹಿಡಿಯುವುದು, ತೊಡೆಗಳನ್ನು ಚಿವುಟುವುದು, ತೋಳುಗಳಿಗೆ ಚುಚ್ಚುವುದು, ಕಿವಿಗಳಿಗೆ ಸಣ್ಣ ಕಲ್ಲುಗಳನ್ನು ಹಾಕುವುದು ಮುಂತಾದವು. ಇದರ ಜೊತೆ ಜೊತೆಯಲ್ಲಿಯೇ ೧೮೩೧ರ ತನಕ ಸೈನ್ಯದೊಂದಿಗೆ ನೇರವಾಗಿ ಹೋರಾಡಿದರು.[೯] ಮೈಸೂರು ಸಂಸ್ಥಾನದ ಸೈನ್ಯ ಈ ದಂಗೆಯನ್ನು ಹತ್ತಿಕ್ಕಲು ಸಾಧ್ಯವಿಲ್ಲದಿದ್ದಾಗ ಕಂಪನಿ ಸೈನ್ಯದ ನೆರವು ಪಡೆದು ದಂಗೆಕೋರರನ್ನು ಹತ್ತಿಕ್ಕಲಾಯಿತು. ಆದರೆ ಈ ರೈತ ದಂಗೆಯಿಂದ ಒಡೆಯರ ಅಸಮರ್ಥತೆ ಬಹಿರಂಗವಾಗಿ ಅಧಿಕಾರ ಕಳೆದುಕೊಳ್ಳುವಂತಾಯಿತು. ಅಲ್ಲದೇ ರೈತರ ಹಕ್ಕನ್ನು

ರಕ್ಷಿಸಲು ವಸಾಹತು ಶಾಹಿಗಳಿಂದಲೇ ಸಾಧ್ಯ ಎಂಬುದಾಗಿ ೫೦ ವರ್ಷಗಳ ಕಾಲ ಕಮೀಷನರ್‌ಗಳ ಆಳ್ವಿಕೆಗೆ ಒಳಪಡಿಸಿದರು.[೮]

**ಸಂಗೊಳ್ಳಿ ರಾಯಣ್ಣನ ಬಂಡಾಯ (೧೮೩೦):** ಈ ಬಂಡಾಯವು ರೈತರನ್ನು ಸುಲಿಗೆ ಮಾಡಿದ ಕುಲಕರ್ಣಿಯ ವಿರುದ್ಧವಾಗಿ ಆರಂಭವಾದದ್ದು, ರೈತಬಲ ಸೇನಾ ಬಲವಾಗಿ ಆಂಗ್ಲರ ವಿರುದ್ಧದ ಬಂಡಾಯವಾಯಿತು.[೯] ರಾಯಣ್ಣನು ರಾಣಿ ಚೆನ್ನಮ್ಮನ ಕಾಲದಲ್ಲಿ ಓಲೆಕಾರನಾಗಿದ್ದನು. ಬ್ರಿಟೀಷರ ವಿರುದ್ಧದ ಹೋರಾಟದಲ್ಲಿ ಸೆರೆ ಹಿಡಿದು ಇವನ ಸೇವಾ ಜಮೀನನ್ನು ಮುಟ್ಟುಗೋಲು ಹಾಕಿಕೊಂಡಿದ್ದರು. ಸಂಗೊಳ್ಳಿಯ ಕುಲಕರ್ಣಿ ರೈತರ ಸುಲಿಗೆ ಮಾಡುತಿದ್ದನು. ಚೆನ್ನಮ್ಮನನ್ನು ಆಂಗ್ಲರು ಕುಸುಗಲ್ ಕೋಟೆಯಲ್ಲಿಟ್ಟಿದ್ದರು. ಈ ಎಲ್ಲಾ ಕಾರಣದಿಂದಾಗಿ ಸಿಡಿದೆದ್ದ ರಾಯಣ್ಣನಿಗೆ ಚೆನ್ನಮ್ಮನ ಜೊತೆ ಭಾವನಾತ್ಮಕ ಸಂಬಂಧವಿದ್ದುದರಿಂದ, ರೈತ ಬಲವೆಲ್ಲ ಸೇನಾಬಲವಾಗಿ ಪರಿಣಮಿಸಿ ೧೮೩೦ರಲ್ಲಿ ಆಂಗ್ಲರ ವಿರುದ್ಧ ಬಂಡಾಯವೆದ್ದರು ಆದರೆ ಬಾಳಪ್ಪನವರ ಮೋಸದಿಂದ ರಾಯಣ್ಣನನ್ನು ಬ್ರಿಟೀಷರು ಗಲ್ಲಿಗೇರಿಸಿದರು.[೧೦]

**ಕೊಡಗು ಮತ್ತು ಅಮರಸೂಳ್ಯ ಬಂಡಾಯ ೧೮೩೪:** ಭೂ ಕಂದಾಯವನ್ನು ಧಾನ್ಯ ರೂಪದ ಬದಲು ಹಣದ ರೂಪದಲ್ಲಿ ನೀಡಬೇಕೆಂದು ಆಂಗ್ಲ ಕಲೆಕ್ಟರ್ ಮಾಡಿದ ಒತ್ತಾಯ ಕಿರುಕುಳ ಹಾಗೂ ಸಾಹುಕಾರರು ಮತ್ತು ದಲ್ಲಾಳಿಗಳು ಮಾಡಿದ ಅನ್ಯಾಯವೇ, ಈ ಬಂಡಾಯವಾಗಲು ಪ್ರಮುಖ ಕಾರಣವಾಯಿತು. ೧೮೩೪ರಲ್ಲಿ ಗವರ್ನರ್ ಜನರಲ್ ಬೆಂಟಿಂಕನ ಆಜ್ಞೇಯ ಮೇರೆಗೆ, ಕರ್ನಲ್ ಲಿಂಡ್ಸೆಯು ಬ್ರಿಟೀಷ್ ಸೈನ್ಯದ ನಾಯಕತ್ವ ವಹಿಸಿಕೊಂಡು ಏಪ್ರಿಲ್ ೧೦ ೧೮೩೪ರಂದು ವೀರರಾಜನ ಮೇಲೆ ದಾಳಿ ಮಾಡಿ ಕೊಡಗನ್ನು ವಶಪಡಿಸಿಕೊಂಡನು.[೧೧] ಅಕ್ಟೋಬರ್ ತಿಂಗಳಲ್ಲಿ ಕೊಡಗಿಗೆ ಸೇರಿದ ಅಮರಸೂಳ್ಯ, ಬೆಳ್ಳಾರೆ, ಪುತ್ತೂರುಗಳನ್ನು ಬ್ರಿಟೀಷ್‌ರು ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರ್‌ನ ಅಧೀನಕ್ಕೆ ಸೇರಿಸಲಾಯಿತು. ಇದರಿಂದ ಈ ಭಾಗದ ಜನಕ್ಕೆ ಅಸಮಧಾನವಾಯಿತು. ಕಾರಣವೇನೆಂದರೆ ಈ ಹಿಂದೆ ಭೂ ಕಂದಾಯ ರಾಜರ ಕಾಲದಲ್ಲಿ ಧಾನ್ಯರೂಪದಲ್ಲಿ ನೀಡುತ್ತಿದ್ದರು. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರ್ ಹಣದ ರೂಪದಲ್ಲಿ ಕಂದಾಯ ಕೊಡಬೇಕೆಂದು ಕಿರುಕುಳ ನೀಡಿದರು. ಆಗ ಹಣದ ಚಲಾವಣೆಯು ಪ್ರಮುಖವಾಗಿ ಸಾಹುಕಾರರ ಕೈಯಲ್ಲಿದ್ದು, ಇವರು ರೈತರ ಧಾನ್ಯಗಳನ್ನು ಹೆಚ್ಚು ಪಡೆದು, ಕಡಿಮೆ ಹಣ ನೀಡಿ ಅನ್ಯಾಯ ಮಾಡುತ್ತಿದ್ದು, ರೈತರು ಜೀವನ ನಿರ್ವಹಣೆ ಕಷ್ಟದಾಯಕವಾಗಿತ್ತು. ಈ ರೀತಿಯ ಕಷ್ಟಗಳಿಗೆ ಕಲೆಕ್ಟರ್‌ನ ಕಂದಾಯ ನೀತಿಯೇ ಕಾರಣವೆಂದು, ಅವನ ಅಧಿಕಾರ ಕೊನೆಗಾಣಿಸಲು ಯೋಚಿಸಿದರು. ಈ ವಿಷಯವನ್ನು ಅಮರಸೂಳ್ಯದ ಅಮಲ್ದಾರ ರಾಮಪ್ಪೈ, ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರ್‌ನಿಗೆ ತಿಳಿಸಿದನು. ಇದರಿಂದಾಗಿ ರೈತರ ಆಕ್ರೋಶಕ್ಕೆ ರಾಮಪ್ಪೈ ಬಲಿಯಾದನು. ನಂತರ ಬ್ರಿಟೀಷ್ ಸೈನ್ಯ ಹೋರಾಟಕ್ಕೆ ಸಜ್ಜಾಗಿದ್ದ ರೈತರನ್ನು ಸೆರೆಹಿಡಿದು ಗಲ್ಲು, ಗಡಿಪಾರು ಮುಂತಾದವುಗಳಿಗೆ ಗುರಿಮಾಡಿದರು.[೧೨] ಈ ಹೋರಾಟ ಬ್ರಿಟೀಷರು ಜಾರಿಗೆ ಮಾಡಿದ ತೆರಿಗೆ ವಿಧಾನ ಹಾಗೂ ಮಧ್ಯವರ್ತಿಗಳ ಕಿರುಕುಳದ ವಿರುದ್ಧ ಸರ್ಕಾರದ ಕಣ್ಣು ತೆರೆಸಲು ಮಾಡಿದ ಪ್ರಯತ್ನವಾಗಿತ್ತು.

**ಉತ್ತರ ಕನ್ನಡ ಜಿಲ್ಲೆಯ ಜಂಗಲ್ ಸವಲತ್ತು ಹೋರಾಟ (೧೮೯೦):** ೧೮೦೦ರಲ್ಲಿ ಜಿಲ್ಲಾಧಿಕಾರಿಯಾಗಿದ್ದ ಥಾಮಸ್ ಮನ್ರೋ ಕನ್ನಡ ಜಿಲ್ಲೆಯನ್ನು ೧೮೬೨ರಲ್ಲಿ ಇಬ್ಭಾಗ ಮಾಡಿ ಉತ್ತರ ಕನ್ನಡ ಜಿಲ್ಲೆಯನ್ನು ಮುಂಬಾಯ್ ಪ್ರಾಂತ್ಯಕ್ಕೂ, ದಕ್ಷಿಣ ಕನ್ನಡ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲಾಯಿತು.[೧೩] ಜಿಲ್ಲೆಯನ್ನು ಇಬ್ಭಾಗ ಮಾಡಿ ಜಂಗಲ್ ಸವಲತ್ತನ್ನು ನಷ್ಟಪಡಿಸಲಾಯಿತು. ಸರ್ಕಾರದ ಈ ನೀತಿಯನ್ನು ೧೮೯೦ರಲ್ಲಿ ರೈತರು ಪ್ರತಿಭಟಿಸಿ ಕರನಿರಾಕರಣೆ ಮಾಡಿ ಜಂಗಲ್‌ಸವಲತ್ತನ್ನು ಮತ್ತೆ ಪಡೆದರು.

**ವಾಣಿವಿಲಾಸ ಸಾಗರ ಅಚ್ಚುಕಟ್ಟು ಪ್ರದೇಶದ ರೈತರ ಪ್ರತಿಭಟನೆ (೧೯೧೩–೧೯೨೫):** ೧೯೧೦ರ ದಶಕದ ಹೊತ್ತಿಗಾಗಲೇ ಪ್ರಬಲ ಪ್ರಕ್ರಿಯೆಯಾಗಿದ್ದ ಕೃಷಿಯ ವಾಣಿಜ್ಯೀಕರಣವು, ಬ್ಲಾಕ್ ಪದ್ಧತಿಗೆ ಪ್ರೇರಣೆ ನೀಡಿ ಜಾರಿಗೆ ತಂದಿದ್ದು ರೈತರ ಅತೃಪ್ತಿಗೆ ಕಾರಣವಾಯಿತು. ಜುಲೈ ೧ ೧೯೧೩ರಲ್ಲಿ ಪ್ರಥಮ ಬಾರಿಗೆ ಚಿತ್ರದುರ್ಗ ಜಿಲ್ಲೆಯ ವಾಣಿ ವಿಲಾಸ ಸಾಗರ ಅಚ್ಚುಕಟ್ಟು ಪ್ರದೇಶದಲ್ಲಿ ಈ ಪದ್ಧತಿಯನ್ನು ಅನುಷ್ಠಾನಕ್ಕೆ ತಂದಿತು. ಇದರಿಂದಾಗಿ ರೈತರ ವಿರೋಧ ಹೆಚ್ಚಾಯಿತು. ದಿವಾನ್ ವಿಶ್ವೇಶ್ವರಯ್ಯನವರು ಈ ಭಾಗಕ್ಕೆ ಭೇಟಿಕೊಟ್ಟಾಗ ರೈತರು ಬ್ಲಾಕ್ ಪದ್ಧತಿಯನ್ನು ರದ್ದುಪಡಿಸುವಂತೆ ಒತ್ತಾಯ ತಂದರು. ಹಾಗೂ ಕೃಷಿಗೆ ಯೋಗ್ಯವಲ್ಲದ ಭೂಮಿಯನ್ನು ಬ್ಲಾಕಿನ ವ್ಯಾಪ್ತಿಗೆ ತಂದಿದ್ದು ರೈತ ವಿರೋಧಕ್ಕೆ ಕಾರಣವಾಯಿತು.[೧೪] ಅಲ್ಲದೆ ಸರ್ಕಾರದ ಎಲ್ಲಾ ನಿಯಮಗಳನ್ನು ಗಾಳಿಗೆ ತೂರಿದರು. ಇದನ್ನು ತಡೆಯಲು ದಂಡ ವಿಧಿಸಿದರಾದರೂ ರೈತ ವಿರೋಧದಿಂದ ತೆರಿಗೆ ವಸೂಲಿ ಮಾಡಲು ಅಧಿಕಾರಿಗಳು ಕಷ್ಟಪಡಬೇಕಾಯಿತು. ಇದರ ಜೊತೆಗೆ ರೈತ ವಿರೋಧ ಹೆಚ್ಚಾಗಿದ್ದರಿಂದ, ಸರ್ಕಾರ ೧೯೨೨ ರಲ್ಲಿ ಸಮಿತಿಯೊಂದನ್ನು ನೇಮಿಸಿತು. ಈ ಸಮಿತಿ ಬ್ಲಾಕ್ ಪದ್ಧತಿ ನಿಯಮಗಳು ಅಪ್ರಯೋಜಕವಾಗಿದ್ದು, ೮ ರೂ ಹೆಚ್ಚುವರಿ ನೀರಿನ ತೆರಿಗೆ ಜಾರಿಗೆ ತರಲು ಶಿಫಾರಸ್ಸು ಮಾಡಿತು. ಇದನ್ನು ರೈತರು ವಿರೋಧಿಸಿದಾಗ ಜೂನ್ ೧೩, ೧೯೨೫ ರಂದು ಬ್ಲಾಕ್ ಪದ್ಧತಿ ರದ್ದುಪಡಿಸಿತು. ಆದರೆ ನೀರಿನ ತೆರಿಗೆಯನ್ನು ೮ ರೂ ಗಳಿಗೆ ಹೆಚ್ಚಿಸಿ ೧೦,೧೮೦ ಎಕರೆಯನ್ನು ನಿಗದಿಪಡಿಸಿತು. ರೈತರು ಈ ತೆರಿಗೆಯನ್ನು ಕಡಿಮೆ ಮಾಡುವಂತೆ ಒತ್ತಾಯಿಸಿದರೂ, ಈ ಸಮಯದಲ್ಲಿ ರೈತರು ಅನಾಧಿಕೃತವಾಗಿ ಹೆಚ್ಚು ಭಾಗಕ್ಕೆ ನೀರನ್ನು ಉಪಯೋಗಿಸಿದ್ದು, ಸರ್ಕಾರ ಪ್ರತಿ ಎಕರೆಗೆ ಪೀನಲ್ ವಾಟರ್ ರೇಟ್ ವಿಧಿಸಿತು. ಆದರೆ ಅಧಿಕಾರಿಗಳು ಮನಸ್ಸಾ ಇಚ್ಛೆಯಿಂದ ವರ್ಷದ ೨ ಬೆಳೆಗಳ ಮೇಲೆ ದಂಡ ಹಾಕಿ ವಸೂಲಿ ಮಾಡಲು ಮುಂದಾದಾಗ ರೈತರಿಗೆ ಅದನ್ನು ನೀಡಲು ಕಷ್ಟವಾಯಿತು. ಪರಿಣಾಮ ಅವರ ಜಮೀನುಗಳನ್ನು ಮುಟ್ಟುಗೋಲು ಹಾಕಿಕೊಂಡಿತು. ಇದರಿಂದ ರೈತರು ಸರ್ಕಾರದ ಈ ನೀತಿಯನ್ನು ವಿರೋಧಿಸಿದಾಗ ಸರ್ಕಾರ ಹರಾಜಿಗೆ ಮುಂದಾಯಿತು. ಆದರೆ ಭೂಮಿಯ ಮೌಲ್ಯ ಕುಸಿದಿದ್ದು ಕೊಳ್ಳುವರಿರಲಿಲ್ಲ. ಈ ರೀತಿಯ ಸರ್ಕಾರದ ನೀತಿಗಳಿಂದ, ಕೃಷಿ ಭೂಮಿ ಬೀಳು ಬಿದ್ದು ರೈತರ ಅಸಮಾಧಾನಕ್ಕೆ ಕಾರಣವಾಯಿತು.[೧೫]

**ಉತ್ತರ ಕನ್ನಡ ಜಿಲ್ಲೆಯ ವನದುಃಖ ವಿರೋಧಿ ಚಳವಳಿ ೧೯೨೦:** ಈ ಚಳವಳಿಯು ಅರಣ್ಯ ಇಲಾಖೆಯ ಹದ್ದುಬಸ್ತಿನ ಕ್ರಮ, ಅಧಿಕಾರಶಾಹಿಯ ದರ್ಪ, ಕಿರುಕುಳ ರೈತರ ಮನಸ್ಸನ್ನು ಹದಗೆಡುವಂತೆ ಮಾಡಿ ಚಳವಳಿಗೆ ಕಾರಣವಾಯಿತು. ೧೮೯೦ರಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ೨,೪೦,೩೯೯ ಎಕರೆಯಿದ್ದ ಕೃಷಿ ಭೂಮಿ ೧೯೧೫ರ ವೇಳೆಗೆ ೨,೧೦,೨೮೬ ಎಕರೆಗೆ ಇಳಿದು, ೩೦,೧೧೩ ಎಕರೆ ಭೂಮಿಯು ಪಾಳು ಬಿದ್ದಿತು. ಈ ಪಾಳು ಭೂಮಿ ೧೮೮೫–೮೬ರಲ್ಲಿ ೭೬,೫೮೧ ಎಕರೆಯಿದ್ದು, ೧೯೧೪–೧೫ರ ವೇಳೆಗೆ ೧,೨೮,೫೫೭ ಎಕರೆಗೇರಿತು. ಯೋಗ್ಯ ಕೃಷಿ ಭೂಮಿ ಶೇ.೧೦ ರಷ್ಟಿದ್ದು ಚಳಿಗಾಲದ ಎರಡನೇ ದ್ವಿದಳಧಾನ್ಯದ ಬೆಳೆ ಕುಸಿದಿತ್ತು. ರಕ್ಷಿತ ಅರಣ್ಯ ಪ್ರದೇಶಗಳಾಗಿದ್ದರಿಂದ ಬಿಟ್ಟಿಯಾಗಿ ಸಿಗುತ್ತಿದ್ದ ಬೇಲಿ ಗೂಟಗಳಿಗೆ ಕತ್ತರಿ ಬಿದ್ದಿತು. ಇದರಿಂದಾಗಿ ದ್ವಿದಳ ಧಾನ್ಯಗಳ ಬೆಳೆ ನಿಂತು, ಮೊದಲ ಬೆಳೆ ಸಮೃದ್ಧವಾಗುತ್ತಿದ್ದುದು ಕುಂಠಿತಗೊಂಡಿತು. ದನಕರುಗಳಿಗೆ ಉಚಿತ ಮೇವು ಸಿಗದೆ ಹುಲ್ಲಿನ ಬೆಲೆ ೫ ರಿಂದ ೪೦ ರೂಗಳಿಗೇರಿತು. ಮನೆ ಹೊದಿಕೆಗೆ ಹುಲ್ಲು ಸಿಗದಂತಾಯಿತು. ಕೃಷಿ ಮರಮುಟ್ಟುಗಳು ಸಿಗದಂತಾಗಿ ಕಾದಿಟ್ಟ ಅರಣ್ಯವನ್ನು ಉಲ್ಲಂಘಿಸುವ ಸನ್ನಿವೇಶ ನಿರ್ಮಾಣವಾಯಿತು. ಈ ಸಂದರ್ಭದಲ್ಲಿ ಸರ್ಕಾರ ಕಂದಾಯ ವಿಧಿಸಿತು. ಇದು ರೈತರನ್ನು ಬ್ರಿಟೀಷರ ವಿರುದ್ಧ ಪ್ರತಿಭಟಿಸುವಂತೆ ಮಾಡಿತು. ಸೌದೆಗಾಗಿ ಆರೇಳು ಮೈಲಿ ನಡೆಯಬೇಕಾದ ಸ್ಥಿತಿ ನಿರ್ಮಾಣವಾಯಿತು. ಅರಣ್ಯ ವಸ್ತುಗಳನ್ನು ಹಣ ಕೊಟ್ಟು ಕೊಳ್ಳುವಂತಾಯಿತು. ಇದರಿಂದ ತೀವ್ರ ಅಸಮಧಾನಗೊಂಡ ರೈತರು ೧೯೨೦ರಲ್ಲಿ ಪ್ರತಿಭಟಿಸಿದರು.[೧೬] ಈ ರೀತಿ ಸಹನೆಯ ಮನಸ್ಸಿನ ರೈತರನ್ನು ಹಾದಿಗೆಡಿಸಿದಾಗ ಪ್ರತಿಭಟನೆಯೇ ಅವರ ದಾರಿಯಾಗಿರುತ್ತದೆ.

**ಹುಲಬನ್ನಿ– ಕರ ನಿರಾಕರಣ ಚಳವಳಿಗಳು (೧೯೩೦ ಉತ್ತರ ಕನ್ನಡ)** : ಘಟ್ಟದ ಮೇಲಿನ ದಟ್ಟ ಅರಣ್ಯದಿಂದ ಮಲೇರಿಯಾ ಹಾವಳಿ, ಕಾಡನೆಗಳಿಂದ ಬೆಳೆಗಳ ನಾಶ ಸಾಮಾನ್ಯವಾಗಿದ್ದು, ಸರ್ಕಾರಿ ಅಧಿಕಾರಿಗಳು ರೈತರ ಸಹಾಯಕ್ಕೆ ಬರಲಿಲ್ಲ. ಅರಣ್ಯ ಸಂಬಂಧದ ಸವಲತ್ತು ಕಸಿದು ಕಾದಿಟ್ಟ ಅರಣ್ಯ ಬೆಳೆಸುವ ಯೋಜನೆ ಜಾರಿ ಮಾಡಿದ್ದರಿಂದ ಮಲೇರಿಯಾದ ಹಾವಳಿಗೆ ತುತ್ತಾಗಿ ಸತ್ತು, ಜನಸಂಖ್ಯೆ ಕ್ಷೀಣಿಸಿತು. ಇದರಿಂದಾಗಿ ಶಿರಸಿ, ಸಿದ್ದಾಪುರ, ಅಂಕೋಲಗಳಲ್ಲಿ ಸತ್ಯಾಗ್ರಹ ಆರಂಭವಾಗಲು ಕಾರಣವಾಯಿತು. ಇದೇ ಸಂದರ್ಭದಲ್ಲಿ ೧೯೨೦ ಆಗಸ್ಟ್ ತಿಂಗಳಿನಿಂದ 'ಹುಲಬನ್ನಿ' ಕರವನ್ನು ಜಾರಿಗೆ ತಂದಿತು. ಇದರಂತೆ ಕಾಡುಗಳಲ್ಲಿ ದನ ಮೇಯಿಸಲಿ, ಮೇಯಿಸದಿರಲಿ, ಅಲ್ಲಿನ ಜನರು ಸರಕಾರಕ್ಕೆ ನೀಡುವ ನೇರ ಕರವಾಗಿತ್ತು. ಇದನ್ನು ವಸೂಲಿ ಮಾಡಲು ಜಪ್ತಿ ಕ್ರಮ ಅನುಸರಿಸಲು ಅವಕಾಶವಿತ್ತು. ಇದರಿಂದಾಗಿ ಈ ಪ್ರದೇಶದ ರೈತರು ಹುಲ ಬನ್ನಿ ಕರಾನಿರಾಕಣೆಯನ್ನು ಆರಂಭಿಸಿದರು. ಸರ್ಕಾರ ಕರ ವಸೂಲಿಗೆ ಮುಂದಾದರು, ಹಣ ವಸೂಲಿಯಾಗಲಿಲ್ಲ ಕಾರಣ ಅವಧಿಯನ್ನು ವಿಸ್ತರಿಸಿತು. ಇದರಿಂದಾಗಿ ಈ ಭಾಗದ ರೈತರು ಹುಲಬನ್ನಿ ಕರನಿರಾಕರಣೆಯನ್ನು ಹಳ್ಳಿ ಹಳ್ಳಿಗಳಿಗೆ ಪ್ರಚಾರ ಮಾಡಿದರು. ಪರಿಣಾಮವಾಗಿ ಸರ್ಕಾರದ ಕರ ವಸೂಲಿ ವಿಫಲವಾಯಿತು. ಮತ್ತೊಂದು ಆದೇಶವನ್ನು

ಹೊರಡಿಸಿದ ಸರ್ಕಾರ ಅದರಂತೆ ಕರ ವಸೂಲಿ ಗಡುವನ್ನು ವಿಸ್ತರಿಸಿ, ಅರಣ್ಯದಲ್ಲಿ ದನ ಮೇಯಿಸುವವರಿಗೆ ಮಾತ್ರ ಈ ಹುಲಬನ್ನಿ ಕರ ಅನ್ವಯವಾಗುತ್ತದೆ[೧೭] ಎಂದು ತಿಳಿಸಿತು.

**ಶಿಕಾರಿಪುರ ಕರ ನಿರಾಕರಣೆ ಚಳವಳಿ (೧೯೩೧):** ಇದು ಕಾಯ್ದೆಭಂಗ ಚಳವಳಿಯ ಒಂದು ಭಾಗವಾಗಿ ನಡೆದ ಹೋರಾಟವಾಗಿದೆ. ಶಿಕಾರಿಪುರ ತಾಲೂಕಿನ ಉತ್ತರ ಭಾಗದ ಗ್ರಾಮಗಳಿಗೆ ಮಾತ್ರ ಈ ಚಳವಳಿ ಸೀಮಿತವಾಗಿದೆ. ಮಳೆ ವೈಫಲ್ಯ, ಆರ್ಥಿಕ ಮುಗ್ಗಟ್ಟು ಹಾಗೂ ಕೃಷಿ ಉತ್ಪನ್ನಗಳ ಬೆಲೆ ಕುಸಿತದಿಂದಾಗಿ ಸಂಕಷ್ಟ ಅನುಭವಿಸಿದ ರೈತರು ತರೀ ಭೂಕಂದಾಯದಲ್ಲಿ ಮಾಫಿ ನೀಡುವಂತೆ ಸರ್ಕಾರಕ್ಕೆ ಮನವಿ ನೀಡಿದರು ಸರ್ಕಾರ ಸ್ಪಂದಿಸಲಿಲ್ಲ. ಮನವಿಗಳನ್ನು ಗಂಭೀರವಾಗಿ ಪರಿಗಣಿಸದೆ ಕಂದಾಯ ವಸೂಲಿಯನ್ನು ಮುಂದುವರಿಸಿದಾಗ, ಅನಿವಾರ್ಯತೆಯಿಂದ ರೈತರು ಚಳವಳಿ ಆರಂಭಿಸಿದರು.[೧೮] ಇದೇ ಸಂದರ್ಭದಲ್ಲಿ ಗಾಂಧೀಜಿಯವರು ಕರೆಕೊಟ್ಟ ಕಾಯ್ದೆಭಂಗ ಚಳವಳಿಯನ್ನು ಶಿಕಾರಿಪುರ ತಾಲೂಕಿನ ರೈತರು ಅನ್ವಯಿಸಿಕೊಂಡು ಚಳವಳಿ ಆರಂಭಿಸಿದರು.[೧೯] ೧೯೩೧ರಲ್ಲಿ ರೈತ ಸಮಾವೇಶ ನಡೆಸಲು ತೀರ್ಮಾನಿಸಿದ್ದ ಸಂದರ್ಭದಲ್ಲಿ, ಸರ್ಕಾರ ಅದನ್ನು ನಿಷೇಧಿಸಿ ಚಳವಳಿ ಹತ್ತಿಕ್ಕಲು ಕಠಿಣ ಕ್ರಮ ಕೈಗೊಂಡು, ಬಲತ್ಕಾರವಾಗಿ ತೆರಿಗೆ ವಸೂಲಿಗೆ ಮುಂದಾಯಿತು. ರೈತರ ಚರಾಸ್ತಿ ಮತ್ತು ದನಕರುಗಳ ಹರಾಜು ಹಾಕಲಾಯಿತು. ಇದನ್ನು ವಿರೋಧಿಸಿ ಶಿರಾಳಕೊಪ್ಪದಲ್ಲಿ ಹರತಾಳ ಆಚರಿಸಲಾಯಿತು. ಅದರೂ ಸರ್ಕಾರ ಕಠಿಣ ಕ್ರಮಕೈಗೊಂಡು ಹತ್ತಿಕ್ಕಿತು.

**ಶಿರಸಿ, ಸಿದ್ಧಾಪುರ ತಾಲೂಕು ರೈತರ ಕರಾನಿರಾಕರಣೆ ಚಳವಳಿ (೧೯೩೧):** ಈ ಪ್ರದೇಶದ ರೈತರಿಗೆ ಸಕಾಲಕ್ಕೆ ಮಳೆ ಬರದೆ ಬೆಳೆ ನಷ್ಟವಾಯಿತು. ಕೊಳೆ ರೋಗದಿಂದ ಅಡಿಕೆ ಬೆಳೆ ನಷ್ಟವಾಯಿತು. ಹಾಗೂ ಬೆಲೆಯು ಪಾತಾಳಕ್ಕೆ ಕುಸಿಯಿತು. ರೈತರ ಜೀವನ ನಿರ್ವಹಣೆ ಕಷ್ಟವಾಗಿ ಶೋಚನೀಯ ಹಂತಕ್ಕೆ ತಲುಪಿತು. ಇದರಿಂದಾಗಿ ರೈತರು ಸರ್ಕಾರಕ್ಕೆ ಕಂದಾಯ ಮನ್ನಾ ಮಾಡುವಂತೆ ಮನವಿ ನೀಡಿದರು. ಇದನ್ನು ರಾಜಕೀಯ ಪ್ರೇರಿತವೆಂದು ಭಾವಿಸಿದಾಗ ರೈತರು ಶಿರಸಿಯ ಮಾರಿಕಾಂಬ ದೇವಾಲಯದಲ್ಲಿ ರೈತ ಸಭೆ ಕರೆದು ಗೊತ್ತುವಳಿ ಸ್ವೀಕರಿಸಿದರು. ಅದರಂತೆ ರೈತರು ಆರ್ಥಿಕವಾಗಿ ಅಶಕ್ತರಾಗಿದ್ದು ಸಾಲ ವಸೂಲಿ ಹಾಗೂ ತೆರಿಗೆ ವಸೂಲಿಯನ್ನು ಮುಂದೂಡಬೇಕೆಂದು ನಿರ್ಧರಿಸಿದ್ದರು. ಹೀಗೆ ಕ್ರಮಬದ್ಧವಾಗಿ ಬೇಡಿಕೆಗಳನ್ನು ಮಂಡಿಸಿ, ಕರನಿರಾಕರಣೆಯ ಕಾರಣಗಳನ್ನು ಸರ್ಕಾರದ ಮನಮುಟ್ಟುವಂತೆ ತಿಳಿಸಿ ಅದರ ಫಲ ಪಡೆದರು.

**ಹಿರೇಕೆರೂರಿನ ಕರ ನಿರಾಕರಣೆ ಚಳವಳಿ (೧೯೩೧):** ಫೆಬ್ರವರಿಯಲ್ಲಿ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲೂಕಿನಲ್ಲಿ ಮಳೆಯಾಗದ ಕಾರಣ ಹಾಗೂ ಕ್ಷಾಮ ಪರಿಸ್ಥಿತಿ ಉಂಟಾಗಿತ್ತು ಆಗ ವೀರನಗೌಡ ಪಾಟೇಲರು ಕರನಿರಾಕರಣೆ ಸತ್ಯಾಗ್ರಹ ಸಂಘಟಿಸಿದರು. ತಿಮ್ಮಪ್ಪ ನೇಸ್ವಿ, ಕಲ್ಲನಗೌಡ, ಜೆ.ವಿ. ಹಳ್ಳಿಕೇರಿ ಅವರು ಸಂಘಟನೆಗೆ ನೆರವಾಗಿದ್ದರಿಂದ ಬಲಗೊಂಡಿತು.[೨೦] ನಂತರ ಕರಾನಿರಾಕರಣೆಯನ್ನು ಅಧಿಕಾರಿಗಳ ಮುಂದಿಟ್ಟಾಗ ಒಪ್ಪಲಿಲ್ಲ. ಆಗ ವೀರನಗೌಡರ ನೇತೃತ್ವದಲ್ಲಿ ಸತ್ಯಾಗ್ರಹಕ್ಕೆ ಸಿದ್ಧರಾದರು. ಫೆಬ್ರವರಿ ೫ ರಂದು ಅಧಿಕಾರಿಗಳು ಮೊದಲನೆ ಕಂತಿನ ಕರ

ವಸೂಲಿಗೆ ನಿಂತು, ಕರ ನಿರಾಕರಿಸಿದವರಿಗೆ ಜೈಲು ಎಂದು ಹೆದರಿಸಿದರು. ಶ್ರೀಮಂತರ ಮನೆ ಜಪ್ತಿ ಮಾಡಿ ರೈತರಲ್ಲಿ ಭಯ ಹುಟ್ಟಿಸಲು ಮುಂದಾದರು ಸಹ ಎದೆಗುಂದಲಿಲ್ಲ. ಮೊದಲನೆ ಕಂತಿನಲ್ಲಿ (ಫೆಬ್ರವರಿ ೧೫) ರೂ. ೧.೯೧ ಲಕ್ಷ ವಸೂಲಿ ಮೊತ್ತದಲ್ಲಿ ಕೇವಲ ೭,೦೦೦ ರೂ ಸಂಗ್ರಹವಾಯಿತು. ಮಾರ್ಚ್ ೧೫ ಕ್ಕೆ ಎರಡನೆಯ ಕಂತು ಇದ್ದು ಒಟ್ಟು ವಸೂಲಿಯಾದ ಹಣ ರೂ. ೧೨,೦೦೦ ಮಾತ್ರ.[೨೧] ಇದರಿಂದಾಗಿ ಮಾರ್ಚ್ ೨೫ ರಿಂದ ಜಪ್ತಿ ಆರಂಭವಾಯಿತು. ಹಿರೇಕೆರೂರಿನಲ್ಲಿ ೫೦ಕ್ಕೂ ಹೆಚ್ಚು ರೈತ ಹೊಲಗಳನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಂಡಿತು. ೧೨ ಮನೆ ಜಪ್ತಿ ಮಾಡಿ ೨೫ ಮನೆಗಳ ಜಪ್ತಿಗೆ ನೋಟೀಸ್ ಹಚ್ಚಿತ್ತು. ಇದಾವ ಕ್ರಮಕ್ಕೂ ಹೆದರದೆ ಕಂದಾಯ ನೀಡಲಿಲ್ಲ. ೧೯೩೭ರಲ್ಲಿ ವಿಧಾನಸಭಾ ಚುನಾವಣೆಯ ನಂತರ ಕಾಂಗ್ರೇಸ್ ಮಂತ್ರಿಮಂಡಲ ಸ್ಥಾಪನೆಯಾದಾಗ ಹಿರೇಕೆರೂರು ರೈತರ ಭೂಮಿಯನ್ನು ಮರಳಿಸಿ ೧೯೩೯ರಲ್ಲಿ ಋಣ ಮುಕ್ತಿಯ ಪ್ರಗತಿಪರ ಕಾನೂನನ್ನು ಜಾರಿ ಮಾಡಿತು.[೨೨]

**ಇರ್ವಿನ್ ನಾಲಾ ರೈತ ಚಳವಳಿ (೧೯೩೧-೩೨):** ಇರ್ವಿನ್ ನಾಲೆಯು ಕೃಷ್ಣರಾಜಸಾಗರದಿಂದ ಹರಿದು ಬರುವ ಕಾವೇರಿ ನದಿಯ ಶಾಖೆ ಹಾಗೂ ಶಿಂಷಾ ನದಿಯ ಶಾಖೆಯಾಗಿದ್ದು, ರೈತರು ಅನುಸರಿಸಬೇಕಾಗಿದ್ದ ವ್ಯವಸಾಯ ಕ್ರಮ, ನೀರಾವರಿ ಜಮೀನುಗಳಿಗೆ ಅವರು ಕೊಡಬೇಕಾಗಿದ್ದ ಕಂದಾಯ, ಕಾಣಿಕೆಧನ ಕೊಡುವುದು ತಡವಾದರೆ ಅದಕ್ಕೆ ನೀಡಬೇಕಾಗಿದ್ದ ಬಡ್ಡಿ ಇತ್ಯಾದಿ ವಿಷಯಗಳ ಬಗ್ಗೆ ಸರ್ಕಾರದವರು ಹೊರಡಿಸಿದ್ದ ಆಜ್ಞೆಯು ರೈತರಲ್ಲಿ ಪ್ರಬಲವಾದ ಅತೃಪ್ತಿಯನ್ನು ಮೂಡಿಸಿತ್ತು. ಇಂತಹ ಸಂದರ್ಭದಲ್ಲಿ ಮಂಡ್ಯದ ಹೆಚ್. ಹೊನ್ನಯ್ಯನವರು, ಹೊನಗಾನಹಳ್ಳಿಯ ಕೆ. ಪುಟ್ಟಣ್ಣನವರು ಹಾಗೂ ಮದ್ದೂರಿನ ಹೆಚ್.ಕೆ. ವೀರಣ್ಣಗೌಡರು ರೈತರಲ್ಲಿ ಸಂಘಟನೆಯನ್ನು ಮೂಡಿಸುವ ಮೂಲಕ ಇರ್ವಿನ್ ನಾಲಾ ಚಳವಳಿಯ ಮುಖಂಡತ್ವವನ್ನು ವಹಿಸಿದ್ದರು. ಸರ್ಕಾರದ ಆಜ್ಞೆಯ ಪರಿಣಾಮವಾಗಿ ರೈತರಿಗಾಗುವ ಕಷ್ಟನಷ್ಟಗಳನ್ನು ಇರ್ವಿನ್ ನಾಲಾ ಪ್ರದೇಶದ ಎಲ್ಲಾ ತಾಲೂಕುಗಳ ಪ್ರತಿಯೊಂದು ಹಳ್ಳಿಗೂ ಹೋಗಿ ಜನರಿಗೆ ಮನದಟ್ಟು ಮಾಡಿಕೊಟ್ಟರು. ಹಳ್ಳಿಯಿಂದ ಹಳ್ಳಿಗೆ ಕಾಲ್ನಡಿಗೆಯಿಂದಲೇ ಹೋಗಿ ರೈತರಲ್ಲಿ ಅವಶ್ಯಕವಾದ ಜಾಗೃತಿಯನ್ನು ಮೂಡಿಸುವಲ್ಲಿ ಇವರುಗಳು ಯಶಸ್ವಿಯಾದರು. ವೀರಣ್ಣಗೌಡರು ತಮ್ಮ ಪ್ರಥಮ ರೈತ ಸಂಘಟನಾ ಪ್ರಚಾರ ಸಭೆಯನ್ನು ಮಳವಳ್ಳಿಯಲ್ಲಿ ಆರಂಭಿಸಿ ಅರಸಿಕೆರೆ, ಗೆಜ್ಜಲಗೆರೆ, ಗೌಡಗೆರೆ, ಮಂಡ್ಯ, ಮದ್ದೂರು, ಮಳವಳ್ಳಿ, ಶ್ರೀರಂಗಪಟ್ಟಣ, ಪಾಂಡವಪುರ ತಾಲೂಕುಗಳಲ್ಲಿಯೂ ಪಾದಯಾತ್ರೆ ಕೈಗೊಂಡು ಪ್ರಚಾರ ಸಭೆಗಳನ್ನು ಏರ್ಪಡಿಸಿ ಹದಿನಾಲ್ಕು ತಿಂಗಳುಕಾಲ ನೂರಾರು ಸಭೆಗಳನ್ನು ಸಂಘಟಿಸಿ ರೈತರಲ್ಲಿ ಪ್ರಬಲ ಅರಿವು ಮೂಡುವಂತೆ ಮಾಡಿದರು.

ಈ ಪ್ರದೇಶದಲ್ಲಿ 'ಬ್ಲಾಕ್ ಸಿಸ್ಟಂ' ಎಂದರೆ ಒಂದು ನಿಗದಿಯಾದ ಪ್ರದೇಶದ ಜಮೀನಿನಲ್ಲಿ ಅಥವಾ ನಾಲೆ ಹಾಗೂ ಸೀಳು ನಾಲೆ ಕೆಳಗಿರುವ ಜಮೀನುಗಳಲ್ಲಿ ಒಂದು ವರ್ಷ ಕಬ್ಬು, ಎರಡನೇ ವರ್ಷ ಭತ್ತ, ಮೂರನೇ ವರ್ಷ ಖುಷ್ಕಿ ಈ ರೀತಿ ಬೆಳೆ ಬೆಳೆಯಬೇಕೆಂದು

ಸರ್.ಮಿರ್ಜಾಇಸ್ಮಾಯಿಲ್ ಸ್ಥೂಲವಾಗಿ ತಿಳಿಸಿದ್ದರು. ದಿವಾನರ ಸಲಹೆಯನ್ನು ಕಾರ್ಯಗತಗೊಳಿಸುವ ವಿವರಗಳನ್ನು ಸಿದ್ದಪಡಿಸಬೇಕೆಂದು ಸರ್ಕಾರದವರು ಸಂಬಂಧಪಟ್ಟ ಇಲಾಖೆಗಳಿಗೆ ಸೂಚನೆ ನೀಡಿದ್ದರು. ಆಗ ಕೃಷಿ ಇಲಾಖೆಯ ನಿರ್ದೇಶಕರಾಗಿದ್ದ ಡಾ. ಲೆಸ್ಲಿಕೋಲ್ಮನ್ ಅವರು ದಿವಾನರ ಸಲಹೆಯನ್ನೆ ಸೂಕ್ತತೆಗೆ ತಕ್ಕಂತೆ ಸಮರ್ಥಿಸಿದರು. ಇದರನ್ವಯ ಸರ್ಕಾರದ ಅಧಿಕಾರಿಗಳು ನಾಲೆಯ ಪ್ರದೇಶಗಳ ಸಮೀಕ್ಷೆ ನಡೆಸಿದ ನಂತರ, ವ್ಯವಸಾಯ ಇಲಾಖೆಯ ತಜ್ಞರಾದ ನರಸಿಂಹಯ್ಯಂಗಾರ್ಯ ದೀರ್ಘವರದಿಯನ್ನು ಸಲ್ಲಿಸಿ ಒಂಬತ್ತು ವಿಧಿಗಳ ಪದ್ಧತಿಯನ್ನು ಜಾರಿಗೊಳಿಸಲು ಶಿಫಾರಸ್ಸು ಮಾಡಿದ್ದರು. ಇದರ ಪ್ರಕಾರ ಸಹಾಯ ಧನದ ಮೇಲಿನ ಬಡ್ಡಿಯನ್ನು ವಜಾ ಮಾಡಬೇಕೆಂದು ಸೂಚಿಸಲಾಗಿತ್ತು. ಆದರೆ ಸರ್ಕಾರ ಬೇರೆಯೇ ನಿಲುವನ್ನು ತಾಳಿದ ಕಾರಣ ಇವರ ವರದಿಯನ್ನು ಗೌಪ್ಯವಾಗಿಡಲಾಯಿತು. ಆದರೆ ಈ ವರದಿಯ ಪ್ರತಿ ವೀರಣ್ಣ ಗೌಡರಿಗೆ ಸಿಕ್ಕಿತು. ಈ ವರದಿಯನ್ನು ನ್ಯಾಯ ವಿಧಾಯಕ ಸಭೆಯಲ್ಲಿ ಮಂಡಿಸಬೇಕೆಂದು ಮಲ್ಲಪ್ಪನವರ ಮೇಲೆ ರೈತ ಮುಖಂಡರು ಒತ್ತಡ ತಂದರು, ಅವರು ಈ ವರದಿಯನ್ನು ಪ್ರಸ್ತಾಪಿಸಿದಾಗ ಸರ್ಕಾರ ಅಂತಹ ಯಾವುದೇ ವರದಿ ಇಲ್ಲವೆಂದು ತಳ್ಳಿ ಹಾಕಿತು.[೨೩] ಈ ಆಜ್ಞೆಯಿಂದ ರೈತರಿಗಾಗುವ ಕಷ್ಟನಷ್ಟಗಳ ಮನವಿಯನ್ನು ಸಲ್ಲಿಸಲು ರೈತ ನಾಯಕರು ತೀರ್ಮಾನಿಸಿದಾಗ ಒತ್ತಾಯದ ಮೇಲೆ ರೈತರನ್ನು ಭೇಟಿ ಮಾಡಲು ದಿವಾನರು ಒಪ್ಪಿದರು. ರೈತರ ಜಾಥ ೧೯೩೨ ಜನವರಿ ೧ ರ ಮುಂಜಾನೆ ಮದ್ದೂರು ಬಳಿ ಕೋಡಿಹಳ್ಳಿ ಸಮೀಪ ಗಂಡು ತೋಪಿನಿಂದ ಆರಂಭವಾಯಿತು.

"ಇರ್ವಿನ್ ಕಾಲುವೆ ಪ್ರದೇಶದ ಸುಮಾರು ನಾಲ್ಕು ಸಾವಿರ ರೈತರು ಮೆರವಣಿಗೆಯೊಂದಿಗೆ, ಸುಮಾರು ಎಂಭತ್ತು ಕಿಲೋಮೀಟರ್ ದೂರದ ಬೆಂಗಳೂರನ್ನು ಕಾಲ್ನಡಿಗೆಯಿಂದಲೇ ಕ್ರಮಿಸಿದರು. ಅವರ ಜಾಥಾದಲ್ಲಿ ಏಂಟು ಸಾಲಿತ್ತು. ವಾಹನ ಸಂಚಾರ ನಿಯಮ ಮತ್ತು ಶಾಂತಿಯುತ ಪಾದೆಯಾತ್ರೆಯನ್ನು ಅವಲೋಕಿಸಿದಾಗ ಇದನ್ನು ಶಿಸ್ತಿನ ರೂಪದ ರೈತರ ಜಾಥಾ ಎನ್ನಬಹುದು.[೨೪] ಮೂರು ದಿನಗಳ ಸತತ ಪ್ರಯಾಣದ ನಂತರ ೦೪-೦೧-೧೯೩೨ರಂದು ಮಧ್ಯಾಹ್ನ೧೨ ಗಂಟೆಗೆ ಬೆಂಗಳೂರಿನ ಅಠಾರ ಕಛೇರಿಗೆ ತಲುಪಿತು.

ಜಾಥದ ಮುಖಂಡತ್ವವನ್ನು ವಹಿಸಿದ್ದ ವೀರಣ್ಣಗೌಡರನ್ನು ದಿವಾನರು ಕರೆಸಿ ಕೇವಲ ೮-೧೦ ಮಂದಿಯೊಡನೆ ಮಾತುಕತೆಗೆ ಬರಬೇಕೆಂದು ತಿಳಿಸಿದರು. ಅವರು ಒಪ್ಪದೇ ಕಾಲ್ನಡಿಗೆಯಿಂದ ಕಷ್ಟಪಟ್ಟು ಬಂದಿರುವ ಎಲ್ಲಾ ರೈತರನ್ನು ಭೇಟಿ ಮಾಡಬೇಕೆಂದು ಒತ್ತಾಯಿಸಿದರು. ಸಂತೋಷದಿಂದ ಒಪ್ಪಿಕೊಂಡು ಬಂದ ದಿವಾನರು ರೈತರನ್ನು ಉದ್ದೇಶಿಸಿ ಸಹಾಯ ಧನದ ಮೇಲೆ ಯಾವುದೇ ರೀತಿಯ ಬಡ್ಡಿಯನ್ನು ವಿಧಿಸಲಾಗುವುದಿಲ್ಲ. ಹಾಗೂ ಸರ್ಕಾರವು ಹೊರಡಿಸಿರುವ ಆಜ್ಞೆಯನ್ನು ವಜಾ ಮಾಡಬೇಕೆಂದು ರೈತರು ಕೋರಿರುವ ಬೇಡಿಕೆಯನ್ನು ಸರ್ಕಾರವು ಒಪ್ಪಿಕೊಳ್ಳುತ್ತದೆ ಎಂದು ದಿವಾನರು ಸಭೆಗೆ ತಿಳಿಸಿ ತಾವೇ ಮಂಡ್ಯಕ್ಕೆ ಬಂದು ಸ್ಥಳ ವಿದ್ಯಮಾನಗಳನ್ನು ಪರಿಶೀಲಿಸುವುದಾಗಿ ರೈತರಿಗೆ ಭರವಸೆ ನೀಡಿದ್ದರು. ಅದು

ಕಾರ್ಯಗತವಾಗಲು ಹಲವು ಅಡಚಣೆಗಳಿದ್ದರು ಒತ್ತಡಕ್ಕೆ ಮಣಿದು ಮಂಡ್ಯಕ್ಕೆ ಬಂದಾಗ, ಸುಮಾರು ೧೦,೦೦೦ ರೈತರು ಸೇರಿದ್ದನ್ನು ನೋಡಿ ಸ್ವಲ್ಪ ಸಮಯವಿದ್ದು ಮೈಸೂರಿಗೆ ಪ್ರಯಾಣ ಮಾಡಿದರು. ಈ ರೈತ ಹೋರಾಟದಿಂದ ಒದಗಿದ ಪರಿಹಾರಗಳು ಪೂರ್ಣ ತೃಪ್ತಿಕರವಲ್ಲದಿದ್ದರೂ ಸಾಕಷ್ಟು ಸಮಾಧಾನವನ್ನು ರೈತರಿಗೆ ಒದಗಿಸಿದೆ.

**ಈಸೂರು ಗ್ರಾಮದ ರೈತ ಚಳವಳಿ (೧೯೪೨-೧೯೪೭):** ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಗ್ರಾಮವೇ ಈಸೂರು. ೧೯೩೦-೩೧ರಲ್ಲಿ ನಡೆದ ಹಿರೇಕೆರೂರು ತಾಲೂಕಿನ ರೈತರ ಕರನಿರಾಕರಣೆ ಚಳವಳಿಯಲ್ಲಿ, ಅವರ ಮೇಲಾದ ದಬ್ಬಾಳಿಕೆಗೆ, ಈ ಜಿಲ್ಲೆಯ ರೈತರು ಪ್ರತಿಭಟನೆ ತೋರಿ ತಮ್ಮ ಸಂಘಟನೆಯ ಬಿಸಿ ಮುಟ್ಟಿಸಿದರು. ಹೀಗೆ ಚಳವಳಿಯ ಕಲ್ಪನೆ ಹೊಂದಿದ್ದ ಈ ಜಿಲ್ಲೆಯ ರೈತರು ಭಾರತ ಬಿಟ್ಟು ತೊಲಗಿ ಚಳವಳಿಗೆ ಸ್ಪಂದಿಸಿದರು. ಸರಕಾರಿ ಅಧಿಕಾರಿಗಳು, ಪೊಲೀಸ್ ಅಧಿಕಾರಿಗಳು, ಕಂದಾಯ ವಸೂಲಿ ಸಂಬಂಧದಲ್ಲಿ ಕಿರುಕುಳ ನೀಡುತ್ತಿದ್ದು ರೈತರಿಗೆ ಅಸಮಧಾನವಾಯಿತು. ಕೆಲ ಕಾಂಗ್ರೆಸ್ ರೈತ ಮುಖಂಡರು ಹೊರಗಿನಿಂದ ಬಂದು ಪ್ರಚಾರ ಮಾಡಿ ಜನಜಾಗೃತಿ ಮಾಡಿದರು. ಶಾನಭೋಗ, ಪಟೇಲ ರೈತರ ಬೇಡಿಕೆಗೆ ಸ್ಪಂದಿಸಲಿಲ್ಲ. ಹಿಂಸಾತ್ಮಕ ಘಟನೆಗಳು ನಡೆದವು. ಇದರಿಂದ ಈಸೂರಿನ ಗ್ರಾಮಸ್ಥರು ರೊಚ್ಚಿಗೆದ್ದರು. ಅಧಿಕಾರಿಗಳು ಹತ್ಯೆಗೀಡಾದರು. ತರುಣರು ಇದು ಸ್ವತಂತ್ರ್ಯ ಗ್ರಾಮವೆಂದು ಘೋಷಿಸಿದರು. ಸರ್ಕಾರ ಸೈನ್ಯ ಕಳುಹಿಸಿ ನಾಯಕರನ್ನು ಸೆರೆಹಿಡಿದು ಚಳವಳಿ ಹತ್ತಿಕ್ಕಿತು. ೧೧ ಮಂದಿಗೆ ಮರಣದಂಡನೆ ವಿಧಿಸಿ ಗಲ್ಲಿಗೇರಿಸುವುದರ ಮೂಲಕ ರೈತ ಚಳವಳಿ ಹತ್ತಿಕ್ಕಲಾಯಿತು.

**ರಾಮದುರ್ಗ ಕರನಿರಾಕರಣ ಚಳವಳಿ ೧೯೩೮:** ಮುಂಬೈ ಕರ್ನಾಟಕದ ಕಡಿಮೆ ಉತ್ಪನ್ನವಿರುವ ಸಣ್ಣ ಸಂಸ್ಥಾನವೇ ರಾಮದುರ್ಗ. ಬರ ಬಂದ ಕಾರಣ ಕರ ಕೊಡಲಾಗದಿದ್ದ ರೈತರಿಂದ ಕರವನ್ನು ಬಲವಂತವಾಗಿ ವಸೂಲಿ ಮಾಡಲಾಗುತ್ತಿತ್ತು. ಒಟ್ಟಿನಲ್ಲಿ ಜನತೆಯ ಆರ್ಥಿಕ ದುಸ್ಥಿತಿಯೆ ರಾಮದುರ್ಗ ಕರನಿರಾಕರಣ ಚಳವಳಿಗೆ ಕಾರಣವಾಯಿತು. ಸಂಸ್ಥಾನದಲ್ಲಿ ನೆರೆ ಜಿಲ್ಲೆಗಳ ಭೂಕಂದಾಯಕ್ಕಿಂತ, ಈ ಸಂಸ್ಥಾನದ ಭೂ ಕಂದಾಯ ೧೦೦ಕ್ಕೆ ೩೩ರಷ್ಟು ಹೆಚ್ಚಾಗಿತ್ತು. ೧೯೨೫ರ ಸುಮಾರಿಗೆ ಈ ಸಂಸ್ಥಾನದಲ್ಲಿ ಹಿತ್ತಲ ತೆರಿಗೆ, ತಿಪ್ಪೆ, ಹೊಟ್ಟು ಮತ್ತು ಮೇವು ಸಂಗ್ರಹಿಸಿಡುವ ಸ್ಥಳದ ಮೇಲಿನ ತೆರಿಗೆಯನ್ನು ಅನೇಕ ವರ್ಷಗಳ ಪೂರ್ವದಿಂದಲೂ ರೈತರಿಂದ ವಸೂಲಿ ಮಾಡಲಾಗುತ್ತಿತ್ತು. ಉತ್ಪನ್ನ ಕರವನ್ನು ಹೊಸದಾಗಿ ಜಾರಿಗೆ ತಂದುದಲ್ಲದೆ ಹುಲಬನ್ನಿ ತೆರಿಗೆಯನ್ನು ಹೆಚ್ಚಿಸಿದ್ದು. ಹಾಗೂ ೧೯೩೦ ರಿಂದ ಬರಗಾಲ ಮೇಲಿಂದ ಮೇಲೆ ಬರುತ್ತಿದ್ದು ಜನರ ಅಸಂತೋಷ ೧೯೩೮ರ ವೇಳೆಗೆ ಪ್ರತಿಭಟನೆಯಾಗಿ ಸ್ಫೋಟಗೊಳ್ಳಲು ಕಾರಣವಾಯಿತು.[೨೫] ೧೯೩೮ರಲ್ಲಿ ಒಂದು ಕಂತನ್ನಾದರು ಸ್ಥಗಿತ ಮಾಡಲು ಕೇಳಿಕೊಂಡರೂ ಬಲವಂತವಾಗಿ ಕಂದಾಯ ವಸೂಲಿ ಮಾಡಲು ಮುಂದಾದಾಗ, ಚಳವಳಿ ಆರಂಭಿಸಿ ದೊರೆ ರಾಜಸಾಹೇಬನ ರಥವನ್ನು ತಡೆದು, ಕಂದಾಯ ಮನ್ನಾ ಮಾಡುವಂತೆ ಅಧಿಕಾರಿಗಳಿಗೆ ತಿಳಿಸಬೇಕೆಂದರು. ಇದನ್ನು ಲಕ್ಷಿಸದೆ ದೊರೆ ಲಾಠಿ ಚಾರ್ಜ್ ಮಾಡಿಸಿದನು. ಇದರಿಂದ ರಾಜರ ಮೇಲಿರುವ ಭಕ್ತಿ

ಹೋಗುವಂತೆ ಮಾಡಿತು. ಗ್ರಾಮ ಹೋರಾಟ ಕಮಿಟಿ ರಚಿಸಿ ಯಾರೂ ಕಂದಾಯ ಕೊಡದಂತೆ ನೋಡಿಕೊಂಡು ಹಳ್ಳಿಗರು ನಿರ್ಭೀತಿಯಿಂದ ಕರಬಂದಿ ಸತ್ಯಾಗ್ರಹಕ್ಕೆ ಸಿದ್ಧವಾದರು. ಸರಕಾರದ ಯಾವ ಅಧಿಕಾರಿಗಳಿರಲಿ, ಪೊಲೀಸರಿರಲಿ, ಹಳ್ಳಿಗಳಿಗೆ ಬರದಂತೆ ಬಹಿಷ್ಕಾರ ಹಾಕಲಾಯಿತು. ಪ್ರಜಾ ಸಂಘದ ಅಧಿವೇಶನ ಕರೆದು ೧೯ ನಿರ್ಣಯಗಳನ್ನು ಕೈಗೊಂಡರು. ಅವುಗಳು ಕಾರ್ಯರೂಪಕ್ಕೆ ಬರದಿದ್ದರೆ ಉಗ್ರ ಚಳವಳಿ ಮಾಡುವುದಾಗಿ ತಿಳಿಸಿದರು. ರೈತರು ತಮ್ಮ ಬಲವನ್ನು ತೋರಿಸಲು ಪ್ರಜಾಸಂಘದ ಅಡಿಯಲ್ಲಿ ರಾಮದುರ್ಗದ ಸಂತೆಯನ್ನು ಬಂದ್ ಮಾಡಿದರು. ರಾಜಾ ಸಾಹೇಬ್ ಚಳವಳಿ ಹತ್ತಿಕ್ಕಲು ರೈತ ಮುಖಂಡರಿಗೆ ಲಂಚ ಹಾಗೂ ಸವಲತ್ತುಗಳ ಆಸೆ ತೋರಿಸಿ ಬೆದರಿಸುವ ಸಂಚು ಮಾಡಿದರೂ ಯಾರು ಜಗ್ಗಲಿಲ್ಲ. ೧೯೩೯ರ ಏಪ್ರಿಲ್‌ನಲ್ಲಿ ರಾಷ್ಟ್ರಧ್ವಜವನ್ನು ಪೋಲಿಸರು ಕಿತ್ತು ಹಾಕಿದಾಗ ಎಲ್ಲಿಂದಲೋ ಕಲ್ಲು ಬಂದು ಬಿದ್ದಿತು ಕೂಡಲೆ ಪೊಲೀಸರು ಲಾಠಿ ಪ್ರಹಾರ ಮಾಡಿ ನೂರಾರು ರೈತರನ್ನು ಬಂದಿಸಿದರು. ಈ ವಿಷಯ ರಾಮದುರ್ಗದಾದ್ಯಂತ ಎಲ್ಲೆಡೆ ಹರಡಿ ರೈತರು ಗುಂಪಾಗಿ ಜೈಲಿನತ್ತ ನುಗ್ಗಿದಾಗ ಕಾವಲು ಪೋಲಿಸರು ಗುಂಡು ಹಾರಿಸಿದರು. ಗುಂಡುಗಳು ಕಾಲಿಯಾದಾಗ ರೈತರು ಜೈಲಿಗೆ ಬೆಂಕಿಯಿಟ್ಟು ಬಂಧಿತರನ್ನು ಬಿಡುಗಡೆ ಮಾಡಿದರು.[೨೬] ಈ ಸಮಯದಲ್ಲಿ ರೈತರು, ಪೊಲೀಸರು ಸತ್ತಿದ್ದು. ಸೈನ್ಯ ಬಂದು ಇದನ್ನು ಹತ್ತಿಕ್ಕಿತು. ದೊರೆ ಸಂಸಾರ ಸಹಿತ ಬೆಳಗಾವಿಗೆ ಓಡಿ ಹೋದನು.

**೪.೨ ಸ್ವಾತಂತ್ರ್ಯ ನಂತರದ ಕರ್ನಾಟಕ ರೈತ ಪ್ರತಿಭಟನೆಗಳು**

**ಶಿವಮೊಗ್ಗ ಜಿಲ್ಲೆಯ ಕಾಗೋಡು ರೈತ ಸತ್ಯಾಗ್ರಹ ೧೯೫೧:** ಕಾಗೋಡು ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಒಂದು ಹಳ್ಳಿ. ಈ ಹಳ್ಳಿಯ ರೈತರದು ಆರ್ಥಿಕ ಬೇಡಿಕೆಯ ಹೋರಾಟವೆಂದರೂ, ತಮ್ಮ ಬದುಕಿನ ಆಸರೆಯಾಗಿದ್ದ ಗೇಣಿ ಜಮೀನನ್ನೆ ಪಣವಾಗಿಟ್ಟು ಹೋರಾಟಕ್ಕೆ ಬಂದದ್ದು ಆತ್ಮಶಕ್ತಿಯ ಪ್ರದರ್ಶನವಾಗಿತ್ತು. ಈ ಹೋರಾಟ ಧಣಿ ಒಕ್ಕಲಿನ ಸಂಬಂಧದಲ್ಲಿ ತೇಪೆ ಹಚ್ಚುವ ಸುಧಾರಣೆಯನ್ನು ಗಮದಲ್ಲಿಟ್ಟುಕೊಂಡಿತ್ತೇ ವಿನಃ, ಆ ಪಾಳೇಗಾರಿಕೆ ಅವಶೇಷವು ಉಳಿಯದಂತೆ ಮಾಡಲು ಆ ಕಾಲದಲ್ಲಿ ಅದಕ್ಕೆ ಸಾಧ್ಯವಾಗಲಿಲ್ಲ ಎಂಬ ಅಭಿಪ್ರಾಯವನ್ನು ಜಿ. ರಾಜಶೇಖರ್‌ರವರು ತಮ್ಮ ಕೃತಿಯಲ್ಲಿ ಮಂಡಿಸಿದ್ದಾರೆ.[೨೭]

ಗೇಣಿದಾರರು ಜಮೀನ್ದಾರರ ಮುಂದೆ ಬಿಳಿ ಬಟ್ಟೆ ಹಾಕಬಾರದು, ಹೆಂಗಸರು ಮೊಣಕಾಲ ಕೆಳಗೆ ಸೀರೆ ಉಡಬಾರದು, ಅವರ ಮನೆಯ ಮುಂದೆ ಚಪ್ಪಲಿ ಧರಿಸಿ ಓಡಾಡಬಾರದು, ಮಕ್ಕಳಿಗೆ ಒಳ್ಳೆಯ ಹೆಸರುಗಳನ್ನು ಇಡಬಾರದು, ಬಿಟ್ಟಿ ದುಡಿಯಬೇಕು, ಅವರಿಗೆ ಎದುರು ನಿಂತು ಮಾತನಾಡಬಾರದು, ಅವರು ನಿಗದಿಪಡಿಸಿದ್ದೇ ಅಧಿಕೃತ ಅಳತೆ, ಹೇಳಿದ ಎಂತಹ ಕೆಲಸವನ್ನಾದರು ಮಾಡಬೇಕು.[೨೮] ಈ ರೀತಿಯ ಗುಲಾಮಗಿರಿಯ ಆಚರಣೆಗಳನ್ನು ಬಹಿರಂಗವಾಗಿ ನಡೆಸಿಕೊಂಡು ಬಂದಿದ್ದು, ಗೇಣಿದಾರರು ಜಮೀನ್ದಾರರ ವಿರುದ್ಧ ಪ್ರತಿಭಟಿಸಲು ಕಾರಣವಾಯಿತು.

ಈ ಹಳ್ಳಿಯಲ್ಲಿ ವೀರಶೈವರು, ಮಡಿವಾಳರು, ಆದಿಕರ್ನಾಟಕದವರ ಮನೆಗಳನ್ನು ಹೊರತುಪಡಿಸಿದರೆ ಶೇ.೭೦ ಭಾಗ ಧೀವರ ಜಾತಿಯ ಮನೆಗಳಿದ್ದು, ನಾಲ್ಕೈದು ಮನೆಗಳನ್ನು ಬಿಟ್ಟರೆ ಉಳಿದವರೆಲ್ಲರೂ ರೈತರಾಗಿದ್ದು ತೀರ ಬಡವರು. ಮೈ ತುಂಬ ಸಾಲ ಹೊತ್ತವರು. ಇಲ್ಲಿನ ರೈತರು ಹೆಚ್ಚಾಗಿ ಗೇಣಿದಾರರಾಗಿದ್ದು ಹಳ್ಳಿಯ ಜಮೀನ್ದಾರ ಹಾಗೂ ಸರ್ಕಾರದ ವಿರುದ್ಧ ಹೋರಾಟ ಆರಂಭಿಸಿದ್ದರು, ಇದಕ್ಕೆ ಮೂಲ ಕಾರಣ ಗೇಣಿ ಭತ್ತದ 'ಕೊಳಗ' ಅಳತೆಯ ಪ್ರಮಾಣದ ಸಂಬಂಧದಲ್ಲಿ ಸಂಘರ್ಷಕ್ಕೆ ನಾಂದಿಯಾಯಿತು. ಗೇಣಿ ನಿಗದಿಯಾಗಬೇಕು. ಫಸಲಿನ ೧/೩ ಭಾಗಕ್ಕಿಂತ ಹೆಚ್ಚಿರಬಾರದು. ಅಳತೆಯ ಮಾಪನವಾಗಿದ್ದ ಖಂಡುಗಕ್ಕೆ ೨೦೦ ಕೊಳಗ. ೧ ಕೊಳಗಕ್ಕೆ ೩ ಸೇರು ಎಂದು ಮೊದಲಿನಿಂದ ಇತ್ತು. ಆದರೆ ಕಾಗೋಡಿನ ಜಮೀನ್ದಾರ ಗೇಣಿ ಅಳೆಸಿಕೊಳ್ಳುವಾಗ ಕೊಳಗ ೩೧/೨ ಅಥವಾ ೪ ಸೇರಿನದಾಗಿತ್ತು. ಅವರು ಹೊರಗೆ ಕೊಡಲು ಅಳೆಯುವ ಮಾಪನ ೩ ಸೇರಿನದಾಗಿತ್ತು. ಸರ್ಕಾರದ ಕೊಳಗ ಮಾಪನ ೩ ಸೇರಿನದಾಗಿದ್ದು, ಜಮೀನ್ದಾರರು ಹೆಚ್ಚಿನ ಪ್ರಮಾಣದ ಕೊಳಗ ಉಪಯೋಗಿಸದರೆಂದು ತಾಲೂಕು ರೈತ ಸಂಘ ವಿರೋಧಿಸಿತು. ಆದರೆ ಕಾಗೋಡಿನ ಗೌಡ ಒಪ್ಪಲಿಲ್ಲ. ಇದು ಹಳ್ಳಿಗಳಲ್ಲಿ ಗೌಡ ಮತ್ತು ಗೇಣಿಯರ ಸಂಘರ್ಷಕ್ಕೆ ಕಾರಣವಾಯಿತು.

೧೯೫೧ ಮಾರ್ಚ್ ತಿಂಗಳಲ್ಲಿ ಕಾಗೋಡಿನ ಒಕ್ಕಲುಗಳು ಮಳೆಗಾಲಕ್ಕೆ ಮುನ್ನ ಬೀಜ ಬಿತ್ತುವುದಕ್ಕಿಂತ ಮೊದಲ ಸಾಲಿನ ಉಳುಮೆ ಮಾಡಲು ತಮ್ಮ ಗದ್ದೆಗೆ ಇಳಿದಾಗ ಗೌಡರ ಕಡೆಯವರು ಅವರನ್ನು ತಡೆದರು. ತಮ್ಮ ಗದ್ದೆಗಳಿಗೆ ಕಾಲಿಡಬಾರದೆಂದು ಗೌಡರು ಒಕ್ಕಲುಗಳಿಗೆ ಗದರಿಸಿದರು.[೨೯] ಇವರ ಆಳುಗಳು ನೊಗಗಳನ್ನು ಕಿತ್ತುಕೊಂಡರು. ನಂತರ ಗೌಡರು ಕೋರ್ಟಿನಲ್ಲಿ ಒಕ್ಕಲುಗಳ ಮೇಲೆ ಅತಿಕ್ರಮ ಪ್ರವೇಶದ ದಾವೆ ಹೂಡಿದರು. ಇದರಿಂದಾಗಿ ಒಕ್ಕಲುಗಳು ಹಾಗೂ ಜಮೀನ್ದಾರರ ನಡುವಣ ಜಗಳ ಆರಂಭವಾಗಿ ಕಾಗೋಡಿನಾದ್ಯಂತ ಹರಡಿತು. ಒಕ್ಕಲುಗಳು ನೊಗ, ನೇಗಿಲು ಸಮೇತ ಗೌಡರ ಗದ್ದೆಗೆ ಇಳಿದರು. ಸಮಾಜವಾದಿ ಪಕ್ಷ ಸತ್ಯಾಗ್ರಹಕ್ಕೆ ಬೆಂಬಲ ನೀಡಿತು. ೧೯೫೧ ಏಪ್ರಿಲ್ ತಿಂಗಳಲ್ಲಿ ಸತ್ಯಾಗ್ರಹದ ಮುಂದಾಳುಗಳ ಮೇಲೆ ವಾರೆಂಟ್ ಹೊರಡಿಸಿ ಪೊಲೀಸರು ಗದ್ದೆಗಿಳಿದಿದ್ದ ಒಕ್ಕಲುಗಳನ್ನು ಬಂದಿಸಿದರು. ಇದು ರಾಜ್ಯಾದಾದ್ಯಂತ ಸುದ್ದಿಯಾದಾಗ ಗೋಪಲಗೌಡರು ಹಾಗೂ ಬೆಂಗಳೂರು, ದಾವಣಗೆರೆ, ಕೋಲಾರ, ಚಿತ್ರದುರ್ಗ, ಶಿವಮೊಗ್ಗ, ದಕ್ಷಿಣ ಕನ್ನಡ ಮುಂತಾದ ಕಡೆಯಿಂದ ಸಮಾಜವಾದಿ ಪಕ್ಷದ ಕಾರ್ಯಕರ್ತರು ಬಂದು ಸತ್ಯಾಗ್ರಹ ಮಾಡಿ ಬಂಧಿತರಾದರು. ಇದರಿಂದಾಗಿ ಚಳವಳಿಯ ಕಾವು ತಗ್ಗಿದಂತಾಯಿತು. ಈ ಹೋರಾಟದಿಂದಾಗಿ ಹಿಂದುಳಿದವರ ಬದುಕಿನಲ್ಲಿ ಕೆಲವು ಬದಲಾವಣೆಗಳಾದವು.

**ಮಧುಗಿರಿ ತಾಲೂಕಿನ ಕಬ್ಬು ಬೆಳೆಗಾರರ ಪ್ರತಿಭಟನೆ ೧೯೬೭:** ಈ ತಾಲೂಕಿನ ಕಬ್ಬು ಬೆಳೆಗಾರರು ಗೌರಿಬಿದನೂರು ಸಕ್ಕರೆ ಕಾರ್ಖಾನೆಗೆ ಕಬ್ಬನ್ನು ಒದಗಿಸಬೇಕಾದ ಸಂದರ್ಭದಲ್ಲಿ ಬೇರೆ ಬೇರೆ ಹಿನ್ನಲೆಗಳ ಕಾರಣ ಸರ್ಕಾರಿ ಆಜ್ಞೆಯನ್ನು ಮಾನ್ಯ ಮಾಡಲಿಲ್ಲ. ಈ ಸಂಘರ್ಷದಲ್ಲಿ ಬೆಳೆಗಾರರ ಮೇಲೆ ಹಿಂಸಾತ್ಮಕ ಕೃತ್ಯಗಳು ನಡೆದಿದ್ದರಿಂದ ಪ್ರತಿಭಟನೆ ಆರಂಭವಾಯಿತು.

ಸರ್ಕಾರದ ಅನ್ವಯ ಗೌರಿಬಿದನೂರಿನ ಕೋ ಆಪರೇಟಿವ್ ಸಕ್ಕರೆ ಕಾರ್ಖಾನೆಗೆ ರೈತರು ಬೆಳೆದ ಕಬ್ಬಿನ ಶೇ.೯೫ರಷ್ಟು ಭಾಗವನ್ನು ಕಾರ್ಖಾನೆಗೆ ಕೊಡಬೇಕಾಗಿತ್ತು. ಶುಗರ್‌ಕೇನ್ ಕಂಟ್ರೋಲ್ ಆರ್ಡರಿನ ಮೂಲಕ ಅಲ್ಲಿ ಬೆಲ್ಲ ಮಾಡಬಾರದು, ಮಾಡುವುದಾದರೆ ಲೈಸನ್ಸ್ ಪಡೆಯಬೇಕಿತ್ತು.

ಮಧುಗಿರಿ ತಾಲೂಕಿನ ೯ ಗ್ರಾಮಗಳಾದ ಬ್ಯಾಲೆಗ್ರಾಮ, ಮುದ್ದಯ್ಯನ ಪಾಳ್ಯ, ದೊಡ್ಡಹೊಸಹಳ್ಳಿ, ತಗ್ಗಿನಹಳ್ಳಿ, ಚಿಕ್ಕಹಂದ್ರಾಳು, ದೊಡ್ಡ ಹಂದ್ರಾಳು, ಹನುಮಂತಪುರ, ಬಡಚೌಡನಹಳ್ಳಿ, ನಿಟ್ಟರಹಳ್ಳಿಗೆ ತಹಸೀಲ್ದಾರರು, ಅಮಲ್ದಾರರು ಭೇಟಿ ಕೊಟ್ಟಾಗ ಅಧಿಕ ಸಂಖ್ಯೆಯಲ್ಲಿ ಕಬ್ಬು ಅರೆಯುವ ಗಾಣಗಳು ಕಾನೂನಿನ ವಿರುದ್ಧ ಚಾಲ್ತಿಯಲ್ಲಿದ್ದವು, ಅವನ್ನೆಲ್ಲ ಸ್ಥಗಿತಗೊಳಿಸಿ ಕೆಲ ಬಿಡಿಭಾಗಗಳನ್ನು ಮಹಜರು ಮಾಡಿ ಸ್ವಾಧೀನಪಡಿಸಿಕೊಂಡರು. ಅದರಲ್ಲಿರುವ ಕೆಲ ರೈತರು ಸ್ವಾಧೀನಪಡಿಸಿಕೊಂಡಿದ್ದ ಗಾಣದ ಭಾಗಗಳನ್ನು ಕಿತ್ತುಕೊಂಡರು. ಇದು ಪೋಲಿಸ್ ಠಾಣೆಯಲ್ಲಿ ಮೊಕದ್ದಮೆಯಾಗಿ ಇನ್ಸ್‌ಪೆಕ್ಟರ್ ವಿಚಾರಣೆಯ ಸಲುವಾಗಿ ಹನುಮಂತಪುರಕ್ಕೆ ಬಂದರು. ಅಪಾದಿತರಲ್ಲಿ ಒಬ್ಬನನ್ನು ಬಂದಿಸಿದಾಗ, ರೈತರು ಅವನನ್ನು ಬಿಡಿಸಿಕೊಳ್ಳಲು ಬಲವಂತವಾಗಿ ವ್ಯಾನನ್ನು ದಕ್ಕೆಗೊಳಿಸಿ, ಸೀಮೆಎಣ್ಣೆ ಸುರಿದು ಸುಡುವ ಪ್ರಯತ್ನ ಮಾಡಿದರು. ಅ ಸಮಯದಲ್ಲಿ ಪೋಲಿಸ್ ಸೂಪರಿಟೆಂಡೆಂಟ್ ೯೧ ಜನರನ್ನು ಬಂಧಿಸಿದಾಗ ಪರಿಸ್ಥಿತಿ ಹತೋಟಿಗೆ ಬಂದಿತು. ಈ ಸಂದರ್ಭದಲ್ಲಿ ರೈತರ ಮೇಲೆ ಹೊಡೆತ, ತುಳಿತ, ಬಂಧನ, ಹೆಂಗಸರ ಮೇಲೆ ಅತ್ಯಾಚಾರ ಇತ್ಯಾದಿ ಪೋಲೀಸ್ ದೌರ್ಜನ್ಯಗಳು ನಡೆದ ಬಗ್ಗೆ ವರದಿಯಾಗಿದೆ.

**ಕಬ್ಬು ಬೆಳೆಗಾರರ ಸಂಘಟನೆ ೧೯೭೦:** ರೈತವರ್ಗದ ಹಿತರಕ್ಷಣೆಗಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ಕಬ್ಬು ಬೆಳೆಗಾರರ ಸಂಘ ೧೯೭೦ರ ಕೊನೆಗೆ ಹೆಚ್.ಎಸ್. ರುದ್ರಪ್ಪರವರಿಂದ ಆರಂಭಗೊಂಡಿತು.

**ಬಳ್ಳಾರಿ ಜಿಲ್ಲೆಯ ಸಂಡೂರಿನ ರೈತ ಹೋರಾಟಗಳು: (೧೯೭೨–೭೩)** ಸಂಡೂರು ಒಂದು ಸ್ವತಂತ್ರ್ಯ ಸಂಸ್ಥಾನ. ೧೭೨೮ರಲ್ಲಿ ಸಂಡೂರು ಪ್ರದೇಶವನ್ನು ಜರಿಮಲೆ ಪಾಳೆಗಾರರಿಂದ ಸಿದ್ದೋಜಿರಾವ್ ಗೆದ್ದುಕೊಂಡು ಸಂಸ್ಥಾನದ ಮೂಲ ಪುರುಷನಾದನು. ಅಂದಿನಿಂದ ಆರಂಭವಾದ ಇವರ ಆಳ್ವಿಕೆ ೧೯೪೭ರ ಸ್ವಾತಂತ್ರ್ಯದ ನಂತರವು ಮುಂದುವರೆಯಿತು. ೧೫೦೦೦ ಎಕರೆ ಸಾರ್ವಜನಿಕ ಭೂಮಿಯನ್ನು ರಾಜಸಂಸ್ಥಾನ ವಶಪಡಿಸಿಕೊಂಡಿತು.[೩೦] ರೈತರು ಈ ಭೂಮಿಗೆ ಇಂತಿಷ್ಟು ಗೇಣಿ ನೀಡಿ ಸಾಗುವಳಿ ಮಾಡುತ್ತಿದ್ದು, ೧೯೭೩ರ ವರೆಗೆ ಮುಂದುವರೆಯಿತು. ಈ ನಡುವೆ ರಾಜಶಾಹಿಯನ್ನು ವಿರೋಧಿಸಿ ರೈತ ಪ್ರತಿಭಟನೆಗಳು ಆರಂಭವಾದಾಗ, ರಾಜರು ಪ್ರಜಾಪ್ರಭುತ್ವ ಸರ್ಕಾರದೊಂದಿಗೆ ವಿಲೀನಗೊಂಡರು ಇದರಿಂದಾಗಿ ಅವುಗಳು ತಮ್ಮ ಶಕ್ತಿಯನ್ನು ಕಳೆದುಕೊಂಡವು. ಸಮಾಜವಾದಿ ಪಕ್ಷ ಹಾಗೂ ಸಂಡೂರಿನ ರೈತ ಸಂಘದ ಒಂದು ನಿಯೋಗವು ಮಾರ್ಚ್ ೨೩ ೧೯೭೩ರಂದು ಮುಖ್ಯಮಂತ್ರಿ ಡಿ. ದೇವರಾಜು ಅರಸ್‌ರವರನ್ನು ಭೇಟಿಯಾಗಿ ರಾಜಮನೆತನ ನಡೆಸುತ್ತಿರುವ ಸುಲಿಗೆ ವಿಧಾನಗಳನ್ನು ತಿಳಿಸಿ ಒಂದು ಮನವಿಯನ್ನು ಸಲ್ಲಿಸಿತು. ಅರಸುರವರು ಹೀಗೆ ಸಲ್ಲಿಸಿದ್ದ ಮನವಿಯ ಬಗ್ಗೆ

ಯಾವುದೇ ಕ್ರಮ ಕೈಗೊಳ್ಳದೆ ಮೌನವಾಗಿದ್ದರು. ಈ ಮೌನಕ್ಕೆ ಅವರ ಮಂತ್ರಿಮಂಡಲದಲ್ಲಿದ್ದ ಅರ್ಥಸಚಿವರಾದ ಎಂ.ವೈ. ಘೋರ್ಪಡೆಯವರ ಪ್ರಾಬಲ್ಯವೇ ಕಾರಣದಂತೆ ಕಂಡಿತು. ಹೀಗಾಗಿ ಮೊದಲು ನಿರ್ಧರಿಸಿದಂತೆ ಹೋರಾಟವನ್ನು ಸೆಪ್ಟಂಬರ್ ೧೦ ೧೯೭೩ರಂದು ಸಂಡೂರಿನಲ್ಲಿ ಆರಂಭಿಸಲಾಯಿತು. ೪೬ ದಿನಗಳ ಸುಧೀರ್ಘ ಹೋರಾಟದ ನಡೆಯಿತು. ಸೆಪ್ಟಂಬರ್ ೧೨ ೧೯೭೩ ರಂದು ಸದನದಲ್ಲಿ ಇನಾಂ ರದ್ಧತಿಗಾಗಿ ಮಸೂದೆ ಮಂಡಿಸಲಾಯಿತು. ಆದರೂ ಹೋರಾಟ ನಿಲ್ಲಲಿಲ್ಲ. ಕಾರಣ ಚಳುವಳಿಯ ಬೇಡಿಕೆಯ ಒಂದು ಅಂಶದ ಮೇಲೆ ಮಾತ್ರ ಮಸೂದೆ ಪರಿಹಾರದಂತಿತ್ತು. ಸೆಪ್ಟಂಬರ್ ೨೧ರಂದು ವಿಧಾನಸಭಾ ಚರ್ಚೆಯಲ್ಲಿ ಕೋಣಂದೂರು ಲಿಂಗಪ್ಪ ಸಂಡೂರು ಭೂ ಹೊರಾಟ ನಡೆಯುತ್ತಿರುವ ಬಗೆಗೆ ಪ್ರಸ್ತಾಪಿಸಿ, ಅರಸುರವರು ಮೌನವಾಗಿರುವ ಬಗೆಗೆ ಟೀಕಿಸಿದರು. ಅದಕ್ಕೆ ಪ್ರತಿಕ್ರಿಯಿಸಿ ನಮ್ಮ ಸ್ನೇಯಿತರು ಚಳವಳಿಗೆ ತಪ್ಪು ಸ್ಥಳವನ್ನು ಆರಿಸಿಕೊಂಡಿದ್ದಾರೆ ಎಂದಿದ್ದರು. ಈ ಹೇಳಿಕೆಯನ್ನು ವಿರೋಧಿಸಿ ಸಂಡೂರಿನ ಚಳವಳಿಗಾರರು ಹೋರಾಟವನ್ನು ಮುಂದುವರಿಸಿದರು. ರೈತಪರ ಚಳವಳಿಯನ್ನು ಮುಖ್ಯಮಂತ್ರಿಗಳು ಲಘುವಾಗಿ ಟೀಕಿಸಿದ್ದರು. ಸಂಡೂರಿನಲ್ಲಿ ರೈತರ ಶೋಷಣೆ ನಡೆದಿಲ್ಲ ಎನ್ನುವ ಧೋರಣೆಯಂತಿತ್ತು. ಅರಸುರವರು ಸಮಸ್ಯೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಿಲ್ಲ. ರೈತರನ್ನು, ಸಮಾಜವಾದಿಗಳನ್ನು ಅವಗಣನೆ ಮಾಡಿದರು.

ದಿನದಿಂದ ದಿನಕ್ಕೆ, ಮೂರು ವಾರಕ್ಕೆ ಚಳುವಳಿ ಕಾಲಿಟ್ಟಾಗ ರೈತರ ಭಾಗವಹಿಸುವಿಕೆ ಕ್ರಮೇಣ ಹೆಚ್ಚಾಯಿತು. ಅಕ್ಟೋಬರ್ ೩ ೧೯೭೩ರ ವೇಳೆಗೆ ಮಹಾರಾಷ್ಟ್ರದ ಸೋಷಲಿಸ್ಟ್ ಪಕ್ಷದವರು ಜಾಥಾ ಮಾಡುತ್ತಾ ಸಂಡೂರಿಗೆ ಬಂದರು. ಬಿಹಾರದಿಂದ ಸಂತೋಷಿತಿಗಾ, ಸೂರಜ್ ಕುಮಾರ್ ಬಂದು ಇವರ ಮುಖಂಡತ್ವದಲ್ಲಿ ಮೆರವಣಿಗೆ ನಡೆಯಿತು. ಈ ಹೋರಾಟಕ್ಕೆ ಬೆಂಬಲವಾಗಿ ಕರ್ನಾಟಕದ ಕೆಲವೆಡೆಗಳಲ್ಲಿ ಪ್ರತಿಭಟನಾತ್ಮಕ ಮೆರವಣಿಗೆಗಳು ನಡೆದವು.

೪೨ ನೇ ದಿನದಲ್ಲಿ ಈ ಹೋರಾಟ ತೀವ್ರ ಸ್ವರೂಪ ಪಡೆಯಿತು. ಕಾರಣ ಸೋಷಲಿಸ್ಟ್ ಪಕ್ಷದ ಬಾವುಟವನ್ನು ಕಾಂಗ್ರೇಸ್ ಕಾರ್ಯಕರ್ತರು ಕಿತ್ತಾಗ, ಅದನ್ನು ತಡೆಯಲು ಬಂದ ಶ್ರೀನಿವಾಸ್‌ನ ಮೇಲೆ ದಾಳಿ ಮಾಡಿದರು. ಇದರಿಂದ ಅಶಾಂತಿಯ ವಾತಾವರಣ ಉಂಟಾಗಿ ಪ್ರತಿಬಂಧಕಾಜ್ಞೆಯನ್ನು ಜಾರಿಮಾಡಲಾಯಿತು. ಆದರೂ ಚಳವಳಿ ಮುಂದುವರೆಸಿದ್ದರಿಂದ ಚಳಿವಳಿಗಾರರನ್ನು ಬಂಧಿಸಿ ಹೋರಾಟ ತೀವ್ರ ಸ್ವರೂಪ ಪಡೆಯುವಂತೆ ಮಾಡಿದರು. ೧೦೩೬ ಸತ್ಯಾಗ್ರಹಿಗಳು ಪಿಕೆಟಿಂಗ್, ಭೂ ಆಕ್ರಮಣಗಳಲ್ಲಿ ಭಾಗವಹಿಸಿ ಬಂಧನಕ್ಕೊಳಗಾದರು.[೩೧] ಈ ರೀತಿ ಪೊಲೀಸರು ಚಳವಳಿಯನ್ನು ಹತ್ತಿಕ್ಕಿದರು. ಆದರೆ ಈ ಹೋರಾಟವನ್ನು ಫರ್ನಾಂಡಿಸ್ ಭಾರತದಾದ್ಯಂತ ಪ್ರಚಾರ ಮಾಡಿ ಪ್ರಧಾನಿ ಗಮನ ಹರಿಸುವಂತೆ ಮಾಡಿದರು. ದೇವರಾಜ್ ಅರಸ್‌ರವರು ಘೋರ್ಪಡೆಯವರ ಜೊತೆ ಚರ್ಚಿಸಿ ರೈತರ ಬೇಡಿಕೆಗೆ ಸಹಿ ಹಾಕುವಂತೆ ಮಾಡಿ, ಕುಮಾರಸ್ವಾಮಿಯ ೮೦೦೦ ಎಕರೆ ಭೂಮಿಯು ರೈತರ ಹೆಸರಿಗೆ ಪಟ್ಟವಾಗುವಂತೆ ಮಾಡಿದರು.

**ವರುಣಾನಾಲಾ ವಿರೋಧಿ ಚಳವಳಿ ೧೯೭೭:** ಮೈಸೂರು ಜಿಲ್ಲೆಯಲ್ಲಿ ಬರಪೀಡಿತ ಪ್ರದೇಶಗಳಿದ್ದು, ಕೃಷ್ಣರಾಜಸಾಗರಕ್ಕೆ ಬಲದಂಡೆಯ ನಾಲೆಯೊಂದನ್ನು ನಿರ್ಮಿಸಿ ನೀರು ಒದಗಿಸಲು ಪ್ರಯತ್ನಿಸಲಾಯಿತು. ಇದರಿಂದ ಮಂಡ್ಯ ಜಿಲ್ಲೆಗೆ ನೀರು ಕಡಿಮೆಯಾಗುತ್ತದೆಯೆಂದು ಇದನ್ನು ವಿರೋಧಿಸಿ ರೈತರು ಚಳವಳಿ ಆರಂಭಿಸಿದರು.

೧೯೬೭ರ ನಿಜಲಿಂಗಪ್ಪನವರ ಕಾಲದಲ್ಲಿ ಈ ಯೋಜನೆಗೆ ಶಂಕು ಸ್ಥಾಪನೆಯಾಯಿತು. ಇದರಿಂದಾಗಿ ಮಂಡ್ಯ ಜಿಲ್ಲೆಯ ರೈತರಿಗೆ ನೀರಿನ ಅಭಾವ ಉಂಟಾಗಿ ಬೆಳೆನಷ್ಟ ಉಂಟಾಗುತ್ತದೆಯಂದು ಚಳವಳಿ ಆರಂಭವಾಯಿತು. ಈ ಚಳವಳಿಯು ೧೯೭೭ರಂದು ತೀವ್ರ ಸ್ವರೂಪ ಪಡೆದು, ಮಂಡ್ಯ ಬಂದ್ ಆಚರಿಸಲಾಯಿತು. ೧೭/೦೬/೧೯೭೭ರಂದು ಕೆ.ವಿ. ಶಂಕರೇಗೌಡ, ಧರ್ಮಲಿಂಗಂ, ನಾಗರಾಜುರವರ ನೇತೃತ್ವದಲ್ಲಿ ವಿಧಾನಸೌಧದ ಮುಂದೆ ಸರ್ಕಾರದ ವಿರುದ್ಧ ಮುಷ್ಕರ ಹೂಡಿದರು. ೨೩/೦೬/೧೯೭೭ರಂದು ಪಂಜಿನ ಮೆರವಣಿಗೆ ಮಾಡಿ. ಶಂಕರಗೌಡರ ಅಧ್ಯಕ್ಷತೆಯಲ್ಲಿ ವರುಣಾ ನಾಲಾ ವಿರೋಧ ಹೋರಾಟ ಸಮಿತಿ ರೂಪಗೊಂಡಿತು. ಈ ಚಳವಳಿಗೆ ವಿದ್ಯಾರ್ಥಿಗಳು, ಯುವಕರು, ಬಹಳ ಸಂಖ್ಯೆಯಲ್ಲಿ ತೊಡಗಿ ೨೫/೧೦/೧೯೭೭ರಂದು ೧೦,೦೦೦ ಜನರ ಮೆರವಣಿಗೆ ನಡೆಯಿತು. ೨೬/೧೦/೧೯೭೭ರಲ್ಲಿ ರೈತರು ಚಡ್ಡಿಯನ್ನು ತೊಟ್ಟು ಬೃಹತ್ ಚಡ್ಡಿ ಮೆರವಣಿಗೆ ಮಾಡಿದರು. ರೈತ ಮಹಿಳೆಯರು ಚಾರಿತ್ರಿಕ ಮೆರವಣಿಗೆ ನಡೆಸಿದರು.[೨] ೦೪/೧೧/೧೯೭೭ರಂದು ಇಂದಿರಾಗಾಂಧಿ ಬೆಂಗಳೂರಿಗೆ ಬಂದು ಭಾಷಣ ಮಾಡುತ್ತಿದ್ದಾಗ ರೈತರು ಕಪ್ಪು ಬಾವುಟ ಹಿಡಿದು ಪ್ರತಿಭಟನೆ ಮಾಡಿ ಉಪವಾಸ ಸತ್ಯಾಗ್ರಹ ಮಾಡಿದರು. ೨೪/೧೧/೧೯೭೭ ಬೆಂಗಳೂರು ಚಲೋ ಕಾರ್ಯಕ್ರಮ ಹಮ್ಮಿಕೊಂಡು ಮುಖ್ಯಮಂತ್ರಿ ಹಾಗೂ ರಾಜ್ಯಪಾಲರನ್ನು ಭೇಟಿ ಮಾಡಿ ವರುಣಾ ನಾಲಾ ಸಮಸ್ಯೆ ಬಹೆಗರಿಸಲು ಒತ್ತಾಯಿಸಿದರು. ಇದರಿಂದಾಗಿ ಚಾರ್ ಸಮಿತಿ ರೂಪಗೊಂಡು ವರದಿ ತಯಾರಿಸಿದಾಗ, ಮಂಡ್ಯ ಜಿಲ್ಲೆಯ ರೈತರು ಈ ವರದಿಯನ್ನು ವಿರೋಧಿಸಿ ಉಗ್ರ ಚಳವಳಿ ಆರಂಭಿಸಿದರು. ಈ ಗಂಭೀರ ಪರಿಸ್ಥಿತಿಯಿಂದ ಮುಖ್ಯಮಂತ್ರಿ ಡಿ. ದೇವರಾಜ್ ಅರಸ್‌ರವರು ೧೦/೧೨/೧೯೭೭ರಂದು ಮಂಡ್ಯ ಜಿಲ್ಲೆಯ ರೈತ ಮುಂದಾಳುಗಳೊಂದಿಗೆ ಚರ್ಚಿಸಲು ಸಭೆಯನ್ನು ಕರೆದರು. ಆ ಸಭೆಯಲ್ಲಿ ರೈತರ ಹಿತ ರಕ್ಷಿಸಲು, ಶಾಸನಬದ್ಧ ಹಕ್ಕನ್ನು ನೀಡಲು ಒಪ್ಪಲಾಯಿತು. ಆದರೆ ೦೧/೦೧/೧೯೭೮ರಂದು ರಾಷ್ಟ್ರಪತಿ ಆಡಳಿತ ಜಾರಿಗೆ ಬಂದಿದ್ದರಿಂದ ಯಾವ ಪ್ರಗತಿ ಸಾಧ್ಯವಾಗಲಿಲ್ಲ. ನಂತರ ೦೫/೦೫/೧೯೭೮ರಲ್ಲಿ ಮುಗ್ದುಂನ ನೇತೃತ್ವದಲ್ಲಿ ನೂತನ ಸಮಿತಿ ರಚಿಸಲಾಯಿತು. ಈ ಸಮಿತಿಯ ವರದಿಯಂತೆ ೮೦,೦೦೦ ಎಕರೆ ಅರೆ ಒಣಬೆಳೆ ಸಾಗುವಳಿ ಮಾಡಲು ವರುಣಾನಾಲೆಯನ್ನು ಕೃಷ್ಣರಾಜಸಾಗರದ ಬಲದಂಡೆಯಲ್ಲಿ ಕಟ್ಟಬೇಕು. ವಿಶ್ವೇಶ್ವರಯ್ಯ ನಾಲಾ ಅಚ್ಚುಕಟ್ಟಿನಲ್ಲಿ ೧ ಲಕ್ಷ ೯೧ ಸಾವಿರ ಎಕರೆ ಸಾಗುವಳಿಗೆ ಸರ್ಕಾರ ಸಮ್ಮತಿಸಬೇಕು, ವಿ.ಸಿ. ನಾಲೆಯು ಆಧುನೀಕರಣಗೊಳ್ಳಬೇಕು, ಎಂದೆಲ್ಲಾ ತೀರ್ಮಾನವಾಗಿ ೨೭/೦೩/೧೯೭೯ರಂದು ಸರ್ಕಾರದ ಆಜ್ಞೆಯು ಹೊರಬಿದ್ದಿತು.[೩೩]

ಕಳೆದ ೫೦ ವರ್ಷಗಳ ನಂತರ ಕಾರ್ಯಾರಂಭವಾಗಿ ತುಸು ಸಮಾಧಾನ ಒದಗಿದರು, ವರುಣಾ ನಾಲೆಯ ಕೆಲಸ ಸಂಪೂರ್ಣಗೊಳ್ಳದಿರುವಲ್ಲಿ ಅದರ ಪ್ರಸ್ತಾಪ ಜೀವಂತವಾಗಿದೆ.

**ಮಲಪ್ರಭಾ ಪ್ರದೇಶದ ರೈತ ಹೋರಾಟ ೧೯೮೦:** ಮಲಪ್ರಭಾ ನದಿಯು ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನಲ್ಲಿ ಹುಟ್ಟಿ, ಸವದತ್ತಿ, ರಾಮದುರ್ಗ, ನರಗುಂದ ತಾಲೂಕುಗಳಲ್ಲಿ ಹರಿದು, ಬಿಜಾಪುರ ಜಿಲ್ಲೆ ಹುನಗುಂದ ತಾಲೂಕಿನ ಕೂಡಲಸಂಗಮದಲ್ಲಿ ಕೃಷ್ಣನದಿಗೆ ಸೇರುತ್ತದೆ. ಈ ನದಿಗೆ ಅಡ್ಡಲಾಗಿ ಜಲಾಶಯ ನಿರ್ಮಾಣಕ್ಕೆ ೧೯೬೦ರಲ್ಲಿ ಶಂಕು ಸ್ಥಾಪನೆಯಾಗಿ ನಿರ್ಮಾಣ ಆರಂಭವಾಯಿತು. ೧೯೬೭ರಲ್ಲಿ ಪ್ರತ್ಯೇಕ ಉತ್ತರ ಕರ್ನಾಟಕ ನೀರಾವರಿ ವಿಭಾಗವನ್ನು ತೆರೆಯುವವರಿಗೆ ಈ ನಿರ್ಮಾಣ ಕಾರ್ಯ ನಿಧಾನಗತಿಯಲ್ಲಿ ಸಾಗಿ ಬಂದಿತ್ತು. ಈ ನದಿಗೆ ಬೆಳಗಾವಿ ಜಿಲ್ಲೆಯ ಸವದತ್ತಿಯ ಹತ್ತಿರ ಮುನವಳ್ಳಿ ಎಂಬಲ್ಲಿ ಅಣೆಕಟ್ಟು ಕಟ್ಟಲಾಗಿದೆ. ಇದಕ್ಕೆ ೧೬೩ ಕೋಟಿ ಖರ್ಚಾಗಿದ್ದು ನರಗುಂದ, ನವಲಗುಂದ, ಸವದತ್ತಿ ಮತ್ತು ರಾಮದುರ್ಗ ತಾಲೂಕುಗಳ ಕೆಲವು ಹಳ್ಳಿಗೆ ಮಾತ್ರ ಒದಗಿ ಯೋಜನೆ ಅಪೂರ್ಣಗೊಂಡಿತು. ಈ ಯೋಜನೆ ವರದಾನವಾಗಬೇಕಾಗಿತ್ತು ಆದರೆ ಇದು ಆ ಭಾಗದ ರೈತರಿಗೆ ಶಾಪವಾಗಿ, ೧೯೮೦ರಲ್ಲಿ ರೈತ ಹೋರಾಟಕ್ಕೆ ಕಾರಣವಾಯಿತು.

೧೯೮೦ರ ಚಳವಳಿ ಆರಂಭವಾಗಲು ಕೆಳಗಿನ ಅಂಶಗಳು ಕಾರಣವಾದವು. ಈ ಪ್ರದೇಶದ ಭೂಮಿ ಕಪ್ಪು ಮಣ್ಣಾಗಿದ್ದು ನೀರನ್ನು ಹೊರಳಲು ಬಿಡದೆ ಸಂಪೂರ್ಣವಾಗಿ ಹಿಡಿದಿಟ್ಟುಕೊಳ್ಳುವ ಗುಣ ಹೊಂದಿದೆ. ಕಾಲುವೆ, ಉಪಕಾಲುವೆಗಳ ಮೂಲಕ ನೀರು ಹಾಯಲಿಲ್ಲ. ಹರಿದ ನೀರು ಒಂದೆಡೆ ನಿಂತು ಭೂಮಿ ಫಲವತ್ತತೆ ಕಳೆದುಕೊಂಡು ಪಾರ್ಥೇನಿಯಂ ಕಳೆ ಬೆಳೆದು ಬೆಳೆ ವಿಫಲವಾಯಿತು.

ಈ ಯೋಜನೆಗೆ ಮಾಡಲಾದ ವೆಚ್ಚವನ್ನು ಬರಿಸಲು ೧೯೭೬ರಿಂದ ನೀರನ್ನು ಬಿಟ್ಟಿದ್ದರೂ, ಪೂರ್ವಾನ್ವಯವಾಗಿ ೧೯೭೪ರಿಂದಲೇ ಸರ್ಕಾರ ರೈತರ ಮೇಲೆ ಅಭಿವೃದ್ಧಿ ಕರಭಾರವನ್ನು ಹೊರಿಸಿತು. ಜೊತೆಗೆ ಸರ್ಕಾರಕ್ಕೆ ಬಿಟ್ಟುಕೊಟ್ಟ ಭೂಮಿಗೆ ಪರಿಹಾರ ಪಡೆಯಲು ಮಾಡಿದ ವೆಚ್ಚ ಹಾಗೂ ಅಧಿಕಾರಿಗಳ ದರ್ಪ ರೈತರನ್ನು ಕೆರಳಿಸಿತು.

ಕೃಷಿ ತಲಾ ಆದಾಯ ಸಾಪೇಕ್ಷವಾಗಿ ಕಡಿಮೆಯಾದದ್ದು, ೧೯೭೦–೭೧ನ್ನು ಆಧಾರ ವರ್ಷವನ್ನಾಗಿ ತೆಗೆದುಕೊಂಡರೆ ೧೯೭೦–೭೧ ಮತ್ತು ೧೯೮೦–೮೧ರ ನಡುವೆ ಕೃಷಿಯ ತಲಾ ಆದಾಯ ರೂ. ೩೭೦ ರಿಂದ ೩೬೦ಕ್ಕೆ ಇಳಿಯಿತು.

ತತ್‌ಕ್ಷಣದ ಮಹತ್ವದ ಅಂಶವೆಂದರೆ, ಈ ಪ್ರದೇಶದ ಪ್ರಮುಖ ವಾಣಿಜ್ಯ ಬೆಳೆಯಾದ ಹತ್ತಿ ಬೆಲೆ ಕುಸಿದಿದ್ದು, ಒಂದು ಕಾಲದಲ್ಲಿ ವರಲಕ್ಷ್ಮಿ ಹತ್ತಿ ಬೆಲೆ ಒಂದು ಕ್ವಿಂಟಾಲಿಗೆ ರೂ. ೧೫೦೦ರಷ್ಟು ಲಾಭವನ್ನು ತರುತ್ತಿದ್ದು, ೧೯೮೦ರಲ್ಲಿ ಬೆಲೆ ಒಮ್ಮೆಗೆ ಕುಸಿಯಿತು. ಇದು ಸಂಪೂರ್ಣವಾಗಿ ಹತ್ತಿಯ ಮೇಲೆ ಅವಲಂಬಿಸಿದ ಹಲವಾರು ಕುಟುಂಬಗಳನ್ನು ಹಾಳುಗೆಡವಿ ನಾಶಮಾಡಿತು.[೩೪] ಶೇ.೭೧ ಭಾಗದ ಜನ ಸಾಲಗಾರರಾಗಿ ದಿವಾಳಿಯಾಗುವಂತಾಯಿತು.

ರೈತರ ಅಸಮಧಾನ ಹೇಗಿತ್ತೆಂದರೆ ನೀರು ಕೊಟ್ಟರಲಿ, ಬಿಟ್ಟರಲಿ ಲೇವಿ ಕೊಡುವುದಿಲ್ಲ, ಎನ್ನುವಷ್ಟರ ಮಟ್ಟಿಗೆ ವಿರೋಧ ಬೆಳೆದು ೧೯೮೦ರಲ್ಲಿ ಪಕ್ಷಾತೀತ ಸಂಸ್ಥೆಯಾಗಿ ಮಲಪ್ರಭಾ ನೀರಾವರಿ ಪ್ರದೇಶ ರೈತರ ಸಮನ್ವಯ ಸಮಿತಿ ಅಸ್ತಿತ್ವಕ್ಕೆ ಬಂದು ಹೋರಾಟಕ್ಕೆ ಅಣಿಯಾಯಿತು. ರೈತರು ಸತ್ಯಾಗ್ರಹ, ಅರೆಬೆತ್ತಲೆ ಮೆರವಣಿಗೆ, ಮಳೆಯಲ್ಲಿ ಬಾರುಕೋಲು ಚಳವಳಿ ಮಾಡಿದರು. ಸರ್ಕಾರ ಪರಿಹಾರ ನೀಡಲಿಲ್ಲ. ಕೊನೆಗೆ ರೈತ ಮುಖಂಡರು ಕರಾ ನಿರಾಕರಣೆಗೆ ಕರೆಕೊಡಲು ತೀರ್ಮಾನಿಸಿದರು. ೧೦,೦೦೦ ರೈತರು ಹದಿಮೂರು ಬೇಡಿಕೆಗಳನ್ನಿಟ್ಟುಕೊಂಡು ನರಗುಂದದಲ್ಲಿ ೩೦/೦೬/೧೯೮೦ರಂದು ಮೆರವಣಿಗೆ ನಡೆಸಿ ಬೇಡಿಕೆಗಳನ್ನು ಅಧಿಕಾರಿಗಳಿಗೆ ನೀಡಿ ಸತ್ಯಾಗ್ರಹ ಆರಂಭಿಸಿದರು. ೨೧/೦೭/೧೯೮೦ರಂದು ರೈತರು ಎತ್ತಿನಬಂಡಿ, ಟ್ರಾಕ್ಟರ್ ಕಾಲುನಡಿಗೆಯಿಂದ ಬಂದು ನರಗುಂದ, ನವಲುಗುಂದ, ಸವದತ್ತಿ ಬಂದ್ ಮಾಡಿದರು. ನವಲಗುಂದದಲ್ಲಿ ಸುಮಾರು ೪೫,೦೦೦ ರೈತರು ಪ್ರತಿಭಟನೆಯಲ್ಲಿ ಪಾಲ್ಗೊಂಡು ಬೀದಿಗಳಲ್ಲಿ ಮೆರವಣಿಗೆ ಮಾಡಿ ಪೇಟೆಯ ಮಧ್ಯಭಾಗಕ್ಕೆ ಬಂದಾಗ, ರಸ್ತೆ ಬದಿಯಲ್ಲಿ ಹಣ್ಣು ಮಾರುತ್ತ ಕುಳಿತಿದ್ದ ವ್ಯಾಪಾರಿಯ ಹಣ್ಣುಗಳನ್ನು ಕಿಡಿಗೇಡಿಗಳು ತೂರಿದರು. ಬಂದ್ ಕರೆ ನೀಡಿದ್ದರೂ ವ್ಯಾಪಾರ ಮಾಡಿದ್ದನ್ನು ಸಹಿಸಲಿಲ್ಲ. ನಂತರ ತಹಶೀಲ್ದಾರ ಕಛೇರಿಗೆ ಬಂದು ಬೇಡಿಕೆಯ ಮನವಿ ಅರ್ಪಿಸಿದರು. ಈ ಸಮಯದಲ್ಲಿ ಹಮಾಲಿ ಕಾರ್ಮಿಕರ ಗುಂಪು ಹಣ್ಣು ತೂರಾಟ ಮಾಡಿದ ನೆಪವನ್ನಿಟ್ಟು ರೈತರ ವಿರುದ್ಧ ಘೋಷಣೆ ಕೂಗುತ್ತಾ ರೈತರ ಟ್ರಾಕ್ಟರ್‌ಗಳನ್ನು ಜಖಂ ಮಾಡಿದರು. ಇದು ರೈತರಿಗೆ ತಿಳಿದ ಕೂಡಲೇ ನವಲಗುಂದದಲ್ಲಿ ಗಲಭೆ ಎಬ್ಬಿಸಿ ನೀರಾವರಿ ಕಾಲೋನಿಯಲ್ಲಿ ಗಲಾಟೆ ಮಾಡಲು ಮುಂದಾದಾಗ ಲಾಠಿ ಚಾರ್ಜ್ ಪ್ರಾರಂಭವಾಯಿತು. ನಂತರ ರೈತರನ್ನು ಚದುರಿಸಲು ಗೋಲಿಬಾರ್ ನಡೆಸಿದಾಗ ಅಳಗವಾಡಿಯ ಯುವ ರೈತ ಬಸಪ್ಪ ಲಕ್ಕುಂಡಿ ಗುಂಡಿಗೆ ಬಲಿಯಾದನು.[೩೫] ಇದೇ ದಿನ ನರಗುಂದದಲ್ಲಿ ಅಮಲ್ದಾರರು ಕಚೇರಿಯನ್ನು ಮುಚ್ಚದೆ ಬಾಗಿಲಲ್ಲಿ ಮಲಗಿದ್ದ ರೈತರನ್ನು ಬೂಟ್ ಕಾಲಿನಿಂದ ತುಳಿದುಕೊಂಡು ಹೋದರು. ಇದರಿಂದ ರೈತರು ರೊಚ್ಚಿಗೆದ್ದು ಕಚೇರಿಯೊಳಗೆ ನುಗ್ಗಿದಾಗ, ಸಬ್‌ಇನ್ಸ್‌ಪೆಕ್ಟರ್ ಗುಂಡು ಹಾರಿಸಿದ ಇದಕ್ಕೆ ಒಬ್ಬ ತರುಣ ರೈತ ಬಲಿಯಾದ. ಇದರಿಂದ ಕೋಪಗೊಂಡ ರೈತರು ಸಬ್‌ಇನ್ಸ್‌ಪೆಕ್ಟರ್ ಹಾಗೂ ಪೋಲಿಸ್‌ನನ್ನು ಕೊಂದರು. ಈ ಹಿಂಸೆಯಿಂದಾಗಿ ನರಗುಂದ, ನವಲಗುಂದದಲ್ಲಿ ಕರ್ಫ್ಯೂ ಜಾರಿಮಾಡಲಾಯಿತು. ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಕೆಂಪೇಗೌಡರ ಏಕಸದಸ್ಯ ಆಯೋಗ ಹಾಗೂ ಸಮಿತಿಗಳನ್ನು ನೇಮಕ ಮಾಡಿತು, ಅದರ ವರದಿಯಂತೆ ೮೫ ಕೋಟಿ ಹಣವನ್ನು ರೈತರಿಗೆ ಮೀಸಲಿಡಲಾಯಿತು. ಕಾಲುವೆ ರಿಪೇರಿ, ಕರ ವಸೂಲಿ, ಮುಂದೂಡಿಕೆ, ವಿದ್ಯುತ್ ದರ ಇಳಿಕೆ ಮುಂತಾದ ಪರಿಹಾರಗಳನ್ನು ನೀಡಿತು.

**ಗಂಗಾವತಿ ಮತ್ತು ಮದ್ದೇಬಿಹಾಳ ರೈತ ಚಳವಳಿ ೧೯೮೦:** ರಾಯಚೂರು ಜಿಲ್ಲೆಯ ಪ್ರದೇಶಗಳಾಗಿದ್ದು, ಈ ಚಳವಳಿಯು ಮಲಪ್ರಭಾ ಚಳವಳಿಯ ಸಮಯದಲ್ಲಿಯೇ ನಡೆಯಿತು. ಬೆಲೆ ಏರಿಕೆಯ ಬಿಸಿ ತಾಗಿದ ರೈತರು ಮತ್ತು ಗ್ರಾಹಕರು ಜೊತೆಗೂಡಿ ನಡೆಸಿದ ಚಳವಳಿ

ಇದಾಗಿದೆ. ರೈತರಿಗೆ ಪೆಟ್ರೋಲ್ ಲಭ್ಯತೆಯ ಕಷ್ಟಗಳು ಬ್ಯಾಂಕಿನ ಸಾಲದ ತೊಂದರೆ, ಬೆಳೆಗಳಿಗೆ ಅನಿಶ್ಚಿತ ಬೆಲೆಗಳು, ವ್ಯಾಪಾರಿಗಳ ಮೋಸ, ಟ್ರಾಕ್ಟರ್, ಪಂಪ್‌ಸೆಟ್ಟುಗಳಿಗೆ ಅಗತ್ಯವಾದ ಡೀಸೆಲ್‌ನ ಅಭಾವ, ಇವೆಲ್ಲವುಗಳಿಂದ ಅನುಭವಿಸಿದ ನೋವು, ಇವೆಲ್ಲವುದರ ಜೊತೆಗೆ ಬೆಲೆ ಏರಿಕೆಯೊಂದು ನೆಪವಾಗಿ ಈ ರೈತ ಚಳವಳಿ ಆರಂಭವಾಗಿ ಬಂದ್ ಆಚರಿಸಲಾಯಿತು.[೩೬] ಬಡವರ ರಕ್ತ ಹೀರುತ್ತಿರುವ ಕಾಳಸಂತೆಕೋರರ ಅಂಗಡಿಗಳನ್ನು ಲೂಟಿ ಮಾಡಿ, ಹದಿನೈದರಿಂದ ಇಪ್ಪತ್ತು ಸಾವಿರದವರೆಗೆ ರೈತರು ಸೇರಿ ಮೆರವಣಿಗೆ ಮಾಡಿ, ೧೭ ಬೇಡಿಕೆಗಳನ್ನಿಟ್ಟು ಚಳವಳಿ ಮುಂದುವರೆಸಿದರು. ಈ ಚಳವಳಿ ಹತ್ತಿಕ್ಕಲು ಗಂಗಾವತಿಯಾದ್ಯಂತ ಲಾಠಿಚಾರ್ಜ್, ಗೋಲಿಬಾರ್‌ಗಳನ್ನು ಮಾಡಿ ನಾಲ್ಕು ರೈತರನ್ನು ಬಲಿ ಪಡೆದು ಚಳವಳಿ ಹತ್ತಿಕ್ಕುವ ಪ್ರಯತ್ನ ಮಾಡಲಾಯಿತು.

**ಕಬ್ಬು ಬೆಳೆಗಾರರ ಸಂಘ – ಕರ್ನಾಟಕ ರಾಜ್ಯ ರೈತ ಸಂಘ** : ಕ.ರಾ.ರೈ.ಸಂಘವು ಕಬ್ಬು ಬೆಳೆಗಾರರ ಸಂಘದ ಒಂದು ಅಂಗವಾಗಿದ್ದು, ಮೂಲತಃ ರೈತಸಂಘದ ನಾಯಕತ್ವವು ಕಬ್ಬು ಬೆಳೆಗಾರರ ಸಂಘದಿಂದ ಹೊರಬಂದಿತು. ರೈತರ ಸ್ವಾಭಿಮಾನದ ಫಲವಾಗಿ ಶಿವಮೊಗ್ಗ, ಬಿಜಾಪುರ, ಬಳ್ಳಾರಿ, ಬೆಳಗಾವಿಯಲ್ಲಿ ಕಬ್ಬು ಬೆಳೆಗಾರರು ಜಾಗೃತಗೊಂಡರು. ೧೯೭೦ರ ಶಿವಮೊಗ್ಗದಲ್ಲಿ ಆರಂಭವಾದ ಕಬ್ಬುಬೆಳೆಗಾರರ ಸಂಘ ೧೯೭೮ರ ವೇಳೆಗೆ ಶಕ್ತಿಯುತವಾಗಿ ಬೆಳೆದು ಮೊದಲ ಹಂತದಲ್ಲಿ ೧೯ ಬೇಡಿಕೆಗಳನ್ನು ರೂಪಿಸುವ ಮುಖಾಂತರ ಚಳವಳಿ ಆರಂಭಿಸಿತು. ರೈತ ಸಂಘದ ಅಸ್ತಿತ್ವವು ಆಗಸ್ಟ್ ೧೧ ೧೯೮೦ರ ಉಪವಾಸ ಸತ್ಯಾಗ್ರಹ ಕೈಗೊಂಡು ಜಿಲ್ಲಾಧಿಕಾರಿಯ ಕಛೇರಿ ಮುತ್ತಿಗೆಯನ್ನು ಹಾಕುವುದರ ಮೂಲಕ ಅಸ್ತಿತ್ವಕ್ಕೆ ಬಂದಿತು. ಸಂಘಕ್ಕೆ ತಿರುವು ಬಂದದ್ದು ೦೧/೦೯/೧೯೮೦ರಂದು, ತಮಿಳುನಾಡಿನ 'ವ್ಯವಸಾಯಗಳ್ ಸಂಗಂ'ನ ನಾರಾಯಣಸ್ವಾಮಿ ನಾಯ್ಡುರ[೩೭] ಭಾಷಣದ ಮುಖಾಂತರ ಅವರ ವಿಮರ್ಶೆ, ಹಸಿರುಶಾಲುಗಳ ಉಪಯೋಗದ ತಂತ್ರ ಇತ್ಯಾದಿ ರೈತರ ಮೇಲೆ ಪ್ರಭಾವ ಬೀರಿತು.

ರೈತ ಸಂಘದ ಸಂಘಟನಾ ಬಲ ೦೧/೦೯/೧೯೮೦ರಂದು ಶಿವಮೊಗ್ಗದಲ್ಲಿ ನಡೆದ ರೈತ ಸಮ್ಮೇಳನದಲ್ಲಿ ವ್ಯಕ್ತವಾಯಿತು. ೧೦,೦೦೦ ರೈತರು ಅಕ್ಟೋಬರ್‌ನ ಮೊದಲ ವಾರದಲ್ಲಿ ರಸ್ತೆ ತಡೆ ಮಾಡಿ ಸೆರೆಯಾದರು. ಪ್ರಥಮ ಬಾರಿಗೆ ಕರ್ನಾಟಕ ರೈತ ಹಳ್ಳಿಗಳನ್ನು ಬಿಟ್ಟು ವಿಶಾಲವಾದ ಬೆಳವಣಿಗೆಯ ಚೌಕಟ್ಟಿನಲ್ಲಿ ತನ್ನ ಸ್ಥಾನಮಾನವನ್ನು ಹಾಗೂ ಶೋಷಣೆಯನ್ನು ಪ್ರಶ್ನಿಸ ತೊಡಗಿದ.[೩೮] ಶಿವಮೊಗ್ಗದ ರೈತ ಹೋರಾಟ ಕರ್ನಾಟಕದ ಎಲ್ಲಾ ಜಿಲ್ಲೆಗಳ ಮೇಲೆ ಪರಿಣಾಮ ಬೀರಿ ಅಸಹಕಾರ ಚಳವಳಿ ನಡೆಸಲು ಕಾರಣವಾಯಿತು.

ಕರ್ನಾಟಕದ ಎಲ್ಲಾ ಜಿಲ್ಲೆಗಳ ರೈತರು ೧೭/೧೦/೧೯೮೦ರಂದು ಬೆಂಗಳೂರಿನಲ್ಲಿ ಸಮಾವೇಶಗೊಂಡು, ೧೯ ಬೇಡಿಕೆಗಳ ಹಕ್ಕೊತ್ತಾಯವನ್ನು ಮುಖ್ಯಮಂತ್ರಿಗಳನ್ನು ಬೇಟಿ ಮಾಡಿ ಅವರ ಮುಂದಿಟ್ಟಿತು. ಇದರಿಂದಾಗಿ ಕರ್ನಾಟಕ ರಾಜ್ಯ ರೈತ ಸಂಘ ೧೭/೧೦/೧೯೮೦ರಂದು ಅಸ್ತಿತ್ವಕ್ಕೆ ಬಂದಿತು. ಈ ಬೇಡಿಕೆಗಳು ರೈತ ಸಮುದಾಯದ ಎಲ್ಲಾ ವರ್ಗಗಳನ್ನು ಗಮನದಲ್ಲಿಟ್ಟುಕೊಂಡು ರೂಪುಗೊಂಡಂತಿತ್ತು.

**ರಾಯಚೂರು ರೈತ ಹೋರಾಟ ೧೯೮೦:** ರೈತರ ಮೂರುಸಾವಿರ ಎಕರೆ ಭೂಮಿಯನ್ನು ವಶಪಡಿಸಿಕೊಂಡು ರಾಯಚೂರಿನಲ್ಲಿ ಉಪವಿದ್ಯುತ್ ಕೇಂದ್ರವನ್ನು ಪ್ರಾರಂಭಿಸಿದರು. ಆದರೆ ವಶಪಡಿಸಿಕೊಂಡ ಭೂಮಿಗೆ ಬೆಲೆಯನ್ನು ಹಾಗೂ ಬೆಳೆ ಪರಿಹಾರವನ್ನು ಕೊಟ್ಟಿರಲಿಲ್ಲ. ಇದರಿಂದ ರೈತರು ಆಕ್ರೋಶಗೊಂಡು ರಾಷ್ಟ್ರಪತಿಗೆ ಮನವಿ ನೀಡಲು ಹೋದಾಗ ಭೇಟಿಯಾಗಲು ಬಿಡಲಿಲ್ಲ. ರಾಷ್ಟ್ರಪತಿಯವರು ವಿದ್ಯುತ್ ಕೇಂದ್ರವನ್ನು ಉದ್ಘಾಟಿಸಲು ಬಂದ ಸಮಾರಂಭಕ್ಕೆ ರೈತರು ಬಹಿಷ್ಕಾರ ಹಾಕಿದರು.[೩೯] ಪ್ರಾಂತ್ಯ ರೈತ ಸಂಘದ ಪರವಾಗಿ ರೈತನಾಯಕರು ಹಳ್ಳಿ ಹಳ್ಳಿಗಳಿಗೂ ಹೋಗಿ ರೈತರನ್ನು ಸಂಘಟಿಸಿ ಹೋರಾಟ ಮಾಡಿದರು.

**ನಿಪ್ಪಾಣಿ ಹೊಗೆಸೊಪ್ಪು ಬೆಳೆಗಾರರ ಹೆದ್ದಾರಿ ಚಳವಳಿ ೧೯೮೧:** ಕರ್ನಾಟಕದ ಗಣಿ ಪ್ರದೇಶ ನಿಪ್ಪಾಣಿ. ಈ ಪ್ರದೇಶದಲ್ಲಿ ಹೆಚ್ಚಾಗಿ ರೈತರು ತಂಬಾಕು ಬೆಳೆಯನ್ನು ಬೆಳೆಯುತ್ತಿದ್ದು, ವರ್ತಕರು ಇದನ್ನು ಕೊಳ್ಳುವಾಗ ರೈತರಿಗೆ ತೂಕದಲ್ಲಿ ಮೋಸ ಮಾಡುತ್ತಿದ್ದರು. ಬೆಲೆಗಳಲ್ಲಿ ಕೃತಕವಾಗಿ ಏರಿಳಿತ ಮಾಡುತ್ತಿದ್ದು ಗುಣ ನಿರ್ಧಾರದಲ್ಲಿ ಮೋಸ ಎಂದಿನಂತಿತ್ತು. ಇದೇ ಸಮಯ ೧೯೮೦ರಲ್ಲಿ ತಂಬಾಕಿನ ಬೆಲೆ ಬಹಳ ಕುಸಿದು ಬೆಳೆಗಾರರಿಗೆ ಕಷ್ಟದ ಪರಿಸ್ಥಿತಿ ಉಂಟಾಯಿತು. ಇವರಿಂದ ಕೊಂಡ ತಂಬಾಕನ್ನು ವರ್ತಕರು ನಾಲ್ಕು ಪಟ್ಟು ಹೆಚ್ಚು ಬೆಲೆಗೆ ಮಾರಿ ಅಧಿಕ ಲಾಭ ಪಡೆಯುತ್ತಿದ್ದು, ರೈತರನ್ನು ಶೋಷಣೆಗೆ ಒಳಪಡಿಸಿದ್ದರು. ಈ ರೈತರನ್ನು ಶರತ್ ಜೋಷಿಯವರು ಜಾಗೃತಗೊಳಿಸಿ (೧೯೮೧ರ ಮಾರ್ಚ್‌ನಲ್ಲಿ) ಪೂನಾ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ೨೪ ದಿನಗಳ ಕಾಲ ಚಳವಳಿ ನಡೆಸಿದರು. ಈ ಚಳವಳಿ ಹತ್ತಿಕ್ಕಲು ಶರತ್ ಜೋಷಿಯವರನ್ನು ಬಂಧಿಸಲಾಯಿತು. ವರ್ತಕರು ಗುಂಡಾಗಳಿಂದ ರೈತರ ಮೇಲೆ ಕಲ್ಲು ಬೀರಿಸಿದರು. ರೈತರನ್ನು ಚದುರಿಸಲು ಪೋಲಿಸರು ಗೋಲಿಬಾರ್ ಮಾಡಿದರು. ಆ ಗೋಲಿಬಾರ್‌ನಿಂದಾಗಿ ೧೧ ಜನರು ಸತ್ತು, ೧೦೦ ಜನರು ಗಾಯಗೊಂಡರು. ಈ ಹೋರಾಟದ ನಂತರ ತಂಬಾಕಿನ ಬೆಳೆಯನ್ನು ಬಹಿರಂಗ ಹರಾಜು ಮಾಡಲಾಯಿತು.

**ಗಂಗಾವತಿ ದಲಿತ ರೈತ ಹೋರಾಟ ೧೯೮೧:** ಗಂಗಾವತಿಯ ಹಿರೇಜಂತಕಲ್ ಮತ್ತು ಕನಕಗಿರಿಯ ಹರಿಜನರು ೩೦ ವರ್ಷಗಳಿಂದ ಭೂಮಿ ಉಳುತ್ತಿದ್ದರೂ ಸರ್ಕಾರ 'ಪಟ್ಟಾ'ವನ್ನು ಕೊಟ್ಟಿರಲಿಲ್ಲ. ಈ ಜಮೀನಿನ ಮೇಲೆ ಊರ ಜಮೀನ್ದಾರರ ಕಣ್ಣು ಬಿದ್ದಿದ್ದರಿಂದ, ಪೋಲಿಸರು ಈ ದಲಿತ ರೈತರನ್ನು ಆ ಭೂಮಿಯಿಂದ ಹೊರ ಹಾಕಿದರು. ೦೫/೦೮/೧೯೮೧ರಿಂದ ಹದಿನೆಂಟು ದಿನಗಳ ಕಾಲ ಸತತವಾಗಿ ರೈತ ಸಂಘದ ನೇತೃತ್ವದಲ್ಲಿ ನ್ಯಾಯಕ್ಕಾಗಿ ಸತ್ಯಾಗ್ರಹ ನಡೆಯಿತು. ಪರಿಣಾಮವಾಗಿ ಸರ್ವೇ ಕಾರ್ಯ ನಡೆದು ಎಲ್ಲರಿಗೂ 'ಪಟ್ಟಾ' ದೊರಕಿತು.[೪೦]

**ಮಂಡ್ಯದ ಆಧುನಿಕ ರೈತ ಚಳವಳಿ ೧೯೮೨-೮೬:** ಮಂಡ್ಯ ಜಿಲ್ಲೆಯ ರೈತರು ಲೇವಾನೀತಿ ಹಾಗೂ ಸಾಲ ವಸೂಲಾತಿಯಿಂದಾಗಿ ನಲುಗಿ ಹೋಗಿದ್ದರು. ರೈತ ನಾಯಕರಾದ ಪ್ರೋ. ಎಂ.ಡಿ. ನಂಜುಂಡಸ್ವಾಮಿ ಲೇವಾ ಕೊಡಬೇಕಾದದ್ದು ರೈತರಲ್ಲ, ಅವರು ಸಾಲಗಾರರಲ್ಲ. ಸರ್ಕಾರವೇ ಬಾಕಿದಾರ, ಎಂದು ಹೇಳಿದ್ದು ರೈತರಿಗೆ ಆತ್ಮಸ್ಥೈರ್ಯ ತುಂಬಿತು. ಈ ಹಿನ್ನಲೆಯಲ್ಲಿ

೧೯೮೨ ಜುಲೈ ತಿಂಗಳಲ್ಲಿ ಚಳವಳಿ ಆರಂಭವಾಯಿತು. ರೈತ ನಾಯಕರು ಹಳ್ಳಿ ಹಳ್ಳಿಗೆ ಹೋಗಿ ಜಾಗೃತಿ ಮೂಡಿಸಿದರು. ಕಂದಾಯ ಅಧಿಕಾರಿಗಳ ಕಿರುಕುಳ ಸಹಿಸಲಾಗದೆ, ರೈತರ ಅಪ್ಪಣೆ ಇಲ್ಲದೆ, ಅವರ್‍ಯಾರು ಗ್ರಾಮ ಪ್ರವೇಶಿಸಕೂಡದು ಎಂಬ ಹಸಿರು ನಾಮ ಫಲಕಗಳನ್ನು ಹಳ್ಳಿಗಳ ಮುಂದೆ ಹಾಕಿದರು. ಸರ್ಕಾರದ ಗಮನ ಸೆಳೆಯಲು ೧೯೮೨ ಅಕ್ಟೋಬರ್ ೨ರ ಗಾಂಧಿಜಯಂತಿಯಂದು ಬೆಂಗಳೂರು ಚಲೋ ಚಳುವಳಿಯನ್ನು ಮಂಡ್ಯ ಜಿಲ್ಲೆಯ ಸಾವಿರಾರು ರೈತರು ಹಮ್ಮಿಕೊಂಡರು. ಜಿಲ್ಲೆಯ ರೈತರಲ್ಲಿ ಸಾಮಾನ್ಯ ತಿಳುವಳಿಕೆ ಮೂಡಿಸಲು ಶಿವಾರಗುಡ್ಡದ ವಿದ್ಯಾಪೀಠದಲ್ಲಿ ಮೂರು ದಿನಗಳ ಕಾಲ ಅಧ್ಯಯನ ಶಿಬಿರ ನಡೆಯಿತು. ಇದರಿಂದಾಗಿ ಅವೈಜ್ಞಾನಿಕ ಸಾಲರದ್ದು, ಲೇವಾ ನಿರಾಕರಣೆ, ಸರ್ಕಾರಿ ಕಛೇರಿಯಲ್ಲಿ ಭ್ರಷ್ಟಾಚಾರ ನಿರ್ಮೂಲನೆ ಕಾರ್ಯಕ್ರಮ ಹಮ್ಮಿಕೊಂಡಿತು.[೪೧] ಇದರಿಂದ ಜಮೀನು ಸಂಬಂಧದ ಕೆಲಸಗಳು ಸುಗಮವಾಗಿ ನಡೆಯಲು ಅನುಕೂಲವಾಗಿ ಜಪ್ತಿ ಕಾರ್ಯಗಳಿಗೆ ತಡೆಯಾಯಿತು.

**ನಾಗಸಮುದ್ರ–ಮುಂಗೋಟೆಯ ರೈತ ಚಳವಳಿ ೧೯೮೨:** ನಾಗಸಮುದ್ರ, ಶಿವಮೊಗ್ಗ ಜಿಲ್ಲೆಯ, ಭದ್ರಾವತಿ ತಾಲೂಕಿನ ತುಂಗಭದ್ರಾ ತಡಿಯ ಒಂದು ಗ್ರಾಮ. ಈ ಪ್ರದೇಶದ ರೈತರು ಏಪ್ರಿಲ್ ೧೯೮೦ರ ಜೈಲ್ ಬಾರೋ ಚಳವಳಿ ಸಹಿತವಾಗಿ, ಸಕ್ಕರೆ ಕಾರ್ಖಾನೆ ಕಬ್ಬನ್ನು ಕೊಳ್ಳುವ ಯೋಗ್ಯ ಬೆಲೆ ನಿರ್ಧರಿಸಲು ಮಾಡಿದ ಚಳವಳಿಯಾಗಿದೆ. ರೈತರು ಮುಂಗೋಟಿಯಲ್ಲಿ ನಡೆಯುವ ಸಮ್ಮೇಳನವನ್ನು ತಡೆಯಬೇಕೆಂದು ನಿರ್ಧರಿಸಿ ಕರಪತ್ರ ಹಂಚಿದರು. ಆದರೆ ೨೪/೦೫/೧೯೮೨ರಂದು ಪಿ.ಡಬ್ಲ್ಯೂ.ಡಿ. ಸಚಿವರು ಜಿಲ್ಲೆಯ ಭೇಟಿಯನ್ನು ರದ್ದುಗೊಳಿಸುವುದರ ಬಗ್ಗೆ ತಿಳಿಯಿತು. ಆದರೂ ಸಚಿವರ ಗೈರು ಹಾಜರಿಯಲ್ಲಿ ಸಮ್ಮೇಳನ ನಡೆಸಲು ಮುಂದಾದಾಗ ರೈತರು ಅದನ್ನು ಅಡ್ಡಿಪಡಿಸಲು ತೀರ್ಮಾನಿಸಿದರು. ಇದರಿಂದ ಶಿಸ್ತುಪಾಲನೆಗಾಗಿ ಭದ್ರಾವತಿಯಿಂದ ಬರುತ್ತಿದ್ದ ಡಿ.ಎಸ್.ಪಿ. ಹಾಗೂ ಪೊಲೀಸ್ ಕಮಿಷನರ್‌ನನ್ನು ನಾಗಸಮುದ್ರ ಹೊರಗಡೆ ರೈತರು ಮುತ್ತಿಗೆ ಹಾಕಿದರು. ಈ ಸಂದರ್ಭದಲ್ಲಿ ಭದ್ರಾವತಿ ತಾಲೂಕು ರೈತ ಸಂಘದ ಅಧ್ಯಕ್ಷ ವೀರಬಸಪ್ಪ, ಸಚಿವರಿಗೆ ಹಾದಿ ಮಾಡಿಕೊಡಲು ಪೊಲೀಸರು ಬಂದಿದ್ದಾರೆ ಎಂದು ಆರೋಪಿಸಿದರು. ಇದರಿಂದ ರೈತರು ಪೊಲೀಸರ ಮೇಲೆ ಕೈ ಮಾಡಬಹುದೆಂದು ಹಿಂಸಾಚಾರಕ್ಕೆ ಎಡೆಯಾಯಿತು. ಪೊಲೀಸ್ ವಾಹನಗಳಿಗೆ ಹಾನಿಯಾಯಿತು, ಬೆಂಕಿ ಹಚ್ಚಿದರು, ಡಿ.ಎಸ್.ಪಿ ಜೀಪಿಗೂ ಬೆಂಕಿ ಹಚ್ಚಲಾಯಿತು. ರೈತರನ್ನು ಚದುರಿಸಲು ಅಶ್ರುವಾಯು ಲಾಠಿಚಾರ್ಜ್ ಮಾಡಿದರು ಪರಿಣಾಮಕಾರಿಯಾಗಲಿಲ್ಲ, ಗೋಲಿಬಾರ್ ಮಾಡಿದಾಗ ಇಬ್ಬರು ಸತ್ತರು. ಈ ರೀತಿ ಚಳವಳಿ ಹತ್ತಿಕ್ಕಿದರು.

**ಮಂಡ್ಯ ಜಿಲ್ಲೆ ಗೆಜ್ಜಲಗೆರೆ ರೈತರ ಸತ್ಯಾಗ್ರಹ ೧೯೮೨:** ಗೆಜ್ಜೆಲಗೆರೆಯಲ್ಲಿ ರೈತರು ಕಬ್ಬು ಹಾಗೂ ಭತ್ತಕ್ಕೆ ಬೆಂಬಲ ಬೆಲೆಗಾಗಿ ಸತ್ಯಾಗ್ರಹ ಆರಂಭಿಸಿದರು. ನಾಲ್ಕು ದಿನಗಳಿಂದ ರೈತರು ರಸ್ತೆ ಬಂದ್ ಹಾಗೂ ಚಳವಳಿಯನ್ನು ಮಾಡಿ, ಟನ್ ಕಬ್ಬಿಗೆ ೨೭೫ ರೂಪಾಯಿಗಳನ್ನು ನೀಡಿ ಎಂದು ಬೇಡಿಕೆ ಇಟ್ಟರು.[೪೨] ಈ ಬಗ್ಗೆ ಸಮಾಲೋಚನೆ ಮಾಡಿದಾಗ ಕೆಲ ರೈತರು

ಸಮ್ಮತಿ ನೀಡಿದರೆ ಮತ್ತೆ ಕೆಲವರು ಸಮ್ಮತಿ ನೀಡಲಿಲ್ಲ. ಸಮ್ಮತಿ ನೀಡಿದ ರೈತರಿಗೆ ಜಿಲ್ಲಾಧಿಕಾರಿಗಳು ಟನ್ ಕಬ್ಬಿಗೆ ೨೭೫ ರೂ ಕೊಡಲಾಗುವುದಿಲ್ಲವೆಂದು ಹೇಳಿದಾಗ, ಇದನ್ನು ವಿರೋಧಿಸಿದ ರೈತ ಮುಖಂಡನನ್ನು ಬಂಧಿಸಿದರು. ರೈತ ನಾಯಕನನ್ನು ಬಿಡುಗಡೆ ಮಾಡಬೇಕೆಂದು ಸಾವಿರಾರು ಗಂಡಸರು, ಹಲವಾರು ಹೆಂಗಸರು, ಮಕ್ಕಳು ದಿನದ ೨ ಗಂಟೆಗಳ ಕಾಲ ರಸ್ತೆ ರೋಕೋ ಚಳವಳಿ ಆರಂಭಿಸಿದರು. ಮಂಡ್ಯ ಸಕ್ಕರೆ ಕಾರ್ಖಾನೆಯ ಕಬ್ಬಿನ ಬೆಲೆ ಸಂಬಂಧ ಚಳವಳಿ ತೀವ್ರಗೊಂಡು ಕಲ್ಲು ತೂರಾಟ, ಪೊಲೀಸ್ ವಾಹನಕ್ಕೆ ಬೆಂಕಿ ಹಚ್ಚುವ ಪ್ರಯತ್ನದಲ್ಲಿ ತೊಡಗಿದಾಗ ಗೋಲಿಬಾರ್ ನಡೆದು ಇಬ್ಬರು ರೈತರು ಮರಣ ಹೊಂದಿದರು.[೪೩] ಊರೊಳಗೆ ಹೋಗಿ ರೈತರ ಆಸ್ತಿಪಾಸ್ತಿಗೆ ಹಾನಿ ಮಾಡಿದರು. ಮನಸ್ಸಿಗೆ ಬಂದಂತೆ ಹೆಂಗಸರನ್ನು ಹೊಡೆದು ರೈತ ಚಳವಳಿ ಹತ್ತಿಕ್ಕಿದರು.

**ರಾಜ್ಯ ರೈತ ಸಂಘದ ರಸ್ತೆರೋಕೋ ಚಳವಳಿ ೧೯೮೮:** ೧೯೮೮ ಜೂನ್ ೧೧ರಂದು ಪ್ರಾಂತ ರೈತ ಸಂಘವು ರಾಜ್ಯಾದ್ಯಂತ ಪೀಕಿಟಿಂಗ್ ಮಾಡಿತು. ಆಕ್ರಮ ಸಾಗುವಳಿ ಮಾಡಿದವರಿಗೆ ಭೂಮಿ ಸಕ್ರಮಗೊಳಿಸುವುದು. ಅಸಂಘಟಿತ ಕಾರ್ಮಿಕರಿಗೆ ಕನಿಷ್ಠ ಕೂಲಿ ಜಾರಿ, ಬಂಜರು ಭೂಮಿ ವಿತರಣೆ, ಅರಣ್ಯ ಭೂಮಿ ಬಿಡುಗಡೆ, ಬೆಳೆಗಳಿಗೆ ಸೂಕ್ತ ಬೆಲೆಗಳನ್ನು ಗೊತ್ತು ಮಾಡುವಿಕೆಯಲ್ಲಿಯೂ ರೈತರಿಗೆ ವಂಚನೆ ಮಾಡುತ್ತಿತ್ತು. ಇದನ್ನು ವಿರೋಧಿಸಿ ೧೯೮೮ ಜನವರಿ ೨೬ರ ಗಣರಾಜ್ಯೋತ್ಸವ ದಿನದಂದು ರಾಜ್ಯದ ವಿವಿಧೆಡೆಗಳಲ್ಲಿ ರಸ್ತೆ ಹಾಗೂ ರೈಲು ಮಾರ್ಗಗಳಲ್ಲಿ ಸಂಚಾರ ನಡೆಯದಂತೆ ತಡೆಯಲಾಯಿತು. ಸರ್ಕಾರದ ಕೆಲಸ ಕಾರ್ಯಗಳನ್ನು ತಡೆಯುವ ಪ್ರಯತ್ನ ಮಾಡಲಾಯಿತು. ಇದರಿಂದಾಗಿ ೩೭,೭೨೫ ರೈತರು ಬಂಧನಕ್ಕೊಳಗಾದರು.[೪೪] ಬೆಂಗಳೂರು, ಮೈಸೂರು, ಅರಸೀಕೆರೆ, ಹುಬ್ಬಳ್ಳಿ, ಧಾರವಾಡ ಮುಂತಾದ ಕಡೆ ರೈಲು ನಿಲ್ಲಿಸಿದ ಘಟನೆಗಳು ನಡೆದವು.

**ಹೆದ್ದೂರು ಭೂ ಹೋರಾಟ** ೧೯೮೮: ತೀರ್ಥಹಳ್ಳಿ ತಾಲೂಕಿನ ಬಳಿ ಇರುವ ಹೆದ್ದೂರು ಗ್ರಾಮದ ನದಿ ದಂಡೆಯಲ್ಲಿ ರಾಜ್ಯ ಅರಣ್ಯ ಇಲಾಖೆಗೆ ಸೇರಿದ ೧೫೦ ಎಕರೆ ಭೂಮಿಯಿದ್ದು, ಭೂಹೀನ ರೈತರಿಗೆ ಭೂಮಿ ಕೊಡಿಸಬೇಕೆಂದು ನಡೆದ ಹೋರಾಟವಾಗಿದೆ. ಬಹುಶಃ ಶಿವಮೊಗ್ಗ ಜಿಲ್ಲೆಯಲ್ಲಿ ರೈತ ಸಂಘವು ಭೂಹೀನರ ಪರವಾಗಿ ಮಾಡಿದ ಮೊದಲ ಚಳವಳಿ ಇದಾಗಿದೆ. ಈ ಚಳವಳಿ ಆರಂಭವಾಗುವ ಮೊದಲೇ ಮುಸ್ಲಿಂ ಕುಟುಂಬಗಳು ಕಾಡನ್ನು ಕಡಿದು ಭೂಮಿ ಮಟ್ಟ ಮಾಡುವ ಕೆಲಸದಲ್ಲಿ ತೊಡಗಿದ್ದರು. ಅವರನ್ನು ಈ ಚಳವಳಿಗೆ ಸೇರಿಸಿಕೊಂಡರು. ಹೋರಾಟದ ಪ್ರಥಮ ಹಂತವಾಗಿ ಆ ಜಾಗಕ್ಕೆ ರಾಮಮನೋಹರ ಲೋಹಿಯಾನಗರ ಎಂದು ಹೆಸರಿಟ್ಟು, ಒಬ್ಬೊಬ್ಬರಿಗೆ ಇಂತಿಷ್ಟು ಭೂಮಿಯೆಂದು ಹಂಚಿದರು. ಅದನ್ನು ಮಟ್ಟ ಮಾಡಲು ಸ್ತ್ರೀಯರು, ಭೂಹೀನ ರೈತರು ಬಂದಾಗ, ಅರಣ್ಯ ಇಲಾಖೆ ಸರ್ಕಾರಿ ಜಮೀನಿನಲ್ಲಿ ಅಕ್ರಮ ಪ್ರವೇಶ ಮಾಡಿದ್ದಾರೆಂದು ಆರೋಪಿಸಿ ಕೇಸು ಹಾಕಿತು. ಪೊಲೀಸರು ರೈತರನ್ನು ಬಂಧಿಸಿ ಕೋರ್ಟ್‌ಗೆ ಕರೆದೊಯ್ದಾಗ ಬಂಧನಕ್ಕೆ ಆದೇಶಿಸಿತು. ನಂತರ ಹೋರಾಟ ಮತ್ತೆ

ಆರಂಭವಾಗಿದ್ದರಿಂದ ಅರಣ್ಯ ಇಲಾಖೆಯುವರು ಇದು ಯೋಗ್ಯವಲ್ಲದ ಭೂಮಿ, ಬದಲಿಗೆ ನರ್ಸರಿ ಮಾಡಿ ನಿಮಗೆ ಕೆಲಸ ಕೊಡುತ್ತೇವೆ. ನಿಮ್ಮ ಹೋರಾಟ ನಿಲ್ಲಿಸಿ ಎಂದು ಷರತ್ತು ಹಾಕಿದರು.[೪೫] ಅದರಂತೆ ಬಹುಸಂಖ್ಯಾತ ಭೂಹೀನ ರೈತರು ಕೆಲಸಕ್ಕೆ ಒಪ್ಪಿಕೊಂಡು ಚಳವಳಿ ನಿಲ್ಲಿಸಿದರು.

ಸುಮಾರು ಮೂರು–ನಾಲ್ಕು ದಶಕಗಳ ಕಾಲ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ರೈತರನ್ನು ಸಂಘಟಿಸಿ ಚಳವಳಿ ಮಾಡುತ್ತಿದ್ದ ಕರ್ನಾಟಕ ರಾಜ್ಯ ರೈತ ಸಂಘದ ಚಟುವಟಿಕೆಗಳು ೧೯೮೦–೧೯೯೦ರ ದಶಕದಲ್ಲಿ ಕುಂಠಿತಗೊಂಡಿರುವುದನ್ನು ಕಾಣಬಹುದಾಗಿದೆ. ಈ ಹಿನ್ನಡೆಗೆ ನಾಲ್ಕು ಮುಖ್ಯ ಕಾರಣಗಳನ್ನು ನೀಡಬಹುದು. ಒಂದನೆಯದಾಗಿ, ಕರ್ನಾಟಕ ಭೂ ಸುಧಾರಣಾ ಕಾನೂನು ಬಂದ ಮೇಲೆ ಸಂಘಟನೆಯ ಮುಖ್ಯ ಬೇಡಿಕೆ ಈಡೇರಿದಂತಾಯಿತು. ಎರಡನೆಯದಾಗಿ ಈ ಸಂಘಟನೆಯ ಗೇಣಿ ಸಮಸ್ಯೆ ಪ್ರಬಲವಾಗಿರುವಲ್ಲಿ ಮಾತ್ರ ಅಸ್ತಿತ್ವದಲ್ಲಿತ್ತು. ಮೂರನೆಯದಾಗಿ ಮಾರ್ಕ್ಸ್‌ವಾದಿ ಹಿನ್ನೆಲೆಯ ಸಂಘಟನೆಯಾದ ಪ್ರಾಂತೀಯ ರೈತ ಸಂಘ ಹೆಚ್ಚಾಗಿ ಕಾರ್ಮಿಕರು ಹಾಗೂ ಕೈಗಾರಿಕೆಗಳ ಸಮಸ್ಯೆಗಳಿಗೆ ಒತ್ತು ಕೊಟ್ಟಿರುವುದರಿಂದ ರೈತಾಪಿ ವರ್ಗದಲ್ಲಿ ಈ ಸಂಘಟನೆ ಬಲಹೀನವಾಯಿತು. ನಾಲ್ಕನೆಯದಾಗಿ ಸದಸ್ಯತ್ವವನ್ನು ಹೆಚ್ಚು ಮಾಡಲು ಧೃಡವಾದ ರಾಜಕೀಯ ಸಂಕಲ್ಪದ ಕೊರತೆಯಿದೆ.[೪೬]

**ಗ್ಯಾಟ್ ಒಪ್ಪಂದ–ಡೆಂಕಲ್ ಪ್ರಸ್ತಾವನೆ ವಿರೋಧ ಚಳವಳಿಗಳು (೧೯೯೩–೯೪):** ಗ್ಯಾಟ್ ಒಪ್ಪಂದ ಎರಡನೇ ಮಹಾಯುದ್ಧದ ನಂತರ ಅಸ್ತಿತ್ವಕ್ಕೆ ಬಂದಿತು. ಅಂತರರಾಷ್ಟ್ರೀಯ ವ್ಯಾಪಾರ ನಡೆಸಲು ಪರಸ್ಪರ ಸ್ವೀಕೃತವಾದ ನಿಯಮಗಳನ್ನು ಒಳಗೊಂಡ ಒಪ್ಪಂದವೇ ಗ್ಯಾಟ್ ಒಪ್ಪಂದ ಅಥವಾ ಬಹುರಾಷ್ಟ್ರೀಯ ವ್ಯಾಪಾರ ಪದ್ಧತಿಯಲ್ಲಿ ಆಮದು ಮತ್ತು ರಪ್ತು ಸುಂಕಗಳ ಹಾಗೂ ವ್ಯಾಪಾರದ ಬಗ್ಗೆ ಮಾಡಿಕೊಳ್ಳುವ ಸಾಮಾನ್ಯ ಒಪ್ಪಂದ. ಗ್ಯಾಟ್‌ನ ಮಹಾನಿರ್ದೇಶಕರಾದ ಅರ್ಥರ್ ಡೆಂಕಲ್ ೧೯೯೧ರಲ್ಲಿ ಕ್ರಿಯಾ ಯೋಜನೆಯ ಪ್ರಸ್ತಾವನೆಯನ್ನು ಇಟ್ಟಾಗ ಅದರಲ್ಲಿ ಮಾತುಕತೆಗಳ ಫಲಿತಾಂಶ ಸಮ್ಮತಿ ಹಾಗೂ ಅಸಮ್ಮತಿಯಾದ ಪ್ರಸ್ತಾಪಗಳಿದ್ದು ಇದನ್ನು ಡೆಂಕಲ್ ಪ್ರಸ್ತಾವನೆ ಎನ್ನುತ್ತಾರೆ. ಕೃಷಿ ಸಂಬಂಧಕ್ಕೆ ಇವುಗಳನ್ನು ಅನ್ವಯಿಸಿ ನೋಡಿದರೆ ಕೃಷಿ ಅಗತ್ಯ ವಸ್ತುಗಳು ಹಾಗೂ ಉತ್ಪನ್ನಗಳ ಹಕ್ಕನ್ನು ಬಹುರಾಷ್ಟ್ರೀಯ ಸಂಸ್ಥೆಗಳು ತಮ್ಮ ಹಿಡಿತದಲ್ಲಿಟ್ಟುಕೊಂಡು ರೈತರನ್ನು ತಮ್ಮ ತಾಳಕ್ಕೆ ಕುಣಿಯುವಂತೆ, ಅಡಿಯಾಳಾಗಿರುವಂತೆ ಮಾಡುತ್ತವೆ. ಈ ಕಾರಣಕ್ಕಾಗಿಯೆ ಅವನ್ನು ವಿರೋಧಿಸಿ ಸ್ವಾವಲಂಬಿ, ಸ್ವಾಭಿಮಾನ ಚಳವಳಿಯೇ ಗ್ಯಾಟ್ ಡೆಂಕಲ್ ಸೂಚನಾವಳಿ ವಿರೋಧಿ ಚಳವಳಿ ಎನ್ನುತ್ತಾರೆ.[೪೭] ಊಳಿಗಮಾನ್ಯದ ಯಜಮಾನ ಸಂಸ್ಕೃತಿಯ, ಬೃಹತ್ ಜಮೀನ್ದಾರಿ ವ್ಯವಸ್ಥೆಯ ಆಧುನಿಕ ರೂಪ ಪಾಶ್ಚಿಮಾತ್ಯ ವಸಾಹತುಶಾಹಿ ಪದ್ಧತಿಯ ಸಾಂಪ್ರದಾಯಿಕ ರೂಪವಾಗಿದೆ.

ಕ.ರಾ.ರೈ.ಸಂಘದ ಪ್ರಕಾರ ಸರಕುಗಳನ್ನು ಪೈಪೋಟಿತ ಬೆಲೆಯಲ್ಲಿ ಮಾರಾಟ ಮಾಡುವ ಈ ನೀತಿ, ತೃತೀಯ ಜಗತ್ತನ್ನು ಒಳಗೊಂಡಂತೆ ವಿಶ್ವ ಮಾರುಕಟ್ಟೆಯನ್ನು ಆಕ್ರಮಿಸಲು

ಬಂಡವಾಳಶಾಹಿ ದೇಶಗಳು ಹಾಕಿಕೊಂಡ ಬೃಹತ್ ಕಾರ್ಯತಂತ್ರದ ಒಂದು ಭಾಗವಾಗಿದೆ. ಬಂಡವಾಳಶಾಹಿ ರಾಷ್ಟ್ರಗಳು ಇಂತಹ ಕಾರ್ಯತಂತ್ರಗಳನ್ನು ತೃತೀಯ ಜಗತ್ತಿನ ಮೇಲೆ ಪ್ರಾಬಲ್ಯ ಸಾಧಿಸಲು ಬಳಸುತ್ತದೆ. ಈ ನೀತಿಯಿಂದಾಗಿ ಭಾರತೀಯ ಸರ್ಕಾರ ಮಾರುಕಟ್ಟೆ ನಿಯಂತ್ರಣದ ಎಲ್ಲಾ ಅಧಿಕಾರಗಳನ್ನು ಕಳೆದುಕೊಳ್ಳುತ್ತದೆ.[೪೮] ಡೆಂಕಲ್ ಪ್ರಸ್ತಾವನೆ ಮಾನವನ ಮೂಲಭೂತ ಹಕ್ಕುಗಳನ್ನು ವಿರೋಧಿಸುತ್ತದೆ. ರೈತನು ತನ್ನದೇ ಆದ ಬೀಜ ಮತ್ತು ಗೊಬ್ಬರವನ್ನು ಉತ್ಪಾದಿಸುವ ಹಕ್ಕನ್ನು ಕಳೆದುಕೊಳ್ಳುತ್ತಾನೆ.[೪೯] ಹಾಗಾಗಿ ರೈತರು ಡೆಂಕಲ್ ಪ್ರಸ್ತಾವನೆಯ ವಿರುದ್ಧ ಎರಡನೇ ಸ್ವಾತಂತ್ರ್ಯ ಹೋರಾಟ ನಡೆಸಲು ವಿಶ್ವದಲ್ಲೇ ಪ್ರಥಮ ಬಾರಿಗೆ ಗಾಂಧೀಯವರ ಉಪ್ಪಿನ ಸತ್ಯಾಗ್ರಹದ ಮಾದರಿಯಲ್ಲಿ ಬೀಜ ಸತ್ಯಾಗ್ರಹ ಹಮ್ಮಿಕೊಂಡರು. ಕ.ರಾ.ರೈ.ಸಂಘವು ಮಾರ್ಚ್ ೩ ಹಾಗೂ ೪ ರಂದು ರೈತರಿಂದ ದೆಹಲಿ ಮುತ್ತಿಗೆ ಕಾರ್ಯಕ್ರಮ ಹಮ್ಮಿಕೊಳ್ಳಲು ಕರೆ ನೀಡಿತು. ಬೆಂಗಳೂರು, ಮಂಡ್ಯ, ಕೊಡಗು, ಗುಲ್ಬರ್ಗ, ರಾಯಚೂರು, ಶಿವಮೊಗ್ಗ ಜಿಲ್ಲೆಗಳಿಂದ ಸುಮಾರು ೧೫,೦೦೦ ರೈತರು ಬರುವ ನಿರೀಕ್ಷೆ ಹೊಂದಿದ್ದರು. ಟಿಕೇಟ್ ರಹಿತವಾಗಿ ಪ್ರಯಾಣ ಮಾಡಲು ಮುಂದಾದಾಗ ಮಂಗಳೂರಿನಲ್ಲಿ ೫೯೬ ರೈತರನ್ನು, ಮೈಸೂರಿನಲ್ಲಿ ೨೫೦೦, ಗುಲ್ಬರ್ಗಾದಲ್ಲಿ ೧೦೦೦, ಹುಬ್ಬಳ್ಳಿಯಲ್ಲಿ ೮೦೦, ರಾಯಚೂರಿನಲ್ಲಿ ೨೦೦೦ ರೈತರನ್ನು ಬಂಧಿಸಲಾಯಿತು. ಇದರ ಜೊತೆಗೆ ನವದೆಹಲಿಯ ಬೋಟ್ ಕ್ಲಬ್‌ನಲ್ಲಿ ಉತ್ತರ ಭಾರತದ ರೈತನಾಯಕ ಮಹೇಂದ್ರಸಿಂಗ್ ಟಿಕಾಯತ್ ಅವರ ಬೆಂಬಲದೊಂದಿಗೆ ಐತಿಹಾಸಿಕ ಸಮಾವೇಶ ಹಮ್ಮಿಕೊಂಡು ಈ ನೀತಿಯನ್ನು ವಿರೋಧಿಸಿದರು.

**ಕಾರ್ಗಿಲ್ ಬೀಜ ಕಂಪನಿಗಳ ಮೇಲೆ ದಾಳಿ ೧೯೯೩:** ಉದಾರವಾದದ ಪರಿಣಾಮವಾಗಿ ಬಹುರಾಷ್ಟ್ರೀಯ ವಿದೇಶಿ ಕಂಪನಿಗಳು ತಲೆ ಎತ್ತಿದವು. ಅವುಗಳಲ್ಲಿ ಕಾರ್ಗಿಲ್ ಹಾಗೂ ಮಾನ್ಸಾಂಟೋ ಬೀಜ ಕಂಪನಿಗಳು ಪ್ರಮುಖವಾದವು. ಕಾರ್ಗಿಲ್ ಕಂಪನಿ ಇಡೀ ವಿಶ್ವದಲ್ಲೇ ಆರನೇ ಬಹುದೊಡ್ಡ ಕಂಪನಿಗಳಲ್ಲಿ ಒಂದಾಗಿತ್ತು. ಡೆಂಕಲ್ ಪ್ರಸ್ತಾವನೆಯ ಹಿನ್ನಲೆಯಲ್ಲಿ, ಸುಂದರೇಶ ಅವರ ಹೋರಾಟದ ಸ್ಮರಣಾರ್ಥ ಒಂದು ವರ್ಷದ ಶ್ರದ್ಧಾಂಜಲಿಯ ನೆನಪಿಗಾಗಿ ೧೯೯೨ರ ಡಿಸೆಂಬರ್ ೨೧ ರಂದು ಬೆಂಗಳೂರಿನ ಕಾರ್ಗಿಲ್ ಕಂಪನಿಯ ಮೇಲೆ ದಾಳಿ ನಡೆಸಿದರು. ೧೯೯೩ ಜುಲೈ ೧೨ರಂದು ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಕಾರ್ಗಿಲ್ ಕಂಪನಿಯ ಮೇಲೆ ದಾಳಿ ನಡೆಸಿ ಸಂಪೂರ್ಣ ಧ್ವಂಸ ಮಾಡಿದರು.[೫೦] ಈ ಎಲ್ಲಾ ಹೋರಾಟಗಳ ಮಧ್ಯೆ ೧೯೯೩ರ ಅಕ್ಟೋಬರ್ ೨ ರಂದು ಬೆಂಗಳೂರಿನ ಕಬ್ಬನ್ ಪಾರ್ಕ್‌ನಲ್ಲಿ ಅಂತರರಾಷ್ಟ್ರೀಯ ರೈತ ಸಮಾವೇಶ ಸಂಘಟಿಸಿದರು. ಈ ಸಮಾವೇಶಕ್ಕೆ ತೃತೀಯ ಜಗತ್ತಿನ ಹಲವಾರು ವಿದೇಶಿ ರಾಷ್ಟ್ರಗಳ ಪ್ರತಿನಿಧಿಗಳು ಭಾಗವಹಿಸಿದ್ದರು.

**ಗ್ರಾನೈಟ್ ಚಳುವಳಿ ೧೯೮೦–೧೯೯೩:** ಚನ್ನಪಟ್ಟಣ ತಾಲೂಕಿನಲ್ಲಿ ಈ ಚಳವಳಿ ೧೯೮೦–೮೫ರ ಅವಧಿಯಲ್ಲಿ ಆರಂಭವಾಯಿತು. ಗ್ರಾನೈಟ್ ಕಲ್ಲು ಒಡೆದು ನದಿ ಪಾತ್ರ ಬರಿದಾಗತೊಡಗಿತು. ೧೨–೧೩ಅಡಿ ಆಳದಲ್ಲಿ ಸಿಗುತ್ತಿದ್ದ ನೀರು ಮತ್ತಷ್ಟು ಕೆಳಗೆ ಹೋಯಿತು. ತೆಂಗಿನ ಮರಗಳು

ಸಾಯಲು ಶುರುವಾದವು. ಮಳೆ ಬಂದಾಗ ಮರಳು ತುಂಬಿ ಬೆಳೆ ನಷ್ಟಗೊಳ್ಳಲಾರಂಭಿಸಿತು. ತಹಸೀಲ್ದಾರರ ಮೂಲಕ ಇದನ್ನೆಲ್ಲ ಸರ್ಕಾರದ ಗಮನಕ್ಕೆ ತರಲಾಯಿತು. ಸರಕಾರಕ್ಕೆ ಗಣಿಗಾರಿಕೆಯಿಂದ ಸರ್ಕಾರಕ್ಕೆ ನಯಾಪೈಸೆಯು ಹೋಗುತ್ತಿರಲಿಲ್ಲ. ಲಂಚಕೊಟ್ಟು ರಾತ್ರಿ ಹೊತ್ತು ಲಾರಿಯಲ್ಲಿ ಗ್ರಾನೈಟ್ ಸಾಗಾಣಿಕೆ ಮಾಡುತ್ತಿದ್ದರು. ಇದನ್ನು ವಿರೋಧಿಸಿ ರೈತರು ರಾತ್ರಿ ೧೨ ಗಂಟೆಯವರೆಗೆ ಚಳವಳಿ ಆರಂಭಿಸಿದರು. ೧೦೦ ರೈತರು ಎ.ಸಿ. ಕಚೇರಿ ಎದುರು ಧರಣಿ ಸತ್ಯಾಗ್ರಹ ಮಾಡಿದರು. ಅಣ್ಣಿಗೆರೆಯಲ್ಲಿ ೧೯೯೩ರಲ್ಲಿ ಕಂಟ್ರಾಕ್ಟರ್‌ಗಳು ಗ್ರಾನೈಟ್ ಕಲ್ಲು ಸಾಗಿಸುವಾಗ ರೈತ ಸಂಘದವರು ಆ ಲಾರಿಗಳನ್ನು ತಡೆದು, ಪೊಲೀಸರಿಗೆ ಹಿಡಿದು ಕೊಟ್ಟರು.[೫೧] ಹಾಗಾಗಿ ಆ ಕಲ್ಲುಗಳು ಪೋಲಿಸ್ ಸ್ಟೇಷನ್ ಬಳಿ ಇಂದಿಗೂ ಹಾಗೆಯೇ ಬಿದ್ದಿದೆ.

**ಶಿರಾದ ರೈತ ಪ್ರತಿಭಟನೆ :** ೧೯೯೮ ಶಿರಾದ ಪ್ರಮುಖ ಬೆಳೆ ಶೇಂಗಾ. ರೈತರು ೧೯೯೮ ರ ಅಕ್ಟೋಬರ್ ೨೭ರಂದು ರೈತರು ೨೫೦೦ಕ್ಕೂ ಹೆಚ್ಚು ಶೇಂಗಾ ಚೀಲವನ್ನು ಶಿರಾದ ಮಾರುಕಟ್ಟೆಗೆ ತಂದರು. ಕೆಲದಿನಗಳ ಹಿಂದೆ ೧೪೦೦ರೂ ಬೆಲೆ ಇದ್ದು, ಮಾರುಕಟ್ಟೆಗೆ ಫಸಲು ಅಧಿಕವಾಗಿ ಬಂದ ಕಾರಣ, ಮಾರುಕಟ್ಟೆಯ ಮಧ್ಯವರ್ತಿಗಳು ಕ್ವಿಂಟಾಲ್‌ಗೆ ೬೦೦ ರೂಗಳಿಗೆ ಇಳಿಸಿದ ಕಾರಣ ಬೆಲೆ ಕುಸಿತವಾಗಿ ಬೆಳೆಗಾರರಿಗೆ ದಿಕ್ಕು ತೋಚದಂತಾಯಿತು. ಕಾರಣ ಬಿತ್ತನೆ ಬೀಜಗಳನ್ನು ೧೮೦೦ರೂ ಕ್ವಿಂಟಾಲ್‌ಗೆ ಕೊಟ್ಟು ಬೆಳೆಗೆ ಹೆಚ್ಚು ಹಣ ಖರ್ಚು ಮಾಡಿದ್ದು ಸಾಲದ ಭಾದೆ ಎದುರಾಯಿತು. ಇದನ್ನು ವಿರೋಧಿಸಿ ಪ್ರತಿಭಟನೆ ಆರಂಭಿಸಿ ಎ.ಪಿ.ಎಂ.ಸಿ. ಕಚೇರಿಯ ಕಿಟಕಿ ಬಾಗಿಲುಗಳ ಗಾಜನ್ನು ಒಡೆದರು. ಸಚಿವರು ಬಂದು ಉತ್ತಮ ಬೆಲೆಯನ್ನು ಕೊಡಿಸುವುದಾಗಿ ತಿಳಿಸಿದರು. ಆದರೆ ಅದಾವುದು ಕಾರ್ಯಗತವಾಗದಿದ್ದಾಗ ರೈತರು ಉಗ್ರರಾದರು. ಅಕ್ಟೋಬರ್ ೨೮ ರಂದು ೧೦,೦೦೦ಕ್ಕೂ ಮೀರಿದ ಸಂಖ್ಯೆಯ ರೈತರು ಶಿರಾದ ಬಳಿಯ ರಾಷ್ಟ್ರೀಯ ಹೆದ್ದಾರಿಯಲ್ಲಿ ರಸ್ತೆ ತಡೆ ಚಳವಳಿ ಪ್ರಾರಂಭಿಸಿದರು. ರೈತರನ್ನು ಚದುರಿಸಲು ಪೊಲೀಸರು ಗುಂಡು ಹಾರಿಸಿದಾಗ ಹಲವಾರು ರೈತರು ಗುಂಡಿಗೆ ಬಲಿಯಾದರು. ಇದರಿಂದ ಆಕ್ರೋಶಗೊಂಡ ರೈತರು ಪೊಲೀಸರ ಮೇಲೆ ತಿರುಗಿಬಿದ್ದು ಒಬ್ಬ ಪೊಲೀಸ್ ಅಧಿಕಾರಿ ಹಾಗೂ ಪೇದೆ ಸತ್ತರು. ಬಸ್ಸು, ಲಾರಿಗಳು, ಪೊಲೀಸ್ ಜೀಪುಗಳು ಬೆಂಕಿಗೆ ಆಹುತಿಯಾದವು.[೫೨] ಹೀಗೆ ಪ್ರತಿಭಟನೆ ದುರಂತದಲ್ಲಿ ಕೊನೆಗೊಂಡಿತು.

**ಬಾಗೂರು ನವಿಲೆ ರೈತ ಹೋರಾಟ (೧೯೮೦-೨೦೦೦):** ಹಾಸನ ಜಿಲ್ಲೆಯ ಬಾಗೂರು-ನವಿಲೆ ಪ್ರದೇಶವು ತೆಂಗಿನ ತೋಟಗಳಿಗೆ ಪ್ರಸಿದ್ಧಿ ಪಡೆದಿತ್ತು, ಪ್ರತಿ ವರ್ಷ ಒಂದೊಂದು ಮರವು ೧೨೦ಕ್ಕೂ ಹೆಚ್ಚು ಕಾಯಿಗಳನ್ನು ಒದಗಿಸುತ್ತಿತ್ತು. ಒಂದೇ ಬಾರಿಗೆ ೧/೧೦ ಭಾಗದಷ್ಟು ಇಳುವರಿ ಕಡಿಮೆಯಾಯಿತು. ಅಂತರ್ಜಲದ ಮಟ್ಟ ಕಡಿಮೆಯಾಯಿತು. ಇದಕ್ಕೆ ಈ ಕೆಳಗಿನ ಕಾರಣಗಳು ಪ್ರಮುಖವಾಗಿದ್ದವು. ಹಾಸನ ಜಿಲ್ಲೆಯ ಗೊರೂರಿನಲ್ಲಿ ಹೇಮಾವತಿ ನದಿಗೆ ಅಣೆಕಟ್ಟು ಕಟ್ಟಿ ಅದರ ನೀರನ್ನು ಬಯಲು ಪ್ರದೇಶವಾದ ತುಮಕೂರು, ಮಂಡ್ಯ, ತಿಪಟೂರುಗಳಿಗೆ ನೀರುಣಿಸುವ ಯೋಜನೆ ೧೯೭೯ರಲ್ಲಿ ಆರಂಭವಾಯಿತು. ಗೊರೂರಿನಿಂದ ಬಾಗೂರವರೆಗೆ

ಕಾಲುವೆ ಮುಂದೆ ಸಾಗಲು ಎತ್ತರವಾದ ಪ್ರದೇಶ ಎದುರಾದಾಗ ಅಲ್ಲಿಂದ ನೀರು ತೆಗೆದುಕೊಂಡು ಹೋಗಲು ಬಾಗೂರಿನಿಂದ ೧೦ ಕಿ.ಮೀ. ದೂರದ ನವಿಲೆಯವರೆಗೆ ಸುರಂಗವನ್ನು ತೋಡಲು ತೀರ್ಮಾನಿಸಲಾಯಿತು. ಇದರಿಂದ ಆ ಪ್ರದೇಶದ ರೈತರು ತಮ್ಮ ಊರಿಗೂ ನದಿಯ ನೀರು ಸಿಗುತ್ತದೆ ಎಂದು ಸಂತಸಗೊಂಡಿದ್ದರು. ನೆಲದಲ್ಲಿ ೧೫೦ ರಿಂದ ೩೦೦ ಅಡಿಗಳ ಆಳದಲ್ಲಿ ತೋಡಲಾಗಿರುವ ಈ ಸುರಂಗವು ೨ ಲಾರಿಗಳು ಎದುರು ಬಂದಲ್ಲಿ ಆರಾಮವಾಗಿ ಸಾಗುವಷ್ಟು ಅಗಲ ಎತ್ತರ ಹೊಂದಿದೆ. ಸುಮಾರು ೨೦ ವರ್ಷ ನಡೆದ ಕಾಮಗಾರಿ ೧೯೯೧ರ ವೇಳೆಗೆ ಪೂರ್ಣಗೊಂಡಾಗ, ರೈತರ ಕನಸು ನನಸಾಗುವ ಬದಲು ೧೦ ಕಿ.ಮೀ. ವ್ಯಾಪ್ತಿಯ ತೆಂಗಿನ ಮರಗಳು ಒಣಗಿ ಹೋಗಲಾರಂಭಿಸಿದವು. ವರ್ಷಕ್ಕೆ ೧೨೦ ತೆಂಗಿನಕಾಯಿ ನೀಡುವ ತೆಂಗಿನಮರ ಕೇವಲ ಹತ್ತು ಕಾಯಿ ಕೊಡಲು ಆರಂಭಿಸಿತು.[೫೩] ಮೊದಲು ರೋಗ ತಗುಲಿದೆಯೆಂದು ಭಾವಿಸಿ ರೈತರು ಔಷಧಿ ನೀಡಿದರು. ಫಲ ನೀಡಲಿಲ್ಲ ಈ ಸಮಯಕ್ಕೆ ಬೋರ್‌ಗಳು ಬತ್ತಿ ಹೋಗಲಾರಂಭಿಸಿದವು. ವಾಸ್ತವ ಈ ಅಂತರ್ಜಲ ಸುರಂಗದಲ್ಲಿ ಬಸಿದು ಹೋಗುತ್ತಿತ್ತು. ಕ್ರಮೇಣವಾಗಿ ಅಲ್ಲಿದ್ದ ಕೆರೆಗಳು ಬಾವಿಗಳು ಬತ್ತಿ ಹೋದವು. ಕುಡಿಯಲು ನೀರು ಸಿಗದೆ ರೈತರು ಪರದಾಡಿದರು. ಇದರಿಂದ ಆತಂಕಗೊಂಡ ರೈತರು ಹೋರಾಟ ಆರಂಭಿಸಿ ಮಾನ್ಯ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ಪರಿಹಾರಕ್ಕೆ ಒತ್ತಾಯಿಸಿದಾಗ ಅದರ ಅಧ್ಯಯನಕ್ಕೆ ಸಮಿತಿ ನೇಮಿಸಿದರು. ಈ ಸಮಿತಿಯು ತನ್ನ ವರದಿಯಲ್ಲಿ ಪರಿಹಾರ ನೀಡಬೇಕೆಂದು ತಿಳಿಸಿದಾಗ ಜಾರಿಗೆ ಬರಲಿಲ್ಲ. ಈ ವರದಿ ಜಾರಿಗೆ ಬರುವಂತೆ ಒತ್ತಾಯಿಸಿ ೧೯೯೪ ಮಾರ್ಚ್ ೧೩ರಂದು ೫೦ ಸಾವಿರ ರೈತರು ಬೆಂಗಳೂರಿಗೆ ಹೋಗಿ ಧರಣಿ ನಡೆಸಿದರೂ ಪ್ರಯೋಜವಾಗಲಿಲ್ಲ. ಬಾಗೂರಿನಲ್ಲಿ ಆರಂಭವಾದ ಸುರಂಗಕ್ಕೆ ಮಣ್ಣು ಹಾಕಿ ನೀರು ನಿಲ್ಲಿಸಿ ಧರಣಿ ಆರಂಭಿಸಿದರು. ೨೦,೦೦೦ ರೈತರು ಬಾಗೂರಿನಿಂದ ನವಿಲೆಯವರೆಗೆ ಮಾನವ ಸರಪಳಿ ನಿರ್ಮಿಸಿ ಪ್ರತಿಭಟಿಸಿದರು. ಜುಲೈ ೧೬ರಂದು ಹಾಸನ ಬಂದ್ ಮಾಡಿದಾಗ ಪೊಲೀಸರು ಲಾಠಿ ಪ್ರಹಾರ ಮಾಡಿದರು. ಇದರಿಂದ ಕೋಪಗೊಂಡ ರೈತರು ಪೊಲೀಸ್ ವಾಹನಗಳಿಗೆ ಹಾಗೂ ಬಸ್ಸಿಗೆ ಬೆಂಕಿ ಹಚ್ಚಿದರು. ಪರಿಣಾಮವಾಗಿ ಪೊಲೀಸರು ವೃದ್ಧರು, ಮಹಿಳೆಯರು, ಮಕ್ಕಳೆನ್ನದೆ ದೈಹಿಕವಾಗಿ ಹಲ್ಲೆ ಮಾಡಿ ೧೦೩ ರೈತರನ್ನು ಬಂಧಿಸಿದರು. ಅತ್ಯಾಚಾರಗಳಾದವು.[೫೪] ಈ ಸಂದರ್ಭದಲ್ಲಿ ತುಮಕೂರು ನಾಲೆಗೆ ನೀರು ಬಿಡಬೇಕೆಂದು ಆ ಭಾಗದ ರೈತರು ಹೋರಾಟ ಆರಂಭಿಸಿ ತಮ್ಮ ಸಮಸ್ಯೆಗೆ ಒತ್ತುಕೊಟ್ಟರು. ಇದರಿಂದ ಸಮಸ್ಯೆಯು ಬಗೆ ಹರಿಯದೆ ಹಾಗೆಯೇ ಉಳಿಯಿತು.

**ದಕ್ಷಿಣ ಕನ್ನಡ ಜಿಲ್ಲೆಯ ರೈತ ಚಳವಳಿಗಳು** : ಮಲೆನಾಡಿನ ಮೂರು ಜಿಲ್ಲೆಗಳು, ತಾಲೂಕುಗಳು ಸೇರಿದಂತೆ ತೀರ್ವೆ ದರವನ್ನು ಶೇ. ೨೦೦ ರಷ್ಟಕ್ಕೆ ಮಿತಿಗೊಳಿಸಬೇಕೆಂದು ರೈತರು ತಹಶೀಲ್ದಾರ್ ಕಛೇರಿಯ ಮುಂದೆ ಸರ್ಕಾರದ ಗಮನ ಸೆಳೆಯಲು ಸಭೆ ನಡೆಸಿದರು. ಇದಕ್ಕೆ ಮುಖ್ಯ ಕಾರಣವೇನೆಂದರೆ ಯಾವ ಮುನ್ಸೂಚನೆ ಇಲ್ಲದೆ ಗೇಣಿ ರೈತರಿಂದ ಖಾಲಿ

ಕಾಗದದ ಮೇಲೆ ಹೆಬ್ಬೆಟ್ಟು ಒತ್ತಿಸಿಕೊಂಡು ಜಮೀನ್ದಾರರು ಅವರ ಆಸ್ತಿಯನ್ನು ಕಬಳಿಸಿ ಒಕ್ಕಲೆಬ್ಬಿಸುತ್ತಿದ್ದರು. ಇದನ್ನು ವಿರೋಧಿಸಿ ಚಳವಳಿ ಆರಂಭವಾದಾಗ ಶ್ರೀ. ದೇವರಾಜ ಅರಸುರವರು ನೀಡಿದ ಆಶ್ವಾಸನೆಯಿಂದ ಚಳವಳಿ ನಿಂತಿತು.

೧೯೮೦-೮೧ರ ಸುಮಾರಿನಲ್ಲಿ ಕೃಷಿ ಕಾರ್ಮಿಕರು ಸಾಗುವಳಿ ಮಾಡುತ್ತಿದ್ದ ಭೂಮಿಯನ್ನು ಸಕ್ರಮ ಮಾಡಬೇಕೆಂದು ಹೋರಾಟ ನಡೆಯಿತು. ಸರ್ಕಾರ ಇದನ್ನು ನಿರ್ಲಕ್ಷಿಸಿದ ಕಾರಣ ಸೂಳ್ಯದಿಂದ ಮಂಗಳೂರವರೆಗೆ ಕಾಲ್ನಡಿಗೆ ಚಳವಳಿ ನಡೆಯಿತು.

೧೯೮೫-೮೬ರಲ್ಲಿ ಸರ್ಕಾರಿ ಜಾಗದಲ್ಲಿ ಬಹುಕಾಲದಿಂದ ಸಾಗುವಳಿ ಮಾಡುತ್ತ ಬಂದಿದ್ದ ಒಕ್ಕಲುಗಳ ಅಕ್ರಮ ಸಾಗುವಳಿಯನ್ನು ಸಕ್ರಮ ಮಾಡಬೇಕೆಂದು ಚಳವಳಿಯನ್ನು ಮಾಡಲಾಯಿತು. ಆಗ ಎಲ್ಲಾ ತಾಲ್ಲೂಕುಗಳಿಂದ ಜಿಲ್ಲಾಧಿಕಾರಿಗಳ ಬಳಿಗೆ ಕಾಲ್ನಡಿಗೆಯ ದೊಡ್ಡ ಜಾಥಾವನ್ನು ಹೊರಡಿಸಲಾಯಿತು. ೧೦,೦೦೦ ರೈತರು ಸುಮಾರು ೬೦ ಮೈಲಿ ನಿರಂತರ ಕಾಲ್ನಡಿಗೆಯ ಜಾಥಾದಲ್ಲಿ ಪಾಲ್ಗೊಂಡರು. ಈ ಹೋರಾಟದ ಫಲವಾಗಿ ಸರ್ಕಾರಿ ಜಾಗದ ಅಕ್ರಮ ಸಾಗುವಳಿಯನ್ನು ಸಕ್ರಮಗೊಳಿಸಲು ಸರ್ಕಾರ ಆಜ್ಞೆ ಹೊರಡಿಸಿತು.

**ಕೊಪ್ಪಳದ ರೈತ ಪ್ರತಿಭಟನೆ ೨೦೦೦:** ಕೊಪ್ಪಳದ ರೈತರು ಬೆಂಬಲ ಬೆಲೆಯಲ್ಲಿ ಮೆಕ್ಕೆಜೋಳವನ್ನು ಖರೀದಿಸುವಲ್ಲಿ ಅನ್ಯಾಯವಾಗುತ್ತಿದೆ. ಬೆಂಬಲ ಬೆಲೆ ಸರಿಯಾಗಿ ನೀಡಿ ಎಂದು ಎ.ಪಿ.ಎಂ.ಸಿ. ಆವರಣದಲ್ಲಿ ಒತ್ತಾಯಿಸಿ ರೈತರು ಚಳವಳಿ ನಡೆಸಿದ್ದರು. ಅಧಿಕಾರಿಗಳೊಡನೆ ಮಾತುಕತೆಯ ನಂತರ ೪೪೫ ರೂ. ದರದಲ್ಲಿ ಖರೀದಿಸುವ ನಿರ್ಣಯವಾಗಿತ್ತು, ಉತ್ತಮ ಗುಣಮಟ್ಟದ ಮೆಕ್ಕೆಜೋಳವನ್ನು ಮಾತ್ರ ಖರೀದಿಸಲಾರಂಭಿಸಿದ್ದರಿಂದ ಶೇ.೯೦ರಷ್ಟು ರೈತರಿಗೆ ಅನ್ಯಾಯವೆನಿಸಿತು. ಆಗ ಮಾರುಕಟ್ಟೆಗೆ ಬಂದ ಎಲ್ಲಾ ಮೆಕ್ಕೆಜೋಳದ ಖರೀದಿಗೆ ಆಗ್ರಹಿಸಿ ತಾಲ್ಲೂಕಿನ ರೈತರು ಬಂದು ಚಳವಳಿ ಪ್ರತಿಭಟನೆ ನಡೆಸಿದರು. ಇದರಿಂದ ಉದ್ರಿಕ್ತ ಪರಿಸ್ಥಿತಿ ಉಂಟಾಗಿದ್ದರಿಂದ ಪೊಲೀಸರು ಲಾಠಿ ಪ್ರಹಾರ ಮಾಡಿ ಗಾಳಿಯಲ್ಲಿ ಎರಡು ಸುತ್ತು ಗುಂಡು ಹಾರಿಸಿದರು. ಹಾಗೂ ಕೊಪ್ಪಳದಲ್ಲಿ ನಿಷೇಧಾಜ್ಞೆಯನ್ನು ಜಾರಿಗೆಗೊಳಿಸಲಾಯಿತು.

**ಗಂಗಾವತಿಯ ರೈತ ಹೋರಾಟ** : ರೈತರು ಗಂಗಾವತಿಯಲ್ಲಿ ಭತ್ತಕ್ಕೆ ಸೂಕ್ತ ಬೆಲೆ ನೀಡಬೇಕೆಂದು ಒತ್ತಾಯಿಸಲು, ರೈತ ಸಂಘಟನೆಗಳ ನೇತೃತ್ವದಲ್ಲಿ ೦೬/೧೧/೨೦೦೦ನೇ ಸೋಮವಾರ ರೈತ ಸಭೆ ನಡೆದು ಗಂಗಾವತಿ ಬಂದ್‌ಗೆ ಕರೆ ನೀಡಿದರು. ಅದು ಹಿಂಸಾಚಾರಕ್ಕೆ ತಿರುಗಿ ಕಲ್ಲು ತೂರಾಟದಲ್ಲಿ ತೊಡಗಿದ್ದಾಗ ಗುಂಪು ಚದುರಿಸಲು ಪೊಲೀಸರು ಲಾಠಿ ಪ್ರಹಾರ ಮಾಡಿ ಗಾಳಿಯಲ್ಲಿ ಗುಂಡು ಹಾರಿಸಿದರು. ಹಾಗೂ ಮೂರು ದಿನಗಳ ಕಾಲ ನಿಷೇದಾಜ್ಞೆ ವಿಧಿಸಿದರು.

**ಧಾರವಾಡ ರೈತ ಚಳವಳಿ : ೨೦೦೦** ಧಾರವಾಡದ ಆಲೂಗಡ್ಡೆ ಖರೀದಿ ಕೇಂದ್ರದಲ್ಲಿ ರೈತನೊಬ್ಬನ ಆಲೂಗಡ್ಡೆ ಖರೀದಿಸಲು ತಿರಸ್ಕರಿಸಿದರು, ಇದರಿಂದ ಖರೀದಿ ಕೇಂದ್ರದ ಗ್ರೇಡರ್ ಮೇಲೆ ಹಲ್ಲೆ ಮಾಡಿದ. ಪರಿಣಾಮವಾಗಿ ಖರೀದಿ ಕೇಂದ್ರ ಸಿಬ್ಬಂದಿ ಬಂದ್ ಮಾಡಿದರು.

ಇನ್ನೂ ಪ್ರತಿಭಟಿಸಿದ ರೈತರು ಆಲೂಗಡ್ಡೆ ಸಮೇತ ರಸ್ತೆ ತಡೆ ಹಾಗೂ ಜಿಲ್ಲಾಧಿಕಾರಿಗಳ ಮುತ್ತಿಗೆ ಹಾಕಿ ಉಗ್ರವಾಗಿ ಪ್ರತಿಭಟಿಸಿದರಿಂದ, ಪೊಲೀಸರು ರೈತರನ್ನು ಬಂಧಿಸಿದರು. ಈ ವಿಷಯ ಕುರಿತು ಚರ್ಚಿಸಲು ಧಾರವಾಡ ಜಿಲ್ಲಾ ರೈತ ಹೋರಾಟ ಸಮಿತಿ ಪಕ್ಷಾತೀತ ರೈತ ಸಭೆ ಕರೆದಿತ್ತು. ನಂತರ ರೈತರು ಮೆರವಣಿಗೆ ಟ್ರ್ಯಾಕ್ಟರ್, ಟೆಂಪೊ ಹಾಗೂ ದ್ವಿಚಕ್ರ ವಾಹನಗಳಲ್ಲಿ ಆರಂಭಗೊಂಡು ಜಿಲ್ಲಾಧಿಕಾರಿಗಳ ಕಚೇರಿ ತಲುಪುತ್ತಿದ್ದಂತೆ ಪೊಲೀಸರು ಮುಖ್ಯದ್ವಾರ ಮುಚ್ಚಿದರು. ಪೊಲೀಸರ ವಿರುದ್ಧ ಹೋರಾಟ ತೀವ್ರಗೊಂಡಿತು. ನಂತರ ರೈತರ ಮನವಿ ಸ್ವೀಕರಿಸಿದ ಜಿಲ್ಲಾಧಿಕಾರಿ ಬಂಧಿತರ ಬಿಡುಗಡೆಗೆ ಭರವಸೆ ನೀಡಿದರು, ಆದರೆ ರೈತರನ್ನು ಈಗಲೇ ಬಿಡಬೇಕೆಂದು ಪಟ್ಟು ಹಿಡಿದು ಪ್ರತಿಭಟಿಸಿದಾಗ, ಶೀಘ್ರ ಕ್ರಮ ಕೈಗೊಳ್ಳುವ ಭರವಸೆ ನೀಡಿದ ಕಾರಣ ರೈತರು ಚಳವಳಿ ಕೈಬಿಟ್ಟರು.

**ಈರುಳ್ಳಿ ಬೆಲೆಕುಸಿತ ವಿರುದ್ಧ ನವಲಗುಂದ ಹಾಗೂ ಹುಬ್ಬಳ್ಳಿಯ ರಸ್ತೆ ತಡೆ ಚಳವಳಿ :** ನವಿಲಗುಂದ ತಾಲ್ಲೂಕಿನ ರೈತರು ಈರುಳ್ಳಿ ಬೆಲೆ ಕುಸಿತ ಪ್ರತಿಭಟಿಸಿ ರೈತಪರ ಅಭಿವೃದ್ಧಿ ಹೋರಾಟ ಸಮಿತಿ ನೇತೃತ್ವದಲ್ಲಿ ೧೫/೧೧/೧೯೯೯ರಂದು ನವಿಲಗುಂದ ಬಂದ್‌ಗೆ ಕರೆ ನೀಡಿತು. ರೈತರು ಬೆಳೆದ ಈರುಳ್ಳಿಗೆ ಯೋಗ್ಯ ಬೆಲೆ ನೀಡಬೇಕೆಂದು ಒತ್ತಾಯಿಸಿ ನೂರಾರು ರೈತರು ಅದೇ ದಿನ ಹುಬ್ಬಳ್ಳಿಯ ಎ.ಪಿ.ಎಂ.ಸಿ ಆವರಣದ ಎದುರು ರಸ್ತೆ ತಡೆ ಚಳವಳಿ ನಡೆಸಿದರು. ಚಳವಳಿಯ ಸ್ಥಳಕ್ಕೆ ತಹಸೀಲ್ದಾರರು ಬಂದು ರೈತರಿಂದ ಮನವಿ ಪತ್ರ ಸ್ವೀಕರಿಸಿ ಬೇಡಿಕೆಯನ್ನು ಸರ್ಕಾರಕ್ಕೆ ತಿಳಿಸುವುದಾಗಿ ಹೇಳಿದರು. ಇದರಿಂದ ರೈತ ಪ್ರತಿಭಟನೆ ನಿಂತಿತು.

**ರೇಷ್ಮೆ ರೈತ ಹೋರಾಟ:** ರಾಮನಗರ ಜಿಲ್ಲೆಯು ರೇಷ್ಮೆ ಬೆಳೆಯಲ್ಲಿ ಮೊದಲ ಸ್ಥಾನ ಪಡೆದಿದೆ. ಆದರೆ ಅವರು ಪಟ್ಟ ಶ್ರಮವೆಲ್ಲ ರೇಷ್ಮೆ ಮಾರುಕಟ್ಟೆ ಎಂಬ ಮಾನವ ನಿರ್ಮಿತ ಜಾಲವು ಒಂದೇ ಗಳಿಗೆಯಲ್ಲಿ ನಿರ್ದಾಕ್ಷಿಣ್ಯವಾಗಿ ನೀರಿಗೆ ಹಾಕಿಬಿಡುತ್ತಾರೆ. ರೇಷ್ಮೆ ಗೂಡಿಗೆ ತಕ್ಕದಾದ ಬೆಲೆಯು ಸಿಗದಂತಾಗಿ ರೈತನ ಶ್ರಮ ವ್ಯರ್ಥವಾಗಿ ಹುಳುವಿನಂತೆ ಅಲ್ಪಾಯು ಬದುಕಿನಂತಾಗಿದೆ. ರೇಷ್ಮೆಗೂಡು ಮಾರಲು ಬರುವ ರೈತರನ್ನು ಮಾರುಕಟ್ಟೆಗೆ ಎರಡು ಕಿ.ಮೀ. ದೂರದಲ್ಲಿ ನಿಲ್ಲಿಸಿ ಅವರು ತಂದಿರುವ ಚೀಲದ ಮೇಲೆ ಗುರುತು ಹಾಕುತ್ತಿದ್ದರು. ನಂತರ ಅವರನ್ನು ಹಿಂಬಾಲಿಸಿ ಬಂದು ಅದನ್ನು ಗುರುತು ಹಾಕಿದವನೇ ಖರೀದಿಸುತ್ತಿದ್ದು, ಬೇರೆಯವರು ಖರೀದಿಸುವಂತಿರಲಿಲ್ಲ. ಅಧಿಕಾರಿಗಳು ಶಾಮಿಲಾಗಿ ಹೇಳಿದ ಬೆಲೆಗೆ ಗೂಡಿನ ಮಾರಾಟ ಮಾಡುತ್ತಿದ್ದರು. ಇದನ್ನು ವಿರೋಧಿಸಿ ರಸ್ತೆ ತಡೆ ಚಳವಳಿಗಳು ನಡೆದವು ಆದರೂ ಯಾವುದೇ ಸುಧಾರಣೆ ಕಂಡುಬಂದಿಲ್ಲ.

**ಮದ್ದೂರು ರೈತ ಚಳವಳಿ: ೨೦೦೦** ಮದ್ದೂರು ತಾಲ್ಲೂಕು ಕೆ.ಎಮ್. ದೊಡ್ಡಿಯ ಆಡಳಿತ ಮಂಡಳಿ ಕಬ್ಬಿಗೆ ೮೮೦ ರೂ. ಬೆಲೆ ನಿಗದಿ ಪಡಿಸಿದರೂ, ಅದರಂತೆ ಒಂದೇ ಬಾರಿಗೆ ಹಣ ಪಾವತಿಸರಿಲಿಲ್ಲ. ಅದಕ್ಕೆ ಒತ್ತಾಯಿಸಿ ಕಳೆದ ಒಂದು ತಿಂಗಳಿನಿಂದ ರೈತರು ಕಾರ್ಖಾನೆಯ ಮುಂದೆ ಧರಣಿ ನಡೆಸುತ್ತಿದ್ದರು. ಈ ಸಮಸ್ಯೆಯನ್ನು ಮುಖ್ಯಮಂತ್ರಿಗಳೇ ಬಗೆಹರಿಸುವಂತೆ ಬೆಂಗಳೂರಿನಲ್ಲಿ ಅವರ ಮನೆಯ ಮುಂದೆ ಧರಣಿ ಮಾಡಲು ತೀರ್ಮಾನಿಸಿದರು. ಈ

ಹೋರಾಟಕ್ಕೆ ಬಂದ ಸಾವಿರಾರು ರೈತರನ್ನು ಮದ್ದೂರಿನ ಸರ್ಕಲ್‌ನಲ್ಲಿ ತಡೆದು ರೈತ ಮುಖಂಡರನ್ನು ಬಂಧಿಸಿದರು. ನಂತರ ರೈತರು ರಸ್ತೆ ತಡೆ ಪ್ರತಿಭಟನೆಯನ್ನು ಮಾಡಿದರು. ಶಿಂಷಾ ಸೇತುವೆಯ ಬಳಿಯೂ ರಸ್ತೆ ತಡೆ ಮಾಡಿ ಬಂಧಿತರನ್ನು ಬಿಡುಗಡೆ ಮಾಡುವಂತೆ ಒತ್ತಾಯಿಸಿದರು. ಜಿಲ್ಲಾಧಿಕಾರಿಗಳು ಆ ಸ್ಥಳಕ್ಕೆ ಬಂದು ಸಮಸ್ಯೆ ಬಗೆಹರಿಸುವ ಭರವಸೆ ನೀಡಿದರು ಇದರಿಂದಾಗಿ ಚಳವಳಿ ನಿಂತಿತು.

**ಈರುಳ್ಳಿ ಬೆಂಬಲ ಬೆಲೆ ಖರೀದಿಯ ಅವೈಜ್ಞಾನಿಕ ನೀತಿ ವಿರೋಧಿಸಿ ಗದಗ ರೈತರ ಪ್ರತಿಭಟನೆ: ೨೦೧೬** ಈರುಳ್ಳಿ ಬೆಂಬಲ ಬೆಲೆಯಲ್ಲಿ ಖರೀದಿಗೆ ಅನುಸರಿಸುತ್ತಿರುವ ಗ್ರೇಡಿಂಗ್ ಪದ್ಧತಿ ಅವೈಜ್ಞಾನಿಕವಾಗಿದ್ದು, ಕೂಡಲೇ ಗ್ರೇಡಿಂಗ್ ನಿಯಮಗಳನ್ನು ಬದಲಾಯಿಸಬೇಕೆಂದು ಒತ್ತಾಯಿಸಿ ನವೆಂಬರ್ ೮ ೨೦೧೬ ರಂದು ನೂರಾರು ರೈತರು ಗದಗ ಜಿಲ್ಲೆಯ ಡಿ.ಸಿ. ಕಛೇರಿ ವೃತ್ತದಲ್ಲಿ ರಸ್ತೆಗೆ ಈರುಳ್ಳಿ ಸುರಿದು ರಸ್ತೆ ತಡೆ ನಡೆಸಿದರು.

ಹಳೆಯ ಡಿ.ಸಿ. ಕಛೇರಿ ವೃತ್ತದ ನಾಲ್ಕು ದಿಕ್ಕಿನಲ್ಲಿ ಈರುಳ್ಳಿ ತುಂಬಿದ ಟ್ರಾಕ್ಟರ್ ಹಾಗೂ ಇತರೆ ವಾಹನಗಳನ್ನು ನಿಲ್ಲಿಸಿ, ದಿಡೀರ್ ರಸ್ತೆ ತಡೆ ನಡೆಸಿದರು. ಪರಿಣಾಮ ಹಳೆಯ ಬಸ್ ನಿಲ್ದಾಣ ರಸ್ತೆಯಲ್ಲಿ ಹತ್ತಾರು ಬಸ್‌ಗಳು ಹಾಗೂ ಇತರೆ ವಾಹನಗಳು ಸಾಲುಗಟ್ಟಿ ನಿಂತವು. ಈ ವೇಳೆ ಸುಗಮ ಸಂಚಾರಕ್ಕೆ ಅಡ್ಡಿಪಡಿಸುತ್ತಿರುವುದನ್ನು ಪ್ರಶ್ನಿಸಿದ ಪೊಲೀಸರೊಂದಿಗೆ ರೈತರ ಮಾತಿನ ಚಕಮಕಿ ನಡೆಯಿತು. ಇದರಿಂದ ಕೆಲ ಕಾಲ ಗೊಂದಲದ ವಾತಾವರಣ ಸೃಷ್ಟಿಯಾಯಿತು. ಈ ಸಮಯದಲ್ಲಿ ಸ್ಥಳಕ್ಕೆ ಧಾವಿಸಿದ ಸಂಚಾರಿ ಠಾಣೆ ಪಿ.ಎಸ್.ಐ ರೈತರೊಂದಿಗೆ ಮಾತುಕತೆಗೆ ನಡೆಸಿದ ಪ್ರಯತ್ನ ಫಲಿಸಲಿಲ್ಲ. ಮೂರು ಘಂಟೆಗಳ ಕಾಲ ರೈತರು ರಸ್ತೆ ತಡೆ ನಡೆಸಿದರು.

ಈಗಾಗಲೇ ಮಳೆ, ಬೆಳೆಯಿಲ್ಲದೆ ರೈತರು ಸಂಕಷ್ಟಕ್ಕೆ ಸಿಲುಕಿದ್ದಾರೆ. ಇದರ ಮಧ್ಯೆಯೂ ಈರುಳ್ಳಿ ಬೆಳೆದಿದ್ದು, ಮುಕ್ತ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆಯಿಲ್ಲ. ರೈತರ ಹೋರಾಟಕ್ಕೆ ಸ್ಪಂದಿಸದ ಸರ್ಕಾರ, ಬೆಂಬಲ ಬೆಲೆಯಲ್ಲಿ ಈರುಳ್ಳಿ ಖರೀದಿಗೆ ಕೇಂದ್ರಗಳನ್ನು ಆರಂಭಿಸಿದೆ. ಆದರೆ ೩೦ ಮಿ.ಮೀ.ಗಿಂತ ಕಡಿಮೆಯಿರುವ ಈರುಳ್ಳಿಯನ್ನು ಖರೀದಿ ಕೇಂದ್ರದಲ್ಲಿ ತಿರಸ್ಕರಿಸುತ್ತಿದ್ದಾರೆ ಎಂದು ಆರೋಪಿಸಿದರು. ಈ ಕೂಡಲೇ ಜಿಲ್ಲಾಧಿಕಾರಿಗಳು ಇಲ್ಲವೆ ತೋಟಗಾರಿಕೆ ಇಲಾಖೆಯ ಹಿರಿಯ ಅಧಿಕಾರಿಗಳು ಸ್ಥಳಕ್ಕೆ ಆಗಮಿಸಿ, ಗ್ರೇಡಿಂಗ್ ಪದ್ಧತಿಯನ್ನು ಬದಲಾಯಿಸಬೇಕು. ಈ ಹಿಂದಿನಂತೆ ಸಾಧಾರಣ, ಉತ್ತಮ, ಅತ್ಯುತ್ತಮ ಮಾದರಿಯಲ್ಲಿ ವಿಂಗಡಿಸಿ, ಪ್ರತ್ಯೇಕವಾಗಿ ಬೆಂಬಲ ಬೆಲೆ ನಿಗದಿಮಾಡಬೇಕು ಎಂದು ಪ್ರತಿಭಟನಾನಿರತ ರೈತರು ಆಗ್ರಹಿಸಿದರು.

ರೈತರ ತೀವ್ರತರವಾದ ಪ್ರತಿಭಟನೆ ಸುದ್ದಿ ತಿಳಿದು ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದ ಜಿಲ್ಲಾಧಿಕಾರಿ ಎನ್.ಎಸ್. ಪ್ರಸನ್ನಕುಮಾರ್, ಎಸ್.ಪಿ., ಕೆ. ಸಂತೋಷ್, ತಹಶೀಲ್ದಾರ್ ಬಿರಾದರ ರೈತರೊಂದಿಗೆ ಚರ್ಚೆ ನಡೆಸಿದರು. ನಂತರ ಮಾತನಾಡಿದ ಜಿಲ್ಲಾಧಿಕಾರಿ ೨೦ ಮಿಲಿ ಮೀಟರ್ ಗಾತ್ರದ ಈರುಳ್ಳಿಯನ್ನು ಮಾತ್ರ ಖರೀದಿಸಲಾಗುವುದು ಎಂದು ಭರವಸೆ ನೀಡಿದರು. ಇದರಿಂದ ಸಮಾಧಾನಗೊಂಡ ಈರುಳ್ಳಿ ಬೆಳೆಗಾರರು ಪ್ರತಿಭಟನೆ ಕೈಬಿಟ್ಟು ಖರೀದಿ ಕೇಂದ್ರಗಳತ್ತ ಹೆಜ್ಜೆ ಹಾಕಿದರು.

**ಕೊನೆ ಟಿಪ್ಪಣಿಗಳು**

೧. ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು, ಸಂಪುಟ.೧, ೨೦೦೬, ಪು. ೩೪

೨. ಅದೇ ಪು, ೩೫

೩. ಅದೇ ಪು, ೩೭

೪. ಮುಜಾಫರ್ ಅಸ್ಸಾದಿ, ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ ರೈತ, ರೈತ ಹೋರಾಟ ಹಾಗು ಸಾಮಾಜಿಕ

ಚಳವಳಿ, ೨೦೦೯, ಪು. ೫೧

೫. ಎಂ.ಜಿ. ನಾಗರಾಜ್, ಪುರ್ವೋಕ್ತ, ೨೦೦೬ ಪು. ೪೩

೬. ಅದೇ, ಪು. ೪೪

೭. ಮುಜಾಫರ್ ಅಸ್ಸಾದಿ, ಪುರ್ವೋಕ್ತ, ಪು.೫೧

೮. ಅದೇ, ಪು. ೫೨

೯. ವಿಜಯ ಪುಣಚ್ಚ ತಂಬಂಡ, ಸಮಕಾಲೀನ ಕರ್ನಾಟಕ ಚರಿತ್ರೆ, ಸಂಪುಟ ೬, ೨೦೧೦,ಪು. ೪೬೪

೧೦. ಸ್ಮಿತಾ ಎಂ. ಭಾವಿಕಟ್ಟಿ, ರಾಮನಗರ ಜಿಲ್ಲೆಯ ರೈತ ಚಳವಳಿಗಳು, ೨೦೧೫, ಪು. ೨೮

೧೧. ಕರ್ನಾಟಕದ ಪರಂಪರೆ ಸಂಪುಟ–೨, ೨೦೧೪, ಪು. ೩೩೦

೧೨. ಎಂ.ಜಿ. ನಾಗರಾಜ್, ಪುರ್ವೋಕ್ತ, ಪು. ೫೪

೧೩. ಕರ್ನಾಟಕ ಪರಂಪರೆ, ಸಂಪುಟ–೨, ೨೦೧೪, ಪು. ೩೨೦

೧೪. ತಿಮ್ಮನಹಳ್ಳಿ ವೇಣುಗೋಪಾಲ್, 'ರೈತರು ಮೈಸೂರು ಅಧಿಕಾರಿ ಶಾಹಿ ಮತ್ತು ರಾಷ್ಟ್ರೀಯ ಚಳವಳಿ ೧೮೮೧– ೧೯೪೭', ೨೦೧೦, ಪು. ೧೦೯

೧೫. ಅದೇ, ಪು. ೧೧೧

೧೬. ಸ್ಮಿತಾ ಎಂ. ಭಾವಿನ ಕಟ್ಟಿ, ಪುರ್ವೋಕ್ತ, ಪು. ೨೯

೧೭. ಎಂ.ಜಿ. ನಾಗರಾಜ್, ಪುರ್ವೋಕ್ತ, ಪು. ೫೯

೧೮. ತಿಮ್ಮನಹಳ್ಳಿ ವೇಣುಗೋಪಾಲ್, ಪುರ್ವೋಕ್ತ, ೨೦೧೦, ಪು. ೧೧೮

೧೯. ಅದೇ, ಪು. ೧೧೯

೨೦. ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ, ೧೯೯೫, ಪು. ೧೪೨

೨೧. ಅದೇ, ಪ. ೧೪೨

೨೨. ಅದೇ, ಪು. ೧೪೫

೨೩. ಟಿ.ವಿ. ಪಾರ್ಥಸಾರಥಿ, ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ೨೦೦೩, ಪು. ೧೧೪

೨೪. ಮುಜಾಫರ್ ಅಸ್ಸಾದಿ, ಪೂರ್ವೋಕ್ತ, ಪು. ೫೩

೨೫. ಸ್ಮಿತಾ ಎಂ. ಭಾವಿನಕಟ್ಟಿ, ಪೂರ್ವೋಕ್ತ, ಪು. ೩೪

೨೬. ಎಂ.ಜಿ. ನಾಗರಾಜ್, ಪೂರ್ವೋಕ್ತ, ಪು. ೧೦೦

೨೭. ವಿಜಯ್ ಪೂಣಚ್ಚ ತಂಬಂಡ (ಪ್ರ.ಸಂ.), ಪೂರ್ವೋಕ್ತ, ಪು. ೪೬೬

೨೮. ಚಂದ್ರಶೇಖರ್ ಸಿ.ಬಿ., ಕಾಗೋಡು ಒಂದು ನೆನಪು, ೨೦೦೭, ಪು. ೧

೨೯. ಮುಜಾಫರ್ ಅಸ್ಸಾದಿ, ಪೂರ್ವೋಕ್ತ, ಪು. ೬೭
೩೦. ಅರುಣ್ ಜೋಳದ ಕೂಡ್ಲಿಗಿ, ಸೊಂಡೂರು ಭೂ ಹೋರಾಟ, ೨೦೧೦, ಪು. ೧೯
೩೧. ಅದೇ, ಪು. ೧೦೧
೩೨. ಎಂ.ಜಿ. ನಾರಾಜ್, ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು ಸಂ-೨, ೨೦೦೬, ಪು. ೨೨೫
೩೩. ಅದೇ, ಪು. ೨೨೭
೩೪. ಮುಜಾಫರ್ ಅಸ್ಸಾದಿ, ಪೂರ್ವೋಕ್ತ, ಪು. ೮೪
೩೫. ಬಿ.ಎಸ್. ಸೊಪ್ಪಿನ, ಮಲಪ್ರಭೆಯ ಮಡಲಿನಿಂದ ಸಿಡಿದೆದ್ದ ರೈತ, ೨೦೧೧, ಪು. ೫೨
೩೬. ವಿಜಯ್ ಪೂಣಚ್ಚ ತಂಬಮಡ (ಪು.ಸಂ.), ಪೂರ್ವೋಕ್ತ, ಪು. ೪೭೮
೩೭. ಎಂ.ಜಿ. ನಾಗರಾಜ್, ಪೂರ್ವೋಕ್ತ, ಪು. ೯೦
೩೮. ಅದೇ, ಪು. ೯೧
೩೯. ಹಿ.ಚಿ. ಬೋರಲಿಂಗಯ್ಯ, ಕಾಗೋಡು ಚಳವಳಿ, ಸುವರ್ಣ ಸಂಪುಟ, ೨೦೦೨, ಪು. ೩೬೦
೪೦. ಅದೇ, ಪು. ೩೬೧
೪೧. ಎಂ.ಜಿ. ನಾಗರಾಜ್, ಪೂವೋಕ್ತ, ಪು. ೩೩೯
೪೨. ಅದೇ, ಪು. ೩೫೪
೪೩. ಹಿ.ಚಿ. ಬೋರಲಿಂಗಯ್ಯ (ಸಂ), ಪೂರ್ವೋಕ್ತ, ಪು. ೩೬೧
೪೪. ಸವಿತ ಬಿ.ಸಿ., ರೈತ ಹೋರಾಟಗಾರ ಪ್ರೊ. ಎಂ.ಡಿ. ನಂಜುಂಡಸ್ವಾಮಿ, ೨೦೧೦, ಪು. ೧೭
೪೫. ಅಕ್ಷತಾ ಕೆ., ಕಾಡುತೊರೆಯ ಜಾಡು, ೨೦೧೫, ಪು. ೨೫೫
೪೬. ಹಿ.ಚಿ. ಬೋರಲಿಂಗಯ್ಯ (ಸಂ), ಪೂರ್ವೋಕ್ತ, ಪು. ೩೬೨
೪೭. ವಿಜಯ ಪೂಣಚ್ಚ ತಂಬಂಡ, ಪೂವೋಕ್ತ, ಪು. ೪೮೨
೪೮. ಕೆ.ಎಂ. ಕುಮಾರ್, ಕರ್ನಾಟಕದಲ್ಲಿನ ರೈತ ಚಳವಳಿ, ೨೦೦೮, ಪು. ೧೨೯
೪೯. ಅದೇ, ಪು. ೧೫೩
೫೦. ಸವಿತ ಬಿ.ಸಿ., ಪೂರ್ವೋಕ್ತ, ಪು. ೧೯
೫೧. ಸ್ಮಿತಾ ಎಂ. ಭಾವಿಕಟ್ಟೆ, ಪೂವೋಕ್ತ, ಪು. ೯೧
೫೨. ಎಂ.ಜಿ. ನಾಗರಾಜ್, ಪೂರ್ವೋಕ್ತ, ಪು. ೪೨೨
೫೩. ಹಿ.ಚಿ. ಬೋರಲಿಂಗಯ್ಯ (ಸಂ), ಪೂವೋಕ್ತ, ಪು. ೩೬೨
೫೪. ಅದೇ, ಪು. ೩೬೪

ಅಧ್ಯಾಯ – ೫

# ಬಯಲುಸೀಮೆಯ ರೈತ ಪ್ರತಿಭಟನೆಗಳಿಗೆ ಕಾರಣಗಳು

ರೈತರು ಪ್ರತಿಭಟನೆಯನ್ನು ಸಾರ್ವಜನಿಕ ಅಭಿಪ್ರಾಯ ಅಥವಾ ಸರ್ಕಾರದ ಕಾರ್ಯವೈಕರಿಯ ಮೇಲೆ ಪರಿಣಾಮವನ್ನುಂಟು ಮಾಡುವ ಪ್ರಯತ್ನದಲ್ಲಿ ತಮ್ಮ ಅಭಿಪ್ರಾಯಗಳನ್ನು ಸಾರ್ವಜನಿಕವಾಗಿ ಕೇಳುವಂತೆ ಮಾಡುವ ಒಂದು ಮಾರ್ಗವಾಗಿದೆ. ರೈತರು ಪ್ರತಿಭಟನೆಯ ಮೂಲಕ ಅಪೇಕ್ಷಿತ ಬದಲಾವಣೆಗಳನ್ನು ತಾವೇ ನೇರವಾಗಿ ಜಾರಿಗೆ ತರಲು ಪ್ರಯತ್ನ ಪಡುತ್ತಿದ್ದಾರೆ. ರೈತ ಪ್ರತಿಭಟನೆ ಎಂದರೆ, ಒಂದು ನಿರ್ದಿಷ್ಟ ಗುರಿ ಸಾಧಿಸಲು ಶಾಂತಿಯುತವಾಗಿ ಪ್ರಚಾರ ಮಾಡುವುದು. ಪ್ರತಿಭಟನೆಯ ಮೂಲಕ ರೈತರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು. ಇದು ಒಂದು ಹಿಂಸಾತ್ಮಕ ಬೆದರಿಕೆಯಲ್ಲ, ಶಾಂತಿಯುತವಾಗಿ ರೈತರು ಸಂಘಟಿತರಾಗಿ ತಮ್ಮ ಅಕ್ಷೇಪಣೆಯನ್ನು ವ್ಯಕ್ತಪಡಿಸುವುದು. ಸಾಮಾಜಿಕ ವ್ಯವಸ್ಥೆಯಲ್ಲಿ ಅನ್ಯಾಯವಾದಾಗ ಪ್ರತಿಯೊಬ್ಬ ವ್ಯಕ್ತಿಯು ಪ್ರತಿಭಟಿಸುತ್ತಾನೆ. ಇದು ಆತನ ಜವಬ್ದಾರಿ ಹಾಗೂ ಕರ್ತವ್ಯವು ಹೌದು. ಹಾಗೆಯೇ ರೈತನು ಸಮಸ್ಯೆಗಳ ಸುಳಿಯಲ್ಲಿ ಬದುಕುತಿದ್ದು, ತನ್ನ ಜವಬ್ದಾರಿ ಹಾಗೂ ಕರ್ತವ್ಯ ನಿರ್ವಹಿಸಲು ಪ್ರತಿಭಟನೆಯಲ್ಲಿ ತೊಡಗಿದ್ದಾನೆ. ಅಂತಹ ಪ್ರತಿಭಟನೆಗಳಿಗೆ ಹಲವಾರು ಕಾರಣಗಳಿವೆ, ಅವುಗಳನ್ನು ಈ ಮುಂದಿನಂತೆ ಚರ್ಚಿಸಲಾಗಿದೆ.

**ನೀರಾ ಇಳಿಸಲು ಅನುಮತಿಗಾಗಿ:** ನೀರಾ ಇಳಿಸುವ ಪ್ರಸಂಗ ಏಕೆ ಬಂತು? ರಾಜ್ಯದಲ್ಲಿ ತೆಂಗಿನ ಮರಗಳಿಗೆ ಬಂದಿರುವ ನುಸಿ ರೋಗಕ್ಕೆ ಇದುವರೆಗೂ ವಿಜ್ಞಾನಿಗಳು ಯಾವ ಔಷಧಿಯನ್ನು ಕಂಡುಹಿಡಿದಿಲ್ಲವೆ?. ತೆಂಗಿನ ಕಾಯಿಗಳನ್ನು ಕಚ್ಚಿಕೊಂಡಿರುವ ತೊಟ್ಟಿನ ಭಾಗದಲ್ಲಿ ಈ ನುಸಿ ಸೇರುತ್ತದೆ. ನುಸಿ ನಿವಾರಿಸಲು ಅದು ಯಾವ ಜಾಗದಲ್ಲಿ ಬರುತ್ತದೆಯೋ, ಆ ಜಾಗವನ್ನೇ ಇಲ್ಲದಂತೆ ಮಾಡಿದರೆ ಮಾತ್ರ ಸ್ವಲ್ಪ ಮಟ್ಟಿಗೆ ರೋಗ ತಡೆಯಬಹುದು. ಅಂದರೆ ಹೊಂಬಾಳಿಯನ್ನು ಕೊಯ್ದು ಹಾಕುವುದು ಎಂದರ್ಥ. ಹಾಗಾದರೆ ರೈತರ ಜೀವನಕ್ಕೆ ಏನು

ದಾರಿ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸರ್ಕಾರವಂತೂ ರೈತರ ಜೀವನಕ್ಕೆ ಯಾವುದೇ ವ್ಯವಸ್ಥೆ ಕೈಗೊಂಡಿಲ್ಲ. ಹಾಗಾಗಿ ರೈತರೇ ತಮ್ಮ ಜೀವನಕ್ಕೆ ಹೊಸ ವ್ಯವಸ್ಥೆ ಮಾಡಿಕೊಳ್ಳಬೇಕು. ಇದರಿಂದಾಗಿ ರೈತರೇ ತೆಂಗಿನ ಮರದಿಂದ ನೀರಾ ಇಳಿಸಲು ಮುಂದಾದರು. ನೀರಾ ಕಬ್ಬಿನ ಹಾಲಿಗಿಂತ ಹೆಚ್ಚು ಸಿಹಿ. ನೀರಾದಲ್ಲಿ ಗ್ಲೂಕೋಸ್ ಇರುವುದರಿಂದ ಇದರ ಬಳಕೆ ಏಕೆ ಮಾಡಬಾರದು? ಎಂಬುದು ರೈತರ ಪ್ರಶ್ನೆಯಾಗಿದೆ.

ರಾಜ್ಯದಲ್ಲಿ ಸುಮಾರು ನಾಲ್ಕು ಕೋಟಿ ತೆಂಗಿನ ಮರಗಳಿವೆ. ಅವುಗಳಲ್ಲಿ ಅರ್ಧಕ್ಕೆ ನುಸಿ ರೋಗ ತಗುಲಿದೆ. ಈ ನುಸಿ ರೋಗ ತಗುಲಿರುವ ಮರಗಳನ್ನು ನೀರಾ ಇಳಿಸಲು ಬಳಸಿಕೊಂಡರೆ, ಕರ್ನಾಟಕದ ಕನಿಷ್ಠ ಅರ್ಧ ರೈತರು ಸಾಲದಿಂದ ಮುಕ್ತರಾಗುತ್ತಾರೆ. ಒಂದು ತೆಂಗಿನ ಮರದಿಂದ ಪ್ರತೀ ದಿನ ಎರಡು ಲೀಟರ್ ನೀರಾ ಇಳಿಸಬಹುದು. ಒಂದು ಲೀಟರ್ ನೀರಾಕ್ಕೆ ೨೫ರೂ ನಂತೆ ಬೆಲೆ ಬಂದರೂ, ಪ್ರತಿ ದಿನ ಒಂದು ಮರದ ಆದಾಯ ೫೦ರೂ. ವರ್ಷಕ್ಕೆ ೧೮,೦೦೦ರೂ. ಇದರಲ್ಲಿ ೩,೦೦೦ರೂ ಖರ್ಚಿಗೆ ತೆಗೆದರೂ, ೧೫,೦೦೦ ರೂ ಉಳಿಯುತ್ತದೆ. ರಾಜ್ಯದಲ್ಲಿರುವ ಸುಮಾರು ನಾಲ್ಕು ಕೋಟಿ ತೆಂಗಿನ ಮರಗಳಿಂದ ನೀರಾ ಇಳಿಸಿದರೆ, ೧೫ ಸಾವಿರ ಕೋಟಿ ವಹಿವಾಟು ಸಾಧ್ಯ. ಇಷ್ಟೊಂದು ವಹಿವಾಟಿನ ವ್ಯವಹಾರವನ್ನು ರೈತರಿಗೆ ಬಿಡಬಾರದೆಂದು, ಸರ್ಕಾರ ನೀರಾ ಇಳಿಸಲು ಅಡ್ಡಿಗಾಲು ಹಾಕುತ್ತಿದೆ. ರೈತರು ಇದನ್ನು ವಿರೋಧಿಸಿ ನೀರಾ ಇಳಿಸಲು ಅನುಮತಿಗಾಗಿ ಪ್ರತಿಭಟನೆಗಳನ್ನು ಮಾಡುತ್ತಿದ್ದು, ಇದು ಪ್ರಸ್ತುತ ಸರ್ಕಾರಗಳಿಗೆ ಸವಾಲಾಗಿದೆ.

**ಬೆಂಬಲ ಬೆಲೆಗಾಗಿ:** ರೈತ ಪ್ರತಭಟನೆ ಹೆಚ್ಚಾಗಿ ನಡೆಯುತ್ತಿರುವುದು, ತಾವು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ನೀಡಬೇಕೆಂದು, ಬೆಲೆಯ ಸುತ್ತ ಕೊಟ್ಟಿರುವ ಅಂಕಿ-ಅಂಶಗಳನ್ನು ಗಮನಿಸಿದರೆ ಸಾಕು, ರೈತರಿಗೆ ಆಗುತ್ತಿರುವ ಅನ್ಯಾಯದ ಪ್ರಮಾಣ ಅರ್ಥವಾಗುತ್ತದೆ.

ಉದಾಹರಣೆಗೆ, ೧೯೭೦ರಲ್ಲಿ ಒಂದು ಕ್ವಿಂಟಾಲ್ ರಾಗಿಗೆ ೬೦ ರೂಪಾಯಿ ಸಿಗುತ್ತಿದ್ದು, ೨೦೧೭-೧೮ರಲ್ಲಿ ಕ್ವಿಂಟಾಲ್‌ಗೆ ೨೦೭೦ ರೂಪಾಯಿ, ಅಂದರೆ ೨೩ ಪಟ್ಟು ಹೆಚ್ಚಳವಾಗಿದೆ. ಆದರೆ ಇದೇ ಅವಧಿಯಲ್ಲಿಯ ಕೇಂದ್ರ ಸರ್ಕಾರಿ ನೌಕರರ ಸಂಬಳ ೧೨೦ ಪಟ್ಟು, ಶಾಲಾಕಾಲೇಜುಗಳ ಶುಲ್ಕ ೨೮೦ ರಿಂದ ೩೨೦ ಪಟ್ಟು ಹೆಚ್ಚಾಗಿದೆ. ರಾಗಿ ಬೆಳೆಗಾರರ ಕುಟುಂಬದ ಆದಾಯ ೨೮೦೦ ರೂಪಾಯಿ. ಕೇಂದ್ರ ಸರ್ಕಾರದ ನೌಕರರ ಸಂಬಳದಂತೆ, ರೈತರಿಗೆ ಸರಿಯಾದ ಬೆಲೆ ಸಿಕ್ಕಿದ್ದರೆ, ಕ್ವಿಂಟಾಲ್ ರಾಗಿಗೆ ಕೊನೆಯ ಪಕ್ಷ ೧೦,೮೦೦ ರೂಪಾಯಿ ಇರಬೇಕಾಗಿತ್ತು. ಈ ಲೆಕ್ಕಚಾರವನ್ನು ಮೆಕ್ಕೆಜೋಳ, ಜೋಳ, ಹತ್ತಿ, ಭತ್ತ, ತೆಂಗು, ಈರುಳ್ಳಿ, ಶೇಂಗಾ ಒಟ್ಟಾರೆಯಾಗಿ ಎಲ್ಲಾ ಬೆಳೆಗಳಿಗೆ ಅನ್ವಯಿಸಿದರೆ, ರೈತ ಬೆಳೆದದ್ದನ್ನು ಉಣ್ಣುವವರಿಗೆಲ್ಲಾ, ರೈತರ ಬೇಡಿಕೆಗಳ ಬಗ್ಗೆ ಕೊನೆಯ ಪಕ್ಷ ಸಹಾನುಭೂತಿಯಾದರೂ ಮೂಡಬಲ್ಲದು.[೧]

ಒಂದು ಎಕರೆ ಪ್ರದೇಶದಲ್ಲಿ ಕಬ್ಬು ಬೆಳೆಯಲು ೧.೧೦ ಲಕ್ಷ ಖರ್ಚಾಗುತ್ತದೆ. ಈಗ ಒಂದು ಟನ್‌ಗೆ ಕಬ್ಬಿನ ಗರಿಷ್ಠ ಬೆಲೆ ೨೫೦೦/- ರೂ. ಸಾಮಾನ್ಯವಾಗಿ ಒಂದು ಎಕರೆ

ಇಳುವರಿಯಲ್ಲಿ ಬರುವುದು ೫೦ ಟನ್. ಆದಾಯದ ಲೆಕ್ಕ ಹಾಕಿದರೆ ಸಿಗುವುದು ೧.೨೫ ಲಕ್ಷ ಮಾತ್ರ. ಖರ್ಚು ಕಳೆದರೆ ರೈತರಿಗೆ ಏನೂ ಉಳಿಯುವುದಿಲ್ಲ. ಹಾಗಾಗಿ ರೈತರು ಆತ್ಮವಿಶ್ವಾಸ ಕಳೆದುಕೊಳ್ಳುತ್ತಿದ್ದಾರೆ. ಇದಕ್ಕಾಗಿ ಕಬ್ಬಿಗೆ ಮೌಲ್ಯವರ್ಧನೆಯಾಗಬೇಕು.

- ಒಂದು ಎಕರೆ ಪ್ರದೇಶದಲ್ಲಿ ಮೆಕ್ಕಜೋಳ ಬೆಳೆಯಲು ಸುಮಾರು ಇಪ್ಪತ್ತು ಸಾವಿರ ರೂ ಖರ್ಚಾಗುತ್ತದೆ. (ಹೊಲವನ್ನು ಉಳುಮೆ ಮಾಡಿ ಬಿತ್ತನೆ ಬೀಜ, ಗೊಬ್ಬರ, ಮೇಲುಗೊಬ್ಬರ, ಕೂಲಿ ಆಳುಗಳು, ಮುಂತಾದವು) ಒಂದು ಕ್ವಿಂಟಾಲ್ ಮೆಕ್ಕೆಜೋಳದ ಗರಿಷ್ಟ ಬೆಲೆ ೧೩೦೦. ಸಾಮಾನ್ಯವಾಗಿ ಒಂದು ಎಕರೆಯಲ್ಲಿ ಇಳುವರಿ ಬರುವುದು ಕೇವಲ ೧೮ ರಿಂದ ೨೦ ಚೀಲ. ಆದಾಯವನ್ನು ಲೆಕ್ಕ ಹಾಕಿದರೆ ಸಿಗುವುದು ೨೩,೪೦೦ ರೂ. ಖರ್ಚು ಕಳೆದರೆ ರೈತರಿಗೆ ಏನೂ ಉಳಿಯುವುದಿಲ್ಲ.[೨]

ಈರುಳ್ಳಿ ಬೆಳೆ ಬೆಳೆಯಲು ಪ್ರತಿ ಒಂದು ಎಕರೆಗೆ, ೪ ರಿಂದ ೫ಕೆ.ಜಿ ಬಿತ್ತನೆ ಬೀಜ ಬೇಕು. ಪ್ರತೀ ಒಂದು ಕೆ.ಜಿ.ಈರುಳ್ಳಿ ಬೀಜಕ್ಕೆ ರೂ.೨,೦೦೦ ಇದೆ. ಭೂಮಿ ಸಿದ್ಧತೆ ಮಾಡಿಕೊಳ್ಳಲು, ಹಟ್ಟಿಗೊಬ್ಬರ, ರಾಸಾಯನಿಕ ಗೊಬ್ಬರಕ್ಕೆಂದು ಕನಿಷ್ಟ ೩೦,೦೦೦ ರೂ ಬೇಕಾಗುತ್ತದೆ. ಬಿತ್ತನೆಯ ನಂತರ ಮೇಲು ಗೊಬ್ಬರ, ರಾಸಾಯನಿಕ ಗೊಬ್ಬರ, ಔಷಧಿ ಸಿಂಪಡನೆ, ಕಳೆ ತೆಗೆಯುವದಕ್ಕೆ ಕನಿಷ್ಟ ೮,೦೦೦ ದಿಂದ ೧೦,೦೦೦ ಸಾವಿರ ರೂ ಖರ್ಚಾಗುತ್ತದೆ. ಮೂರು ತಿಂಗಳ ಬೆಳೆಗೆ ನೀರು ಉಣಿಸಲು ಒಬ್ಬ ಕೂಲಿ ಆಳಿಗೆ, ದಿನಕ್ಕೆ ೩೦೦ರೂ. ರಂತೆ, ೨೭,೦೦೦ರೂ ಬೇಕಾಗುತ್ತದೆ. ಕೊಯ್ಲು ಮಾಡಲು ಒಂದು ಚೀಲ ಈರುಳ್ಳಿಗೆ ೨೫ರೂ. ಈರುಳ್ಳಿ ತುಂಬಲು ಒಂದು ಚೀಲಕ್ಕೆ ೨೫ರೂ. ಮಾರುಕಟ್ಟೆಗೆ ಸಾಗಿಸಲು ಚೀಲವೊಂದಕ್ಕೆ ಸಾಗಾಣಿಕೆ ವೆಚ್ಚ ೨೦ ರಿಂದ ೩೦ ರೂಪಾಯಿ. ಒಂದು ಎಕರೆಗೆ ೧೦೦ ರಿಂದ ೧೫೦ ಚೀಲ ಇಳುವರಿ ಬಂದರೆ, ಪ್ರತೀ ಕ್ವಿಂಟಾಲ್ ಈರುಳ್ಳಿಗೆ ರೂ. ೨,೧೦೦ಕ್ಕು ಹೆಚ್ಚು ಖರ್ಚು ಬರುತ್ತದೆ. ಹಾಗಾಗಿ ಪ್ರತೀ ಕ್ವಿಂಟಾಲ್‌ಗೆ ೨೫೦೦ರೂ ಬೆಂಬಲ ಬೆಲೆ ನೀಡಿದರೆ, ಖರ್ಚು ಮಾಡಿದ ಹಣವಾದರೂ ರೈತರಿಗೆ ಸಿಗುತ್ತದೆ.[೩]

ಒಣ ಬೇಸಾಯದಲ್ಲಿ ರಾಗಿ ಬೆಳೆಯು ಒಂದು ಪ್ರಮುಖ ಬೆಳೆಯಾಗಿದೆ. ಬಯಲು ಸೀಮೆಯಲ್ಲಿ ಹೆಚ್ಚಾಗಿ ರಾಗಿ ಬೆಳೆಯುತ್ತಾರೆ. ಸಕಾಲಕ್ಕೆ ಮಳೆಯಾಗದಿದ್ದರೆ ರಾಗಿ ಉತ್ಪಾದನೆಯು ಕುಂಠಿತವಾಗುವ ಸಂಭವವಿರುತ್ತದೆ. ಉತ್ತಮ ಮಳೆಯಾದರೆ ಒಂದು ಎಕರೆ ಪ್ರದೇಶದಲ್ಲಿ ರಾಗಿ ಉತ್ಪಾದನೆ ಮಾಡಲು ಈ ಕೆಳಕಂಡಂತೆ ಖರ್ಚು ಮತ್ತು ಆದಾಯ ಬರುತ್ತದೆ. ಭೂ ಕಂದಾಯ ೩೦/–, ಭೂಮಿಯನ್ನು ೩ ಸಲ ಉಳಿಮೆ ಮಾಡಲು ೬,೦೦೦/–, ೩ ಟ್ರ್ಯಾಕ್ಟರ್ ಕೊಟ್ಟಿಗೆ ಗೊಬ್ಬರ ೯,೦೦೦/–, ರಸಗೊಬ್ಬರ ೨ ಮೂಟೆ ೨,೪೦೦/–, ಬಿತ್ತನೆ ಮಾಡುವಾಗ ನೇಗಿಲು ಮತ್ತು ಕಂಬತ್ತೆಲು ಸೇರಿ ೧,೨೦೦/–, ಬಿತ್ತನೆ ರಾಗಿ ೧೦ ಕೆ.ಜಿ. ೧೫೦/–, ಎಡುಕುಂಟೆ ಹೊಡೆಯಲು ೧,೦೦೦/–, ಕಳೆ ಕೀಳಲು ೨೦ ಜನಕ್ಕೆ ೪,೦೦೦/–, ಯೂರಿಯಾ ಒಂದು ಚೀಲ ೩೪೦/–, ರಾಗಿ ತೆನೆ ಕಟಾವು ಮಾಡಲು ೨೦ ಜನಕ್ಕೆ ೨೦೦ ರೂಗಳ ಕೂಲಿಯಂತೆ

ಒಟ್ಟು ೪೦೦೦/-, ಹುಲ್ಲು ಕಟಾವು ಮಾಡಲು ೧೦ ಜನ ೨೦೦ ರಂತೆ ೨,೦೦೦/, ಸಾಗಾಣಿಕೆ ವೆಚ್ಚ ೩,೦೦೦/-, ಒಟ್ಟಾಗಿ ೩೩,೧೨೦/-ರೂಗಳು ಖರ್ಚಾಗುತ್ತದೆ. ಸರಾಸರಿ ಉತ್ಪಾದನೆ ೧೩ ಕ್ವಿಂಟಾಲ್ ಬೆಳೆದು, ೨ ಟ್ರ್ಯಾಕ್ಟರ್ ರಾಗಿ ಹುಲ್ಲನ್ನು ತಾನೇ ಇಟ್ಟುಕೊಳ್ಳುವುದರಿಂದ ೨೩,೧೨೦/-ರೂ ಖರ್ಚಾಗುತ್ತದೆ. ಅಂದರೆ ಒಂದು ಕ್ವಿಂಟಾಲ್‌ಗೆ ಉತ್ಪಾದನಾ ವೆಚ್ಚ ೧,೭೮೮/-ರೂ. ಹಾಗಾಗಿ ರೈತರಿಗೆ ಕನಿಷ್ಠ ಲಾಭವಾದರೂ ದೊರೆಯಬೇಕಾದರೆ, ರಾಗಿಗೆ ೨,೬೬೭/-ರೂಗಳನ್ನು ಕನಿಷ್ಠ ಬೆಂಬಲ ಬೆಲೆ ಘೋಷಿಸಬೇಕೆಂದು ರೈತರು ಪ್ರತಿಭಟನೆ ಮಾಡುತ್ತಿದ್ದಾರೆ.[೪]

ಒಂದು ಎಕರೆ ಪ್ರದೇಶದಲ್ಲಿ ಭತ್ತ ಬೆಳೆಯಲು, ಈ ಕೆಳಕಂಡಂತೆ ಖರ್ಚು ಮತ್ತು ಆದಾಯ ಬರುತ್ತದೆ. ಭತ್ತದ ಸಸಿ ಬೆಳೆಯಲು, ೫೦ ಕೆ.ಜಿ. ಭತ್ತದ ಬೀಜಕ್ಕೆ ೧,೦೦೦/-, ಮಡಿ ಉಳುಮೆಗೆ ೭೦೦/-, ಮಡಿ ಚೆಲ್ಲಲ್ಲು ೨ ಕೂಲಿ ಆಳಿಗೆ ೧,೩೦೦/-, ೧೫ ಕೆ.ಜಿ. ಯೂರಿಯಾ ಹಾಗೂ ಕೂಲಿ ೨೨೦/-, ೧/೨ ಲೀಟರ್ ಮಾನೋಕ್ರೋಟೊಫಸ್ ಮತ್ತು ಕೂಲಿ ೩೦೦/-, ೪೫ ದಿನಗಳವರೆಗೆ ನಿರ್ವಹಣೆ ಹಾಗೂ ನೀರನ್ನು ಉಣಿಸಲು ಯಾವುದೇ ವೆಚ್ಚ ಹಾಕದೆ, ಒಟ್ಟು ಸಸಿ ಬೆಳೆಯಲು ೩,೫೨೦/- ಖರ್ಚಾಗುತ್ತದೆ.

ಬೆಳೆ ಬೆಳೆಯಲು ಬೇಕಾದ ವೆಚ್ಚದ ವಿವರ, ಭೂಮಿ ಹದ ಮಾಡಲು ೨,೮೦೦/-,ಹೊಲ ಹೊಡೆಯಲು ಟ್ರ್ಯಾಕ್ಟರ್ ಬಾಡಿಗೆಗೆ ೧,೦೦೦/-, ಕಣಿವೆ ಸವರಲು ೨ ಆಳಿಗೆ ೪೦೦ ರೂ. ಕಸ ಆರಿಸಲು ೨ ಆಳಿಗೆ ೩೦೦/-, ಕೊಟ್ಟಿಗೆ ಗೊಬ್ಬರ, ೧ ಟ್ರ್ಯಾಕ್ಟರ್ ೩,೦೦೦/-, ಟ್ರ್ಯಾಕ್ಟರ್ ಬಾಡಿಗೆ ಮತ್ತು ಆಳಿಗೆ ೧,೦೦೦/-, ಸಸಿ ಕೀಳುವುದು ಹೋರುವುದು, ನಾಟಿ ಮಾಡಲು ೩,೧೦೦/-, ೧ ಚೀಲ ಯೂರಿಯಾ, ೧ ಚೀಲ ಕಾಂಪ್ಲೆಕ್ಸ್ ಮತ್ತು ಅದನ್ನು ಹಾಕಲು ಕೂಲಿಗೆ ೧,೫೫೦/-, ಕಳೆ ತೆಗೆಯಲು ೮ ಆಳಿಗೆ ೧,೨೦೦/-, ಎರಡನೇ ಸಲ ಗೊಬ್ಬರಕ್ಕೆ ೧,೨೦೦/-, ಕ್ರಿಮಿನಾಶಕ ೧/೨ ಲೀಟರ್ ಹಾಗೂ ಆಳಿಗೆ ೫೦೦/-, ಎರಡನೇ ಬಾರಿ ಕಳೆ ತೆಗೆಯಲು ೧೨೦೦/-, ಮೂರನೇ ಬಾರಿ ಗೊಬ್ಬರ ಹಾಕಲು ೧೨೦೦/-, ೦೫ ಕೆ.ಜಿ. ಗೊಬ್ಬರಮತ್ತು ಆಳಿಗೆ ೫೦೦/-, ಕ್ರಿಮಿನಾಶಕ ಮತ್ತು ಆಳಿಗೆ ೫೦೦/-, ನಾಲ್ಕನೇ ಬಾರಿ ಗೊಬ್ಬರಕ್ಕೆ ೧೫೫೦/-, ಭತ್ತವನ್ನು ಕೊಯ್ಯಲು ೩೦೦೦/-, ಟ್ರಾಕ್ಟರ್ ಬಾಡಿಗೆ ೫೦೦/-, ತೂರಲು ೭೫೦/-, ಚೀಲಕ್ಕೆ ತುಂಬಲು, ಏರುವುದು ಮತ್ತು ಇತರೆ ೬೮೦/-, ಸಾಗಾಣಿಕೆ ವೆಚ್ಚ ೩೫ ಚೀಲಕ್ಕೆ ೧೦೦೦/-, ಪ್ರತೀ ಚೀಲಕ್ಕೆ ಬಾಜು ೨೦೦೦/-, ದಲ್ಲಾಳಿ ಕಮೀಷನ್ ೩% ಗೆ ೨೧೦೦/-, ರೈತನ ಖರ್ಚು ೩೦೦/-, ಬಂಡವಾಳದಮೇಲಿನ ಬಡ್ಡಿ ೩೬% ಗೆ ೫೦೦೦/-, ಭೂ ಕಂದಾಯ ೧೨೫/,ಇತರೆ ವೆಚ್ಚ ೫೦೦/-, ಒಟ್ಟು ೪೧,೩೨೫/- ರೂ ಖರ್ಚಾಗುತ್ತದೆ. ಒಂದು ಎಕರೆಗೆ ೩೫ ಚೀಲ ಸರಾಸರಿ ಇಳುವರಿ ಬರುತ್ತದೆ. ಮಾರುಕಟ್ಟೆಯ ದರ ಪ್ರತಿ ಚೀಲಕ್ಕೆ ೧೨೦೦ ರೂ ನೀಡಿದರು, ಒಟ್ಟು ೩೫ ಚೀಲಕ್ಕೆ ೪೨೦೦೦/- ರೂ ಬರುತ್ತದೆ. ಈ ಮೇಲಿನ ಖರ್ಚಿಗೆ ಭೂಮಿ ಬಾಡಿಗೆಯನ್ನು ಪರಿಗಣಿಸಿಲ್ಲ. ಭತ್ತ ಬೆಳೆ ಬೆಳೆಯುವವರೆಗೆ ನೋಡಿಕೊಳ್ಳುವ, ಉಸ್ತುವಾರಿಯ ಕೂಲಿ ಮತ್ತು ತೂಕದಲ್ಲಿ ಮೋಸ, ಹಮಾಲಿ

ವೆಚ್ಚ ಸೇರಿಸಿಲ್ಲ. ಇದನ್ನು ನೋಡಿದರೆ ಉತ್ಪಾದನಾ ವೆಚ್ಚವೇ ಅಧಿಕವಾಗಿದೆ. ಹೀಗಾಗಿ ಭತ್ತ ಬೆಳೆದ ರೈತರು ಉತ್ಪಾದನಾ ವೆಚ್ಚ ಕಳೆದು ತನ್ನ ಬದುಕಿಗಾಗಿ ಏನನ್ನು ಆಶ್ರಯಿಸಬೇಕೆಂದು ಹತಾಶರಾಗಿದ್ದಾರೆ. ಹಾಗಾಗಿ ಭತ್ತಕ್ಕೆ ಬೆಂಬಲ ಬೆಲೆ ನೀಡಬೇಕೆಂದು ರೈತರು ಪ್ರತಿಭಟನೆಯಲ್ಲಿ ತೊಡಗಿದ್ದಾರೆ.[೫]

**ಸಾಲ ಮನ್ನಾಕ್ಕಾಗಿ ರೈತರ ಪ್ರತಿಭಟನೆ:** 'ರೈತ ಸಾಲದಲ್ಲೇ ಹುಟ್ಟಿ ಸಾಲದಲ್ಲೇ ಸಾಯುತ್ತಾನೆ' ಎಂಬ ಮಾತಿದೆ. ಅಂದರೆ ಸಮಸ್ಯೆಗಳಲ್ಲೇ ಹುಟ್ಟಿ ಸಮಸ್ಯೆಗಳಲ್ಲೇ ಸಾಯುತ್ತಿದ್ದಾನೆ. ಲಕ್ಷಾಂತರ ಹಳ್ಳಿಗಳನ್ನು ಹೊಂದಿರುವ ಭಾರತದ ಮುಖ್ಯ ಕಸುಬು ಕೃಷಿ ಇದನ್ನು ಲಾಭದಾಯಕವಾಗಿ ಹಾಗೂ ಸ್ವಾವಲಂಬಿ ರಾಜ್ಯದ ಸ್ಥಾಪನೆಯಿಂದ ದೇಶದ ಅಭಿವೃದ್ಧಿ ಎಂಬ ಕನಸನ್ನು ಗಾಂಧಿ ಕಂಡಿದ್ದರು. ಆದರೆ ಸ್ವಾತಂತ್ರ್ಯ ನಂತರ, ಪಂಚವಾರ್ಷಿಕ ಯೋಜನೆಗಳು ಹೆಜ್ಜೆ ಇಟ್ಟರೂ ಅದು ಕೂಡ ಮತ್ತೊಂದು ತಪ್ಪು ಹೆಜ್ಜೆಯಾಗಿತ್ತು. ಏಕೆಂದರೆ ಕೃಷಿ ಅಭಿವೃದ್ಧಿ ಮತ್ತು ಕೃಷಿಗೆ ನೀರಾವರಿ ಕಲ್ಪಿಸುವುದೆಂದರೆ ದೊಡ್ಡ ಅಣೆಕಟ್ಟುಗಳನ್ನು ನಿರ್ಮಿಸುವುದು ಮಾತ್ರವೆಂದು ನಂಬಿಕೊಂಡಿದ್ದರು. ಸಣ್ಣ ನೀರಾವರಿ ಯೋಜನೆಗಳಿಗೆ ಹೆಚ್ಚು ಒತ್ತು ಕೊಡದೆ, ಕೃಷಿಯನ್ನು ಕಡೆಗಾಣಿಸಿದರ ಫಲವಾಗಿ ರೈತರು ಸಂಕಷ್ಟ ಎದುರಿಸುತ್ತಿದ್ದಾರೆ. ರೈತ ಅವಲಂಬಿಸಿರುವ ಕೃಷಿಗೆ, ಸಾಲ ಮಾಡುವ ಅವಶ್ಯಕತೆ ಇರಲಿಲ್ಲ. ಯಾರನ್ನು ಅವಲಂಬಿಸಿರಲಿಲ್ಲ. ಪಶು ಸಂಗೋಪನೆಯನ್ನು ಉಪಕಸುಬಾಗಿ ಮಾಡಿಕೊಂಡು, ಅದರಿಂದ ಬಂದ ಸಗಣಿಗೊಬ್ಬರ, ಮನೆ ಬಿತ್ತನೆ ಬೀಜ, ಗ್ರಾಮದಲ್ಲಿರುವ ಬಡಗಿ, ಕಮ್ಮಾರ, ಚಮ್ಮಾರ ತಯಾರಿಸಿದ ಬೇಸಾಯದ ಉಪಕರಣಗಳನ್ನು ಬಳಸಿ, ಬೆಳೆ ಬೆಳೆದು ಬೇರೆಯವರಿಗೂ ಹಂಚಿ ತಾನೂ ಊಟ ಮಾಡಿ ನೆಮ್ಮದಿಯ ಜೀವನ ನಡೆಸುತ್ತಿದ್ದರು. ಆದರೆ ಇಂದಿನ ರೈತ ರೇಷನ್ ಕಾರ್ಡಿಗೆ ಕೈ ಚಾಚುವಷ್ಟು ಅಸಹಾಯಕನಾಗಿದ್ದಾನೆ. ಇಲ್ಲಿಯವರೆಗೆ ಯಾವ ಸರ್ಕಾರಗಳು ರೈತರ ಬಂಡವಾಳವನ್ನು ಲೆಕ್ಕ ಹಾಕಲು ಮುಂದೆ ಬಂದಿಲ್ಲ. ಕರ್ನಾಟಕ ರಾಜ್ಯ ಒಂದರಲ್ಲಿಯೇ ೧೩ ಲಕ್ಷ ನೀರಾವರಿ ಪಂಪ್‌ಸೆಟ್‌ಗಳಿಂದ ೫೦ ಲಕ್ಷ ಎಕರೆ ನೀರಾವರಿಗೆ ಒಳಪಟ್ಟಿದೆ. ಸರ್ಕಾರದ ಬೃಹತ್ ನೀರಾವರಿಗೆ, ಒಂದು ಎಕರೆಗೆ ನೀರುಣಿಸಲು ೧.೨೫ ಲಕ್ಷ ರೂ ಖರ್ಚು ಮಾಡುತ್ತದೆ. ಈ ಪ್ರಕಾರ ರೈತರು ೬ ಲಕ್ಷ ಕೋಟಿ ರೂ ಬಂಡವಾಳ ಹಾಕಿದ್ದಾರೆ. ೫೦ ಲಕ್ಷ ಎಕರೆಗೆ ಒಂದುದಿನ ನೀರು ಹಾಯಿಸಲಿಕ್ಕೆ ೧೨ ಕೋಟಿ ರೂ ಬೇಕಾಗುತ್ತದೆ.[೬]

ಕರ್ನಾಟಕದಲ್ಲಿ ಸುಮಾರು ಎರಡೂವರೆ ಕೋಟಿ ದನಗನಗಳಿದ್ದು, ಬಂಡವಾಳ ೧ ಲಕ್ಷ ಕೋಟಿ.ಈ ದನಗಳನ್ನು ಮೇಯಿಸಲು ೨೭ ಕೋಟಿ ರೂ ಖರ್ಚಾಗುತ್ತದೆ. ದನಕಟ್ಟಲು ಮನೆಗೆ ೧೦ ಸಾವಿರ ಕೋಟಿ ರೂ. ೧ ಕೋಟಿ ಗಾಡಿಗಳಿಗೆ ೧೫ ಸಾವಿರ ಕೋಟಿ ರೂ. ಎತ್ತುಗಳಿಗೆ ಒಂದು ಸಾರಿ ಮೂಗುದಾರ ಹಾಕಲು ೨೫ ಕೋಟಿ ರೂ ಬೇಕು. ಎತ್ತುಗಳ ಹಲ್ಲೆ ಕಟ್ಟಲ್ಲಿಕ್ಕೆ ೧ ಸಾರಿಗೆ ೨೦ ಕೋಟಿರೂ. ನೇಗಿಲು ರೆಕ್ಕೆ ಕಟ್ಟಲ್ಲಿಕ್ಕೆ ೩ ಕೋಟಿ ರೂ. ಹೀಗೆ ಇಡೀ ದೇಶದಲ್ಲೇ ಬೇರೆ ಎಲ್ಲಾ ಕ್ಷೇತ್ರಕ್ಕಿಂತ ಹೆಚ್ಚಾಗಿ ಬಂಡವಾಳವನ್ನು ರೈತರು ಬೇಸಾಯಕ್ಕೆ

ತೊಡಗಿಸಿದ್ದಾರೆ. ಆದರೆ ಆದಾಯವಿಲ್ಲದೆ ರೈತರು ಬೇಸಾಯ ಮಾಡುತ್ತಿದ್ದಾರೆ. ಈ ದೇಶದ ಜನರಿಗೆ ಮುಕ್ಕಟೆಯಾಗಿ ಆಹಾರ ಒದಗಿಸಿದರು, ಸರ್ಕಾರ ಇಲ್ಲಿಯವರೆಗೆ ಏಕೆ ಕೃಷಿ ಮೇಲಿನ ಬಂಡವಾಳವನ್ನು ಬರೆದಿಟ್ಟಿಲ್ಲ? ಎಂದು ಈಗ ರೈತರು ಕೇಳುತ್ತಿದ್ದಾರೆ. ಸ್ವಾತಂತ್ರ್ಯ ನಂತರದಿಂದ ಇಲ್ಲಿಯವರೆಗೆ ಕೃಷಿ ನೀತಿಯೇ ಇಲ್ಲ. ರೈತರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಿ, ದುಬಾರಿ ಬೆಲೆ ಕೊಟ್ಟು ಕೈಗಾರಿಕಾ ವಸ್ತುಗಳನ್ನು ಕೊಳ್ಳುತ್ತಿದ್ದಾರೆ. ಅಂದಿನಿಂದ ಇಂದಿನವರೆಗೆ ರೈತರು ಬೆಳೆದ ಕೃಷಿ ಉತ್ಪನ್ನ ಬೆಲೆ ೬ ಪಟ್ಟು ಜಾಸ್ತಿಯಾದರೆ, ಕೈಗಾರಿಕಾ ವಸ್ತುಗಳ ಬೆಲೆ ೨೦ ಪಟ್ಟು ಹೆಚ್ಚಾಗಿದೆ.[೭] ಈ ರೀತಿಯ ತಾರತಮ್ಯ ನೀತಿಯಿಂದ ರೈತ ಸಾಲದಿಂದ ಮುಕ್ತನಾಗಲು ಸಾಧ್ಯವಾಗುತ್ತಿಲ್ಲ.

೧೯೯೧ರ ನಂತರ ಜಾರಿಗೆ ಬಂದ ಹೊಸ ಆರ್ಥಿಕ ಹಾಗೂ ಕೃಷಿ ನೀತಿಗಳು, ೧೯೯೪ರ ಬಹುರಾಷ್ಟ್ರೀಯ ಕಂಪನಿಗಳು, ಡಂಕಲ್ ಪ್ರಸ್ತಾಪ, ಗ್ಯಾಟ್ ಒಪ್ಪಂದಗಳು, ಜಾಗತೀಕರಣ ಮತ್ತು ಮುಕ್ತ ವ್ಯಾಪಾರ ನೀತಿ, ಉದಾರೀಕರಣ ನೀತಿಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೇ ಒಪ್ಪಿಕೊಂಡಿದೆ, ಈ ದುಸ್ಥಿತಿಗೆ ಪ್ರಮುಖ ಕಾರಣವಾಗಿದೆ. ಇವುಗಳ ಪ್ರಮುಖ ಉದ್ದೇಶವೇನೆಂದರೆ ರೈತರ ಕೃಷಿಯನ್ನು ನಾಶಗೊಳಿಸಿ ಕಂಪನಿಯ ಕೃಷಿ ನೀತಿಯನ್ನು ಜಾರಿಗೆ ತರುವುದು. ಇದರಿಂದಾಗಿ ರೈತರು ಸಾಲದ ಸುಳಿಗೆ ಸಿಲುಕುವಂತಾಗಿ, ಯಾವ ಬೆಳೆ ಬೆಳೆದರೂ ರೈತರು ಸಾಲಗಾರನಾಗುವುದು ಅನಿವಾರ್ಯವಾಗಿದೆ. ಅಲ್ಲದೇ ಬೆಳೆದ ಬೆಳೆಗೆ ಬೆಂಬಲ ಬೆಲೆ ಸಿಗದೆ ರೈತರು ಸಾಲಗಾರನಾಗಿ ಆತ್ಮಹತ್ಯೆಗೆ ಶರಣಾಗುವ ಸ್ಥಿತಿ ಬಂದೊದಗಿದೆ. ನೆಪ ಮಾತ್ರಕ್ಕೆ ಸ್ಪಂದಿಸುತ್ತಿರುವ ಸರ್ಕಾರಗಳು ಈ ಹತ್ಯೆಗೆ ನೂರಾರು ಕಾರಣ ನೀಡಿ ನುಣುಚಿಕೊಳ್ಳುತ್ತಿವೆ. ಹಾಗಾಗಿ ರೈತರ ಸಾಲವನ್ನು ಸರ್ಕಾರಗಳೇ ಮನ್ನಾ ಮಾಡಬೇಕೆಂದು ರೈತರು ಪ್ರತಿಭಟನೆಯಲ್ಲಿ ತೊಡಗಿದ್ದಾರೆ.[೮]

**ವಿದ್ಯುತ್ ನೀತಿಯನ್ನು ವಿರೋಧಿಸಿ:** ದೇಶದಲ್ಲಿ ಜಾಗತೀಕರಣ ಪ್ರಾರಂಭವಾಗುವುದಕ್ಕಿಂತ ಮುನ್ನ ಎಲ್ಲಾ ರೈತರಿಗೆ ಉಚಿತವಾಗಿ ವಿದ್ಯುತ್ ಲಭ್ಯವಾಗುತ್ತಿತ್ತು. ನಂತರದ ಸಮಯದಲ್ಲಿ ವಿದ್ಯುತ್ ವಿತರಣೆ ಹಾಗೂ ಉತ್ಪಾದನೆಯನ್ನು ಖಾಸಗೀಕರಣಕ್ಕೆ ಒಳಪಡಿಸಿದರು. ಅಂದಿನಿಂದ ರೈತರು ಬಳಸುವ ವಿದ್ಯುತ್‌ಗೆ, ಬೆಲೆ ನೀಡಲೇಬೇಕಾದ ಕಡ್ಡಾಯ ನೀತಿ ಜಾರಿಗೆ ಬಂದಿತು. ನಂತರ ರೈತರು ಕೃಷಿಗೆ ಬಳಸುವ ಪ್ರತಿ ಬೋರ್‌ವೆಲ್‌ಗೂ ಮೀಟರ್ ಹಾಕುವ ಪದ್ಧತಿಯನ್ನು ಜಾರಿಗೆ ತಂದರು. ಇದಲ್ಲದೆ ಪ್ರತಿ ೫ ಹೆಚ್.ಪಿ.ಮೋಟಾರ್‌ಗೆ ವರ್ಷಕ್ಕೆ ಕಡ್ಡಾಯವಾಗಿ ಎರಡೂವರೆ ಸಾವಿರ ರೂಪಾಯಿಗಳನ್ನು ನೀಡಲೇಬೇಕಾದ ಕಡ್ಡಾಯ ಪರಿಸ್ಥಿತಿಗೆ ರೈತರು ಒಳಗಾಗಿದ್ದಾರೆ. ಅಲ್ಲದೆ ವಿದ್ಯುತ್‌ನ್ನು ಖಾಸಗೀಕರಣಕ್ಕೆ ಒಳಪಡಿಸಿದ್ದರಿಂದ ವಿದ್ಯುತ್ ದರವು ಜಾಸ್ತಿಯಾಗುತ್ತಿದ್ದು, ಖಾಸಗಿಯವರಿಗೆ ಲಾಭದಾಯಕವಾಗಿದೆ. ಖಾಸಗಿಯವರು ಶ್ರೀಮಂತರಿಗೆ ಕೈಗಾರಿಕೆಗಳಿಗೆ ನಗರಗಳಿಗೆ ಗುಣಮಟ್ಟದ ವಿದ್ಯುತ್ ನೀಡಿ, ಗುಣಮಟ್ಟವಿಲ್ಲದ ವೋಲ್ಟೇಜ್ ವೈಪರಿತ್ಯ ಹೊಂದಿರುವ ವಿದ್ಯುತ್‌ನ್ನು ಹಳ್ಳಿಗಳಲ್ಲಿನ ರೈತರಿಗೆ ನೀಡುತ್ತಿದ್ದಾರೆ. ಇದರಿಂದಾಗಿ

ರೈತರ ಬೋರ್‌ವೆಲ್ ಸತತವಾಗಿ ಹಾಳಾಗುತ್ತಿವೆ. ಈ ಸಮಸ್ಯೆಯ ನಿವಾರಣೆಗೆ ಸರ್ಕಾರಗಳೊಂದಿಗೆ ರೈತರು ಸರ್ಕಸ್ ಮಾಡುವಂತಾಗಿದೆ.

ಇಂದಿನ ಸರ್ಕಾರಗಳು ವೋಟ್ ಬ್ಯಾಂಕ್‌ಗಾಗಿ ರೈತರಿಗೆ ನಿರಂತರ ವಿದ್ಯುತ್‌ನ್ನು ಅಥವಾ ೨೪ ಗಂಟೆಗಳ ಕಾಲ ವಿದ್ಯುತ್‌ನ್ನು ನೀಡುತ್ತೇವೆಂದು ಹೊಸ ನೀತಿಗಳನ್ನು ಜಾರಿಗೆ ತಂದಿದ್ದಾರೆ. ಈ ವಿದ್ಯುತ್ ನೀತಿಯಿಂದ ನಿರಂತರ ಜ್ಯೋತಿ ಕೇವಲ ಊರಿನ ಒಳಗೆ ಮಾತ್ರ, ಹಳ್ಳಿಯ ರೈತರು ಈ ವಿದ್ಯುತ್‌ನ್ನು ಕೇವಲ ಮನೆಯಲ್ಲಿದ್ದಾಗ, ಬೆಳಕಿಗೆ, ಮನರಂಜನೆಗಾಗಿ ಉಪಯೋಗಿಸಬಹುದು. ಆದರೆ ಈ ವಿದ್ಯುತ್ ಸಿಂಗಲ್ ಪೇಸ್ ವಿದ್ಯುತ್ ಆಗಿರುತ್ತದೆ. ಈ ಸಿಂಗಲ್ ಪೇಸ್ ವಿದ್ಯುತ್‌ನ್ನು ರೈತರು ತಮ್ಮ ಹೊಲಗಳಲ್ಲಿ ಉಪಯೋಗಿಸಲು ಸಾಧ್ಯವಿಲ್ಲ. ಕಾರಣ ರೈತರು ತಮ್ಮ ಹೊಲಗಳಲ್ಲಿರುವ ಬೋರ್‌ವೆಲ್‌ಗಳನ್ನು ಬಳಸಬೇಕೆಂದರೆ, ತ್ರಿಪೇಸ್ ವಿದ್ಯುತ್ ಅವಶ್ಯಕ. ರೈತರಿಗೆ ಸಿಂಗಲ್ ಪೇಸ್ ವಿದ್ಯುತ್‌ನ ಅವಶ್ಯಕತೆ ಇಲ್ಲ. ಕೃಷಿಯೇ ರೈತನಿಗೆ ಜೀವನಾಧಾರ. ಈ ಭೂಮಿಯನ್ನು ನೀರಾವರಿಗೆ ಒಳಪಡಿಸಿದಾಗ ಮಾತ್ರ ಆರ್ಥಿಕವಾಗಿ ಸಬಲರಾಗಲು ಸಾಧ್ಯ. ಹಾಗಾಗಿ ಈ ಬೋರ್‌ವೆಲ್‌ಗಳು ರೈತನ ಜೀವನಕ್ಕೆ ಆಧಾರವಾಗಿವೆ. ಆದರೆ ವಿದ್ಯುತ್ ನಿಗಮವು ರೈತರ ಬೋರ್‌ವೆಲ್‌ಗಳಿಗೆ ೬ ಘಂಟೆ ಮಾತ್ರ ತ್ರಿಪೇಸ್ ವಿದ್ಯುತ್ ನೀಡುತ್ತಿದೆ. ಈ ವಿದ್ಯುತ್‌ನ್ನು ೩ ಗಂಟೆ ಮಧ್ಯಾಹ್ನದ ಸಮಯದಲ್ಲಿ, ಉಳಿದ ೩ ಘಂಟೆಯನ್ನು ರಾತ್ರಿಯ ಸಮಯದಲ್ಲಿ ನೀಡುತ್ತಾರೆ. ಅದೇ ನಗರದಲ್ಲಿರುವ ಕೈಗಾರಿಕೆಗಳಿಗೆ ನಿರಂತರವಾಗಿ ವಿದ್ಯುತ್ ನೀಡುತ್ತಾರೆ. ಆದರೆ ಕಷ್ಟಪಟ್ಟು ಇಡೀ ದೇಶಕ್ಕೆ ಅನ್ನ ಹಾಕುವ ರೈತರಿಗೆ ಈ ರೀತಿಯ ತಾರತಮ್ಯ ಏಕೆ?. ರೈತನು ದಿನದ ೨೪ ಘಂಟೆಗಳ ಕೆಲಸ ನಿರ್ವಹಿಸಬೇಕೆ?. ರಾತ್ರಿಯ ವೇಳೆಯಲ್ಲಿ ರೈತ ಬೆಳೆಗೆ ನೀರನ್ನು ಹಾಯಿಸಲು ಹೋಗುತ್ತಾನೆ. ಆ ಸಮಯದಲ್ಲಿ ಪ್ರಾಣಿಗಳಿಂದ ಹಾನಿಗೊಳಗಾಗಿ ಸತ್ತರೆ, ಆ ರೈತರ ಕುಟುಂಬ ಹೊಣೆ ಯಾರು ಹೊರುತ್ತಾರೆ. ಇದಕ್ಕೆಲ್ಲಾ ನೇರ ಹೊಣೆ ವಿದ್ಯುತ್ ನಿಗಮ ಮಂಡಳಿ ಮತ್ತು ಸರ್ಕಾರವೇ ಆಗಿರುತ್ತದೆ.

ಬಯಲುಸೀಮೆಯ ರೈತರು ತಮ್ಮ ಭೂಮಿಯನ್ನು ನೀರಾವರಿಗೆ ಒಳಪಡಿಸಲು ಹೆಚ್ಚಾಗಿ ಬೋರ್‌ವೆಲ್‌ಗಳನ್ನು ಅವಲಂಬಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಪ್ರತಿಯೊಬ್ಬ ರೈತ ಬೋರ್‌ಗಳನ್ನು ಹಾಕಿಸಲು ಪರವಾನಿಗೆ ಪಡೆಯಬೇಕು. ನೀರು ಬಿದ್ದರೆ ಅದಕ್ಕೆ ವಿದ್ಯುತ್ ನಿಗಮದಿಂದ ೩೦,೦೦೦ ರೂಪಾಯಿ ನೀಡಿ, ಸ್ವಂತ ಟ್ರಾನ್ಸ್‌ಫಾರ್ಮರ್‌ನ್ನು ಪಡೆಯಬೇಕು. ಇದರ ಜೊತೆಗೆ ಅಧಿಕಾರಿಗಳಿಗೆ ಲಂಚವನ್ನು ಕೊಡಬೇಕು. ಅದಕ್ಕೆ ಬೇಕಾಗುವ ಮಿಷನರಿ ಯಂತ್ರಗಳಿಗೂ ಹಣವನ್ನು ಖರ್ಚು ಮಾಡಬೇಕಾಗುತ್ತದೆ. ಒಟ್ಟಾರೆಯಾಗಿ ರೈತ ಒಂದು ಬೋರ್‌ವೆಲ್ ಹಾಕಿಸಿ ಅದರಿಂದ ನೀರನ್ನು ಹೊರ ತೆಗೆಯಬೇಕಾದರೆ ೧,೫೦,೦೦೦-೨,೦೦,೦೦೦ದವರೆಗೆ ಹಣವನ್ನು ಖರ್ಚು ಮಾಡಬೇಕಾಗುತ್ತದೆ. ಹಳ್ಳಿಯ ರೈತರು ಇಷ್ಟೊಂದು ಹಣವನ್ನು ಖರ್ಚು ಮಾಡಲು ಸಾಧ್ಯವೇ?. ಸಾಧ್ಯವಾದರೇ ಅದು ಸಾಲದಿಂದ ಮಾತ್ರ. ರೈತ ಈ ಎಲ್ಲಾ ಅಡೆತಡೆಗಳನ್ನು ಮೀರಿ ಸಾಲ ಮಾಡಿ. ಬೋರ್‌ವೆಲ್‌ನಿಂದ ನೀರು ತಂದರು. ಅದಕ್ಕೆ ವಿದ್ಯುತ್ ಅಡಚಣೆಯಾಗಿದೆ. ಹಾಗಾಗಿ

ಈ ಭಾಗದ ರೈತರು ತ್ರಿಪೇಸ್ ವಿದ್ಯುತ್‌ನ್ನು ೨೪ ಘಂಟೆಗಳ ಕಾಲ ನೀಡಬೇಕೆಂದು ಒತ್ತಾಯಿಸಿ ಪ್ರತಿಭಟನೆ ನಿರತರಾಗಿದ್ದಾರೆ.

**ಕಂದಾಯ ಇಲಾಖೆಯ ಭ್ರಷ್ಟ ಅಧಿಕಾರಿಗಳ ವಿರುದ್ಧ:** ರೈತರು ಜಿಲ್ಲೆಯ ಯಾವುದೇ ತಾಲೂಕು ಕಛೇರಿ ಹಾಗೂ ಸರ್ವೆ ಇಲಾಖೆಯ ಬಾಗಿಲಿಗೆ ಹೋಗಿ ನಿಂತರೆ ಸಾಕು. ಒಂದಲ್ಲ ಹಲವು ರೈತರ ಕಥೆಗಳು ಕಣ್ಣಿನ ಮುಂದೆ ಬರುತ್ತವೆ. ಪೋಡಿಗಾಗಿ ಅಲೆಯುತ್ತಿರುವ, ಹಕ್ಕು ಪತ್ರಕ್ಕಾಗಿ ಕಾಯುತ್ತಿರುವ, ಖಾತೆ ಬದಲಾವಣೆಗಾಗಿ ಅಂಗಲಾಚುತ್ತಿರುವ, ಅಲ್ಲದೇ ಪಹಣಿಯಲ್ಲಿ ಬೆಳೆ ನಮೂದಾತಿಯಿಲ್ಲದೆ ಒದ್ದಾಡುತ್ತಿರುವ ಸಾವಿರಾರು ರೈತರು ನಮ್ಮ ಕಣ್ಮುಂದೆ ಬರುತ್ತಾರೆ. ಪಹಣಿಯಲ್ಲಿ ಬೆಳೆಯಿಲ್ಲ ಎಂಬುದು ರೈತನ ಪಾಲಿಗೆ ದೊಡ್ಡ ಸಮಸ್ಯೆ. ರೈತ ಸರ್ಕಾರಿ ಸವಲತ್ತು ಪಡೆಯಲು, ಸಾಲ ಸೌಲಭ್ಯ ದೊರಕಿಸಿಕೊಳ್ಳಲು ಇದು ಅತ್ಯಗತ್ಯ. ನಮ್ಮ ಕಂದಾಯ ಇಲಾಖೆಯ ಆಡಳಿತ ಎಷ್ಟು ಹದಗೆಟ್ಟಿದೆಯೆಂದರೆ, ಸಮಸ್ಯೆ ನಿವಾರಣೆಗೆ ಜವಬ್ದಾರಿ ತೆಗೆದುಕೊಳ್ಳುವವರು ಯಾರು ಇರುವುದಿಲ್ಲ. ತಹಶೀಲ್ದಾರ್‌ರು ತಮ್ಮದೇ ಚಿಂತೆಯಲ್ಲಿರುತ್ತಾರೆ ಹೊರತು ಈ ತರಹದ ಸಮಸ್ಯೆಗಳ ಕಡೆ ಗಮನ ನೀಡುವುದಿಲ್ಲ. ಈ ಕಛೇರಿಗಳಲ್ಲಿ ದೂರು ನಿವಾರಣೆ ವ್ಯವಸ್ಥೆಯಾಗಲೀ, ಅದಕ್ಕೊಬ್ಬ ಅಧಿಕಾರಿಯಾಗಲೀ ಇಲ್ಲವೇ ಇಲ್ಲ. ಇದಕ್ಕಾಗಿ ಸರ್ಕಾರ ಹೊರಡಿಸಿರುವ ಅನೇಕ ಸುತ್ತೋಲೆಗಳು ದೂಳು ಹಿಡಿದಿವೆ. ರೈತರು ತಮ್ಮ ಜಮೀನಿನ ಪಹಣಿಯನ್ನು ತೆಗೆದುಕೊಳ್ಳಲು ಮೈಲುದ್ಧ ಕ್ಯೂನಿಂತು ಗಂಟೆಗಟ್ಟಲೇ ಕಾಯುವ ಸ್ಥಿತಿ ನಿರ್ಮಾಣವಾಗಿದೆ. ದೂರದ ಹಳ್ಳಿಗಳಿಂದ ಬಂದ ರೈತರು ನೀರು, ಅನ್ನ ಬಿಟ್ಟು ಒದ್ದಾಡುವಂತಾಗಿದೆ. ರೈತರಿಗೆ ನೆರವಾಗಲೆಂದು ತೆರೆದಿರುವ ನಾಡ ಕಛೇರಿಗಳದ್ದು ಇನ್ನೊಂದು ಕತೆ. ಅವು ಹಳ್ಳಿಗಳಾಗಿದ್ದರಿಂದ ಕರೆಂಟ್ ಇದ್ದರೆ ನೌಕರ ಬಂದಿರುವುದಿಲ್ಲ. ನೌಕರ ಬಂದರೆ ಕರೆಂಟ್ ಇರುವುದಿಲ್ಲ. ಅವೆರೆಡು ಇದ್ದರೆ ಕಂಪ್ಯೂಟರ್ ಸರಿ ಇರುವುದಿಲ್ಲ. ರೈತರು ತಾಲೂಕು ಕಛೇರಿಗೆ ಹೋಗುವುದು ಅನಿವಾರ್ಯವಾಗುತ್ತದೆ. ಇನ್ನೊಂದು ಕಡೆ ಜಮೀನಿನ ಒಡೆತನವಿರುವ ಹಿರಿಯರು ತೀರಿಕೊಂಡರೆ, ಅವರ ವಾರಸುದಾರರಿಗೆ ಜಮೀನಿನ ಖಾತೆ ಬದಲಾವಣೆ ಮಾಡಿಸುವುದೆಂದರೆ ದೊಡ್ಡ ತಲೆ ಬಿಸಿಯ ಕೆಲಸ. ಹತ್ತಾರು ಬಾರಿ ಅಲೆದಾಟ, ಸಾವಿರಾರು ರೂಪಾಯಿ ಕಳೆದುಕೊಂಡರು, ಕನಿಷ್ಟ ಆರು ತಿಂಗಳಾದಾರು ಬೇಕಾಗುತ್ತದೆ. ಸಹಕಾರಿ ಸಂಸ್ಥೆಗಳು, ಬ್ಯಾಂಕ್‌ಗಳು ಕೊಡುವ ಶೂನ್ಯ ಬಡ್ಡಿ. ಬೆಳೆ ಸಾಲ ತೆಗೆದುಕೊಳ್ಳಲು ಖಾತೆ ಬದಲಾವಣೆಯಾಗದಿರುವುದು ಅಡ್ಡಿಯಾಗುತ್ತದೆ. ಸಹಕಾರಿ ಸಂಸ್ಥೆಗಳನ್ನು ಮಾರ್ಚ್, ಏಪ್ರೀಲ್ ಅವಧಿಯಲ್ಲಿ ಲೋನ್ ರೆಕಾರ್ಡ್ ಆಗಲಿಲ್ಲ ಎಂದಾದರೆ, ಹೊಸದಾಗಿ ಮಾಡಿಸುವುದು ಬರೀ ಕಷ್ಟವಲ್ಲ, ಸಾಧ್ಯವೇ ಇಲ್ಲ. ಇದರಿಂದಾಗಿ ರೈತ ಖಾಸಗಿಯವರ ಬಳಿ ಸಾಲ ಮಾಡಿ ಸಾಲಗಾರನಾಗುತ್ತಿದ್ದಾನೆ. ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಸರ್ಕಾರ ಕ್ರೂರವಾಗಿ ನಡೆದುಕೊಳ್ಳುತ್ತಿದೆ. ಜಮೀನಿನ ಖಾತೆ ಬದಲಾವಣೆಗೆ ಸಂಬಂಧಿಸಿದಂತೆ ರೈತ ಪೀಡನೆಯು ಇನ್ನೊಂದು ಸಂಗತಿ. ರೈತನೊಬ್ಬನ ಹೆಸರಿಗೆ ಜಮೀನು ಖಾತೆಯಾಗಬೇಕಾದರೆ ಆ ಜಮೀನಿನ ಪೋಡಿಯಾಗುವುದು ಕಡ್ಡಾಯ. ಅದಾಗದೆ ಖಾತೆ

ವರ್ಗಾವಣೆಯಾಗದು. ಪೋಡಿ ಕೇಸು ಎಂದರೆ ಕಂದಾಯ ನೌಕರರಿಗೆ ಸಂತಸ. ಕೈ ತುಂಬಾ ಕಾಸು. ಮೇಲಾಗಿ ರೈತರನ್ನು ಮೈತುಂಬಾ ಗೋಳು ಹೊಯ್ದುಕೊಳ್ಳಬಹುದು. ವರ್ಷ ತಿಂಗಳು ಕಾಯಿಸಿ ದುಡ್ಡು ಎಳೆದು ಚಿತ್ರಹಿಂಸೆ ಕೊಡುತ್ತಿದ್ದಾರೆ. ಖಾತೆಯಾಗಿ ಬರುವ ವೇಳೆಗೆ ರೈತ ಸೋತು ಹೈರಾಣಾಗಿ ಹೋಗಿದ್ದಾನೆ. ಹೀಗೆ ಕಂದಾಯ ಇಲಾಖೆಯಲ್ಲಿ ರೈತ ಸ್ನೇಹಿ, ಜನ ಸ್ನೇಹಿ ಎಂಬ ಪದಗಳಿಗೆ ಅಲ್ಲಿ ಜಾಗವೇ ಇಲ್ಲ. ಅಲ್ಲಿ ಶಬ್ದಗಳೇನಿದ್ದರೂ 'ಕಾಸು ಬಿಚ್ಚು ಸಮಯ ಕೊಲ್ಲು' ಎಂಬಂತಿದೆ.[೧೦] ಈ ರೀತಿಯ ದೋರಣೆಯನ್ನು ಹೊಂದಿರುವ ಕಂದಾಯ ಇಲಾಖೆಯ ಭ್ರಷ್ಟ ಅಧಿಕಾರಿಗಳನ್ನು ವಿರೋಧಿಸಿ ರೈತರು ಪ್ರತಿಭಟನೆ ಮಾಡುತ್ತಿದ್ದಾರೆ.

**ಭೂಸ್ವಾಧೀನ ವಿರೋಧಿಸಿ:** ಪ್ರಸ್ತುತ ಸಂದರ್ಭದಲ್ಲಿ ಅಭಿವೃದ್ಧಿ ಮತ್ತು ಉದ್ದಿಮೆಗಳ ಹೆಸರಿನಲ್ಲಿ ಇತ್ತೀಚಿಗೆ ಫಲವತ್ತಾದ ಕೃಷಿ ಭೂಮಿಯು ನಾಶವಾಗುತ್ತಿವೆ. ಪ್ರಪಂಚದಲ್ಲಿರುವ ಯಾವುದೇ ವಸ್ತುಗಳನ್ನು ಕೃತಕವಾಗಿ ಉತ್ಪಾದಿಸಬಹುದು. ಆದರೆ ನೈಸರ್ಗಿಕವಾಗಿ ಬಂದಿರುವ ಭೂಮಿಯನ್ನು ಉತ್ಪಾದಿಸಲು ಸಾಧ್ಯವಿಲ್ಲ. ಹಿಗ್ಗಿಸಲು ಸಾಧ್ಯವಿಲ್ಲ. ಸಾರ್ವಜನಿಕ ಕಟ್ಟಡಗಳು ವಿವಿಧ ಯೋಜನೆಗಳಿಂದಾಗಿ ಬೆಳೆ ಬೆಳೆಯುವ ಕೃಷಿಯೋಗ್ಯ ಭೂಮಿಯು ಇಲ್ಲದಂತಾಗುತ್ತದೆ. ಇದರಿಂದ ಕೃಷಿಯ ಉತ್ಪಾದನೆ ಕುಂಠಿತವಾಗುತ್ತದೆ. ಸರ್ಕಾರ ಸಾರ್ವಜನಿಕ ಹಿತಕ್ಕಾಗಿ ಜಾರಿಗೆ ತಂದಿರುವ ಭೂಸ್ವಾಧೀನ ಕಾನೂನನ್ನು ಖಾಸಗಿ ವಲಯಕ್ಕೆ ದುರುಪಯೋಗ ಪಡಿಸಿಕೊಳುತ್ತಿದೆ. ಖಾಸಗಿಯವರಿಗೆ ಸರ್ಕಾರ ಭೂಸ್ವಾಧೀನ ಮಾಡಿಕೊಡುವುದು ಸರಿಯಾದ ಕ್ರಮವಲ್ಲ. ಅರಣ್ಯ ಒತ್ತುವರಿಯ ನೆಪದಲ್ಲಿ ಬಗರ್‌ಹುಕುಂ ಬಡ ರೈತರ ಜಮೀನನ್ನು ಸ್ವಾಧೀನಪಡಿಸಿ ಕೊಳ್ಳಲಾಗುತ್ತಿದೆ. ಸರ್ಕಾರ ರಾಷ್ಟ್ರೀಯ ಉದ್ಯಾನವನ, ಬೃಹತ್ ಅಣೆಕಟ್ಟು ಯೋಜನೆ, ವಿದ್ಯುತ್ ಸ್ಥಾವರ, ರಾಷ್ಟ್ರೀಯ ಹೆದ್ದಾರಿ ಹಾಗೂ ಯಾವುದೇ ಬೃಹತ್ ಯೋಜನೆಗಳಿಗೂ ನಮ್ಮ ರೈತರು ಹಾಗೂ ಅವರ ಭೂಮಿಯೇ ಬಲಿಯಾಗುತ್ತಿದೆ.[೧೧]

ಉದ್ದಿಮೆದಾರನು ತನ್ನ ಉದ್ದಿಮೆಯನ್ನು ಸ್ಥಾಪಿಸಲು ಬಯಸುತ್ತಾನೆ. ಅವನಿಗೆ ಬೇಕಾದ ಭೂಮಿಯನ್ನು ಪಡೆಯಲು ಆ ಉದ್ದಿಮೆದಾರನೆ ರೈತರ ಬಳಿ ಬರಬೇಕು. ಭೂಮಿ ಪಡೆಯಲು ಎಕರೆಗೆ ಎಷ್ಟು ಹಣ ನೀಡಬೇಕೆಂದು ರೈತರನ್ನೇ ಕೇಳಬೇಕು. ಭೂಮಿಯನ್ನು ನೀಡುವ ರೈತರನ್ನು ಉದ್ದಿಮೆಯ ಶೇರುದಾರನನ್ನಾಗಿ ಮಾಡಿಕೊಳ್ಳಬೇಕು. ಪ್ರತೀ ಎಕರೆ ಜಮೀನು ಕೊಟ್ಟ ರೈತನ ಮನೆಯ ಇಬ್ಬರಿಗೆ ಶಿಕ್ಷಣದ ಮಿತಿ ಇಲ್ಲದೆ ಉದ್ಯೋಗ ನೀಡಲಿ. ಇದ್ಯಾವುದು ಇಲ್ಲದೆ ಭೂ ಸ್ವಾಧೀನಕ್ಕೆ ಮುಂದಾದರೆ ಸರ್ಕಾರದ ಸ್ವಾರ್ಥವಾದರು ಏನು?. ಸರ್ಕಾರ ಏಕೆ ಮುಂದಾಗಬೇಕು?. ಪ್ರಜೆಗಳಿಂದ ಪ್ರಜೆಗಳಿಗಾಗಿ ಪ್ರಜೆಗಳಿಗೋಸ್ಕರ ಆಡಳಿತ ನಡೆಸುವ ಸರ್ಕಾರ ರೈತರ ಪರವಾಗಿ ಇರಬೇಕಲ್ಲವೇ?. ಉದ್ದಿಮೆದಾರರಿಗೆ ಭೂಮಿ ನೀಡುವ ಬದಲಾಗಿ, ಅದೇ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಿಕೊಟ್ಟರೆ, ನೂರಾರು ಜನರಿಗೆ ಉದ್ಯೋಗ ದೊರೆಯುವುದು. ೧೯೭೪ರಲ್ಲಿ ಜಾರಿಗೆ ಬಂದ ಉಳುವವನೆ ಭೂಮಿಯ ಒಡೆಯನೆಂಬ ನೀತಿಯಿಂದಾಗಿ, ರೈತರಿಗೆ ಭೂಮಿಯ ಹಕ್ಕುಲಭ್ಯವಾಯಿತು. ರೈತರಲ್ಲದವರು ಕೃಷಿ ಭೂಮಿಯನ್ನು ಖರೀದಿಸುವಂತಿಲ್ಲ ಮುಂತಾದ

ಅಂಶಗಳು ಭೂ ಸುಧಾರಣಾ ಕಾಯ್ದೆಯ ಪ್ರಮುಖ ಲಕ್ಷಣಗಳಾಗಿವೆ. ಆದರೆ ಇತ್ತೀಚಿನ ಸರ್ಕಾರಗಳು ಭೂ ಸುಧಾರಣಾ ಕಾಯ್ದೆಗೆ ತಿದ್ದುಪಡಿ ತರುವ ಹುನ್ನಾರವನ್ನು ನಡೆಸುತ್ತಿವೆ. ಸರ್ಕಾರಗಳು ಕೃಷಿಯೇತರ ಉದ್ದೇಶಕ್ಕಾಗಿ ತಾನೇ ರೈತರಿಂದ ಭೂಮಿಯನ್ನು ಸ್ವಾಧೀನ ಪಡೆಸಿಕೊಂಡು ವಿವಿಧ ಉದ್ದಿಮೆದಾರರಿಗೆ ನೀಡುತ್ತಿವೆ. ಸರ್ಕಾರದ ಈ ನೀತಿ ರೈತ ವಿರೋಧಿಯಾಗಿದೆ. ಸರ್ಕಾರದ ಈ ನೀತಿಯಿಂದಾಗಿ, ಕೃಷಿಕರಲ್ಲದವರು ಭೂಮಿಯನ್ನು ಖರೀದಿಸುವ ಹಕ್ಕನ್ನು ಕಾಯ್ದೆಯ ಮೂಲಕ ಪಡೆಯುವಂತಹ ಸ್ಥಿತಿ ಬಂದೊದಗಿದೆ. ಇದರಿಂದ ರೈತ ಭೂಮಿಯನ್ನು ಕಳೆದುಕೊಂಡು ಆರ್ಥಿಕ ಸಂಕಷ್ಟಕ್ಕೆ ಈಡಾಗುತ್ತಿದ್ದಾನೆ. ಉದ್ದಿಮೆದಾರನಿಗೆ ಉದ್ದಿಮೆ ಪ್ರತಿಷ್ಠಾಪಿಸಲು ಹಾಸಿಗೆ ಹಾಸಿಕೊಟ್ಟಂತಾಗುತ್ತಿದೆ. ಕಾರಣ ಸರ್ಕಾರ ಎಚ್ಚರಿಕೆ ವಹಿಸಿ ಮುಂದಿನ ಹೆಜ್ಜೆಗಳನ್ನು ಇಡಬೇಕು. ಸರ್ಕಾರ ಈಗಾಗಲೇ ರೈತರಿಂದ ಸ್ವಾಧೀನಪಡಿಸಿಕೊಂಡಿರುವ ಭೂಮಿಯನ್ನು ರೈತರಿಗೆ ಮರು ನೀಡಬೇಕೆಂದು ಒತ್ತಾಯಿಸಿ ರೈತ ಪ್ರತಿಭಟನೆಗಳು ನಡೆಯುತ್ತಿವೆ.[೨೨]

**ಮಾರುಕಟ್ಟೆ ದಲ್ಲಾಳಿಗಳನ್ನು ವಿರೋಧಿಸಿ:** ರೈತರಿಗೆ ಕೃಷಿ ಮಾರುಕಟ್ಟೆ ಮತ್ತು ದಲ್ಲಾಳಿಗಳು ಸಮಸ್ಯೆಯಾಗಿ ಪರಿಣಮಿಸಿವೆ. ಮೊದಲು ಮಾರುಕಟ್ಟೆಗಳಲ್ಲಿ ವಸ್ತು ವಿನಿಮಯ ಪದ್ಧತಿಯ ಮೂಲಕ ರೈತರು ಸಮೃದ್ಧವಾದ ಜೀವನ ನಡೆಸುತ್ತಿದ್ದರು. ಇದರಿಂದ ಮಧ್ಯವರ್ತಿಗಳಾದ ದಲ್ಲಾಳರ ಅವಶ್ಯಕತೆ ಇರಲಿಲ್ಲ. ಆದರೆ ಇಂದು ವ್ಯಾಪಾರಕ್ಕಾಗಿಯೇ ಕೃಷಿ ಎಂಬುದು ಎಲ್ಲರ ಚಿಂತನೆಯಾಗಿದೆ. ಇದರಿಂದಾಗಿಯೇ ಎಲ್ಲಾ ಸಮಸ್ಯೆಗಳು ನಿರ್ಮಾಣವಾಗುತ್ತಿವೆ. ಕೃಷಿಯಲ್ಲಿ ಇಳುವರಿ ಹೆಚ್ಚಾದಂತೆ ವ್ಯಾಪಾರ ವಹಿವಾಟು ಹೆಚ್ಚಾಗುತ್ತದೆ. ಇದರಿಂದ ವಸ್ತುಗಳನ್ನು ಸಾಗಿಸಲು ವಾಹನಗಳ ವೆಚ್ಚ ದುಬಾರಿಯಾಗುತ್ತಿದೆ. ಮಧ್ಯವರ್ತಿಗಳು ಹೆಚ್ಚಾಗುತ್ತಿದ್ದಾರೆ. ಕೇವಲ ರೈತರು ಬೆಳೆದ ಬೆಳೆಗಳನ್ನು ಮಾರಾಟ ಮಾಡಲು ಅಷ್ಟೇ ಅಲ್ಲ. ಬಿತ್ತನೆಗೆ ಬೇಕಾದ ಬೀಜಗಳು, ರಸಗೊಬ್ಬರಗಳು, ಕೀಟನಾಶಕಗಳು, ಕೃಷಿ ಯಂತ್ರೋಪಕರಣಗಳು ಮುಂತಾದವುಗಳನ್ನು ಖರೀದಿಸಲು ಮುಂದಾದರೆ, ಅಲ್ಲಿಯು ಮಧ್ಯವರ್ತಿಗಳಿರುತ್ತಾರೆ. ಇವರು ರೈತರ ಹಾಗೆ ಕಷ್ಟ ಪಡದೆ, ಕುಳಿತಲ್ಲಿಯೇ ಅಧಿಕ ಲಾಭ ಪಡೆಯುತ್ತಾರೆ. ಅಂದರೆ ಕೃಷಿಯಲ್ಲಿ ಇವರು ಪಾಲುದಾರರಾಗುತ್ತಿದ್ದಾರೆ.

ರೈತರು ದಲ್ಲಾಳಿಗಳ ಹಿಡಿತಕ್ಕೆ ಸಿಗಲು ಕಾರಣ, ಅವರಿಂದ ಹೆಚ್ಚು ಸಾಲವನ್ನು ಪಡೆದಿರುತ್ತಾರೆ. ಹಾಗಾದರೆ ಬ್ಯಾಂಕ್‌ಗಳಿಂದ, ಸಹಕಾರಿ ಸಂಘ ಸಂಸ್ಥೆಗಳಿಂದ ರೈತನಿಗೆ ಸಾಲ ಸಿಗುವುದಿಲ್ಲವೇ? ಎಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಆದರೆ ಇವೆಲ್ಲವುಗಳು ಸಾಲವನ್ನು ನೀಡುವುದು ಕೇವಲ ಬೆಳೆ ಬೆಳೆಯಲು ಮಾತ್ರ, ಅಲ್ಲದೇ ಈ ಸಾಲವನ್ನು ತೀರಿಸಲು ಕೇವಲ ಒಂದು ವರ್ಷದ ಅವಧಿಯ ಗಡುವು ನೀಡಲಾಗಿರುತ್ತದೆ. ಅದಕ್ಕಿಂತ ಒಂದು ದಿನ ಹೆಚ್ಚಾದರು ಬ್ಯಾಂಕ್ ಮತ್ತು ಸಹಕಾರಿ ಸಂಘಗಳು ಬಡ್ಡಿ, ಚಕ್ರಬಡ್ಡಿಗಳನ್ನು ಹಾಕಿ, ನೋಟಿಸ್ ಕಳುಹಿಸಿ, ಆಸ್ತಿ ಹರಾಜು ಹಾಕಲು ಮುಂದಾಗುತ್ತಾರೆ. ಇನ್ನೊಂದೆಡೆ ಬೆಳೆ ಸಾಲಗಳನ್ನು ಬಿಟ್ಟು ಬೇರೆ

ಯಾವ ಸಾಲಗಳು ಸಿಗದೆ ಇದ್ದಾಗ, ರೈತರು ಈ ದಲ್ಲಾಳಿಗಳ ಮುಂದೆ ಕೈ ಚಾಚಿ ಸಾಲ ಪಡೆಯುತ್ತಾರೆ. ಈ ಸಾಲಕ್ಕೆ ೨೦% ರಿಂದ ೩೦% ರಷ್ಟು ಬಡ್ಡಿಯನ್ನು ಹಾಕುತ್ತಾರೆ. ರೈತರು ತಮ್ಮ ಬೆಳೆ ಬಂದ ತಕ್ಷಣ ತಮ್ಮ ಬೆಳೆಯನ್ನು ಸಾಲ ತಂದ ದಲ್ಲಾಳಿಗಳಿಗೆ ಹೋಗಿ ನೀಡಬೇಕು. ಆಗ ಮಾರುಕಟ್ಟೆಯಲ್ಲಿ ರೈತ ತಾನು ಕಷ್ಟಪಟ್ಟು ಬೆಳೆದ ಬೆಳೆಯನ್ನು, ದಲ್ಲಾಳಿಗಳು ನಿಗದಿ ಪಡಿಸಿದ ಬೆಲೆಗೆ ಮಾರಾಟ ಮಾಡಬೇಕು. ರೈತ ತಾನು ಬೆಳೆದ ಬೆಳೆಗೆ, ಬೆಲೆ ನಿಗದಿ ಮಾಡುವ ಹಕ್ಕನ್ನು ಕಳೆದುಕೊಳ್ಳುತ್ತಾನೆ. ನಂತರ ರೈತರ ಮೇಲೆ ದಲ್ಲಾಳಿಯ ಶುಲ್ಕ, ಹಮಾಲಿ ಶುಲ್ಕ, ಹೀಗೆ ಹತ್ತಾರು ಶುಲ್ಕಗಳನ್ನು ರೈತರ ಮೇಲೆ ಹಾಕುತ್ತಾರೆ. ನಂತರ ತಮ್ಮ ಹತ್ತಿರ ಪಡೆದ ಸಾಲ ಮತ್ತು ಬಡ್ಡಿಯನ್ನು ಮುರಿದು ಉಳಿದ ಅಷ್ಟೋ ಇಷ್ಟೋ ಹಣವನ್ನು ರೈತನಿಗೆ ನೀಡುತ್ತಾನೆ. ಇದರಿಂದ ರೈತ ಸಾಲದಲ್ಲಿ ಹುಟ್ಟಿ ಸಾಲದಲ್ಲಿಯೇ ಸಾಯುತ್ತಿದ್ದಾನೆ. ಈ ದಲ್ಲಾಳಿಯು ರೈತರ ಧಾನ್ಯಗಳನ್ನು ಖರೀದಿಸಿ ಅವುಗಳನ್ನು ಗೋಡನ್‌ಗಳಲ್ಲಿ ಶೇಖರಿಸಿಟ್ಟು ಹೆಚ್ಚು ಬೆಲೆ ಬಂದಾಗ ಮಾರಾಟ ಮಾಡಿ ಅಧಿಕ ಲಾಭ ಗಳಿಸುತ್ತಿದ್ದಾರೆ.[೧೩] ಇದರಿಂದ ರೈತ ಆರ್ಥಿಕವಾಗಿ ದುರ್ಬಲವಾಗುತ್ತಿದ್ದು, ಇದರಿಂದ ಹೊರಬರಲು ಪ್ರತಿಭಟನೆಯಲ್ಲಿ ನಿರತನಾಗಿದ್ದಾನೆ.

**ಕಳಪೆ ಬಿತ್ತನೆ ಬೀಜ ವಿರೋಧಿಸಿ:** ನಮ್ಮ ರೈತರು ಸುಧಾರಿತ ಬೀಜಗಳನ್ನು ಉಪಯೋಗಿಸದೆ, ತಾವೇ ಬೆಳೆದ ತಮ್ಮ ಹಳ್ಳಿಗಳಲ್ಲಿ ದೊರೆಯುವ ಬೀಜಗಳನ್ನು ಉಪಯೋಗಿಸುತ್ತಾರೆ. ರೈತರು ಬೀಜಕ್ಕಾಗಿ ತಮ್ಮ ಉತ್ಪಾದನೆಯ ಕೆಲವೊಂದು ಭಾಗವನ್ನು ತೆಗೆದಿಡುತಿದ್ದರು. ಕೆಲ ದೊಡ್ಡ ರೈತರಿಂದ ಬೀಜಗಳನ್ನು ಪಡೆಯುತ್ತಿದ್ದರು. ಇಂದು ಈ ಪರಿಪಾಠವೇ ಸಂಪೂರ್ಣ ಬದಲಾಗಿದೆ. ರೈತರು ಹೆಚ್ಚು ಹೆಚ್ಚು ಇಳುವರಿ ಪಡೆಯಬೇಕೆಂದು ಕಂಪನಿಗಳ ಸುಧಾರಿತ ಬಿತ್ತನೆ ಬೀಜಗಳನ್ನು ಕೊಳ್ಳಲು ಮುಂದಾಗುತ್ತಿದ್ದಾರೆ. ನೂರಾರು ಖಾಸಗಿ ಕಂಪನಿಗಳು ಇದನ್ನು ತಮ್ಮ ಲಾಭಕ್ಕಾಗಿ ಉಪಯೋಗಿಸಿಕೊಂಡು ಹೆಚ್ಚು ಇಳುವರಿ ನೀಡುತ್ತವೆ ಎಂಬ ಪ್ರಚಾರದ ಮೂಲಕ ಕಳಪೆ ಬೀಜಗಳನ್ನು ಮಾರಾಟ ಮಾಡಲು ಮಾರುಕಟ್ಟೆಗೆ ಲಗ್ಗೆ ಇಟ್ಟಿದ್ದಾರೆ. ಸರ್ಕಾರಗಳು ಇಂತಹ ಕಳಪೆ ಮಟ್ಟದ ಕಂಪನಿಗಳ ಮೇಲೆ ಯಾವುದೇ ನಿಯಂತ್ರಣಗಳನ್ನು ಹೊಂದಿಲ್ಲ. ಕೃಷಿ ಇಲಾಖೆಯಲ್ಲಿ ರೈತರಿಗೆ ವಿಶೇಷ ರಿಯಾಯಿತಿ ದರದಲ್ಲಿ ನೀಡುವ ಬಿತ್ತನೆ ಬೀಜಗಳು ಕಳಪೆ ಮಟ್ಟದಿಂದ ಕೂಡಿರುತ್ತವೆ. ಇದರಲ್ಲಿ ರಾಜ್ಯ ಬೀಜ ನಿಗಮ ಮಂಡಳಿಯ ಅಧಿಕಾರಿಗಳು ಶಾಮೀಲಾಗಿರುತ್ತಾರೆ ಎಂಬುದು ರೈತ ನಿಲುವು. ಬಿತ್ತನೆ ಬೀಜಗಳ ಬಗ್ಗೆ ಯಾವುದೇ ಮಾಹಿತಿಗಳು ತಿಳಿಯದೇ ರೈತರು ಕಡಿಮೆ ಬೆಲೆಗೆ ಸಿಗುವ ಕಳಪೆ ಬಿತ್ತನೆ ಬೀಜ ತೆಗೆದುಕೊಳ್ಳಲು ಮುಂದಾಗಿ ನಷ್ಟವನ್ನು ಅನುಭವಿಸುತ್ತಿದ್ದಾರೆ.[೧೪] ಇದರಿಂದ ರೈತರನ್ನು ರಕ್ಷಿಸಲು ಹಲವಾರು ರೈತ ಸಂಘಟನೆಗಳು ಹಾಗೂ ರೈತರು ಪ್ರತಿಭಟನೆಯಲ್ಲಿ ನಿರತರಾಗಿದ್ದಾರೆ.

**ಬೆಳೆ ಪರಿಹಾರಕ್ಕಾಗಿ:** ಬಯಲುಸೀಮೆಯ ರೈತರ ಜೀವನ ಮಳೆಯ ಜೊತೆಗಿನ ಜೂಜಾಟದಂತಿದೆ. ಅದೃಷ್ಟವಿದ್ದರೆ ಉತ್ತಮ ಮಳೆಯಾಗಿ ರೈತ ಅಧಿಕ ಬೆಳೆಯನ್ನು ಬೆಳೆಯಬಹುದು. ಅತೀವೃಷ್ಠಿ ಹಾಗೂ ಅನಾವೃಷ್ಠಿ ಎರಡೂ ಸಂಭವಿಸಿದರೂ, ರೈತ ತಾನು

ಬೆಳೆದ ಬೆಳೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಾನೆ. ಇದರಿಂದ ರೈತ ವರ್ಷವಿಡೀ ಕಷ್ಟಕರವಾದ ಜೀವನ ನಡೆಸುತ್ತಾನೆ ಹಾಗಾಗಿ ರೈತರೆಲ್ಲರೂ ತಮ್ಮ ನಷ್ಟಕ್ಕೆ ಬೆಳೆ ಪರಿಹಾರ ನೀಡುವಂತೆ ಒತ್ತಾಯಿಸಿ ಪ್ರತಿಭಟನೆ ಮಾಡುತ್ತಾರೆ ಹಾಗೂ ಆಯಾ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿ ಸರ್ಕಾರದ ಗಮನವನ್ನು ಸೆಳೆಯುತ್ತಾರೆ. ಸರ್ಕಾರ ಬೆಳೆ ಪರಿಹಾರ ಘೋಷಿಸಿದರು ಅದು ರೈತರಿಗೆ ಸಕಾಲದಲ್ಲಿ ಸಿಗದೇ ಇರುವುದು ಮತ್ತೊಂದು ಸಮಸ್ಯೆಯಾಗಿದೆ. ರೈತರು ಅಗತ್ಯವಿರುವ ಎಲ್ಲಾ ದಾಖಲೆಗಳು ಕೃಷಿ ಇಲಾಖೆಗೆ ನೀಡಬೇಕು. ಅದರಲ್ಲಿ ಒಂದು ತಪ್ಪು ಇದ್ದರೂ ಸಹ ಬೆಳೆ ಪರಿಹಾರ ರೈತರಿಗೆ ಸೇರುವುದಿಲ್ಲ. ರೈತರ ದಾಖಲೆಗಳು ಎಲ್ಲವೂ ಸರಿ ಇದ್ದಾಗ ಅಧಿಕಾರಿಗಳು ನಿರ್ಲಕ್ಷ ಧೋರಣೆಯನ್ನು ಅನುಸರಿಸುತ್ತಾರೆ. ಅಸಡ್ಡೆ ಉತ್ತರಗಳನ್ನು ನೀಡಿ, ಒಂದು ಇಲಾಖೆಯ ಅಧಿಕಾರಿಗಳು, ಇನ್ನೊಂದು ಅಧಿಕಾರಿಗಳ ಮೇಲೆ ತಪ್ಪುಗಳನ್ನು ಒತ್ತು ಹಾಕುತ್ತಾರೆ. ಕೆಲ ಸಮಯ ತಾಂತ್ರಿಕ ಕಾರಣಗಳಿಂದ ರೈತರಿಗೆ ಬೆಳೆ ಪರಿಹಾರ ದೊರೆಯುವುದಿಲ್ಲ. ಸರ್ಕಾರ ಬೆಳೆ ನಷ್ಟವನ್ನು ತಿಳಿಯಲು ನೇಮಕ ಮಾಡಿದ ಅಧಿಕಾರಿಗಳು ತಮಗೆ ತೋಚಿದ ಅಥವಾ ಇಷ್ಟ ಬಂದ ಹೊಲದಲ್ಲಿ ಬೆಳೆ ಸಮೀಕ್ಷೆ ಮಾಡಿ ವರದಿ ನೀಡುತ್ತಾನೆ. ಈ ವರದಿ ಕೇವಲ ಆ ಒಂದೇ ಹೊಲಕ್ಕೆ ಸಂಬಂಧಿಸಿರದೆ, ಇಡೀ ಗ್ರಾಮಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಇದು ನ್ಯಾಯವೆ?. ಇದನ್ನು ಪ್ರಶ್ನಿಸುವ ಅಧಿಕಾರ ರೈತರಿಗೆ ಇಲ್ಲವೆ?. ಏಕೆಂದರೆ ಬೆಳೆ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ಭೂಮಿಯಲ್ಲಿ ಇಳುವರಿ ಉತ್ತಮವಾಗಿರುತ್ತದೆ. ಬೇರೆ ರೈತರ ಹೊಲದಲ್ಲಿ ಸಂಪೂರ್ಣ ನಷ್ಟವಾಗಿರಬಹುದು. ಆ ಸಮಯದಲ್ಲಿ ಬೆಳೆ ಪರಿಹಾರವನ್ನು ನಿರ್ಧರಿಸಲು ಸಾಧ್ಯತೆ ಇದೆಯೆ?. ಈ ಬೆಳೆ ಪರಿಹಾರ ರೈತನ ಕೈಗೆ ಬಂದು ಸೇರಲು ಇಷ್ಟೆಲ್ಲಾ ಸಮಸ್ಯೆಗಳಿವೆ.[೧೫] ಹಾಗಾಗಿ ರೈತ ಈ ಸಮಸ್ಯೆಗಳಿಂದ ಹೊರ ಬರಲು ಪ್ರತಿಭಟನೆಯ ಹಾದಿಯನ್ನು ಹಿಡಿದಿದ್ದಾರೆ.

**ನೀರಿನ ಅಭಾವ ಹಾಗೂ ಅಂತರ್ಜಲದ ಕುಸಿತ:** ಚಿತ್ರದುರ್ಗ ಜಿಲ್ಲೆಯ ನನ್ನಿವಾಳ, ಪರಶುರಾಂಪುರ, ತಳಕು, ಗೌರಸಮುದ್ರ, ಬುಕ್ಕಾಂಬಧಿ, ಹಿರೇಹಳ್ಳಿ, ಬೇಡರೆಡ್ಡಿಹಳ್ಳಿ, ಬಿ.ಜಿ.ಕೆರೆ, ಹಾನಗಲ್, ಕೋನಸಾಗರ, ಕೊಂಡ್ಲಹಳ್ಳಿ, ರಾಂಪುರ, ದೇವಸಮುದ್ರ, ಮೊದಲಾದವು. ಚಳ್ಳಕೆರೆ ತಾಲೂಕಿನ ಮಲ್ಲೂರುಹಳ್ಳಿ, ದಾಸರಮತ್ತೇನಹಳ್ಳಿ, ಓಬಯ್ಯನಹಟ್ಟಿ, ಕೊಲಮ್ಮನಹಳ್ಳಿ, ಜಗಳೂರು ತಾಲೂಕಿನ ಮಲ್ಲಾಪುರ, ಕಮಂಡಲಗೊಂದಿ, ಮುಸ್ಟೂರು, ತುರುವನೂರು, ಬೆಳಗಟ್ಟ ಮುಂತಾದುವು. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ನಿಂಬಳಗೆರೆ, ತೂಲಹಳ್ಳಿ, ಉಜ್ಜನಿ, ಕಾನಹೊಸಹಳ್ಳಿ, ಪೂಜಾರಹಳ್ಳಿ, ಹೊಡೇಂ, ಕುಮತಿ, ಸಂಕ್ಲಾಪುರ, ಗುಡೇಕೋಟೆ ಮೊದಲಾದ ಹಳ್ಳಿಗಳಲ್ಲಿ ನೀರಿನ ಅಭಾವ ಹಾಗೂ ಅಂತರ್ಜಲದ ಕುಸಿತದಿಂದ ರೈತರು ಕಂಗಾಲಾಗಿದ್ದಾರೆ. ಹಾಗಾಗಿ ನದಿಗಳ ಜೋಡಣಾ ಕಾರ್ಯವನ್ನು ಪ್ರಾರಂಭಿಸುವ ಮೂಲಕ ಅಂತರ್ಜಲವನ್ನು ಹಿಚ್ಚಿಸಲು ಸರ್ಕಾರ ಮುಂದಾಗಬೇಕು. ಬಯಲುಸೀಮೆಗೆ ಶಾಶ್ವತ ನೀರಾವರಿ ಸೌಲಭ್ಯವನ್ನು ಒದಗಿಸಬೇಕೆಂದು ಪ್ರತಿಭಟನೆ ಮಾಡುವ ಕಿಚ್ಚನ್ನು ರೈತರು ವ್ಯಕ್ತಪಡಿಸಿದ್ದಾರೆ.

**ಕೊನೆ ಟಿಪ್ಪಣಿಗಳು**


೦೧. ಸಂದರ್ಶನ ಮಾಹಿತಿ, ಶ್ರೀ ಮಹೇಶ್ವರ ಸ್ವಾಮಿ, ಕ.ರಾ.ರೈ,ಮ,ಸ್ವಸ, ರಾಜ್ಯಾಧ್ಯಕ್ಷರು, ಹರಪನಹಳ್ಳಿ ತಾಲೂಕು, ದಿ.೦೮.೦೪.೨೦೧೮

೦೨. ಸಂದರ್ಶನ ಮಾಹಿತಿ, ಚಂದ್ರಪ್ಪ, ರೈತರು, ಕೆಂಚಾಪುರ, ಹರಪನಹಳ್ಳಿ ತಾಲೂಕು, ದಿ.೦೩.೦೫.೨೦೧೭

೦೩. ಸಂದರ್ಶನ ಮಾಹಿತಿ, ನಾಗರಾಜು, ರೈತರು, ಕಾಡಜ್ಜಿ, ದಾವಣಗೆರೆ ತಾಲೂಕು, ದಿ.೦೫.೦೬.೨೦೧೭

೦೪. ಸಂದರ್ಶನ ಮಾಹಿತಿ, ನಾಗೇಂದ್ರಪ್ಪ, ರೈತರು ಆಲೂರು, ದಾವಣಗೆರೆ ತಾಲೂಕು, ದಿ.೦೧.೦೬.೨೦೧೭

೦೫. ಸಂದರ್ಶನ ಮಾಹಿತಿ, ಹೊನ್ನೂರು ಮುನಿಯಪ್ಪ, ಜಿಲ್ಲಾಧ್ಯಕ್ಷರು ಕ.ರಾ.ರೈ.ಸ. ದಾವಣಗೆರೆ ಜಿಲ್ಲೆ, ದಿ.೦೩.೦೬.೨೦೧೭

೦೬. ವೀರಭದ್ರಪ್ಪ ಬಿಸ್ಲಳ್ಳಿ, ಪ್ರೊಫೆಸರ್ ಎಂ,ಡಿ.ಎನ್,೨೦೦೮, ಪುಟ ೨೪೩

೦೭. ವೀರಭದ್ರಪ್ಪ ಬಿಸ್ಲಳ್ಳಿ, ಪೂರ್ವೋಕ್ತ, ಪುಟ ೨೪೪

೦೮. ಸಂದರ್ಶನ, ಎಂ.ಎಸ್.ಕೆ.ಶಾಸ್ತ್ರಿ, ಕ.ರಾ.ರೈ.ಸ, ರಾಜ್ಯಾಧ್ಯಕ್ಷರು, ದಾವಣಗೆರೆ, ದಿ.೧೦.೦೫.೨೦೧೮

೦೯. ಸಂದರ್ಶನ ಮಾಹಿತಿ, ಅವರಗೆರೆ ರುದ್ರಮುನಿ, ಜಿಲ್ಲಾ ಗೌರವಾಧ್ಯಕ್ಷ, ಕ.ರಾ.ರೈ.ಸ, ದಾವಣಗೆರೆ, ದಿ.೧೯.೦೭.೨೦೧೮

೧೦. ಸಂದರ್ಶನ ಮಾಹಿತಿ, ಚಿನ್ನಸಮುದ್ರ ಶೇಖರನಾಯ್ಕ್, ಜಿಲ್ಲಾ ಕಾರ್ಯದರ್ಶಿ, ಕ.ರಾ.ರೈ.ಸ, ದಾವಣಗೆರೆ, ದಿ.೦೨.೦೧.೨೦೧೭

೧೧. ಸಂದರ್ಶನ ಮಾಹಿತಿ, ಬಲ್ಲೂರು ರವಿಕುಮಾರ್, ರಾಜ್ಯ ಕಾರ್ಯದರ್ಶಿ, ಕ.ರಾ.ರೈ.ಸ. ದಿ.೧೨.೦೧.೨೦೧೭

೧೨. ಸಂದರ್ಶನ ಮಾಹಿತಿ, ಅರುಣ್ ಕುಮಾರ್ ಕುರುಡಿ, ಜಿಲ್ಲಾಧ್ಯಕ್ಷರು, ಕ.ರಾ.ರೈ.ಸ, ದಾವಣಗೆರೆ. ದಿ.೧೫.೧೧.೨೦೧೮

೧೩. ಚಂದ್ರಶೇಖರ್.ಎ.ಪಿ, ಅನ್ನದಾತನ ಆತ್ಮಹತ್ಯೆ,೨೦೧೪, ಪುಟ ೩೦

೧೪. ಕೊಡ್ಲಿ ಎಂ.ಎ, ನಮ್ಮ ರೈತರು ಹಿಂದುಳಿದಿದ್ದಾರೆ?,೧೯೭೫, ಪುಟ ೧೫

೧೫. ಸಂದರ್ಶನ ಮಾಹಿತಿ, ಕೆ.ಪಿ.ಭೂತಯ್ಯ, ಹಿರಿಯ ಗೌರವ ಉಪಾಧ್ಯಕ್ಷರು, ಕ.ರಾ.ರೈ.ಸ, ಚಿತ್ರದುರ್ಗ, ದಿ.೨೮.೦೬.೨೦೧೮

ಅಧ್ಯಾಯ – ೬

# ಬಯಲುಸೀಮೆಯ ರೈತ ಪ್ರತಿಭಟನೆಗಳ ಸ್ವರೂಪ

## ಅಧ್ಯಾಯ – ೬

# ಬಯಲುಸೀಮೆಯ ರೈತ ಪ್ರತಿಭಟನೆಗಳ ಸ್ವರೂಪ

ಬಯಲುಸೀಮೆಯ ಪ್ರದೇಶಗಳಲ್ಲಿ, ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳು ಪ್ರಮುಖವಾಗಿವೆ. ಈ ಮೂರು ಜಿಲ್ಲೆಗಳಲ್ಲಿ ಜನರ ಪ್ರಮುಖ ಉದ್ಯೋಗ ಕೃಷಿಯಾಗಿದೆ. ಇಲ್ಲಿ ಹೆಚ್ಚಾಗಿ ಶೇಂಗಾ, ಈರುಳ್ಳಿ, ಮೆಕ್ಕೆಜೋಳ, ರಾಗಿ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಈ ಜಿಲ್ಲೆಗಳಲ್ಲಿ ತುಂಗಾಭದ್ರಾ, ವೇದಾವತಿ ನದಿಗಳಿದ್ದು, ಕೇವಲ ಕೆಲವೇ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ದೊರಕಿದೆ. ಹಾಗಾಗಿ ಈ ಜಿಲ್ಲೆಗಳೆಲ್ಲವೂ ಒಣ ಬೇಸಾಯವನ್ನೇ ಅವಲಂಬಿಸಿದ್ದು, ಮಳೆಯನ್ನು ಆಧರಿಸಿವೆ.

ಈ ಭಾಗದಲ್ಲಿ ಮಳೆಯು ರೈತನ ಜೀವನದಲ್ಲಿ ಜೂಜಾಟವಾಡುತ್ತಿದೆ. ಇದರಿಂದ ರೈತ ನಿರಂತರವಾಗಿ ನಷ್ಟವನ್ನು ಅನುಭವಿಸುತ್ತಿದ್ದು, ಸಮಸ್ಯೆಗಳಿಗೆ ಸಿಲುಕಿದ್ದಾನೆ. ಒಂದು ಕಡೆ ರೈತ ನೈಸರ್ಗಿಕವಾಗಿ ಸಮಸ್ಯೆಗಳಿಗೆ ಒಳಗಾದರೆ, ಇನ್ನೊಂದು ಕಡೆ ಸರ್ಕಾರದ ನೀತಿಗಳಿಂದ ಹಲವಾರು ಸಮಸ್ಯೆಗಳಿಗೆ ಒಳಗಾಗಿದ್ದಾನೆ. ಇದರಿಂದ ಹೊರ ಬರಲು ರೈತ ಪ್ರತಿಭಟನೆಗಳಲ್ಲಿ ತೊಡಗಿದ್ದಾನೆ.

ಪ್ರೋ.ಎಂ.ಡಿ.ಎನ್ ರವರು ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಾದ್ಯಂತ ಸಂಚರಿಸುವ ಮೂಲಕ, ಸಮಸ್ಯೆಗಳ ವಿರುದ್ಧ ರೈತರನ್ನು ಸಂಘಟಿಸುವ ಪ್ರಯತ್ನ ಮಾಡಿದರು. ಅದರ ಫಲವಾಗಿಯೇ, ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ಜಿಲ್ಲಾ ಘಟಕಗಳು ೧೯೮೦ರ ನಂತರ ಪ್ರತಿಯೊಂದು ಜಿಲ್ಲೆಗಳಲ್ಲಿ ಸ್ಥಾಪನೆಯಾಗಿ, ನೂರಾರು ರೈತ ಪ್ರತಿಭಟನೆಗಳು ಆರಂಭವಾದವು. ಇವುಗಳಲ್ಲಿ ಕೆಲವೊಂದು ಸಂದರ್ಭಕ್ಕೆ ಸರಿಯಾಗಿ ಹುಟ್ಟಿಕೊಂಡರೆ, ಕೆಲವೊಂದು ತಾತ್ವಿಕವಾಗಿಯೇ ಹುಟ್ಟಿಕೊಂಡಂತವುಗಳಾಗಿವೆ.

### ೬.೧ ಚಿತ್ರದುರ್ಗ ಜಿಲ್ಲೆಯ ರೈತ ಪ್ರತಿಭಟನೆಗಳು

**ಹತ್ತಿ ರಫ್ತು ನೀತಿ: ರೈತ ಸಂಘದ ಪ್ರತಿಭಟನೆ:– ೦೪/೦೧/೧೯೮೫**

ಚಿತ್ರದುರ್ಗದಲ್ಲಿ ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಹತ್ತಿ ರಫ್ತು ನೀತಿ ಜಾರಿಗೆ ತರಬೇಕೆಂದು ಹಾಗು ಹತ್ತಿಗೆ ಬೆಂಬಲ ಬೆಲೆಯಾಗಿ ಕ್ವಿಂಟಾಲ್‌ಗೆ ೮೫೦ ರೂಗಳಾದರೂ ಘೋಷಿಸಬೇಕೆಂದು ಒತ್ತಾಯಿಸಿ ಜನವರಿ ೪ ೧೯೮೫ ರಂದು ಪ್ರತಿಭಟನೆ ನಡೆಸಿದರು.

ಚಿತ್ರದುರ್ಗ ಜಿಲ್ಲೆಯ ರೈತರು ಹತ್ತಿಯನ್ನು ಬೆಳೆದು ಕಂಗಾಲಾಗಿದ್ದಾರೆ. ಮಾರುಕಟ್ಟೆಯಲ್ಲಿ ಹತ್ತಿಯನ್ನು ೫೦೦ ರಿಂದ ೬೦೦ ರೂಗಳಿಗೆ ದಲ್ಲಾಳಿಗಳು ಕೊಳ್ಳಲು ಮುಂದಾಗಿದ್ದಾರೆ. ಇದರಿಂದ ರೈತರಿಗೆ ಅಧಿಕವಾಗಿ ನಷ್ಟವಾಗುತ್ತಿದೆ. ಈ ಬೆಳೆಗೆ ಹಾಕಿದ ರಸಗೊಬ್ಬರ, ಕೀಟನಾಶಕ, ಔಷಧಿ, ಬೆಳೆಯ ಇಳುವರಿ, ಖರ್ಚು–ವೆಚ್ಚ ಎಲ್ಲವನ್ನೂ ಲೆಕ್ಕ ಹಾಕಿದರೆ, ಹತ್ತಿಗೆ ಬೆಂಬಲ ಬೆಲೆಯಾಗಿ ಕ್ವಿಂಟಾಲ್‌ಗೆ ೮೫೦ರೂಗಳಾದರೂ ಘೋಷಿಸಬೇಕಬೇಕೆಂದು, ಆಗ್ರಹಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು.[೧] ಜಿಲ್ಲಾಧಿಕಾರಿಗಳು ಮನವಿ ಸ್ವೀಕರಿಸಿ ಸರ್ಕಾರದ ಗಮನಕ್ಕೆ ತಂದು ಸೂಕ್ತ ಕ್ರಮ ಕೈಗೊಳ್ಳುವದಕ್ಕಾಗಿ ಭರವಸೆ ನೀಡಿದರು.

ಭಾರೀ ಬಹುಮತದಿಂದ ಜಯಗಳಿಸಿರುವ ಕೇಂದ್ರದ ಕಾಂಗ್ರೇಸ್ ಸರ್ಕಾರ, ಪರದೇಶಗಳಿಗೆ ಹತ್ತಿ ರಫ್ತು ಮಾಡಲು ಈಗಲಾದರು ಅನುಮತಿ ನೀಡಲಿ. ರೈತರಿಗೆ ಒಳ್ಳೆಯ ದರ ದೊರಕಿಸುವಂತೆ ಸಹಕಾರಿಯಾಗಲಿ ಎಂದು ಜಿಲ್ಲಾ ರೈತ ಸಂಘದ ಅಧ್ಯಕ್ಷ ಎಂ.ಎಸ್.ಕೆ.ಶಾಸ್ತ್ರಿಯವರು ಒತ್ತಾಯಿಸಿದರು. ಕೃಷಿ ಉತ್ಪನ್ನಗಳ ಅಧ್ಯಯನ ಸಮಿತಿಯ ಅಧ್ಯಕ್ಷರಾಗಿ ಕಾಂಗ್ರೇಸ್‌ನ ಕೆ.ಎಸ್.ನಾಗೇಗೌಡರವರು ಕಳೆದ ಶ್ರಾವಣ ಮಾಸದಲ್ಲಿ ಆಯ್ಕೆಯಾಗಿದ್ದು, ಕೃಷಿ ಬೆಳೆಗಳಿಗೆ ಬೆಂಬಲ ಬೆಲೆ ಕೊಡಿಸಲು ಕಾರ್ಯೋನ್ಮುಖರಾಗಲಿ ಎಂದು ಪ್ರತಿಭಟಿಸಿದರು.

**ರೈತರ ಸಾಲ ದೀರ್ಘಾವಧಿ ಸಾಲಗಳನ್ನಾಗಿ ಮಾಡಲು ಜಿಲ್ಲಾ ರೈತ ಸಂಘದ ಪ್ರತಿಭಟನೆ:– ೨೩/೦೨/೧೯೮೫**

ಚಿತ್ರದುರ್ಗದ ಜಿಲ್ಲಾ ರೈತ ಸಂಘದ ನೂರಾರು ಕಾರ್ಯಕರ್ತರು, ರೈತರ ಸಾಲವನ್ನು ದೀರ್ಘಾವಧಿಯ ಸಾಲಗಳಾಗಿ ವಿಸ್ತರಿಸುವಂತೆ ಒತ್ತಾಯಿಸಿ, ಫೆಬ್ರವರಿ ೨೩ ೧೯೮೫ ರಂದು ಜಿಲ್ಲಾಧಿಕಾರಿಯ ಕಛೇರಿ ಬಳಿ ಪ್ರತಿಭಟನೆ ನಡೆಸಿದರು.

೧೯೮೪ ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆಯು ಬಾರದೆ, ಬರಗಾಲ ಪೀಡಿತ ಪ್ರದೇಶವಾಗಿದೆ. ರೈತರ ಬೆಳೆಯು ಹಾನಿಯಾಗಿದ್ದು, ಜಿಲ್ಲೆಯ ರೈತರು ಕಂಗಾಲಾಗಿದ್ದಾರೆ. ಹಾಗಾಗಿ ರೈತರ ಸಾಲವನ್ನು ದೀರ್ಘಾವಧಿಯ ಸಾಲವನ್ನಾಗಿ ಪರಿವರ್ತಿಸಿ, ಬರಗಾಲ ಪೀಡಿತ ಪ್ರದೇಶವೆಂದು ಘೋಷಿಸಬೇಕೆಂದು ಎಂ.ಎಸ್.ಕೆ. ಶಾಸ್ತ್ರಿಯರ ಮುಖಂಡತ್ವದಲ್ಲಿ ನೂರಾರು ರೈತರು ಜಿಲ್ಲಾಧಿಕಾರಿಯ ಕಚೇರಿ ಬಳಿ ಪ್ರತಿಭಟನೆ ಮಾಡಿದರು.

ಪ್ರತಿಭಟನೆಯಲ್ಲಿ ಮಾತನಾಡಿದ ಚಿತ್ರದುರ್ಗ ಜಿಲ್ಲಾ ರೈತ ಸಂಘದ ಅಧ್ಯಕ್ಷ ಎಂ.ಎಸ್.ಕೆ.ಶಾಸ್ತ್ರಿಯವರು ರೈತರು ಸೊಸೈಟಿ ಹಾಗೂ ಬ್ಯಾಂಕುಗಳಲ್ಲಿ ಬೆಳೆಸಾಲ ಪಡೆದಿದ್ದಾರೆ. ಈ ಸಾಲವನ್ನು ಪ್ರಸ್ತುತ ೭ರ ಬಡ್ಡಿದರದಲ್ಲೇ ದೀರ್ಘಾವಧಿ ಸಾಲವನ್ನಾಗಿ ಪರಿವರ್ತಿಸಬೇಕೆಂದು ಆಗ್ರಹಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು. ಜಿಲ್ಲಾಧಿಕಾರಿಗಳು ಮನವಿ ಸ್ವೀಕರಿಸಿ ಸರ್ಕಾರದ ಗಮನಕ್ಕೆ ತಂದು ಸೂಕ್ತ ಕ್ರಮ ಕೈಗೊಳ್ಳುವುದಕ್ಕಾಗಿ ಭರವಸೆ ನೀಡಿದರು.

**ಕೊರೆ ಚೀಲಕ್ಕೆ ೧ ಕೆ.ಜಿ. ಮುರಿತ: ರೈತ ಸಂಘದ ಪ್ರತಿಭಟನೆ:– ೧೫/೦೩/೧೯೮೫**

ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು, ವ್ಯಾಪರಿಗಳು ಕೊರೆ ಚೀಲಕ್ಕೆ ೧ ಕೆ.ಜಿ. ಬಿಡಿಸಿಕೊಂಡು ರೈತರಿಗೆ ಮೋಸ ಮಾಡುತ್ತಿದ್ದಾರೆಂದು ವಿರೋಧಿಸಿ, ಮಾರ್ಚ್ ೧೫ ೧೯೮೫ ರಂದು ಜಿಲ್ಲಾಧಿಕಾರಿಯ ಕಛೇರಿ ಬಳಿ ಪ್ರತಿಭಟನೆ ನಡೆಸಿದರು.

ದಾವಣಗೆರೆ ತಾಲೂಕು ಹಾಗೂ ನಗರದಲ್ಲಿರುವ ವರ್ತಕರು ಮತ್ತು ಗೊಬ್ಬರ ವ್ಯಾಪಾರಿಗಳು ಕೊರೆ ಚೀಲಕ್ಕೆ ೧ ಕೆ.ಜಿ. ಬಿಡಿಸಿಕೊಳ್ಳುತ್ತಿದ್ದಾರೆ. ಇದರಿಂದ ಬೆಳೆ ಬೆಳೆದ ರೈತರಿಗೆ ಅಧಿಕವಾದ ನಷ್ಟ ಉಂಟಾಗುತ್ತಿದೆ. ಹಾಗೆಯೇ ಗೊಬ್ಬರ ವ್ಯಾಪಾರಿಗಳು ತಾವು ಲೈಸೆನ್ಸ್ ಪಡೆಯುವಾಗ, ಗೊಬ್ಬರ ಚೀಲಗಳನ್ನು ರೈತರಿಗೆ ನೀಡುವಾಗ ತೂಕ ಮಾಡಿ ಕೊಡಬೇಕೆಂದು ತಿಳಿಸಿರುತ್ತಾರೆ. ಯಾವ ವರ್ತಕರು ಸಹ ಈ ನಿಯಮವನ್ನು ಪಾಲಿಸುತ್ತಿಲ್ಲ. ತೂಕದಲ್ಲಿ ಕಡಿಮೆಯಾಗಿರುವ ಗೊಬ್ಬರದ ಚೀಲಗಳನ್ನು ರೈತರಿಗೆ ಮಾರಾಟ ಮಾಡುತ್ತಿದ್ದು, ಹಲವಾರು ದೂರುಗಳು ಬಂದಿವೆ. ಹಾಗಾಗಿ ಗೊಬ್ಬರದ ವ್ಯಾಪಾರಿಗಳು, ಈ ದಿನದಿಂದ ಗೊಬ್ಬರವನ್ನು ರೈತರಿಗೆ ಮಾರಾಟ ಮಾಡುವಾಗ ತೂಕ ಮಾಡಿ ನೀಡಬೇಕೆಂದು ಎಂ.ಎಸ್.ಕೆ.ಶಾಸ್ತ್ರಿಯವರ ನೇತೃತ್ವದಲ್ಲಿ ನೂರಾರು ರೈತರು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಪ್ರತಿಭಟನೆ ಮಾಡಿದರು.[೨] ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ರೈತ ಮುಖಂಡರಾದ ಎಂ.ಎಸ್.ಕೆ.ಶಾಸ್ತ್ರಿಯವರು, ಮುಂದೆ ಇಂತಹ ದೂರುಗಳು ಬಂದರೆ ಪೊಲೀಸರ ನೆರವಿನಿಂದ ಸೂಕ್ತ ಕ್ರಮ ತೆಗೆದುಕೊಳ್ಳಲು ರೈತ ಸಂಘ ಹಿಂಜರಿಯುವುದಿಲ್ಲವೆಂದು, ನಗರದಲ್ಲಿರುವ ವರ್ತಕರು ಮತ್ತು ಗೊಬ್ಬರ ವ್ಯಾಪಾರಿಗಳಿಗೆ ಎಚ್ಚರಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು. ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು ವ್ಯಾಪಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಳ್ಳುವುದಾಗಿ ಭರವಸೆ ನೀಡಿದರು.

**ಅಧಿಕಾರಿಗಳ ವರದಿ ವಿರೋಧಿಸಿ ರೈತ ಪ್ರತಿಭಟನೆ:– ೨೮/೦೩/೧೯೮೫**

ಚಿತ್ರದುರ್ಗದಲ್ಲಿ ಅಧಿಕಾರಿಗಳ ಸುಳ್ಳು ವರದಿಯನ್ನು ವಿರೋಧಿಸಿ ಎ.ಸಿ ಆಫೀಸ್ ಹಾಗು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ, ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಹಾಗು ರೈತರು ಮಾರ್ಚ್ ೨೮ ೧೯೮೫ ರಂದು ಪ್ರತಿಭಟನೆ ಮಾಡಿದರು.

೧೯೮೪–೮೫ರ ಸಾಲಿನಲ್ಲಿ ಮಳೆಯಾಗದೆ ಚಿತ್ರದುರ್ಗ ಜಿಲ್ಲೆಯಾದ್ಯಂತ ನೀರಿನ ಅಭಾವ ಉಂಟಾಗಿ ಬೆಳೆ ನಾಶವಾಗಿದೆ. ಹೀಗಿದ್ದರೂ ಸಹ ಅಧಿಕಾರಿಗಳು ಅರಾಣೆಗಿಂತ ಹೆಚ್ಚು

ಮಳೆಯಾಗಿದೆ ಎಂದು ತಪ್ಪು ವರದಿ ಸಲ್ಲಿಸಿದ್ದಾರೆ. ಇದನ್ನು ವಿರೋಧಿಸಿ ರೈತರು ಜಿಲ್ಲಾಧಿಕಾರಿಯ ಕಛೇರಿ ಮುಂದೆ ಪ್ರತಿಭಟನೆ ಮಾಡಿ ಜಿಲ್ಲಾಧಿಕಾರಿಗಳಿಗೂ ಹಾಗೂ ಎ.ಸಿ.ಆಫೀಸಿಗೆ ಮನವಿ ಸಲ್ಲಿಸಿದರು. ನಂತರ ನಿಜ ಸ್ಥಿತಿಯ ಅಣೆವಾರು ಮಳೆಯನ್ನು ತೋರಿಸಿ, ಸಹಕಾರ ಸಂಘ–ಸಂಸ್ಥೆಗಳ ಸಾಲಗಳನ್ನು ದೀರ್ಘಾವಧಿಯ ಸಾಲಗಳನ್ನಾಗಿ ಮಾಡಬೇಕೆಂದು ಹಾಗೂ ಸಾಲ ವಸೂಲಾತಿ ನಿಲ್ಲಿಸಬೇಕೆಂದು ಒತ್ತಾಯಿಸಿದರು. ಜಿಲ್ಲಾಧಿಕಾರಿಗಳು ಮತ್ತು ಎ.ಸಿ.ರವರು ಮನವಿ ಪರಿಶೀಲಿಸಿ ರೈತರ ಸಮಸ್ಯೆಗಳನ್ನು ಬಗೆಹರಿಸುವ ಆಶ್ವಾಸನೆ ನೀಡಿದರು.[೩]

ಪ್ರತಿಭಟನೆಯ ಮುಖಂಡತ್ವವನ್ನು ಎಂ.ಎಸ್.ಕೆ.ಶಾಸ್ತ್ರಿ, ಕಾಂತರಾಜು, ಗುರುವಾರೆಡ್ಡಿ, ಗುರುಶಾಂತಪ್ಪ ಮುಂತಾದವರು ವಹಿಸಿದ್ದರು.

**ಭದ್ರಾ ನಾಲೆಯಲ್ಲಿ ನೀರು ನಿಲುಗಡೆ: ಪರಿಹಾರಕ್ಕೆ ರೈತ ಒಕ್ಕೂಟದ ಪ್ರತಿಭಟನೆ:– ೧೫/೦೮/೧೯೯೧**

ಆಗಸ್ಟ್ ೧೫ ೧೯೯೧ ರಂದು ಬೀರಲಿಂಗೇಶ್ವರ ದೇವಸ್ಥಾನದಲ್ಲಿ ಭಾರತೀಯ ರೈತ ಒಕ್ಕೂಟದ ಭದ್ರಾ ಶಾಖೆ ಅಧ್ಯಕ್ಷರಾದ ಕೆ.ಜಿ.ಚಂದ್ರಪ್ಪನವರ ಅಧ್ಯಕ್ಷತೆಯಲ್ಲಿ ಭದ್ರಾ ಅಚ್ಚುಕಟ್ಟುದಾರರ ಸಭೆ ನಡೆಸಿ ಆಗಸ್ಟ್ ೨೦ ರಂದು ಪ್ರತಿಭಟನೆಮಾಡಿದರು.

ದಾವಣಗೆರೆ ರೈತರಿಗೆ ಭದ್ರಾ ಬಲದಂಡೆ ಕಾಲುವೆ ಒಡೆದು, ರೈತರಿಗೆ ನೀರಿಲ್ಲದೆ ಭತ್ತದ ಬೆಳೆ ಒಣಗಿ ನಷ್ಟವಾಗಿದೆ. ರಿಪೇರಿ ಕಾರ್ಯವು ಮಂದಗತಿಯಲ್ಲಿ ನಡೆಯುತ್ತಿದೆ. ಈ ನಷ್ಟಕ್ಕೆ ಸರ್ಕಾರದಿಂದ ಯಾವ ಪರಿಹಾರವು ಸಿಕ್ಕಿಲ್ಲ. ಬೇಸಿಗೆ ಬೆಳೆಗೆ ವಲಯವಾರು ಪದ್ದತಿ ನಿಲ್ಲಿಸಿ, ಕಾಲುವೆ ರಿಪೇರಿಯನ್ನು ಸರಿಯಾಗಿ ಬೇಗ ಮುಗಿಸುವಂತೆ ಒತ್ತಾಯಿಸಿ ಪ್ರತಿಭಟನೆಮಾಡಿ ಜಿಲ್ಲಾಧಿಕಾರಿಯವರಿಗೆ ಮನವಿ ಸಲ್ಲಿಸಿದರು.[೪] ಈ ಪ್ರತಿಭಟನೆಯಲ್ಲಿ ಕೆ.ಜಿ.ಚಂದ್ರಪ್ಪ, ಅವರಗೆರೆ ರುದ್ರಮುನಿ, ಶಾಂತರಾಜ್, ಮುದೇಗೌಡಪ್ಪ ಹಾಗೂ ಹಲವು ರೈತರು ಭಾಗವಹಿಸಿದ್ದರು.

**ಅಸಮರ್ಪಕ ವಿದ್ಯುತ್ ಪೂರೈಕೆ ವಿರೋಧಿಸಿ ಹಿರಿಯೂರು ತಾಲೂಕಿನ ರೈತರ ಪ್ರತಿಭಟನೆ:– ೦೯/೦೯/೧೯೯೧**

ಹಿರಿಯೂರು ತಾಲೂಕಿನ ನೂರಾರು ರೈತರು ಅಸಮರ್ಪಕ ವಿದ್ಯುತ್ ಪೂರೈಕೆ ವಿರೋಧಿಸಿ ಸೆಪ್ಟಂಬರ್ ೦೯ ೧೯೯೧ ರಂದು, ಚಿತ್ರದುರ್ಗ ನಗರದ ಕೆ.ಇ.ಬಿ. ಕಛೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆ ಮಾಡಿದರು.

ಹಿರಿಯೂರು ತಾಲೂಕಿನಲ್ಲಿ ಅಸಮರ್ಪಕ ವಿದ್ಯುತ್‌ನಿಂದಾಗಿ ರೈತರು ಬೆಳೆಗಳಿಗೆ ಪಂಪ್‌ಸೆಟ್ ಮೂಲಕ ನೀರಿನ ಸೌಲಭ್ಯ ಕಲ್ಪಿಸಲಾಗುತ್ತಿಲ್ಲ, ಇದರಿಂದಾಗಿ ಬೆಳೆಗಳು ಒಣಗಿ ಹೋಗುತ್ತಿವೆ. ಇದನ್ನು ವಿರೋಧಿಸಿ ಸಮರ್ಪಕ ವಿದ್ಯುತ್ ಪೂರೈಕೆ ಮಾಡಬೇಕೆಂದು ಒತ್ತಾಯಿಸಿ, ಹಿರಿಯೂರು ತಾಲೂಕಿನ ರೈತರು ಕೆ.ಇ.ಬಿ. ಕಛೇರಿಗೆ ಮುತ್ತಿಗೆ ಹಾಕಿ, ಬೀಗ ಜಡಿದು ಪ್ರತಿಭಟನೆ ನಡೆಸಿದರು. ಈ ವಿಷಯ ತಿಳಿದ ಕೆ.ಇ.ಬಿ. ಅಧ್ಯಕ್ಷ ನರಸಿಂಹ ಮೂರ್ತಿ, ಹುಬ್ಬಳ್ಳಿ ವಿಭಾಗದ ಸೂಪರಿಡೆಂಟ್ ಎಂಜಿನಿಯರ್ ಸಮಸ್ಯೆಯ ಪರಿಶೀಲನೆಗೆ ಹಿರಿಯೂರಿಗೆ ಬಂದರು. ಆಗ ರೈತರು

ಕೆ.ಇ.ಬಿ. ಕಛೇರಿಯನ್ನು ಮುತ್ತಿಗೆ ಹಾಕಲು ಮುಂದಾದಾಗ, ಕೂಡಲೇ ಇಂಜಿನಿಯರ್ ಹುಬ್ಬಳ್ಳಿಗೆ ದೂರವಾಣಿಯ ಮೂಲಕ ೮ ಮೆಗಾವ್ಯಾಟ್ ಟ್ರಾನ್ಸ್‌ಫರ್ಮ್‌ರ್‌ನ್ನು ತರಲು ತಿಳಿಸಿದರು. ಆದರೆ ರೈತರು ಟ್ರಾನ್ಸ್‌ಫಾರ್ಮ್‌ರ್ ಬರುವವರೆಗೆ ಪ್ರತಿಭಟನೆ ಮುಂದುವರೆಸುವುದಾಗಿ ಹೇಳಿದರು.[೫] ಸಾಯಂಕಾಲದ ವೇಳೆಗೆ ಟ್ರಾನ್ಸ್‌ಫಾರ್ಮ್‌ರ್ ಬಂದಿದ್ದರಿಂದ ರೈತರು ಪ್ರತಿಭಟನೆ ಹಿಂಪಡೆದರು.

**ವ್ಯವಸಾಯ ಉಪಕರಣಗಳನ್ನು ಜಪ್ತಿ ವಿರೋಧಿಸಿ ಹಿರಿಯೂರು ರೈತರ ಪ್ರತಭಟನೆ:– ೨೦/೧೨/೧೯೯೧**

ಹಿರಿಯೂರು ತಾಲೂಕಿನ ನೂರಾರು ರೈತರು ರೈತ ಸಂಘಟನೆಯ ನೇತೃತ್ವದಲ್ಲಿ ,ಪಿ.ಎಲ್.ಡಿ. ಬ್ಯಾಂಕ್, ಸಾಲ ವಸೂಲಾತಿಯ ನೆಪದಲ್ಲಿ ರೈತರ ವ್ಯವಸಾಯ ಉಪಕರಣಗಳ ಜಪ್ತಿಯನ್ನು ಮಾಡುತ್ತಿದೆಯೆಂದು ವಿರೋಧಿಸಿ, ಡಿಸೆಂಬರ್ ೨೦ ೧೯೯೧ ರಂದು ಪ್ರತಿಭಟನೆ ಮಾಡಿದರು.

ಹಿರಿಯೂರು ಪಿ.ಎಲ್.ಡಿ. ಬ್ಯಾಂಕ್ ಸಿಬ್ಬಂದಿ ವರ್ಗ, ಸಾಲ ವಸೂಲಾತಿ ನೆಪದಲ್ಲಿ ರೈತರ ಆಸ್ತಿಯನ್ನು ಹರಾಜು ಹಾಕುತ್ತಿವೆ. ದೌರ್ಜನ್ಯದಿಂದ ಟ್ರಾಕ್ಟರ್‌ಗಳನ್ನು ಜಪ್ತಿ ಮಾಡಿ ತಂದು ಬ್ಯಾಂಕಿನ ಆವರಣದಲ್ಲಿ ನಿಲ್ಲಿಸಿಕೊಂಡಿದೆ. ಯಾವುದೇ ಬ್ಯಾಂಕ್ ಅಥವಾ ಸಹಕಾರ ಸಂಘ ರೈತರಿಗೆ ಸಂಭಂದಿಸಿದ ವ್ಯವಸಾಯ ಉಪಕರಣಗಳನ್ನು ಜಪ್ತಿ ಇಲ್ಲವೇ, ಹರಾಜು ಮಾಡಬಾರದೆಂಬ ಉಚ್ಛ ನ್ಯಾಯಲಯದ ಸ್ಪಷ್ಟ ತಡೆಯಾಜ್ಞೆಯ ಆದೇಶವಿದೆ. ಅದರೂ ಅದನ್ನು ಉಲ್ಲಂಘಿಸುತ್ತಿರುವ ಸ್ಥಳೀಯ ಪಿ.ಎಲ್.ಡಿ. ಬ್ಯಾಂಕ್‌ನ ಕಾರ್ಯವೈಖರಿಯನ್ನು, ಜಿಲ್ಲಾ ರೈತ ಸಂಘದ ಮುಖಂಡರಾದ ಆಲೂರು ಹನುಮಂತಪ್ಪ, ತಾಲೂಕು ರೈತ ಸಂಘದ ಅಧ್ಯಕ್ಷರಾದ ಕೆ.ಸುಬ್ರಮಣಿಯಂರವರು ಖಂಡಿಸಿ, ಬ್ಯಾಂಕಿನ ಮುಂದೆ ನೂರಾರು ರೈತರನ್ನು ಒಳಗೊಂಡಂತೆ ಧರಣಿ ನಡೆಸಿ ಬ್ಯಾಂಕ್‌ನ ವ್ಯವಸ್ಥಾಪಕರಿಗೆ ಮನವಿ ನೀಡಿದರು.[೬]

ಈ ಕೂಡಲೇ ರೈತರ ಎಲ್ಲಾ ಟ್ರಾಕ್ಟರ್‌ಗಳನ್ನು ಭೇಷರತ್ತಾಗಿ ಬಿಡುಗಡೆ ಮಾಡಿ ಸಂಬಂಧಪಟ್ಟ ರೈತರಿಗೆ ಕೊಡಿಸಿದರು. ಹಾಗೂ ಬ್ಯಾಂಕ್ ಅಧಿಕಾರಿಗಳು ಇದೇ ವರ್ತನೆಯನ್ನು ಮುಂದುವರೆಸಿದರೆ ಉಗ್ರವಾದ ಪ್ರತಿಭಟನೆ ಮಾಡುವುದಾಗಿ ಎಚ್ಚರಿಸಿದರು.

**ಗೊಬ್ಬರದ ಬೆಲೆ ಏರಿಕೆ ವಿರೋಧಿಸಿ ದಾವಣಗೆರೆ ರೈತರ ಪ್ರತಿಭಟನೆ:– ೧೦/೦೯/೧೯೯೨**

ಕೇಂದ್ರ ಸರ್ಕಾರ ರೈತರಿಗೆ ಅಗತ್ಯವಾದ ರಸಗೊಬ್ಬರದ ಬೆಲೆಯನ್ನು ಲೋಕಸಭೆಯಲ್ಲಿ ಚರ್ಚೆಗೆ ಇಡದೆ ಏಕಾಏಕಿಯಾಗಿ ಏರಿಕೆ ಮಾಡಿದೆ. ಸುಮಾರು ೨೫೦೦ ಕೋಟಿ ರೂಗಳ ಸಬ್ಸಿಡಿ ತೆಗೆದು ಹಾಕಿ ರೈತರ ಕತ್ತಿಗೆ ಕುತ್ತು ತಂದಿದೆ. ಇದನ್ನು ಚರ್ಚಿಸಲು ಸೆಪ್ಟಂಬರ್ ೦೨ ರಂದು ಮಧ್ಯಾಹ್ನ ೧೨ ಗಂಟೆಗೆ ಶ್ರೀ ಬೀರಲಿಂಗೇಶ್ವರ ದೇವಸ್ಥಾನದಲ್ಲಿ ರೈತರ ಸಭೆಯನ್ನು ಕರೆದಿದ್ದರು. ಈ ಸಮಯಕ್ಕೆ ರಸಗೊಬ್ಬರ ವ್ಯಾಪಾರಿಗಳು ಸರ್ಕಾರದ ಈ ನೀತಿಯಿಂದ ಖುಷಿಗೊಂಡು ಗೊಬ್ಬರದ ಕೃತಕ ಅಭಾವ ಸೃಷ್ಟಿಸಿದರು. ಆ ಸಮಯದಲ್ಲಿ ರಾಜ್ಯ ರೈತ

ಸಂಘ ಪ್ರತಿಭಟನೆ ಆರಂಭಿಸಿ, ದಾವಣಗೆರೆ ರೈಲ್ವೆ ನಿಲ್ದಾಣದಲ್ಲಿ ಗೋಲ್‌ಗುಂಬಜ್ ಎಕ್ಸ್‌ಪ್ರೆಸ್ ಹಾಗೂ ಮಹಾಲಕ್ಷ್ಮೀ ಎಕ್ಸ್‌ಪ್ರೆಸ್ ರೈಲು ಗಾಡಿಗಳನ್ನು ತಡೆ ಹಿಡಿದರು. ಇದರಿಂದ ಮಣಿದ ವರ್ತಕರು ಹಾಗೂ ಕೃಷಿ ಸಹಾಯಕ ನಿರ್ದೇಶಕರು, ಅಸಿಸ್ಟೆಂಟ್ ಕಮಿಷನರ್, ಡೆಪ್ಯೂಟಿ ಸೂಪರಿಂಟೆಂಡೆಂಟ್, ೨ ಸಾವಿರ ಟನ್ ಕಾಂಪ್ಲೆಕ್ಸ್ ರಸಗೊಬ್ಬರವನ್ನು ಹಳೇ ದರದಲ್ಲಿ ಮಾರಾಟ ಮಾಡಲು ಒಪ್ಪಿಕೊಂಡು, ಗೊಬ್ಬರ ವಿತರಿಸುವಲ್ಲಿ ಮುಂದಾದರು. ಎಲ್ಲಾ ರೈತರಿಗೂ ಗೊಬ್ಬರ ಸಿಗದೇ ಅಭಾವ ಉಂಟಾಯಿತು.[೭] ಹೊಸ ಗೊಬ್ಬರ ತೆಗೆದುಕೊಳ್ಳಲು ಬೆಲೆ ಅಧಿಕವಾಗಿದ್ದು ರೈತರು ಆಕ್ರೋಶಕ್ಕೆ ಕಾರಣವಾಗಿ, ರೈಲ್ವೆ ತಡೆ ಚಳವಳಿ ನಡೆಸಲು ಎಂ.ಎಸ್.ಕೆ. ಶಾಸ್ತ್ರೀಯವರು ಮನವಿ ಮಾಡಿದರು.

ಎಂ.ಎಸ್.ಕೆ ಶಾಸ್ತ್ರೀಯವರ ಮನವಿಯಂತೆ ಸೆಪ್ಟಂಬರ್ ೧೦, ೧೯೯೨ ರಂದು ಗೊಬ್ಬರದ ಬೆಲೆ ಏರಿಕೆ ವಿರುದ್ದ ಮತ್ತೆ ರೈತರು ಪ್ರತಿಭಟನೆಗಿಳಿದು, ರೈಲ್ವೆ ನಿಲ್ದಾಣಕ್ಕೆ ಹೊಕ್ಕು ಗೋಲಗುಂಬಜ್ ರೈಲನ್ನು ಹಾಗೂ ಮಹಾಲಕ್ಷ್ಮಿ ಎಕ್ಸ್‌ಪ್ರೆಸ್ ರೈಲನ್ನು ತಡೆಹಿಡಿದರು. ಪೊಲೀಸರು ಮಧ್ಯೆ ಪ್ರವೇಶಿಸಿ ಧರಣಿ ನಿರತ ೭೨ ಜನ ರೈತರನ್ನು ಬಂಧಿಸಿ ಕರೆದೊಯ್ದು ಬಿಡುಗಡೆ ಮಾಡಿದರು. ಮಾರನೆಯ ದಿನ ರೈತರು ಟ್ರಾಕ್ಟರ್ ಹಾಗೂ ಎತ್ತಿನಗಾಡಿಗಳ ಮೂಲಕ ಆಗಮಿಸಿ, ಬೀರಲಿಂಗೇಶ್ವರ ದೇವಸ್ಥಾನದಿಂದ ಹೊರಟು ನಗರದ ಮುಖ್ಯ ಬೀದಿಗಳಲ್ಲಿ ಘೋಷಣೆ ಮಾಡುತ್ತಾ ಪಟಾಕಿ ಸಿಡಿಸಿ, ಡೊಳ್ಳು ಬಾರಿಸುತ್ತಾ ಬೃಹತ್ ಪ್ರತಿಭಟನಾ ಮೆರವಣಿಗೆ ನಡೆಸಿದರು. ಆ ಸಮಯದಲ್ಲಿ ರೈತರ ಕಡೆ ತಿರುಗಿ ನೋಡದ ಸಂಸತ್ತಿನ ಸದಸ್ಯರು ಹಾಗೂ ಶಾಸಕರ ವಿರುದ್ಧ ಛೀಮಾರಿ ಹಾಕಿದರು.[೮]

ಬೆಲೆ ಏರಿಕೆಯಿಂದ ತತ್ತರಿಸಿದ ರೈತರು ತಮ್ಮ ಪ್ರತಿಭಟನೆಯನ್ನು ತೀವ್ರಗೊಳಿಸಲು ನಿರ್ಧರಿಸಿದರು. ಸೆಪ್ಟಂಬರ್ ೧೧ ರಂದು ಪೂನಾ–ಬೆಂಗಳೂರು ಹೆದ್ದಾರಿ ಸೇರಿದಂತೆ ನಗರಕ್ಕೆ ಬರುವ ಜಗಳೂರು, ಚನ್ನಗಿರಿ, ಲೋಕಿಕೆರೆ, ಐಗೂರು, ಕೊಂಡಜ್ಜಿ ರಸ್ತೆಗಳನ್ನು ಬಂದ್ ಮಾಡಿ, ಸಾಯಂಕಾಲ ೫ ಗಂಟೆಯವರೆಗೆ ದಿಗ್ಬಂಧನ ಹಾಕಿ, ಇಡೀ ಸಂಚಾರ ವ್ಯವಸ್ಥೆಯನ್ನು ಅಸ್ತವ್ಯಸ್ತ ಮಾಡಿದರು. ಹುಣಸೆಕಟ್ಟೆ ಬಳಿ ಪೊಲೀಸ್ ಹಾಗೂ ರೈತರ ಮಧ್ಯೆ ಮಾತಿನ ಚಕಾಮಕಿ ನಡೆದಾಗ, ಯುವ ರೈತರು ಪೊಲೀಸರ ಜೀಪನ್ನು ಉರುಳಿಸಿ ಬೆಂಕಿ ಹಚ್ಚಿದರು.

ಸೆಪ್ಟಂಬರ್ ೧೨ ರಂದು ಮಧ್ಯಾಹ್ನ ರೈತರು ದಿಢೀರ್ ಬಂದ್ ಮಾಡಿ ಲಾರಿಯಲ್ಲಿ ಮೆರವಣಿಗೆ ಹೊರಟರು. ಆಗ ಕೋಮುಗಲಭೆಗೆ ಕಾರಣವಾಗಿ ಬೆಂಕಿ ಹಚ್ಚುವ ಹಾಗೂ ಲೂಟಿ ಪ್ರಕರಣಗಳು ರಾತ್ರಿ ವೇಳೆ ೧೨ ರವರೆಗೆ ನಡೆದವು. ಇದರಿಂದಾಗಿ ೧ ಕೋಟಿ ರೂ ನಷ್ಟವಾಯಿತು. ಪರಿಸ್ಥಿತಿ ಸುಧಾರಿಸಲು ೨೦ ಕ್ಕೂ ಹೆಚ್ಚು ರೈತರನ್ನು ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡರು. ಇದೇ ಸಂಜೆ ಸೆಪ್ಟಂಬರ್ ೧೩ ರಂದು ಆನಗೋಡು ಬಳಿ ರೈತ ಪ್ರತಿಭಟನೆ ಮುಂದುವರೆದಿತ್ತು. ಅ ಸಂದರ್ಭದಲ್ಲಿ ಬೆಂಗಳೂರಿನಿಂದ ದಾವಣಗೆರೆಗೆ ಬರುತ್ತಿದ್ದ ನಗರದ ಶಾಸಕರಾದ ಮೋತಿ ವೀರಣ್ಣನವರ ಕಾರನ್ನು ರೈತರು ಆನಗೋಡಿನ ಬಳಿ ತಡೆ

ಒಡ್ಡಿದರು. ಅಗ ಶಾಸಕರನ್ನು ಕರೆದೊಯ್ದು ರೈತರಲ್ಲಿ ಪ್ರಮುಖರಾದ ನಂಜುಂಡಪ್ಪ ಅವರ ಮನೆಯಲ್ಲಿ ಕ್ಷೇಮವಾಗಿ ಇರಿಸಲಾಯಿತು. ನಾಲ್ಕು ಕಡೆಯಿಂದ ರೈತರು ಆ ಮನೆಯತ್ತ ಧಾವಿಸಿದಾಗ ಘರ್ಷಣೆಯಾಗಬಹುದೆಂದು ತಿಳಿದ ಪೊಲೀಸರು ಮೊದಲು ಲಾಠಿ ಪ್ರಹಾರ ಮಾಡಿದರೂ ರೈತರು ಚದುರಲಿಲ್ಲ. ಸೆಪ್ಟಂಬರ್ ೧೩ ರಂದು ಆನಗೋಡಿಗೆ ದಿಢೀರನೆ ಆಗಮಿಸಿದ ಪೊಲೀಸ್ ಅಧಿಕಾರಿಗಳು ಶಾಂತಿಯುತ ಪ್ರತಿಭಟನೆಯಲ್ಲಿ ತೊಡಗಿದ ರೈತರ ಗುಂಪಿನ ಮೇಲೆ ಏಕಾಏಕಿ ಪ್ರಹಾರ ಮತ್ತು ಅಶ್ರುವಾಯು ಪ್ರಯೋಗ ಮಾಡಿದರು. ರೈತರು ಚದುರಿ ಓಡಿ ಹೋಗಿ ಓಣಿ, ಸಂದು, ಕಲ್ಲುಗಳಲ್ಲಿ ಮತ್ತು ಊರಿನ ಮನೆಗಳ ಚಾವಣಿ ಮೇಲೆ ಏರಿ ಕುಳಿತರು. ಇನ್ನು ಕೆಲವರು ಪಕ್ಕದ ಹೊಲಗಳ ಕಡೆ ಹೋಗಿ ಬೆಳೆಗಳ ಮಧ್ಯೆ ಕುಳಿತರು. ರೊಚ್ಚಿಗೆದ್ದ ಬಿಸಿ ನೆತ್ತರಿನ ತರುಣ ರೈತರು ಪೊಲೀಸರತ್ತ ಕಲ್ಲು ಬೀಸಿದರು. ಈ ಸಮಯದಲ್ಲಿ ಪೊಲೀಸ್ ಅಧಿಕಾರಿಗಳು ಶಾಸಕ ವೀರಣ್ಣನವರನ್ನು ತಮ್ಮ ವಾಹನದಲ್ಲಿ ಸುರಕ್ಷಿತವಾಗಿ ದಾವಣಗೆರೆ ಕರೆದುಕೊಂಡು ಹೋದರು. ಉಳಿದ ಪೊಲೀಸರು ಮನಬಂದಂತೆ ಲಾಠಿ ಪ್ರಹಾರ ಮಾಡಿದರು. ಮೇಲಿನ ಅಧಿಕಾಗಳು ಈ ದೌರ್ಜನ್ಯ ತಡೆಯಲಿಲ್ಲ. ಈ ಸಮಯದಲ್ಲಿ ಬಂದೂಕು ದಾರಿ ಪೊಲೀಸರಿಬ್ಬರು ಹೊಲ ಮನೆಗಳತ್ತ ಓಡುತ್ತಿದ್ದ ರೈತರನ್ನು ಬೆನ್ನಟ್ಟಿ ಗುಂಡು ಹಾರಿಸ ತೊಡಗಿದರು. ಆಗ ನೇರ್ಲಿಗೆ ರಸ್ತೆಯ ಮೆಣಸಿನ ಹೊಲದಲ್ಲಿ ಅಡಗಿಕೊಂಡಿದ್ದ ಓಬೇನ ಹಳ್ಳಿಯ ಕಲ್ಲಿಂಗಪ್ಪನ ಮೇಲೆ ಗುಂಡು ಹಾರಿಸಿದಾಗ, ಗುಂಡು ತಗುಲಿ ಆ ರೈತ ಅಲ್ಲಿಯೇ ಮಡಿದನು. ಮುನ್ನುಗ್ಗಿದ ಪೊಲೀಸರು ಗುಂಡು ಹಾರಿಸಿದಾಗ ನಾಲ್ಕೈದು ಜನರಿಗೆ ಗಾಯಗಳಾಯಿತು. ಈ ಪೈಕಿ ಸಿದ್ದನೂರಿನ ಕುಶಲಕರ್ಮಿ ನಾಗರಾಜ ಆಚಾರಿಯ ಕಾಲನ್ನೇ ವೈದ್ಯರುಗಳು ಕತ್ತರಿಸಿ ಜೀವ ಉಳಿಸಲು ಯತ್ನಿಸಿದರು, ಆತ ಆಸ್ಪತ್ರೆಯಲ್ಲಿ ಅಸುನೀಗಿದರು.[೯]

ಎರಡು ದಿನಗಳ ಹಿಂದೆ ಆನಗೋಡು ಪಂಚಾಯ್ತಿ ಕಾರ್ಯಾಲಯದ ಮುಂಭಾಗದಲ್ಲಿ ಅಂತ್ಯಕ್ರಿಯೆ ಮಾಡಲಾಗಿದ್ದ ಕಲ್ಲಿಂಗಪ್ಪನ ಸಮಾಧಿ ಪಕ್ಕದಲ್ಲಿಯೇ, ನಾಗರಾಜ್ ಆಚಾರಿಯ ಸಮಾಧಿ ಮಾಡಲಾಯಿತು. ಈ ಎರಡು ಸಂದರ್ಭದಲ್ಲಿ ನೆರೆದ ರೈತಸ್ತೋಮ ಹೊಟ್ಟೆಯಲ್ಲಿ ಕಿಚ್ಚು ತುಂಬಿದ್ದರೂ ಕಣ್ಣಲ್ಲಿ ಕಣ್ಣೀರಿನ ಕೋಡಿ ಹರಿಸಿದರು. ರೈತರು ಎಲ್ಲಿಯೂ, ಯಾರ ಮೇಲೂ ದೌರ್ಜನ್ಯ ಅಥವಾ ವಿಧ್ವಾಂಸಕ ಕೃತ್ಯವನ್ನು ಎಸಗಲಿಲ್ಲ.

ಸೆಪ್ಟಂಬರ್ ೧೪ ರಂದು ಸುದ್ದಿಗೋಷ್ಠಿ ಕರೆದ ರೈತ ಮುಖಂಡರು, ಸತ್ತ ವ್ಯಕ್ತಿಯ ಕುಟುಂಬಕ್ಕೆ ೧೦ ಲಕ್ಷರೂ, ಗಾಯಗೊಂಡವರಿಗೆ ೧ ಲಕ್ಷ ರೂ ನೆರವು ನೀಡಬೇಕೆಂದು ಆಗ್ರಹಿಸಿದರು. ಶಾಸಕರಿಗೆ ಮೊದಲೇ ಅಧಿಕಾರಿಗಳು ಈ ಮಾರ್ಗದಲ್ಲಿ ಬರಬೇಡಿ ಎಂದು ತಿಳಿಸಿದರು. ಉದ್ದೇಶಪೂರ್ವಕವಾಗಿ ಬಂದು ಈ ಘಟನೆಗೆ ಕಾರಣರಾಗಿದ್ದಾರೆ. ಗೋಲಿಬಾರ್‌ಗೆ ಜಿಲ್ಲಾಧಿಕಾರಿಗಳಿಂದ ಆದೇಶವಿರಲಿಲ್ಲ ಹಾಗಾಗಿ ಇದನ್ನು ಸಿ.ಒ.ಡಿ. ತನಿಖೆಗೆ ನೀಡಬೇಕೆಂದು ರೈತರು ಆಗ್ರಹ ಮಾಡಿ ರಸ್ತೆ ತಡೆಯನ್ನು ಮುಂದುವರೆಸಿದರು. ಇದುಸೆಪ್ಟಂಬರ್ ೧೫ ರವರೆಗೆ

ಮುಂದುವರೆಸಲಾಯಿತು. ಸೆಪ್ಟಂಬರ್ ೧೬ ರಂದು ಜಿಲ್ಲಾಧಿಕಾರಿಗಳು ಪ್ರವಾಸಿ ಮಂದಿರದಲ್ಲಿ ರೈತರ ಜೊತೆ ಸೌಹಾರ್ದಯುತವಾದ ಮಾತುಕತೆ ನಡೆಸಿದರು. ೨೭ ಸಾವಿರ ಟನ್ ರಸಗೊಬ್ಬರವನ್ನು ಹಳೆಯ ದರದಲ್ಲಿ ನೀಡಲು ಮುಖ್ಯಮಂತ್ರಿಗಳಿಗೆ ಮನವಿ ನೀಡಿ ಪ್ರಯತ್ನಿಸುವುದಾಗಿ ತಿಳಿಸಿ ರೈತರ ವಿಶ್ವಾಸ ಪಡೆದು, ಪ್ರತಿಭಟನೆ ಹಿಂಪಡೆಯುವಂತೆ ಮಾಡಿದರು. ಗೋಲಿಬಾರ್‌ಗೆ ಕಾರಣರಾದ ಸಬ್‌ಇನ್ಸ್‌ಪೆಕ್ಟರ್ ಜಿ.ಎಸ್.ಮಲ್ಲಿಕಾರ್ಜುನ್‌ರವರನ್ನು ಸಸ್ಪೆಂಡ್ ಮಾಡಲಾಯಿತು.[೧೦]

ಸೆಪ್ಟಂಬರ್ ೧೭ ರಂದು ಬೆಳಗ್ಗೆ ೧೦ ಗಂಟೆಗೆ ರೈತ ಮುಖಂಡರು ಆನಗೋಡಿಗೆ ಭೇಟಿ ನೀಡಿ, ಹುತಾತ್ಮ ರೈತರ ಸಮಾಧಿಗೆ ನಮನ ಸಲ್ಲಿಸಿದರು. ನಂತರ ಅಲ್ಲಿಂದ ರೈತರ ಹುತಾತ್ಮ ಜ್ಯೋತಿಯನ್ನು ಜಾಥಾ ಮೂಲಕ ತೋಳಹುಣಸೆ ರೈಲು ನಿಲ್ದಾಣದ ಹತ್ತಿರಕ್ಕೆ ತರಲಾಯಿತು. ಅಂದಿನಿಂದ ೨ನೇ ಹಂತದ ರೈತ ಪ್ರತಿಭಟನೆ ಆರಂಭವಾಯಿತು. ಆನಗೋಡಿನ ನಂಜುಂಡಪ್ಪ, ಪುಟ್ಟಸ್ವಾಮಿ, ಮಹೇಶ್ವರಪ್ಪ, ಎಂ.ಎಸ್.ಕೆ ಶಾಸ್ತ್ರೀ, ಅವರಗೆರೆ ರುದ್ರುಮನಿಯವರ ನಾಯಕತ್ವದಲ್ಲಿ ನೂರರು ರೈತರು ೨ ಗಂಟೆಗಳ ಕಾಲ ಗೋಲ್‌ಗುಬಾಂಜ್ ಹಾಗೂ ಮಹಾಲಕ್ಷ್ಮೀ ಎಕ್ಸ್‌ಪ್ರೆಸ್ ರೈಲನ್ನು ತಡೆಹಿಡಿದಿದ್ದರು. ಮಾರನೆಯ ದಿನ ಸೆಪ್ಟಂಬರ್ ೧೮ ರಂದು ರೈಲು ತಡೆ ಮಾಡುವುದರ ಮೂಲಕ ಪ್ರತಿಭಟನೆ ಮುಂದುವರೆಸಿ ಸೆಪ್ಟಂಬರ್ ೨೧ ರಂದು ಬಾಡ ಗ್ರಾಮದಲ್ಲಿ ಸಂಜೆ ೩ ಗಂಟೆಗೆ ಬಹಿರಂಗ ಸಭೆ ನಡೆಸಲಾಗುವುದೆಂದು ನಿರ್ಧರಿಸಿದರು. ಅಕ್ಟೋಬರ್ ೨ ರಂದು ಬೆಂಗಳೂರಲ್ಲಿ ಕರೆದಿರುವ ಬೃಹತ್ ರೈತರ ರ್‍ಯಾಲಿಗೆ, ಆನಗೋಡಿನ ರೈತ ಚಳುವಳಿಯಲ್ಲಿ ಹುತಾತ್ಮರಾದ ನಾಗರಾಜಪ್ಪ ಮತ್ತು ಕಲ್ಲಿಂಗಪ್ಪರವರ ಜ್ಯೋತಿಯನ್ನು ಕೊಂಡೊಯ್ಯಲಾಯಿತು.

**ಹರಪನಹಳ್ಳಿ ತಾಲ್ಲೂಕು ಕಚೇರಿಯ ಮುತ್ತಿಗೆ:– ೨೨/೧೧/೯೨**

ಚಿಕ್ಕಬಿದರಿ ಪ್ರವಾಹದಲ್ಲಿ ಬೆಂದು ಬಸವಳಿದು ಹೋಗಿದೆ. ಆದರೂ ಸುಮಾರು ೫ ದಿನಗಳಿಂದ ಯಾವೊಬ್ಬ ಅಧಿಕಾರಿಯು ಅಧ್ಯಯನಕ್ಕೆ ಹಾಗೂ ತಮ್ಮ ಸಮಸ್ಯೆಗಳನ್ನು ತಿಳಿಯಲು ಬಂದಿಲ್ಲವೆಂದು ಗ್ರಾಮದ ರೈತರು ಆಕ್ರೋಶ ವ್ಯಕ್ತಪಡಿಸಿದರು. ಸುಮಾರು ೬೦ ರಿಂದ ೭೦ ರೈತರ ಗುಂಪು ಟ್ರ್ಯಾಕ್ಟರ್‌ನಲ್ಲಿ ಬೆಳಗ್ಗೆ ಆಗಮಿಸಿ ತಾಲೂಕು ಕಚೇರಿಯನ್ನು ಮುತ್ತಿಗೆ ಹಾಕಿ ದಾಂಧಲೆ ಮಾಡಿದರು. ಆ ಸಮಯದಲ್ಲಿದ್ದ ತಾಲೂಕು ಉಪವಿಭಾಗಾಧಿಕಾರಿ ಹಾಗೂ ತಹಶೀಲ್ದಾರ್ ಅವರಿಗೆ ತಮ್ಮ ಸಮಸ್ಯೆಗಳನ್ನು ತಿಳಿಸಿದರು. ನಾವು ಕೂಳಿಲ್ಲದೆ ಸಾಯುತ್ತಿದ್ದೇವೆ. ಈ ಅಧಿಕಾರಿಗಳು ನಾವು ಸತ್ತ ಮೇಲೆ ಮಹಜರು ಮಾಡಿಕೊಳ್ಳಲು ಬರುತ್ತಾರೆಯೇ? ಎಂದೆಲ್ಲಾ ಕೂಗಾಡಿದರು. ಕೊನೆಗೆ ಉಪವಿಭಾಗಾಧಿಕಾರಿ ವೀರಭದ್ರಯ್ಯನವರು ರವಿವಾರ ತಮ್ಮ ಹಳ್ಳಿಗೆ ಭೇಟಿಕೊಡುವುದಾಗಿ ಭರವಸೆಯಿತ್ತ ಮೇಲೆ ಪ್ರತಿಭಟನೆ ಕೈಬಿಟ್ಟರು.[೧೧] ಆದರೆ ರವಿವಾರ ಅಧಿಕಾರಿಗಳು ಗ್ರಾಮಕ್ಕೆ ಭೇಟಿ ನೀಡದಿದ್ದರೆ ಸೋಮವಾರ ಬೃಹತ್ ಪ್ರತಿಭಟನೆ ಮಾಡುವುದಾಗಿ ಎಚ್ಚರಿಕೆ ನೀಡಿದರು.

**ಅಸಮರ್ಪಕ ವಿದ್ಯುತ್ ಪೂರೈಕೆಗಾಗಿ ಚಳ್ಳಕೆರೆಯಲ್ಲಿ ರೈತ ಪ್ರತಿಭಟನೆ:- ೨೮/೦೬/೧೯೯೩**

ವಿದ್ಯುಚ್ಛಕ್ತಿಯ ಅಭಾವದಿಂದಾಗಿ ತಾಲೂಕಿನ ಹಲವಾರು ಹಳ್ಳಿಗಳಲ್ಲಿ ನೀರಾವರಿ ಪಂಪ್‌ಸೆಟ್‌ಗಳು ಸ್ಥಗಿತಗೊಂಡಿವೆ. ಬೆಳೆದು ನಿಂತ ಪೈರುಗಳು ಬತ್ತಿ ಹೋಗಿವೆ. ಪ್ರಮುಖವಾಗಿ ತಾಲೂಕಿನ ಹುಲಿಕುಂಟೆ ಗ್ರಾಮದಲ್ಲಿ ೮೦ ನೀರಾವರಿ ಪಂಪ್‌ಸೆಟ್‌ಗಳು, ಸೋಮಗುದ್ದು, ತಳಕು, ಗಜ್ಜಿಗಾನಹಳ್ಳಿ, ಮನ್ನೆಕೋಟೆ, ಸಾಣೀಗೆರೆಯ ಮುಂತಾದ ಹಳ್ಳಿಗಳಲ್ಲಿ ನೂರಾರು ಪಂಪ್‌ಸೆಟ್‌ಗಳು ಕಾರ್ಯನಿರ್ವಹಿಸುತ್ತಿಲ್ಲ. ರೈತರು ಹಾಗೂ ಕರ್ನಾಟಕ ರಾಜ್ಯ ರೈತ ಸಂಘದ ಮುಖಂಡರು ಕೆ.ಇ.ಬಿ ಇಂಜಿನಿಯರ್‌ಗಳಿಗೆ ಸಮಸ್ಯೆಯನ್ನು ವಿವರಿಸಿದ್ದರೂ ಪ್ರಯೋಜನವಾಗಿಲ್ಲ. ಇದರಿಂದ ರೊಚ್ಚಿಗೆದ್ದ ರೈತರು ವಿದ್ಯುತ್ ಪೂರೈಕೆಗಾಗಿ ಕೆ.ಇ.ಬಿ ಕಛೇರಿಯ ಮುಂದೆ ಪ್ರತಿಭಟನೆಯನ್ನು ನಡೆಸಿದರು. ವಿದ್ಯುತ್ ಪೂರೈಕೆ ಮಾಡದಿದ್ದರೆ ಕೆ.ಇ.ಬಿ ಇಂಜಿನಿಯರ್‌ಗಳನ್ನು ಹಾಗೂ ಲೈನ್‌ಮನ್‌ಗಳನ್ನು ಊರುಗಳಿಗೆ ಬಿಟ್ಟುಕೊಳ್ಳುವುದಿಲ್ಲವೆಂದು ಎಚ್ಚರಿಕೆ ನೀಡಿ, ಕೆ.ಇ.ಬಿ ಅಧಿಕಾರಿಗಳಿಗೆ ಮನವಿ ನೀಡಿದರು. ಕೆ.ಇ.ಬಿ ಇಂಜಿನಿಯರ್ ಮನವಿ ಸ್ವೀಕರಿಸಿ, ಮೇಲಿನ ಅಧಿಕಾರಿಗಳ ಜೊತೆ ಚರ್ಚೆ ನಡೆಸಿ, ಸಮರ್ಪಕ ವಿದ್ಯುತ್ ಪೂರೈಕೆ ಮಾಡುವುದಾಗಿ ತಿಳಿಸಿದರು.

**ಮಧ್ಯದ ಅಂಗಡಿಯ ಮುಂದೆ ರೈತರ ಪ್ರತಿಭಟನೆ:- ೦೭/೦೭/೧೯೯೩**

ಕರ್ನಾಟಕ ರಾಜ್ಯ ರೈತ ಸಂಘದ ದಾವಣಗೆರೆ ತಾಲೂಕು ಘಟಕ ಕಳೆದ ೧೫ ದಿನಗಳಿಂದ ಮಧ್ಯಪಾನ ನಿಷೇಧಕ್ಕಾಗಿ ದಾವಣಗೆರೆಯ ಅವರೆಗೆರೆಯಲ್ಲಿ ಧರಣಿ ಸತ್ಯಾಗ್ರಹ ನಡೆಸುತ್ತಿದ್ದು, ಜುಲೈ ೦೭ ೧೯೯೩ ರಂದು ರಸ್ತೆ ತಡೆ ಚಳುವಳಿಯನ್ನು ನಡೆಸಿದರು. ನಂತರ ಆ ಸ್ಥಳಕ್ಕೆ ಬಂದ ಎ.ಎಸ್ಪಿ ಭಾಸ್ಕರ್‌ರಾವ್ ಮಧ್ಯದ ಅಂಗಡಿ ಮುಚ್ಚಿಸುವ ಭರವಸೆ ನೀಡಿದ ಮೇರೆಗೆ ಪ್ರತಿಭಟನೆ ಮುಂದೂಡಲಾಯಿತು. ಪುನಃ ಬೆಳಗ್ಗೆ ೯ ಗಂಟೆಯ ಸಮಯದಲ್ಲಿ ಮಧ್ಯದ ಅಂಗಡಿಯನ್ನು ತೆರೆಯಲು ಪ್ರಯತ್ನಿಸಿದಾಗ ಕೂಡಲೇ ಗ್ರಾಮದ ರೈತರು ಮುತ್ತಿಗೆ ಹಾಕಿ ಅಂಗಡಿಯನ್ನು ಮುಚ್ಚಿಸುವಲ್ಲಿ ಯಶಸ್ವಿಯಾದರು ಆದರೆ ತೆರವುಗೊಳಿಸುವಲ್ಲಿ ವಿಫಲರಾದರು.

ಅವರಗೆರೆಯಲ್ಲಿ ಮಧ್ಯದ ಅಂಗಡಿ ತೆರವು ಮಾಡಿಸಲು ಅಲ್ಲಿನ ರೈತ ಸಂಘದ ಸದಸ್ಯರು ಚಳುವಳಿ ನಡೆಸುತ್ತಿರುವ ವಿಚಾರ ಜಿಲ್ಲಾಧಿಕಾರಿಯವರಿಗೆ ಹಾಗೂ ಜಿಲ್ಲಾ ಅಬಕಾರಿ ಅಧಿಕಾರಿಗಳಿಗೆ ತಿಳಿದಿದೆ. ತೆರವುಗೊಳಿಸಲು ಯಾವ ಕ್ರಮ ತೆಗೆದುಕೊಂಡಿಲ್ಲ ಹಾಗಾಗಿ ಮಧ್ಯದ ಅಂಗಡಿ ವಿರುದ್ಧ ಪ್ರತಿಭಟಿಸಲು ಹಾಗೂ ಚಿತ್ರದುರ್ಗದ ಜಿಲ್ಲಾಧಿಕಾರಿಗಳ ಕಚೇರಿಯ ಮುತ್ತಿಗೆ ಹಾಕುವುದಾಗಿ ತಾಲೂಕು ಘಟಕದ ರೈತ ಸಂಘ ತಿಳಿಸಿತ್ತು.

ಅ ಸಮಯದಲ್ಲಿಯೇ ರೈತರ ವಿರೋದದ ನಡುವೆಯು ಮಧ್ಯದಂಗಡಿಯ ಮಾಲಿಕರು ರಾಜ್ಯ ಉಚ್ಛ ನ್ಯಾಯಾಲಯದಿಂದ ತಡೆಯಾಜ್ಞೆ ತಂದು ಅಂಗಡಿ ತೆರೆದರು. ಇದನ್ನು ಗಮನಿಸಿದ ರೈತರು ಸದರಿ ಅಂಗಡಿ ಮುಂದೆ ಮುತ್ತಿಗೆ ಹಾಕಿದರು. ಸ್ಥಳಕ್ಕೆ ಆಗಮಿಸಿದ ಪೊಲೀಸರು ರೈತ ಮುಖಂಡರಾದ ಅವರಗೆರೆ ರುದ್ರಮುನಿ ಸೇರಿದಂತೆ ೨೫ ರೈತರನ್ನು ಬಂಧಿಸಿದರು.[೫೭] ಇದರಿಂದ ಪ್ರತಿಭಟನೆ ವಿಫಲವಾಯಿತು

**ಅಕ್ರಮ ಭೂಮಿಗಳನ್ನು ಸಕ್ರಮಗೊಳಿಸುವಂತೆ ಹರಪನಹಳ್ಳಿ ತಾಲೂಕು ಕಛೇರಿ ಮುಂದೆ ಪ್ರತಿಭಟನೆ ೦೮/೦೮/೧೯೯೩**

ಕರ್ನಾಟಕ ರಾಜ್ಯ ರೈತ ಸಂಘದ ಹರಪನಹಳ್ಳಿ ತಾಲೂಕು ಘಟಕದ ರೈತರು ತಮ್ಮ ಪ್ರಮುಖ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಿ ಆಗಸ್ಟ್ ೦೮ ೧೯೯೩ರಂದು ಹರಪನಹಳ್ಳಿ ತಾಲೂಕು ಕಛೇರಿಯ ಮುಂದೆ ಪ್ರತಿಭಟನೆ ಮಾಡಿದರು.

ರೈತರು ಒತ್ತುವರಿ ಮಾಡಿರುವ ಸಿ ಮತ್ತು ಡಿ ವರ್ಗದ ಜಮೀನು ಸೇರಿದಂತೆ ಅಕ್ರಮ ಭೂಮಿಯನ್ನು ಸಕ್ರಮಗೊಳಿಸುವುದು. ಅರಣ್ಯಾಧಿಕಾರಿಗಳು ರೈತರ ಮೇಲೆ ಹಾಕಿರುವ ಕೇಸುಗಳನ್ನು ವಾಪಸ್ಸು ಪಡೆಯಬೇಕು. ರೈತರ ಮೇಲೆ ನಡೆಸುವ ದೌರ್ಜನ್ಯ ನಿಲ್ಲಿಸುವುದು. ದೌರ್ಜನ್ಯ ನಡೆಸಿದ ಅರಣ್ಯಾಧಿಕಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಂಡು ಅಮಾನತುಗೊಳಿಸಬೇಕೆಂಬ ಬೇಡಿಕೆಗಳನ್ನಿಟ್ಟುಕೊಂಡು ತಾಲೂಕು ಕಚೇರಿಯ ಎದುರು ಪ್ರತಿಭಟನೆ ಮಾಡಿ ಮನವಿ ನೀಡಿದರು.[೧೩] ಈ ಬೇಡಿಕೆಗಳನ್ನು ಈಡೇರಿಸದಿದ್ದರೆ ಅಗಸ್ಟ್ ೮ ರಂದು ಅಮರಣಾಂತರ ಉಪವಾಸ ಕೈಗೊಳ್ಳುವುದಾಗಿ ಹೇಳಿ ಪ್ರತಿಭಟನೆ ಮುಂದುವರೆಸಿದರು. ಆಗಸ್ಟ್೮ ರವರೆಗೆ ಗಡುವು ನೀಡಿದ್ದರೂ, ಸಂಬಂಧಪಟ್ಟ ಅಧಿಕಾರಿಗಳಾಗಲಿ ಹಾಗೂ ಶಾಸಕರಾಗಲಿ ವಿಚಾರಿಸುವ ಸೌಜನ್ಯ ತೋರಲಿಲ್ಲ ಹಾಗಾಗಿ ಆಗಸ್ಟ್ ೮ ರಿಂದ ಅಮರಣಾಂತರ ಉಪವಾಸ ಸತ್ಯಾಗ್ರಹ ಆರಂಭಿಸಿದರು. ಈ ಹೋರಾಟಕ್ಕೆ ಅಖಿಲ ಭಾರತ ಕಿಸಾನ್ ಸಭಾವು ಬೆಂಬಲ ನೀಡಿತು ಆದರೂ ಯಾವುದೇ ಪ್ರಯೋಜನವಾಗದೆ ವಿಫಲವಾಯಿತು.

ಪ್ರತಿಭಟನೆಯಲ್ಲಿ ಜಿಲ್ಲಾ ಸಂಚಾಲಕಿ ಡಿ. ಲಕ್ಮೀ ದೇವಮ್ಮ, ಗಿರೀಶ್‌ಗೌಡ, ಮಹೇಶ್ವರಯ್ಯ, ವೀರಣ್ಣ ಮುಂತಾದವರು ಭಾಗವಹಿಸಿದ್ದರು.

**ಚಿತ್ರದುರ್ಗದಲ್ಲಿ ರೈತರ ಬೃಹತ್ ಪ್ರತಿಭಟನಾ ಮೆರವಣಿಗೆ ಬಹುರಾಷ್ಟ್ರೀಯ ಕಂಪನಿಗಳೇ ಭಾರತ ಬಿಟ್ಟು ತೊಲಗಿ:– ೧೭/೦೮/೧೯೯೩**

ಬಹುರಾಷ್ಟ್ರೀಯ ಕಂಪನಿಗಳೇ ಭಾರತ ಬಿಟ್ಟು ತೊಲಗಿ ಪ್ರತಿಭಟನೆಯನ್ನು ಇದೇ ೧೫ ರಂದು ರಾಜ್ಯಾದ್ಯಾಂತ ಕರ್ನಾಟಕ ರಾಜ್ಯ ರೈತ ಸಂಘ ಹಮ್ಮಿಕೊಂಡಿತ್ತು. ಇದಕ್ಕೆ ಬೆಂಬಲವಾಗಿ ಚಿತ್ರದುರ್ಗದಲ್ಲಿ ರೈತರು ಬೃಹತ್ ಪ್ರತಿಭಟನಾ ಮೆರವಣಿಗೆ ನಡೆಸಿದರು.

ಕೇಂದ್ರ ಸರ್ಕಾರ ಡೆಂಕಲ್ ಷರತ್ತುಗಳಿಗೆ ಮಣಿದು, ವಿದೇಶಿ ಕಂಪನಿಗಳಿಗೆ ಭಾರತದಲ್ಲಿ ನೆಲೆಸಲು ಉದಾರ ಆರ್ಥಿಕ ನೀತಿಯ ಅಡಿಯಲ್ಲಿ ಮುಕ್ತವಾಗಿ ಅವಕಾಶ ನೀಡಿತ್ತು. ಈ ಬಹುರಾಷ್ಟ್ರೀಯ ಕಂಪನಿಗಳು ಈಗಾಗಲೇ ಕೃಷಿ ಕ್ಷೇತ್ರದ ಬೀಜ ಉತ್ಪಾದನೆ, ರಸಗೊಬ್ಬರ, ಕೀಟನಾಶಕಗಳು, ಕೃಷಿ ಸಲಕರಣೆಗಳ ಮಾರಾಟವನ್ನು ಪೇಟೆಂಟ್ ಕಾನೂನುಗಳ ಮೂಲಕ ತಮ್ಮ ಏಕಸ್ವಾಮ್ಯತೆಗೆ ಕೇಂದ್ರ ಸರ್ಕಾರ ದಾರಿ ಮಾಡಿಕೊಡುತ್ತಿರುವುದನ್ನು ವಿರೋಧಿಸಿ ಈ ಪ್ರತಿಭಟನೆಯನ್ನು ಹಮ್ಮಿಕೊಂಡಿದ್ದರು. ಎಂದು ಕರ್ನಾಟಕ ರಾಜ್ಯ ರೈತ ಸಂಘದ ತಾಲೂಕು ಘಟಕ ರೈತ ಮುಖಂಡರಾದ ಅರುಣ್‌ಕುಮಾರ್ ಕುರುಡಿ ತಿಳಿಸಿದರು. ಆಗಸ್ಟ್ ೧೫ ರಂದು

ಚಿತ್ರದುರ್ಗದಲ್ಲಿ ಬೃಹತ್ ಪ್ರತಿಭಟನಾ ಮೆರವಣಿಗೆ ನಡೆಸಲಿದ್ದು ಬೆಳಗ್ಗೆ ೧೨ ಗಂಟೆಗೆ ನೀಲಕಂಠೇಶ್ವರ ದೇವಸ್ಥಾನದ ಬಳಿ ಬರಲು ರೈತರಿಗೆ ಕರೆಕೊಟ್ಟರು.

ಈ ಕರೆಗೆ ಒಗೊಟ್ಟು ೧೯೯೩ ಆಗಸ್ಟ್೧೫ ರಂದು ಜಿಲ್ಲೆಯ ೬ ತಾಲ್ಲೂಕುಗಳಿಂದ ಮೂರು ಸಾವಿರಕ್ಕೂ ಹೆಚ್ಚು ರೈತರು ಜಿಲ್ಲಾ ಕೇಂದ್ರವಾದ ಚಿತ್ರದುರ್ಗಕ್ಕೆ ತಮಟೆ ವಾದ್ಯಗಳೊಡನೆ ಆಗಮಿಸಿದರು. ರೈತರು ಹಸಿರು ನಿಶಾನೆಗಳೊಡನೆ ಮಧ್ಯಾಹ್ನ ೧೨ ಗಂಟೆಗೆ ನೀಲಕಂಠೇಶ್ವರ ದೇವಸ್ಥಾನದಿಂದ ಮೆರವಣಿಗೆ ಹೊರಟು, ೨ ಗಂಟೆಯ ವೇಳೆಗೆ ಪ್ರತಿಭಟನಾ ಮೆರವಣಿಗೆಯನ್ನು ಜಿಲ್ಲಾಧಿಕಾರಿಯ ಬಳಿಗೆ ಕೊಂಡೊಯ್ದು ಮನವಿ ಸಲ್ಲಿಸಿದರು.[೧೪]

ಈ ಪ್ರತಿಭಟನಾ ಮೆರವಣಿಗೆಯ ನಾಯಕತ್ವವನ್ನು ರೈತ ಮುಖಂಡರುಗಳಾದ ಸೋಮಗುದ್ದು ರಂಗಸ್ವಾಮಿ, ಹೊನ್ನೂರು ಮುನಿಯಪ್ಪ, ಬಂಡೆ ಬೊಮ್ಮನಹಳ್ಳಿ ನಾಗಾರಾಜ್, ಎಂ.ಗಂಗಾಧರಪ್ಪ, ಅರುಣ್‌ಕುಮಾರ್ ಕುರುಡಿ ಭಾಗವಹಿಸಿದ್ದರು.

**೨೨ ಕೆರೆಗಳ ಏತ ನೀರಾವರಿ ರೈತ ಪ್ರತಿಭಟನೆ:- ೧೯೯೪**

ದಾವಣಗೆರೆ ಜಿಲ್ಲೆಯ ಜಗಳೂರು, ಹರಪನಹಳ್ಳಿ ತಾಲ್ಲೂಕಿನ ಭಾಗವು ಬರ ಪೀಡಿತ ಪ್ರದೇಶವಾಗಿರುತ್ತದೆ. ಈ ರೀತಿ ಗುರುತಿಸಲಾಗಿರುವ ಭಾಗದಲ್ಲಿ ಭಾರೀ ಮತ್ತು ಮಧ್ಯಮ ನೀರಾವರಿಯ ಸೌಲಭ್ಯವು ಸಹ ಇಲ್ಲದೆ, ಇಲ್ಲಿ ಕೇವಲ ಸಣ್ಣ ನೀರಾವರಿ ಕೆರೆಗಳು ಮಾತ್ರ ಮುಖ್ಯವಾದ ನೀರಾವರಿ ಮೂಲಗಳಾಗಿರುತ್ತವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಅಸಮರ್ಪಕ ಹಾಗೂ ಅಕಾಲಿಕ ಮಳೆಯಿಂದಾಗಿ ಈ ಕೆರೆಗಳು ಸಹ ತುಂಬುತ್ತಿರಲಿಲ್ಲ. ಈ ಪ್ರದೇಶದ ಬಹುತೇಕ ಕೃಷಿಕರು ನೀರಾವರಿ ಸೌಲಭ್ಯದಿಂದ ವಂಚಿತರಾಗಿ ಬಹಳ ಅನಿಶ್ಚಿತ ಪರಿಸ್ಥಿತಿಗೆ ಒಳಗಾಗಿದ್ದಾರೆ. ಭೂಮಿಯ ಅಂತರ್ಜಲ ಮಟ್ಟವೂ ಕಡಿಮೆಯಾಗಿ ಕೊಳವೆ ಬಾವಿ ಆಧಾರಿತ ಕೃಷಿಗೆ ಹಾಗೂ ಕುಡಿಯುವ ನೀರಿಗೆ ಬಹಳಷ್ಟು ತೊಂದರೆಯಾಗುತ್ತಿದೆ. ಈ ಕ್ಲಿಷ್ಟ ಪರಿಸ್ಥಿತಿಯಿಂದ ಹೊರ ಬರಲು ಸ್ಥಳೀಯ ಜನತೆಯು, ದಾವಣಗೆರೆ ಜಿಲ್ಲೆಯ, ಹರಿಹರ ತಾಲ್ಲೂಕಿನ ರಾಜನಹಳ್ಳಿ ಬಳಿ ತುಂಗಾ-ಭದ್ರಾ ನದಿಯಿಂದ ನೀರನ್ನು ಮೇಲೆತ್ತಿ ದಾವಣಗೆರೆ, ಜಗಳೂರು, ಹರಪನಹಳ್ಳಿ ತಾಲ್ಲೂಕಿನ ಕೆರೆಗಳನ್ನು ತುಂಬಿಸುವ ಯೋಜನೆಯ ಬೇಡಿಕೆಯನ್ನು ಮುಂದಿಟ್ಟು ೨೨ ಕೆರೆಗಳನ್ನು ಏತ ನೀರಾವರಿ ಹೋರಾಟ ಸಮಿತಿಯನ್ನು ರಚಿಸಿ ಹೋರಾಟವನ್ನು ಆರಂಭಿಸಿಸದರು. ಇದರ ಅಧ್ಯಕ್ಷತೆಯನ್ನು ಡಾ॥ ಜಿ. ಮಂಜುನಾಥ ಗೌಡ, ಕಾರ್ಯದರ್ಶಿಯಾಗಿ ಎಲ್. ಕೊಟ್ರೇಶ್‌ನಾಯ್ಕ ರವರು ವಹಿಸಿದ್ದರು.

ಹೋರಾಟ ಆರಂಭವಾಗುವುದಕ್ಕೆ ಮೊದಲೆ ಕೆರೆಗಳಿಗೆ ನೀರು ತುಂಬಿಸಲು ಕರ್ನಾಟಕ ಸರ್ಕಾರ ಸಣ್ಣ ನೀರಾವರಿ ಇಲಾಖೆಯಿಂದ ೧೯೯೪ರಲ್ಲಿ ಅನುಮೋದನೆ ದೊರೆತಿದೆ.[೧೫] ಆದರೆ ಆನಂತರದ ಸರ್ಕಾರಗಳು ಅವಶ್ಯಕತೆ ಇರುವಷ್ಟು ಹಣ ಬಿಡುಗಡೆ ಮಾಡದೆ ಯೋಜನೆ ನೆನೆಗುದಿಗೆ ಬೀಳುವಂತಾಯಿತು. ೧೯೯೮-೯೯ರ ಸರ್ಕಾರ ತನ್ನ ಬಜೆಟ್‌ನಲ್ಲಿ ಅಣಜಿ, ಕಂದನಕೋವಿ, ತುಪ್ಪದಹಳ್ಳಿ ಕೆರೆಗಳಿಗೆ ತುಂಗಾಭದ್ರಾ ನದಿಯಿಂದ ನೀರು ಒದಗಿಸಲು ೧೦

ಲಕ್ಷ ರೂಪಾಯಿಗಳ ಮಂಜೂರಾತಿ ನೀಡಿದರು. ನಂತರ ಬಂದ ಸರ್ಕಾರಗಳು ಪೂರ್ಣ ಸಾಕಾರಗೊಳಿಸಲು ಹಿಂದೇಟು ಹಾಕಿವೆ. ಈ ಪರಿಣಾಮವಾಗಿ ಸಾವಿರಾರು ಬೋರ್‌ವೆಲ್‌ಗಳು ಒಣಗಿ ಹೋಗಿವೆ. ಇದರಿಂದಾಗಿ ರೈತರು ಸಾಲವಂತರಾಗಿ ಸಾವಿಗೆ ಶರಣಾಗುತ್ತಿದ್ದಾರೆ. ಅಂತರ್ಜಲದ ಮಟ್ಟ ಕುಸಿಯುತ್ತಿದೆ. ಕುಡಿಯಲು ನೀರಿಲ್ಲದೆ ದನಕರುಗಳು ಸಾಯುತ್ತಿವೆ. ಜನರು ಫ್ಲೋರೋಸಿಸ್‌ನಂತಹ ಕಾಯಿಲೆಗಳಿಗೆ ತುತ್ತಾಗುತ್ತಿದ್ದಾರೆ. ಎಷ್ಟೋ ಹಳ್ಳಿಗಳ ಜನರು ಉದ್ಯೋಗ ಹುಡುಕಿಕೊಂಡು ಪಟ್ಟಣಗಳಿಗೆ ವಲಸೆ ಹೋಗುವ ಶೋಚನೀಯ ದೃಶ್ಯಗಳು ಕಂಡುಬಂದಿವೆ ಎಂದು ಮಂಜುನಾಥ್‌ಗೌಡರು ಸೆಪ್ಟಂಬರ್ ೨೦೦೪ ರಂದು ಹೇಳಿಕೆಯನ್ನು ನೀಡಿದರು.[೧೬]

ಈ ಯೋಜನೆಗೆ ಸುಮಾರು ೩೦ ಕೋಟಿ ರೂಪಾಯಿಗಳನ್ನು ಅಂದಾಜು ಮಾಡಲಾಗಿತ್ತು. ಈ ಯೋಜನೆಗೆ ಸುಮಾರು ೬೫ ಕೋಟಿ ರೂಪಾಯಿಗಳ ಅವಶ್ಯಕತೆ ಇದ್ದು, ಮಳೆಗಾಲದಲ್ಲಿ ೧೨೫ ಟಿ.ಎಂ.ಸಿ. ಹೆಚ್ಚುವರಿ ನೀರನ್ನು ಈ ಕೆರೆಗಳಿಗೆ ಸರಬರಾಜು ಮಾಡಿದರೆ ೧,೨೦,೦೦೦ ಜನರ ನೀರಿನ ಸಮಸ್ಯೆ ಬಗೆಹರಿಯುತ್ತದೆ. ಈ ಯೋಜನೆಯನ್ನು ಜಾರಿಗೊಳಿಸಲು ಆಗ್ರಹಿಸಿ ಹಲವಾರು ಹಂತದ ಹೋರಾಟಗಳನ್ನು ಇಡೀ ಜಿಲ್ಲೆಯಾದ್ಯಂತ ಕೈಗೊಳ್ಳಲಾಯಿತು. ಮೊದಲ ಜಿಲ್ಲಾ ಮಟ್ಟದ ಹೋರಾಟವನ್ನು ಸೆಪ್ಟಂಬರ್ ೨೦೦೪ ರಿಂದ ಹಮ್ಮಿಕೊಳ್ಳಲಾಗಿದ್ದು, ಕಂದನಕೋವಿ, ಅಣಜಿ, ತುಪ್ಪದಹಳ್ಳಿ ಕೆರೆಗಳಿಗೆ ನೀರು ತುಂಬಿಸಲು ಕೆರೆಗಳನ್ನು ಹೂಳೆತ್ತಿಸಲು ಕಾಲುವೆಗಳನ್ನು ದುರಸ್ತಿಗೊಳಿಸುವಂತೆ ಒತ್ತಾಯಿಸಿ ರೈತ ಕೃಷಿ ಕಾರ್ಮಿಕರ ಸಂಘಟನೆ ಹಾಗೂ ತುಪ್ಪದಹಳ್ಳಿ ಕೆರೆ ನೀರಾವರಿ ಹೋರಾಟ ಸಮಿತಿಯು ಜಂಟಿಯಾಗಿ ನಗರದಲ್ಲಿ ಬೃಹತ್ ಪ್ರತಿಭಟನೆ ನಡೆಸಿ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು.[೧೭] ಪ್ರತಿಭಟನಾ ಮೆರವಣಿಗೆಗೆ ಹಾಗೂ ಬಹಿರಂಗ ಸಭೆಗೆ ಆಗಮಿಸಿ ಮಾತನಾಡಿದ ಸಂಸದ ಜಿ.ಎಂ. ಸಿದ್ಧೇಶ್, ಶಾಸಕ, ಎಸ್.ಎ. ರವೀಂದ್ರನಾಥ್ ಈ ಯೋಜನೆ ಜಾರಿಗೆ ತರಲು ಸರ್ಕಾರದ ಮೇಲೆ ಒತ್ತಡ ತರಲಾಗುವುದೆಂದು ಹೇಳಿ ರೈತಪರ ಹೋರಾಟಕ್ಕೆ ಬೆಂಬಲ ನೀಡುವುದಾಗಿ ಹೇಳಿದರು.

ಈ ಪ್ರತಿಭಟನೆಯ ನಂತರ ಸಮಸ್ಯೆಗಳು ಹೆಚ್ಚಾಗಿದ್ದರಿಂದ ೨೦೦೫ ಏಪ್ರಿಲ್ ೨೦ಕ್ಕೆ ವಿಧಾನಸೌಧ ಚಲೋ ಚಳವಳಿ ಹಮ್ಮಿಕೊಂಡಿದ್ದರು. ದಿನಾಂಕ:೨೫-೦೫-೨೦೦೫ ರಂದು ಮುಖ್ಯಮಂತ್ರಿಗಳಾದ ಧರಂಸಿಂಗ್‌ರವರಿಗೂ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರುಗಳಾದ ಡಾ. ವೈ. ನಾಗಪ್ಪನವರಿಗೂ ಮನವಿ ಪತ್ರ ನೀಡುವುದರ ಜೊತೆಗೆ ಮಾತುಕತೆ ನಡೆಸಿದರು.[೧೮] ಕೆಲ ತಿಂಗಳಲ್ಲಿಯೇ ಹೊಸ ಸರ್ಕಾರ ರಚನೆಯಾಗಿದ್ದರಿಂದ, ಈ ಹೋರಾಟ ಸಮಿತಿ ಮತ್ತು ರೈತರು ೧೭-೦೩-೨೦೦೬ ರಂದು ಮುಖ್ಯಮಂತ್ರಿಗಳಾದ ಹೆಚ್.ಡಿ. ಕುಮಾರಸ್ವಾಮಿ ಹಾಗೂ ಉಪಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಮತ್ತು ಜಿಲ್ಲಾ ಉಸ್ತುವಾರಿ ಸಚಿವರಾದ ಕೆ.ಎಸ್. ಈಶ್ವರಪ್ಪನವರನ್ನು ಭೇಟಿ ಮಾಡಿ ೧೯ ಕೆರೆಗಳಿಗೆ ನೀರು ತುಂಬಿಸುವ ಸಲುವಾಗಿ ಮಾತುಕತೆ ನಡೆಸಿ ಮನವಿ ಸಲ್ಲಿಸಿದರು.[೧೯] ಇದರಿಂದ ಯಾವುದೇ ಕಾಮಗಾರಿಯು ಆರಂಭವಾಗದೇ ಇದ್ದುದರಿಂದ ದಿನಾಂಕ:೨೬-೦೪-೨೦೦೬ ರಂದು ಎರಡನೇ ಬಾರಿಗೆ ಜಿಲ್ಲಾ ಉಸ್ತುವಾರಿ

ಸಚಿವರನ್ನು ಭೇಟಿ ಮಾಡಿ ೩೦-೦೯-೨೦೦೬ ರಂದು ಸಚಿವರಾದ ಎಸ್.ಎ. ರವೀಂದ್ರನಾಥ್‌ರವರೊಂದಿಗೆ ರೋಟರಿ ಬಾಲ ಭವನದಲ್ಲಿ ಸಭೆಯನ್ನು ನಡೆಸಿದರು ಆದರೂ ಈ ಯೋಜನೆ ಕಾರ್ಯಗತವಾಗದಿದ್ದಾಗ, ಈ ಸಮಿತಿ ಹಾಗೂ ರೈತರು ಉಪವಾಸ ಸತ್ಯಾಗ್ರಹ ಆರಂಭಿಸಿದರು.

ತುಂಗಾಭದ್ರಾ ನದಿಯಿಂದ ಏತ ನೀರಾವರಿಯ ಮೂಲಕ ದಾವಣಗೆರೆ ಜಿಲ್ಲೆಯ ೧೯ ಕೆರೆಗಳಿಗೆ ನೀರು ತುಂಬಿಸಲು ಸರ್ಕಾರವನ್ನು ಆಗ್ರಹಿಸಿ ನಡೆಯುತ್ತಿರುವ ಹೋರಾಟವು ೩ ವರ್ಷಕ್ಕೆ ಕಾಲಿಟ್ಟಿದೆ. ಅಕ್ಟೋಬರ್ ೩೦ ರಂದು ಬೃಹತ್ ಪಾದಯಾತ್ರೆಯ ಮೂಲಕ ರೈತರು ಹಾಗೂ ಕೃಷಿ ಕಾರ್ಮಿಕರು ದಾವಣಗೆರೆ ನಗರಕ್ಕೆ ಜಿಲ್ಲೆಯ ಮಠಾದೀಶರುಗಳ ಜೊತೆಗೆ ಆಗಮಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿ ಅಂದಿನಿಂದ ಧರಣಿ ಸತ್ಯಾಗ್ರಹವನ್ನು ಆರಂಭಿಸಿದರು. ನಂತರ ೧೩ನೇ ತಾರೀಖಿನಿಂದ ರೈತರು ರಕ್ತದಾನ ಶಿಬಿರವನ್ನು ಹಮ್ಮಿಕೊಳ್ಳುವುದರ ಮೂಲಕ ಉಪವಾಸ ಸತ್ಯಾಗ್ರಹವನ್ನು ಗ್ರಾಮಗಳು ಸರದಿಯಂತೆ ಆರಂಭಿಸಿದವು.[೨೦] ಅವುಗಳೆಂದರೆ, ಹೊನ್ನೂರು, ಆನಗೋಡು, ಐಗೂರು, ಕಂದನಕೋವಿ, ಅಣಜಿ, ಹುಲಿಕಟ್ಟೆ, ಹೆಮ್ಮನಬೇತೂರು, ಆಸಗೋಡು, ನೇರ್ಲಿಗೆ, ನರಗನಹಳ್ಳಿ, ಕೊಡಗನೂರು, ಹೆಬ್ಬಾಳು ಮುಂತಾದವು.

ಈ ಸತ್ಯಾಗ್ರಹ ನಡೆಯುವ ಸಂದರ್ಭದಲ್ಲಿ ಅಂದರೆ ದಿನಾಂಕ:೦೫-೧೨-೨೦೦೬ರಂದು ಬೃಹತ್ ನೀರಾವರಿ ಸಚಿವರಾಗಿದ್ದ ಕೆ.ಎಸ್. ಈಶ್ವರಪ್ಪನವರು ಸ್ಥಳಕ್ಕೆ ಭೇಟಿಕೊಟ್ಟರು. ರೈತ ಸತ್ಯಾಗ್ರಹಿಗಳು ೧೯೯೮ರಲ್ಲಿ ಮಂಜೂರಾತಿ ಪಡೆದಂತಹ ಈ ಕೆರೆಗಳ ಯೋಜನೆಗೆ ಸರ್ವೆ ಮಾಡಲು ಅನುಮತಿ ನೀಡಿ ಇದಕ್ಕೆ ಬೇಕಾಗುವ ಹಣವನ್ನು ಕೂಡಲೇ ಬಿಡುಗಡೆ ಮಾಡಬೇಕೆಂದು ಆಗ್ರಹಿಸಿದರು. ನೀರು ತುಂಬಿಸಬೇಕಾದ ಕೆರೆಗಳ ಹೆಸರುಗಳ ಪಟ್ಟಿಯ ವಿವರ ಮತ್ತು ಈ ಸರದಿ ಉಪವಾಸ ಸತ್ಯಾಗ್ರಹವು ಯಾವುದೇ ಕಾರಣಕ್ಕೂ ನಿಮ್ಮ ಭರವಸೆಗಳ ಆಧಾರದ ಮೇಲೆ ನಿಲ್ಲಿಸಲು ತಯಾರಿಲ್ಲ. ಈ ಒಂದು ಬೇಡಿಕೆಗೆ ರಾಜ್ಯ ಸರ್ಕಾರವು ನಕಾರಾತ್ಮಕವಾಗಿ ಸ್ಪಂಧಿಸದೇ ಇದ್ದರೆ ಬೇರೆ ರೀತಿಯ ಕಾರ್ಯಕ್ರಮಗಳನ್ನು ಸಂಘಟಿಸುವ ಅನಿವಾರ್ಯತೆ ಇರುತ್ತದೆ ಎಂಬ ಮನವಿ ಪತ್ರವನ್ನು ನೀಡಿದರು.[೨೧] ರೈತರ ಮನವಿಗೆ ಪ್ರತಿಕ್ರಿಯಿಸಿದ ಸಚಿವರು ಯೋಜನೆಯ ಜಾರಿಗೆಗೆ ಭರವಸೆ ನೀಡಿ ತಂಪುಪಾನಿಯಗಳನ್ನು ವಿತರಿಸುವ ಮೂಲಕ ಸತ್ಯಾಗ್ರಹವನ್ನು ಅಂತ್ಯಗೊಳಿಸಿದರು.

ಸಚಿವರು ಈ ವಿಷಯಕ್ಕೆ ಸಂಬಂಧಿಸಿದಂತೆ, ಸಣ್ಣ ಮತ್ತು ಬೃಹತ್ ನೀರಾವರಿ ಇಲಾಖೆಯ ಅಧಿಕಾರಿಗಳೊಂದಿಗೆ ಚರ್ಚಿಸಿ, ಸಣ್ಣ ನೀರಾವರಿ ಇಲಾಖೆಗೆ ಸಂಬಂಧಿಸಿದ ಈ ಕಾಮಗಾರಿಗಳನ್ನು ಮಧ್ಯಮ ಮತ್ತು ಬೃಹತ್ ನೀರಾವರಿ ಇಲಾಖೆಗೆ ವರ್ಗಾವಣೆ ಮಾಡಿ, ಇದಕ್ಕೆ ಸೂಕ್ತ ಹಣಕಾಸಿನ ನೆರವನ್ನು ಕಲ್ಪಿಸಲು ಸಚಿವ ಸಂಪುಟ ಸಭೆ ಮುಂದೆ ಮಂಡಿಸಿ ಅನುಮೋದನೆ ಪಡೆಯಲು ಕ್ರಮಕೈಗೊಂಡರು. ಈ ವಿಷಯವನ್ನು ಜಲಸಂಪನ್ಮೂಲ ಸಚಿವರ ಆಪ್ತಕಾರ್ಯದರ್ಶಿಯು, ಶ್ರೀಶ್ರೀಶ್ರೀ ಸಿರಿಗೆರೆ ಮಾಹಾಸ್ವಾಮೀಜಿಯವರಿಗೆ ದಿನಾಂಕ:೧೧-೧೨-೨೦೦೬ ರಂದು ಪತ್ರ

ಬರೆದು ತಿಳಿಸಿದರು.[೨೨] ಈ ಸಂದರ್ಭದಲ್ಲಿ ೧೯ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿಯು ಅದೇ ದಿನದಂದು ಶ್ರೀಗಳ ಬಳಿ ಬಂದು ಈ ಸಂಬಂಧವಾಗಿ ಅನೇಕ ವಿಷಯಗಳನ್ನು ಚರ್ಚಿಸಿದರು.

ತದ ನಂತರ ಸಮಿತಿಯು ತನ್ನ ಮುಂದಿನ ಹೋರಾಟದ ರೂಪ ರೇಷಗಳನ್ನು ಚರ್ಚಿಸಿ ತೀರ್ಮಾನಿಸುವ ಸಲುವಾಗಿ ದಿನಾಂಕ:೧೩–೧೨–೨೦೦೬ರ ಬುಧವಾರ ೧೯ ಕೆರೆಗಳ ಹಾಗೂ ಇನ್ನಿತರ ಕೆರೆಗಳ ಭಾಗದ ರೈತರ ಸಭೆಯನ್ನು ರೋಟರಿ ಬಾಲಭವನದಲ್ಲಿ ಕರೆಯಲಾಯಿತು. ಸರ್ಕಾರ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದರೆ ಮುಂದೆ ಹೋರಾಟ ಮಾಡುವುದಾಗಿ ನಿರ್ಣಯ ಕೈಗೊಂಡರು. ಆದರೆ ಸರ್ಕಾರವು ದಿನಾಂಕ: ೦೫–೦೧–೨೦೦೭ ರಲ್ಲಿ ಆದೇಶ ಸಂಖ್ಯೆ:ಸನೀಇ/೩೩/ಏನೀಯೋ/೨೦೦೬ ರ ಉಲ್ಲೇಖಿತ ಆದೇಶದಂತೆ, ಹರಿಹರ ತಾಲ್ಲೂಕಿನ ರಾಜನಹಳ್ಳಿ ಬಳಿ ತುಂಗಾಭದ್ರಾ ನದಿಯಿಂದ ನೀರನ್ನು ಮೇಲೆತ್ತಿ ದಾವಣಗೆರೆ ಜಿಲ್ಲೆಯ ೧೯ ಕೆರೆಗಳಿಗೆ ಹಾಗೂ ಹಗರಿಬೊಮ್ಮನಹಳ್ಳಿಯ ಜಲಾಶಯಗಳಿಗೆ ಏತ ನೀರಾವರಿಯ ಮೂಲಕ ನೀರು ತುಂಬಿಸಲು ೧೦೦ ಕೋಟಿ ಮೊತ್ತದ ಯೋಜನೆಯನ್ನು ಅನುಷ್ಠಾನಗೊಳಿಸಲು ನೀರಾವರಿ ನಿಗಮಕ್ಕೆ ನೀಡಲಾಯಿತು. ಅದಕ್ಕೆ ಆಗಬಹುದಾದ ಅಂದಾಜು ಮೊತ್ತವನ್ನು ತಿಳಿಸಲು ಹೇಳಲಾಗಿ ಯೋಜನೆಯನ್ನು ಅನುಷ್ಠಾನಕ್ಕೆ ತಂದಿತು. ಇದರಿಂದಾಗಿ ರೈತರು ತಮ್ಮ ಹೋರಾಟವನ್ನು ನಿಲ್ಲಿಸಿದರು.

ಈ ಸಮಿತಿಯು ಹಾಗೂ ರೈತರು ಶ್ರೀಗಳ ಜೊತೆ ಚರ್ಚೆಯಲ್ಲಿದ್ದಾಗ ಈ ೧೯ ಕೆರೆಗಳ ಜೊತೆಗೆ ಹೊಸದಾಗಿ ಮೂರು ಕೆರೆಗಳಾದ ಆಲೂರು, ಹಾಲೇಕಲ್ಲು, ಹಾಗೂ ಬಿಳಿಚೋಡು ಕೆರೆಗಳನ್ನು ಸರ್ಕಾರ ಏತ ನೀರಾವರಿಯ ಯೋಜನೆಯ ವ್ಯಾಪ್ತಿಗೆ ಸೇರಿಸುವುದು ಸ್ವಾಗತಾರ್ಹ ಎಂದು ಈ ಸಮಿತಿಯ ಅಧ್ಯಕ್ಷರಾದ ಡಾ॥ ಜಿ. ಮಂಜುನಾಥಗೌಡರು ತಿಳಿಸಿ ಎಲ್ಲರ ಒಪ್ಪಿಗೆ ಪಡೆದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಈ ಕೆರೆಗಳನ್ನು ಸೇರಿಸುವಲ್ಲಿ ಯಶಸ್ವಿಯಾದರು. ನಂತರ ಸರ್ಕಾರ ಯೋಜನೆಯ ಟೆಂಡರ್ ಪ್ರಕ್ರಿಯೆಯನ್ನು ದಿನಾಂಕ:೧೧–೦೭–೨೦೦೭ರಂದು ಕರೆಯಿತು. ಆಗ ಯೋಜನೆಯು ಎಲ್.ಅಂಡ್.ಟಿ. ಕಂಪನಿ, ಬೆಂಗಳೂರು, ಇವರಿಗೆ ಲಭಿಸಿತು.

ತಾಂತ್ರಿಕ ಮಂಜೂರಾತಿಯ ಅನ್ವಯದಂತೆ (ಮುಖ್ಯ ಇಂಜಿನಿಯರ್ ಕರ್ನಾಟಕ ನೀರಾವರಿ ನಿಗಮ ನಿಯಮಿತ, ತುಂಗಾ ಮೇಲ್ದಂಡೆ ಯೋಜನೆ ವಲಯ, ಶಿವಮೊಗ್ಗ ಇ.ಆರ್.ಸಂಖ್ಯೆ ೧೨೫೩/೨–೦, ದಿನಾಂಕ:೧೪/೦೮/೨೦೦೭). ೨೨ ಕೆರೆಗಳಿಗೆ ನೀರು ತುಂಬಿಸಲು ೧೧೨.೬೯ ಲಕ್ಷಗಳ ಅಂದಾಜು ಮೊತ್ತ ಬಿಡುಗಡೆ ಮಾಡಿ, ೨ ವರ್ಷಗಳಲ್ಲಿ ಈ ಕಾಮಗಾರಿಯನ್ನು ಪೂರ್ಣಗೊಳಿಸಲು ಸೂಚನೆ ನೀಡಿತು.[೨೩] ನೀರಾವರಿ ನಿಗಮದ ಸಭೆಯಲ್ಲಿ ಈ ವಿಷಯದ ಬಗ್ಗೆ ೫ ಬಾರಿ ಪ್ರಸ್ತಾವನೆ ಬಂದಿದ್ದರೂ, ಈ ವಿಷಯದ ಬಗ್ಗೆ ಚರ್ಚೆ ನಡೆಸದೆ ಒಪ್ಪಿಗೆಯನ್ನು ನೀಡದೆ ಯೋಜನೆಯ ಹಿನ್ನಡೆಗೆ ಕಾರಣರಾದರು. ಇದನ್ನು ವಿರೋಧಿಸಿ ಮಾನ್ಯ ಮುಖ್ಯಮಂತ್ರಿಗಳ ಗಮನಕ್ಕೆ ತಂದು, ಕಾಮಗಾರಿ ಆರಂಭಿಸಲು ಆದೇಶ ಹೊರಡಿಸದಿದ್ದಲ್ಲಿ ದಿನಾಂಕ:೩೦–೦೬–

೨೦೦೮ ರಿಂದ ಉಗ್ರ ಚಳವಳಿ ಆರಂಭಿಸುವುದಾಗಿ ಹೋರಾಟ ಸಮಿತಿಯು ನಿರ್ಧರಿಸಿದಾಗ ಈ ಕಾಮಗಾರಿಯ ಆರಂಭಕ್ಕೆ ದಿನಾಂಕ:೨೧-೦೮-೨೦೦೮ ರಂದು ಒಪ್ಪಿಗೆ ಸಿಕ್ಕಿತು.

ಯೋಜನೆಯ ಕಾಮಗಾರಿ ಆರಂಭವಾದ ದಿನದಿಂದ ಎರಡು ವರ್ಷಗಳಿಗೆ ಪೂರ್ಣಗೊಳ್ಳಬೇಕಾಗಿತ್ತು. ಆದರೆ ಮಂದಗತಿಯಲ್ಲಿ ಸಾಗಿದ್ದರಿಂದ ಆರು ವರ್ಷಗಳಿಗೆ ಮುಗಿಯಿತು. ಈ ಕಾಮಗಾರಿ ಯಶಸ್ವಿಯಾಗಿದೆಯೇ ಇಲ್ಲವೇ ಎಂದು ಪರೀಕ್ಷಾರ್ಥವಾಗಿ ೨೪ ಏಪ್ರಿಲ್ ೨೦೧೪ ರಂದು ನೀರನ್ನು ಬಿಟ್ಟಾಗ ೧೮ ಕೆರೆಗಳಿಗೆ ಪೈಪ್ ಮೂಲಕ ನೀರು ಬಂದು ಯಶಸ್ವಿಯಾಗಿದ್ದು, ಇನ್ನೂ ೪ ಕೆರೆಗಳಿಗೆ ನೈಸರ್ಗಿಕ ಕಾಲುವೆಗಳ ಮೂಲಕ ನೀರನ್ನು ಬಿಟ್ಟಿದ್ದು ಯಶಸ್ವಿಯಾಗಿಲ್ಲ. ಈ ಕೆರೆಗಳಿಗೂ ಪೈಪ್ ಮೂಲಕ ನೀರನ್ನು ಬಿಡಲು ೭.೫೦ ಕೋಟಿ ಮೊತ್ತದ ಅವಶ್ಯಕತೆಯಿದ್ದು ಸರ್ಕಾರಕ್ಕೆ ಮನವಿ ನೀಡಿದ್ದಾರೆ. ಆದರೆ ಸರ್ಕಾರ ಕೇವಲ ಮೌಖಿಕವಾಗಿ ಹಣ ಬಿಡುಗಡೆ ಮಾಡಲು ಹೇಳಿದೆಯೇ ಹೊರತು ಇಲ್ಲಿಯವರೆಗೆ ಕಾರ್ಯರೂಪಕ್ಕೆ ತಂದಿರುವುದಿಲ್ಲ.

ಈ ಯೋಜನೆಯಿಂದಾಗಿ ೧೮ ಪ್ರಮುಖ ಕೆರೆಗಳಿಗೆ ನೀರನ್ನು ಬಿಡಲಾಗಿದ್ದು ೧೩೫ ಹಳ್ಳಿಗಳ ೧,೩೫,೦೦೦ ಜನರಿಗೆ ನೀರಿನ ಸೌಲಭ್ಯ ಒದಗಿದೆ. ಅಂತರ್ಜಲದ ಮಟ್ಟ ಹೆಚ್ಚಾಗಿದೆ. ಒಣಗಿಹೋದ ಬೋರ್‌ವೆಲ್‌ಗಳು ನೀರಿನಿಂದ ತುಂಬಿವೆ, ನೀರಿನಲ್ಲಿ ಫ್ಲೋರೈಡ್ ಅಂಶವು ಕಣ್ಮರೆಯಾಗುತ್ತಿದೆ. ದನಕರುಗಳಿಗೆ ಕುಡಿಯಲು ನೀರು ಲಭ್ಯವಾಗಿದೆ. ಕೃಷಿಕರು ಭೂಮಿಯನ್ನು ನೀರಾವರಿಗೆ ಒಳಪಡಿಸಿ ಅಧಿಕ ಲಾಭ ಪಡೆಯುತ್ತಿದ್ದಾರೆ.

**ಎ.ಪಿ.ಎಂ.ಸಿ ಜಾಗ ಒತ್ತುವರಿ ರೈತ ಸಂಘದ ಪ್ರತಿಭಟನೆ:- ೧೩/೦೭/೧೯೯೫** ದಾವಣಗೆರೆ ನಗರದ ಎ.ಪಿ.ಎಂ.ಸಿ ಮಾರುಕಟ್ಟೆ ವತಿಯಿಂದ, ತರಕಾರಿ ಹಣ್ಣು ಹಂಪಲು ಮಾರುಕಟ್ಟೆ ನಿರ್ಮಾಣಕ್ಕಾಗಿಜಾಗವನ್ನುಮೀಸಲಿಡಲಾಗಿತ್ತು. ರೈತ ಭವನದ ಹತ್ತಿರದ ಈ ಜಾಗದಲ್ಲಿ ನಗರದ ಪ್ರಭಾವಿ ಜನರು, ದೇವರ ಹೆಸರಿನಲ್ಲಿ ಕಲ್ಲಿನ ಬೋರ್ಡ್‌ಗಳನ್ನು ಹಾಕಿಸಿದ್ದರು. ಇದನ್ನು ಪ್ರತಿಭಟಿಸಿದ ರೈತ ಸಂಘದ ಕಾರ್ಯಕರ್ತರು ಸಾರ್ವಜನಿಕ ಉದ್ದೇಶಕ್ಕೆ ಪೂರಕವಾಗಿರಬೇಕೆಂದು, ಕಲ್ಲಿನ ಬೋರ್ಡ್‌ಗಳನ್ನು ಕಿತ್ತು ಹಾಕುವ ಮೂಲಕ ಮಿಂಚಿನ ಕಾರ್ಯಾಚರಣೆ ನಡೆಸಿದರು.

ರಾಜ್ಯ ರೈತ ಸಂಘದ ತಾಲೂಕು ಸಮಿತಿಯು ೧೯೯೩ ರ ಏಪ್ರೀಲ್‌ನಲ್ಲಿಯೇ ತರಕಾರಿ ಮಾರುಕಟ್ಟೆ ಆಸ್ತಿ ಕಬಳಿಕೆ, ರೈತ ಭವನ ಪ್ರಾರಂಭ, ಎ.ಪಿ.ಎಂ.ಸಿ ಮಾರುಕಟ್ಟೆಯಲ್ಲಿ ರೈತರ ಸಮಸ್ಯೆಗಳು, ಸರ್ಕಾರದ ಮಲ ತಾಯಿ ಧೋರಣೆಯನ್ನು ಖಂಡಿಸಿದರು. ಆಕ್ರಮ ಅನ್ಯಾಯವನ್ನು ಸರಿಪಡಿಸುವ ಬಗ್ಗೆ ಇಲ್ಲಿಯವರೆಗೂ ಯಾವುದೇ ಕ್ರಮವನ್ನು ಕೈಗೊಳ್ಳದಿರುವುದನ್ನು ಪ್ರತಿಭಟಿಸಿ, ಎ.ಪಿ.ಎಂ.ಸಿ ಕಾರ್ಯದರ್ಶಿಗೆ ಘೇರಾವ್ ಹಾಕಿದರು. ಇನ್ನು ೧೫ ದಿನಗಳ ಒಳಗಾಗಿ ರೈತರಿಗೆ ಆಗಿರುವ ಅನ್ಯಾಯವನ್ನು ಸರಿಪಡಿಸದಿದ್ದರೆ ಎ.ಪಿ.ಎಂ.ಸಿ ಕಛೇರಿಗೆ ಬೀಗ ಜಡಿದು ಉಗ್ರ ರೀತಿಯಲ್ಲಿ ಪ್ರತಿಭಟನೆ ನಡೆಸುವುದಾಗಿ ಎಚ್ಚರಿಕೆ ನೀಡಿದ್ದಾರೆ.

**ವರ್ತಕರ ಶೋಷಣೆಯನ್ನು ವಿರೋಧಿಸಿ ರೈತರ ಪ್ರತಿಭಟನೆ ಹಾಗೂ ಕಾಲ್ನಡಿಗೆ ಜಾಥಾ:- ೦೮/೧೨/೧೯೯೫**

ನಗರದ ಕೃಷಿ ಉತ್ಪನ್ನ ಮಾರುಕಟ್ಟೆ ಎ.ಪಿ.ಎಂ.ಸಿ.ಯಲ್ಲಿಡಿಸೆಂಬರ್ ೪ ರಂದು ವರ್ತಕರು ರೈತರ ದವಸ ಧಾನ್ಯಗಳನ್ನು ಖರೀದಿಸದೆ ದಿಡೀರ್ ಮುಷ್ಕರ ನಡೆಸಿದರು. ಈ ಸಮಯದಲ್ಲಿ ರೈತರ ಮೇಲೆ ಹಲ್ಲೆ, ದೌರ್ಜನ್ಯವನ್ನು ಎಸಗಿದ್ದು, ಅಮಾಯಕ ರೈತ ಕುರ್ಕಿ ಪಂಚಾಕ್ಷರಪ್ಪ ಮತ್ತು ಇತರರ ಮೇಲೆ ಮಾರಣಾಂತಿಕ ಹಲ್ಲೆ ನಡೆಸಿದ್ದರು. ಈ ಕೃತ್ಯವನ್ನು ವಿರೋಧಿಸಿ ದಲ್ಲಾಲರಿಂದ ರೈತರ ಮೇಲೆ ನಡೆಯುವ ಶೋಷಣೆ ತಪ್ಪಿಸಲು ಎ.ಪಿ.ಎಂ.ಸಿ ಆಡಳಿತ ವರ್ಗದ ರೈತ ವಿರೋಧಿ ನೀತಿಯನ್ನು ಪ್ರತಿಭಟಿಸಿದರು. ಕರ್ನಾಟಕ ರಾಜ್ಯ ರೈತ ಸಂಘ ತಾಲೂಕು ಸಮಿತಿಯಿಂದ ಡಿಸೆಂಬರ್ ೦೮ ೧೯೯೫ರಂದು ಶುಕ್ರವಾರ ತಾಲೂಕಿನ ಕುರ್ಕಿಯಿಂದ ದಾವಣಗೆರೆ ನಗರದ ಎ.ಪಿ.ಎಂ.ಸಿ ಮಾರುಕಟ್ಟೆ ಕಛೇರಿಗೆ, ರೈತರ ಸ್ವಾಭಿಮಾನಿ ಕಾಲು ನಡಿಗೆ ಜಾಥ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆಯೆಂದು ರೈತ ಸಂಘದ ಸಂಚಾಲಕರಾದ ಅವರಗೆರೆ ರುದ್ರಮುನಿ ಕರೆ ಕೊಟ್ಟರು.

ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿ ರೈತರ ದವಸ-ಧಾನ್ಯಗಳಿಗೆ ಸರಿಯಾದ ಬೆಲೆ ಸಿಗದೆ ರೈತ ಕುಟುಂಬಗಳು ಬೀದಿ ಪಾಲಾಗುತ್ತಿವೆ. ಕಳೆದ ತಿಂಗಳು ಸುಮಾರು ೧೦ ದಿನಗಳ ಕಾಲ ರಾಜ್ಯದಾದ್ಯಂತ ರೈತರ ಧಾನ್ಯಗಳನ್ನು ಖರೀದಿಸದೆ ರೈತರಿಗೆ ತುಂಬಾ ತೊಂದರೆಯಾಗಿದೆ. ಇದನ್ನೆಲ್ಲಾ ಸಹಿಸಿಕೊಂಡಿದ್ದರೂ ಸಹ ಪುನಃ ಯಾವುದೇ ಮುನ್ಸೂಚನೆ ನೀಡದೆ ಮಾರುಕಟ್ಟೆಯಲ್ಲಿ ವರ್ತಕರು ದಿಡೀರ್ ಮುಷ್ಕರ ನಡೆಸುವುದನ್ನು ರಾಜ್ಯ ರೈತ ಸಂಘ ಉಗ್ರವಾಗಿ ಖಂಡಿಸುತ್ತದೆ. ರೈತರ ಸಮಸ್ಯೆಗಳನ್ನು ಬಗೆಹರಿಸಲು ಅಧಿಕಾರಿಗಳು ಮತ್ತು ಸರ್ಕಾರಕ್ಕೆ, ರೈತ ವಿರೋಧಿ ನೀತಿಯನ್ನು ಅನುಸರಿಸುವ ಮಂತ್ರಿ ಹಾಗೂ ಶಾಸಕರಿಗೆ ಎಚ್ಚರಿಕೆ ನೀಡಲು ಮತ್ತು ತಪ್ಪಿತಸ್ಥ ವರ್ತಕರ ಮೇಲೆ ಉಗ್ರಕ್ರಮ ಕೈಗೊಂಡು ಶಿಕ್ಷೆ ನೀಡಬೇಕೆಂದು ಒತ್ತಾಯಿಸಿದರು. ಹಲ್ಲೆಗೆ ಒಳಗಾದ ಅಮಾಯಕ ರೈತರಿಗೆ ನ್ಯಾಯ ದೊರಕಿಸಿಕೊಡಲು ರೈತ ಸಂಘ ಮುಂದಾಗಿದೆ ಎಂದರು.

ವರ್ತಕರು ನಡೆಸಿದ ದೌರ್ಜನ್ಯ ಖಂಡಿಸಿ, ಡಿಸೆಂಬರ್ ೮ ೧೯೯೫ ರಂದು ಹಲ್ಲೆಗೊಳಗಾದ ರೈತನ ಊರಿನಿಂದ ನೂರಾರು ರೈತರು ಜಾಥಾವನ್ನು ಆರಂಭಿಸಿದರು. ಎ.ಪಿ.ಎಂ.ಸಿ ಮಾರುಕಟ್ಟೆಯ ಬೀದಿ ಬೀದಿಗಳಲ್ಲಿ ಸಾಗಿದ ರೈತರು, ವರ್ತಕರು ಹಾಗೂ ಖರೀದಿದಾರರ ವಿರುದ್ಧ ಘೋಷಣೆ ಕೂಗಿದರು. ಮಾರುಕಟ್ಟೆಯಲ್ಲಿ ರೈತರ ಪರವಾಗಿರುವ ಕಾನೂನು ಕಟ್ಟಳೆಗಳು ಜಾರಿಯಾಗದೇ ದಲ್ಲಾಳರು, ವರ್ತಕರು ಮತ್ತು ಖರೀದಿದಾರರಿಂದ ರೈತರ ಹಗಲು ದರೋಡೆ ನಡೆಯುತ್ತಿದೆ. ಕೃಷಿ ಉತ್ಪನ್ನ ಮಾರುಕಟ್ಟೆ ಬೇಜವಬ್ದಾರಿ ಆಡಳಿತ ವರ್ಗ ರೈತರಿಗೆ ಯಾವುದೇ ಸವಲತ್ತು ಸಹಾಯ ನೀಡುತ್ತಿಲ್ಲ. ಹೀಗಾಗಿ ರೈತರು ಕಳ್ಳ-ಖದೀಮರ ಕಪಿಮುಷ್ಠಿಯಲ್ಲಿ ಸಿಕ್ಕಿ ಹಾಕಿಕೊಂಡು ಅಸಹಾಯಕರಾಗಿದ್ದಾರೆಂದು ಆರೋಪ ಮಾಡಿ ಎ.ಪಿ.ಎಂ.ಸಿ ಮಾರುಕಟ್ಟೆಯ ಮುಂದೆ ಧರಣಿ ನಡೆಸಿದರು.

ಧರಣಿ ನಡೆದ ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರ್ ಆರ್.ಬುಳ್ಳನಗೌಡರವರಿಗೆ ಮನವಿ ಪತ್ರ ಸಲ್ಲಿಸಿದರು. ಮನವಿಯಲ್ಲಿ ವರ್ತಕ ಖರೀದಿದಾರರ ದಿಢೀರ್ ಮುಷ್ಕರದಲ್ಲಿ ಅಮಾಯಕ ರೈತರ ಮೇಲೆ ನಡೆದ ಮಾರಾಣಾಂತಿಕ ಹಲ್ಲೆಯ ಬಗ್ಗೆ ಉಗ್ರಕ್ರಮ ಕೈಗೊಂಡು, ಕಠಿಣ ಶಿಕ್ಷೆ ನೀಡಲು ಆಗ್ರಹಿಸಲಾಗಿತ್ತು. ಇದಲ್ಲದೆ ದಲ್ಲಾಲರಿಂದ ಆಕ್ರಮವಾಗಿ ವಸೂಲಾಗುತ್ತಿರುವ ಕಮೀಷನ್ ಹಣ ಹಾಗೂ ಬಿಳಿ ಚೀಟಿ ಪ್ರಕರಣ ಕುರಿತು ಪರಿಶೀಲಿಸಲು ಹಾಗೂ ರೈತ ಭವನದಲ್ಲಿ ತರಕಾರಿ ಮಾರುಕಟ್ಟೆ ನಿರ್ಮಾಣ ವಿಳಂಬದ ಬಗ್ಗೆ ಗಮನ ಹರಿಸಲು ಒತ್ತಾಯಿಸಲಾಯಿತು.[೨೪]

ಈ ಜಾಥಾದ ಮುಂದಾಳತ್ವ ವಹಿಸಿದ ರೇವಣಸಿದ್ದಪ್ಪ ಮಾತನಾಡುತ್ತ ರೈತರು ಸಂಘಟನೆಯಲ್ಲಿ ಒಂದುಗೂಡುವುದು ಕಡಿಮೆ. ಸಂಘಟನೆಯಾದರೆ ಪ್ರಾಣಹೋದರು ಹಿಂದಕ್ಕೆ ಕಾಲು ತೆಗೆಯಲ್ಲ. ರೈತರು ಎಲ್ಲಿಯವರೆಗೂ ಸಂಘಟನೆಯಾಗುವುದಿಲ್ಲವೋ, ಅಲ್ಲಿಯವರೆಗೂ ಈ ವರ್ತಕರ, ದಲ್ಲಾಳಿಗಳ ಹಾಗೂ ಖರೀದಿದಾರರ ಶೋಷಣೆ ನಿಲ್ಲುವುದಿಲ್ಲವೆಂದು ತಿಳಿಸಿ, ರೈತರು ಜಾಗೃತರಾಗಲು ಕರೆ ಕೊಟ್ಟರು. ನಗರವಾಸಿ ವರ್ತಕರು ಸುಮಾರು ೪೦ ಮಂದಿ ಇದ್ದಾರೆ. ಹಳ್ಳಿಗಳಿಂದ ಬಂದವರೇ ೩೬೦ ಕ್ಕೂ ಹೆಚ್ಚು ಮಂದಿ ಇದ್ದಾರೆ. ಹೀಗಿದ್ದು ರೈತರ ಮೇಲೆ ಹಲ್ಲೆ ಅನ್ಯಾಯದ ವಿರುದ್ಧ ಒಂದು ಸಾಂತ್ವಾನ ಹೇಳಿಕೆ ಬಂದಿಲ್ಲ. ಏಕೆ? ಎಂದು ಟೀಕಿಸಿದರು.

ಇನ್ನೋರ್ವ ರೈತ ಮುಖಂಡ ಬೊಮ್ಮೇನಹಳ್ಳಿ ನಾಗರಾಜ್ ಮಾತನಾಡುತ್ತಾ, ಎಡಗೈ ಹಣ ಬಲಗೈಗೆ ಕೊಟ್ಟು ಸಂಪಾದಿಸೋ ನೀಚತನ ರೈತರದಲ್ಲ. ಕಷ್ಟಪಟ್ಟು ಬೆವರುಸುರಿಸಿ ದುಡಿದು ಬೆಳೆ ತೆಗೆಯುತ್ತಾರೆ. ಈ ಅರಿವು ವರ್ತಕರಿಗೆ ಇರಲಿ. ಇಲ್ಲದಿದ್ದರೆ ರಾಜಕೀಯ ಮುಖಂಡರಾಗೋ ಈ ದಲ್ಲಾಳಿಗಳ ಲೈಸೆನ್ಸ್‌ನ್ನು ಕಾನೂನು ರೀತಿ ರದ್ದು ಮಾಡಿಸೋ ಧೈರ್ಯ ರೈತರಿಗಿದೆ ಎಂದು ಎಚ್ಚರಿಸಿದರು.

ಪ್ರತಿಭಟನಾ ಸ್ಥಳಕ್ಕೆ ಬಂದಿದ್ದ ತಹಶೀಲ್ದಾರರು, ಎಲ್ಲಾ ರೈತರ ಆರೋಪಗಳನ್ನು ಪರಿಶೀಲಿಸಿ ಕ್ರಮಕೈಗೊಳ್ಳುವುದಾಗಿ ಭರವಸೆ ನೀಡಿದರು. ಇದರಿಂದಾಗಿ ರೈತರು ತಮ್ಮ ಧರಣಿಯನ್ನು ಹಿಂತೆಗೆದುಕೊಂಡರು. ಈ ಪ್ರತಿಭಟನೆಯ ಮುಂದಾಳತ್ವವನ್ನು ರೈತ ಮುಖಂಡರಾದ ಅವರಗೆರೆ ರುದ್ರಮುನಿ, ತಾಲೂಕು ಅಧ್ಯಕ್ಷ ಹೊನ್ನೂರು ಮುನಿಯಪ್ಪ, ಜಿಲ್ಲಾ ಸಂಘಟನಾ ಕಾರ್ಯದರ್ಶಿ ಅರುಣ್‌ಕುಮಾರ್‌ಕುರುಡಿ, ರಾಜಪ್ಪ ಕುರ್ಕಿ, ಮುಂತಾದವರು ವಹಿಸಿದ್ದರು.

**ಕಳಪೆ ಬಿತ್ತನೆ ಬೀಜ: ಪರಿಹಾರಕ್ಕಾಗಿ ಹೊಳಲ್ಕೆರೆ ರೈತ ಸಂಘದ ಪ್ರತಿಭಟನೆ:–**

**೦೪/೦೧/೧೯೯೯**

ಹೊಳಲ್ಕೆರೆಯ ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ನೇತೃತ್ವದಲ್ಲಿ ನೂರಾರು ರೈತರು ಬೆಳೆ ಪರಿಹಾರಕ್ಕಾಗಿ ಒತ್ತಾಯಿಸಿ, ತಹಶೀಲ್ದಾರ್ ಕಛೇರಿಯ ಮುಂದೆ ಜನವರಿ ೦೪ ೧೯೯೯ ರಂದು ಪ್ರತಿಭಟನೆ ಮಾಡಿದರು.

ಕೃಷಿ ಇಲಾಖೆಯು ನೂರಾರು ರೈತರಿಗೆ ಕಳಪೆ ಹತ್ತಿ ಮತ್ತು ಸೂರ್ಯಕಾಂತಿ ಬೀಜ ನೀಡಿದೆ. ಇದರಿಂದಾಗಿ ನೂರಾರು ರೈತರು ಹಾಕಿದ ಬೆಳೆಯು ನಾಶವಾಗಿದ್ದು, ಪರಿಹಾರಕ್ಕಾಗಿ ನೂರಾರು ರೈತರು ನಗರದಾದ್ಯಂತ ಹಾಳಾಗಿರುವ ಬೆಳೆಗಳನ್ನು ಕೈಯಲ್ಲಿ ಹಿಡಿದುಕೊಂಡು, ಮೆರವಣಿಗೆ ಮಾಡುವುದರ ಮೂಲಕ ಪ್ರತಿಭಟನೆ ಮಾಡಿದರು. ಈ ಪ್ರತಿಭಟನೆಯ ನಾಯಕತ್ವ ವಹಿಸಿ ಮಾತನಾಡಿದ ಜಿಲ್ಲಾ ರೈತ ಸಂಘದ ಪ್ರಧಾನ ಕಾರ್ಯದರ್ಶಿ ನುಲೇನೂರು ಶಂಕ್ರಪ್ಪರವರು, ತಾಲೂಕಿನಲ್ಲಿ ನೀಡಿದ ಹತ್ತಿ ಮತ್ತು ಸೂರ್ಯಕಾಂತಿ ಬೀಜಗಳು ಕಳಪೆ ಮಟ್ಟದ್ದಾಗಿದ್ದು ನೂರಾರು ರೈತರ ಹತ್ತಿ, ಸೂರ್ಯಕಾಂತಿ ಫಸಲು ಹಾಳಾಗಿದೆ. ಇದಕ್ಕೆ ಪರಿಹಾರ ಕೋರಿ ಅರ್ಜಿಗಳನ್ನು ಸಲ್ಲಿಸಿದ್ದರೂ ಅಧಿಕಾರಿಗಳು ಏನು ಕ್ರಮ ಕೈಗೊಂಡಿರುವುದಿಲ್ಲ ಎಂದು ಆಪಾದಿಸಿದರು.[೨೫]

ಸಾಲ ಮಾಡಿ ತಂದು ಹಾಕಿದ ಬೀಜಗೊಬ್ಬರದಿಂದ ರೈತರು ಕಂಗಾಲಾಗಿದ್ದಾರೆ. ಆದುದರಿಂದ ಈ ಕೂಡಲೇ ಹತ್ತಿ ಮತ್ತು ಸೂರ್ಯಕಾಂತಿ ಹಾಕಿದ ರೈತರ ಹೊಲಗಳನ್ನು ಸರ್ವೇ ಮಾಡಿ, ತಕ್ಷಣ ಪರಿಹಾರ ಕೊಡಬೇಕೆಂದು ಒತ್ತಾಯಿಸಿ ತಹಶೀಲ್ದಾರ್‌ರವರಿಗೆ ಹಾಗು ಸಂಬಂಧಪಟ್ಟ ಅಧಿಕಾರಿಗಳಿಗೆ ಮನವಿ ಪತ್ರ ಸಲ್ಲಿಸಿದರು. ಮನವಿ ಸ್ವೀಕರಿಸಿದ ತಹಶೀಲ್ದಾರ್‌ರು, ಜಿಲ್ಲಾಧಿಕಾರಿಗಳು ಹಾಗೂ ಸರ್ಕಾರದ ಗಮನಕ್ಕೆ ತಂದು ಸಮಸ್ಯೆಗೆ ಸೂಕ್ತ ಪರಿಹಾರ ಕೈಗೊಳ್ಳುವದಾಗಿ ಭರವಸೆ ನೀಡಿದರು. ಈ ಪ್ರತಿಭಟನೆಯಲ್ಲಿ ರೈತ ಮುಖಂಡರು ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿರುದ್ಧ ಹೊಳಲ್ಕೆರೆ ರೈತರ ಪ್ರತಿಭಟನೆ:- ೧೬/೦೨/೧೯೯೯**

ಚಿತ್ರದುರ್ಗ ಜಿಲ್ಲೆ ಹಾಗು ಹೊಳಲ್ಕೆರೆ ತಾಲೂಕಿನ ನೂರಾರು ರೈತರು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೈತ ವಿರೋಧಿ ನೀತಿ ಅನುಸರಿಸುತ್ತಿವೆ ಎಂದು ಫೆಬ್ರವರಿ ೧೬ ೧೯೯೯ ರಂದು ತಹಶೀಲ್ದಾರ್ ಕಛೇರಿಯ ಮುಂದೆ ಪ್ರತಿಭಟನೆ ಮಾಡಿದರು.

ಈ ಪ್ರತಿಭಟನೆಯ ನೇತೃತ್ವವಹಿಸಿ ಮಾತನಾಡಿದ ಜಿಲ್ಲಾ ರೈತ ಸಂಘದ ಪ್ರಧಾನ ಕಾರ್ಯದರ್ಶಿ ಟಿ. ನುಲೇನೂರು ಶಂಕ್ರಪ್ಪರವರು, ಜಿಲ್ಲೆಯಲ್ಲಿ ಹತ್ತಿ ಬೆಲೆ ಸಂಪೂರ್ಣವಾಗಿ ವಿಫಲವಾಗಿದೆ. ಆದುದರಿಂದ ಈ ಕೂಡಲೇ ಹತ್ತಿ ಬೆಳೆದ ರೈತರಿಗೆ ಪರಿಹಾರ ಕೊಡಬೇಕು. ಗ್ರಾಮಾಂತರ ಪ್ರದೇಶದಲ್ಲಿ ಗುಣಮಟ್ಟದ ವಿದ್ಯುತ್ ನೀಡಬೇಕು. ಗ್ರಾಮಗಳಲ್ಲಿ ನ್ಯಾಯ ಬೆಲೆ ಅಂಗಡಿಗಳು ಖಾಸಗಿ ಅಂಗಡಿಗಳಂತೆ ಕಾರ್ಯನಿರ್ವಹಿಸುತ್ತಿವೆ. ಈ ಕೂಡಲೇ ನ್ಯಾಯ ಬೆಲೆ ಅಂಗಡಿಗಳನ್ನು ಸರಿಪಡಿಸಬೇಕು. ದೇಶದಲ್ಲಿ ಸಕ್ಕರೆ ಉತ್ಪಾದನೆ ಹೆಚ್ಚಾಗಿರುವುದರಿಂದ ಆಮದು ನಿಲ್ಲಿಸಿ, ರಫ್ತು ಹೆಚ್ಚಿಸಬೇಕು. ಜಿಲ್ಲೆಗೆ ಪೂರ್ಣ ಪ್ರಮಾಣದಲ್ಲಿ ನೀರುಣಿಸುವ ಯೋಜನೆಯನ್ನು ಪ್ರಕಟಿಸಿ ಕಾಮಗಾರಿಯನ್ನು ಪ್ರಾರಂಭಿಸಬೇಕೆಂದು ಒತ್ತಾಯಿಸಿದರು.[೨೬]

ನಂತರ ನೂರಾರು ರೈತರು ಹಾಗು ರೈತ ಸಂಘದ ಕಾರ್ಯಕರ್ತರು ತಾಲೂಕು ಕಛೇರಿಯ ಮುಂದೆ ಸಂಜೆಯವರೆಗೆ ಪ್ರತಿಭಟನೆ ಮಾಡಿ ತಹಶೀಲ್ದಾರ್‌ರವರಿಗೆ ಮನವಿ ಸಲ್ಲಿಸಿದರು.

**ಇ.ಇ.ಯವರ (Executive Engineer) ವಿರುದ್ಧ ಕ್ರಮಕ್ಕೆ ರಾಜ್ಯ ರೈತ ಸಂಘದ ಪ್ರತಿಭಟನೆ:– ೦೭/೦೩/೧೯೯೯**

ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿ ಸೆಕ್ಷನ್ ಆಫೀಸ್‌ರವರ ಕಛೇರಿಯ ಮುಂದೆ ಕರ್ನಾಟಕ ರಾಜ್ಯ ರೈತ ಸಂಘದ ಮುಂಖಡರು, ಕಾರ್ಯಕರ್ತರು ಹಾಗು ರೈತರು ಸೇರಿ ಇ.ಇ.ಯವರ (Executive Engineer) ವಿರುದ್ಧ ಕ್ರಮ ಕೈಗೊಳ್ಳುವಂತೆ ಒತ್ತಾಯಿಸಿ, ಮಾರ್ಚ್ ೦೭ ೧೯೯೯ ರಂದು ಪ್ರತಿಭಟನೆ ನಡೆಸಿದರು.

ಜಿಲ್ಲಾ ಇಕ್ಸಿಕ್ಯೂಟಿವ್ ಇಂಜಿನಿಯರ್ ಪ್ರತಿಭಟನೆ ನಿರತ ರೈತರಿಗೆ ಸುಳ್ಳು ಆಶ್ವಾಸನೆ ನೀಡಿದ್ದಾರೆ. ವಿದ್ಯುತ್ ಸುಧಾರಣೆಗೆ ಏನೂ ಕ್ರಮ ಕೈಗೊಳ್ಳದೆ ರಜೆ ಹಾಕಿ ಜಿಲ್ಲೆಯಿಂದ ಹೊರ ಹೋಗಿರುವುದನ್ನು ಜಿಲ್ಲಾ ರೈತ ಸಂಘದ ನೇತೃತ್ವದಲ್ಲಿ ಖಂಡಿಸಲಾಯಿತು. ಹೊಣೆಗಾರಿಕೆ ರಹಿತ ಇ.ಇ.ಯು ಜಿಲ್ಲೆಯಲ್ಲಿ ಇರಲು ಅರ್ಹತೆ ಹೊಂದಿಲ್ಲದವರಾಗಿದ್ದು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕು. ದಕ್ಷರಾದ ಬೇರೊಬ್ಬ ಅಧಿಕಾರಿಯನ್ನು ವರ್ಗಾವಣೆ ಮಾಡಬೇಕೆಂದು, ಹುಬ್ಬಳ್ಳಿ ವಲಯದ ಎಸ್.ಇ. ಯವರಿಗೆ ಒತ್ತಾಯಿಸಿ ಜಿಲ್ಲಾ ರೈತ ಸಂಘದವರು ಅಮರಣಾಂತರ ಉಪವಾಸ ಸತ್ಯಾಗ್ರಹ ಆರಂಭಿಸಿದರು. ವಿಷಯ ತಿಳಿದ ಹುಬ್ಬಳ್ಳಿ ವಲಯದ ಸೂಪರಿಂಟೆಂಡೆಂಟ್ ಇಂಜಿನಿಯರ್ ಎಸ್.ಡಿ. ಹುಕ್ಲಿ ಅವರು ನಾಯಕನಹಟ್ಟಿಗೆ ಬಂದು ಪರಿಸ್ಥಿತಿಯನ್ನರಿತು, ೨– ೩ ದಿನಗಳಲ್ಲಿ ಇಡೀ ಜಿಲ್ಲೆಯ ವಿದ್ಯುತ್ ಸಮಸ್ಯೆಯನ್ನು ಸಂಪೂರ್ಣ ಸುಧಾರಿಸುವ ಭರವಸೆ ನೀಡಿ, ಉಪವಾಸ ಕುಳಿತವರಿಗೆ ಹಣ್ಣಿನ ರಸ ನೀಡಿದರು.[೨] ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ಚಿತ್ರದುರ್ಗದಲ್ಲಿ ರೈತ ಸಂಘದಿಂದ ಆಳುವ ಚಳುವಳಿ ಮತ್ತು ಪ್ರತಿಭಟನೆ:– ೨೩/೦೩/೧೯೯೯**

ಚಿತ್ರದುರ್ಗ ಜಿಲ್ಲೆಯಲ್ಲಿ ಸಮರ್ಪಕ ವಿದ್ಯುತ್ ನೀಡುವಂತೆ ಹಾಗೂ ವೋಲ್ಟೇಜ್ ಸುಧಾರಣೆಗೆ ಒತ್ತಾಯಿಸಿ ಜಿಲ್ಲಾ ರೈತ ಸಂಘದವರು ಕೆ.ಇ.ಬಿ. ಕಛೇರಿಯ ಮುಂದೆ ಆಳುವ ಚಳವಳಿ ಹಾಗೂ ಅನಿರ್ದಿಷ್ಟ ಕಾಲದ ಧರಣಿ ಸತ್ಯಾಗ್ರಹವನ್ನು ಮಾರ್ಚ್ ೨೩ ೧೯೯೯ ಆರಂಭಿಸಿದರು.

ಚಿತ್ರದುರ್ಗ ಜಿಲ್ಲೆಯು ಹಿಂದುಳಿದ ಪ್ರದೇಶವಾಗಿದ್ದು, ಯಾವುದೇ ನೀರಾವರಿ ಸೌಲಭ್ಯವಿಲ್ಲದೆ ರೈತರು ಹಾಗೂ ನಗರವಾಸಿಗಳು ಅಂತರ್ಜಲ ನೀರಿನ ಮೂಲವನ್ನು ಅವಲಂಬಿಸಿದ್ದಾರೆ. ಕುಡಿಯಲು, ಗೃಹ ಬಳಕೆಗೆ, ಹಾಗೂ ವ್ಯವಸಾಯಕ್ಕೆ ನೀರಿನ ಅವಶ್ಯಕತೆಯಿದೆ. ಈ ನೀರನ್ನು ಸಂಗ್ರಹಿಸಲು ವಿದ್ಯುತ್ ಅನಿವಾರ್ಯವಾಗಿದೆ. ಅಸಮರ್ಪಕ ವಿದ್ಯುತ್ ಪೂರೈಕೆಯಿಂದ ನೀರು ಸರಬರಾಜಿಗೆ ತೊಂದರೆಯಾಗಿದೆ ಎಂದು ಆರೋಪಿಸಿದರು. ಈ ಹಿಂದೆ ನಾಯಕನಹಟ್ಟಿಯಲ್ಲಿ ರೈತ ಸಂಘ ಪ್ರತಿಭಟನೆ ನಡೆಸಿದಾಗ ಕೆ.ಇ.ಬಿ. ಅಧಿಕಾರಿಗಳು ಬೇಡಿಕೆ ಈಡೇರಿಸುವ ಭರವಸೆ ನೀಡಿದ್ದರು. ಆದರೆ ಅದು ಇದುವರೆಗೆ ಈಡೇರಿಲ್ಲ ಎಂದು ಆಪಾದಿಸಿ, ಸಮಸ್ಯೆ ಬಗೆಹರಿಸುವಂತೆ

ರೈತ ಸಂಘ ಧರಣಿ ಮುಂದುವರೆಸಿತು. ಎರಡನೆಯ ದಿನ ಪ್ರತಿಭಟನೆ ಮುಂದುವರೆದಾಗ ಸ್ಥಳಕ್ಕೆ ಆಗಮಿಸಿದ ಕೆ.ಇ.ಬಿ. ಅಧಿಕಾರಿಗಳು, ಮೂರೇ ದಿನದಲ್ಲಿ ವೋಲ್ಟೇಜ್ ಸಮಸ್ಯೆಯನ್ನು ಹಾಗು ಸಮರ್ಪಕ ವಿದ್ಯುತ್‌ನ್ನು (ದಿನಕ್ಕೆ ೧೦ ಗಂಟೆ) ಪೂರೈಸುವುದಾಗಿ ಭರವಸೆ ನೀಡಿದರು.[೨೮] ಇದರಿಂದಾಗಿ ರೈತ ಸಂಘ ಪ್ರತಿಭಟನೆಯನ್ನು ಅಂತ್ಯಗೊಳಿಸಿತು.

**ಭೂ ಸ್ವಾಧೀನ: ಪರಿಹಾರ ಹಣ ಬಿಡುಗಡೆ ಒತ್ತಾಯಿಸಿ ರೈತ ಪ್ರತಿಭಟನೆ:– ೩೦/೦೬/೨೦೦೧**

ಚಿತ್ರದುರ್ಗದಿಂದ ರಾಯದುರ್ಗದವರೆಗೆ ರೈಲು ಮಾರ್ಗದ ಸಂಬಂಧ ಸ್ವಾಧೀನಪಡಿಸಿಕೊಳ್ಳಲಾದ ಭೂಮಿಗೆ ಪರಿಹಾರ ಧನವನ್ನು ತುರ್ತಾಗಿ ಬಿಡುಗಡೆ ಮಾಡುವಂತೆ ಆಗ್ರಹಿಸಿ, ಮೊಳಕಾಲ್ಮೂರು ತಾಲೂಕಿನ ನೂರಾರು ರೈತರು, ಚಿತ್ರದುರ್ಗ ನಗರದಲ್ಲಿ ಜೂನ್ ೩೦ ೨೦೦೧ ರಂದು ಪ್ರತಿಭಟನಾ ಮೆರವಣಿಗೆಯನ್ನು ಮಾಡಿದರು. ಅಂಬೇಡ್ಕರ್ ಪ್ರತಿಮೆ ಬಳಿಯಿಂದ ಪ್ರತಿಭಟನಾ ಮೆರವಣಿಗೆಯನ್ನು ಆರಂಭಿಸಿದ ರೈತರು, ರೈಲ್ವೆ ಇಲಾಖೆಯ ನಿರ್ಲಕ್ಷ್ಯದ ವಿರುದ್ಧ ಘೋಷಣೆ ಕೂಗುತ್ತಾ ಜಿಲ್ಲಾಧಿಕಾರಿ ಕಛೇರಿಯ ಬಳಿ ಬಂದು ಸಭೆ ನಡೆಸಿದರು.[೨೯]

ರೈತರನ್ನು ಉದ್ದೇಶಿಸಿ ಮಾತನಾಡಿದ ರೈತ ಮುಖಂಡರಾದ ಎಂ.ಜಯ್ಯಣ್ಣ ರೈಲು ಸಂಚಾರ ಆರಂಭವಾಗಿ ಹತ್ತು ವರ್ಷಗಳಾಗಿದ್ದು, ಹಳಿಗಳನ್ನು ಹಾಕಲು ರೈಲ್ವೆ ಇಲಾಖೆಯು, ಜಿಲ್ಲಾಡಳಿತದ ಮೂಲಕ ರೈತರ ಜಮೀನನ್ನು ಸ್ವಾಧೀನಪಡಿಸಿಕೊಂಡು, ಅಲ್ಪ ಮಟ್ಟಿನ ಪರಿಹಾರ ನೀಡಿತ್ತು. ನಂತರ ಹೆಚ್ಚುವರಿ ಪರಿಹಾರ ಮೊತ್ತ ಕೋರಿ ರೈಲ್ವೆ ಹಳಿ ಹಾದು ಹೋದಂತೆ ಜಮೀನಿನ ಮಾಲೀಕರು ನ್ಯಾಯಾಲಯದ ಮೊರೆ ಹೋಗಿದ್ದರು. ಅಂತಿಮವಾಗಿ ೧೯೯೯ ಆಗಸ್ಟ್ ೨೧ ರಂದು ಚಿತ್ರದುರ್ಗದಲ್ಲಿ ನಡೆದ ಬೃಹತ್ ಲೋಕ್ ಅದಾಲತ್‌ನಲ್ಲಿ ಪರಸ್ಪರ ಒಡಂಬಡಿಕೆ ಮೂಲಕ ಪರಿಹಾರ ಮೊತ್ತವನ್ನು ಇತ್ಯರ್ಥ ಪಡಿಸಿಕೊಳ್ಳಲಾಗಿದ್ದು, ಇದುವರೆಗೆ ಹಣ ನೀಡಿಲ್ಲವೆಂದು ದೂರಿದರು. ರೈಲ್ವೆ ಹಳಿ ಹಾದು ಹೋಗುವ ಪ್ರದೇಶದಲ್ಲಿ ಬಹುತೇಕ ಸಣ್ಣ ಹಿಡುವಳಿದಾರ ರೈತರಿದ್ದು, ಭೂಮಿ ಕಳೆದುಕೊಂಡು ದುಡಿಮೆಯಿಲ್ಲದೆ ಸಂಕಷ್ಟದಲ್ಲಿದ್ದಾರೆ. ಶೀಘ್ರವಾಗಿ ಪ್ರಕರಣವನ್ನು ವಿಲೇವಾರಿ ಮಾಡಿ, ೬ ತಿಂಗಳ ಒಳಗಾಗಿ ಹಣ ಪಾವತಿ ಮಾಡಬೇಕೆಂದು ನ್ಯಾಯಾಲಯದಲ್ಲಿ ತೀರ್ಮಾನವಾಗಿದೆ. ಎರಡು ವರ್ಷಗಳು ಕಳೆದರೂ ಯಾವ ಪರಿಹಾರ ದೊರೆಯದೇ ಇರುವುದು ನ್ಯಾಯಾಂಗ ಅವ್ಯವಸ್ಥೆಯನ್ನು ಅಣಕಿಸುವಂತಿದೆ. ರೈಲ್ವೆ ಇಲಾಖೆ ೧೫ ದಿನಗಳ ಒಳಗಾಗಿ ಹಣ ಪಾವತಿ ಮಾಡದಿದ್ದರೆ ರೈಲು ತಡೆದು ಪ್ರತಿಭಟನೆ ಮಾಡಲಾಗುವುದೆಂದು ಎಚ್ಚರಿಸಿ, ಜಿಲ್ಲಾಧಿಕಾರಿಗೆ ಮನವಿ ನೀಡಿದರು.[೩೦] ಮನವಿ ಸ್ವೀಕರಿಸಿ ಪ್ರತಿಕ್ರಿಯಸಿದ ಮಾನ್ಯ ಜಿಲ್ಲಾಧಿಕಾರಿಗಳು ಸರ್ಕಾರದ ಜೊತೆ ಚರ್ಚಿಸಿ, ಇನ್ನು ಹತ್ತು ದಿನಗಳಲ್ಲಿ ಪರಿಹಾರ ಹಣ ರೈತರಿಗೆ ದೊರೆಯುವಂತೆ ಮಾಡುವುದಾಗಿ ಭರವಸೆ ನೀಡಿದರು.

ಈ ಪ್ರತಿಭಟನೆಯಲ್ಲಿ ಮೊಳಕಾಲ್ಮೂರು ತಾಲೂಕಿನ ಬಿ.ಜಿ.ಕೆರೆ, ಮಾಗಲಹಳ್ಳಿ, ಹಿರೇಹಳ್ಳಿ, ಮೊನ್ನೆಕೋಟೆ, ಮಾರಮ್ಮನಹಳ್ಳಿ, ಓಬಣ್ಣನ ಹಳ್ಳಿ, ಕಾವಲುರುದ್ರಮ್ಮನಹಳ್ಳಿ ಹಾಗೂ ಚಿತ್ರದುರ್ಗ ತಾಲೂಕಿನ ಮದಕರಿಪುರ ಗ್ರಾಮದ ನೂರಾರು ರೈತರು ಪಾಲ್ಗೊಂಡಿದ್ದರು.

**ಸಮಗ್ರ ನೀರಾವರಿಗೆ ಒತ್ತಾಯಿಸಿ ರೈತ ಪ್ರತಿಭಟನೆ: ಚಿತ್ರದುರ್ಗ ಬಂದ್:- ೦೬/೦೭/೨೦೦೧**

ಬಯಲುಸೀಮೆಯಾಗಿರುವ ಚಿತ್ರದುರ್ಗ ಜಿಲ್ಲೆಗೆ ೧೦೦ ಟಿ.ಎಂ.ಸಿ. ನೀರಿನ ಅವಶ್ಯಕತೆಯಿದೆ. ಹಾಗಾಗಿ ಜುಲೈ ೬ ರಂದು ಚಿತ್ರದುರ್ಗ ಸಂಪೂರ್ಣ ಬಂದ್ ಆಚರಿಸಲು ಹೋರಾಟ ಸಮಿತಿಯ ಅಧ್ಯಕ್ಷರಾದ ಪಿ.ಕೋದಂಡರಾಮಯ್ಯನವರ ಅಧ್ಯಕ್ಷತೆಯಲ್ಲಿ ಸಭೆ ಕರೆದಿದ್ದರು. ಸಭೆಯಲ್ಲಿ ಕಾರ್ಯಕರ್ತರು ಬಂದ್ ಆಚರಿಸಲು ಸರ್ವಾನುಮತದಿಂದ ತೀರ್ಮಾನಿಸಿದರು. ಕಾರಣ ಕಳೆದ ಐದು ದಶಕಗಳಿಂದ ಎಲ್ಲಾ ಸರ್ಕಾರಗಳು ಬಯಲು ಸೀಮೆಯಾದ ಮಧ್ಯ ಕರ್ನಾಟಕದ ಪ್ರದೇಶಗಳಿಗೆ ನೀರಾವರಿ ಯೋಜನೆಗಳನ್ನು ಜಾರಿಗೆಗೊಳಿಸದೆ ಇಲ್ಲಿನ ಜನರನ್ನು ವಂಚಿಸುತ್ತಲೇ ಬಂದಿವೆ. ಇದನ್ನು ವಿರೋಧಿಸಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ಚಿತ್ರದುರ್ಗ ಜಿಲ್ಲಾ ಘಟಕ ಸರ್ಕಾರದ ಕಣ್ಣು ತೆರೆಸಲು ಜಿಲ್ಲೆಯಾದ್ಯಂತ ರಸ್ತೆ ತಡೆ, ಬಹಿರಂಗ ಸಭೆ, ಹಾಗೂ ಬಂದ್ ಆಚರಿಸಲು ನಿರ್ಣಯ ಕೈಗೊಂಡಿತು.

ಜುಲೈ ೦೬ ರಂದು ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ಚಿತ್ರದುರ್ಗ ಜಿಲ್ಲಾ ಘಟಕ ಹಾಗು ನೀರಾವರಿ ಹೋರಾಟ ಸಮಿತಿ ಕರೆ ನೀಡಿದ್ದ ಚಿತ್ರದುರ್ಗ ಬಂದ್ ಶಾಂತಿಯುತವಾಗಿ ನಡೆಯಿತು. ಖಾಸಗೀ ಹಾಗೂ ಸರ್ಕಾರಿ ಬಸ್ಸುಗಳು ನಗರ ಪ್ರವೇಶಿಸದೇ ಹೊರ ವಲಯದಲ್ಲಿ ಹಾದು ಹೋದವು. ಶಾಲಾ ಕಾಲೇಜು, ಚಲನಚಿತ್ರಮಂದಿರ, ಸರ್ಕಾರಿ ಕಛೇರಿಗಳು, ಅಂಚೆ ಕಛೇರಿ, ಅಂಗಡಿಯವರು ಬಂದ್ ಮಾಡಿ ಸಹಕಾರ ನೀಡಿದರು. ಆಟೋಗಳ ಸಂಚಾರ ಸ್ಥಗಿತಗೊಂಡಿತ್ತು. ಗಾಂಧಿ ವೃತ್ತದಿಂದ ಆರಂಭವಾದ ಮೆರವಣಿಗೆ ದೊಡ್ಡಪೇಟೆ, ಆನೆ ಬಾಗಿಲು, ಸಂತೆ ಪೇಟೆ ಮೂಲಕ ಗೋಪಾಲಪುರ, ಜೆ.ಸಿ.ಆರ್. ಮೂಲಕ ಗಾಂಧಿ ವೃತ್ತದಲ್ಲಿ ಮುಕ್ತಾಯಗೊಂಡಿತು. ನಂತರ ನಡೆದ ಬಹಿರಂಗ ಸಭೆಯಲ್ಲಿ ಬೃಹನ್ಮಠ ಶಿವಮೂರ್ತಿ ಮುರುಘರಾಜೇಂದ್ರ ಶರಣರು, ನೀರಾವರಿ ಹೋರಾಟ ಸಮಿತಿಯ ಅಧ್ಯಕ್ಷರಾದ ಕೋದಂಡರಾಮಯ್ಯ, ರೈತ ಸಂಘದ ಉಪಾಧ್ಯಕ್ಷ ಸೋಮಗುದ್ದು ರಂಗಸ್ವಾಮಿ, ರೈತ ಸಂಘದ ಜಿಲ್ಲಾ ಪ್ರಧಾನ ಕಾರ್ಯದರ್ಶಿ ನುಲೇನೂರು ಶಂಕರಪ್ಪರವರು ಶೀಘ್ರ ನೀರಾವರಿ ಯೋಜನೆ ಜಾರಿಗೊಳಿಸುವಂತೆ ಒತ್ತಾಯಿಸಿದರು.[೩೧] ಈ ಬಂದ್‌ಗೆ ವಿವಿಧ ಸಂಘಟನೆಗಳು ಬೆಂಬಲ ನೀಡಿದ್ದವು.

**ಹೆದ್ದಾರಿ ಬಂದ್ ಮಾಡಿ ಹಿರಿಯೂರು ತಾಲೂಕಿನ ರೈತರ ಪ್ರತಿಭಟನೆ:- ೧೩/೦೭/೨೦೦೧:-**

ಚಿತ್ರದುರ್ಗ ಜಿಲ್ಲೆಗೆ ನೀರಾವರಿ ಯೋಜನೆ ಜಾರಿಗೆ ತರುವಂತೆ ಒತ್ತಾಯಿಸಿ, ನೀರಾವರಿ ಹೋರಾಟ ಸಮಿತಿಯು ಹಿರಿಯೂರಿನಲ್ಲಿ ಹೆದ್ದಾರಿ ಬಂದ್ ಮಾಡಿ, ಪ್ರತಿಭಟನೆ ಮಾಡಲು ಕರೆ ನೀಡಿತ್ತು. ಅದರಂತೆ ಜುಲೈ ೧೩ ರ ಶನಿವಾರದಂದು ಬೆಳಗ್ಗೆ ೧೦:೪೫ ರಿಂದ, ಹಿರಿಯೂರಿನ ಟಿ.ಬಿ. ಸರ್ಕಲ್ ಬಳಿ ಸುಮಾರು ಸಾವಿರಕ್ಕೂ ಹೆಚ್ಚು ರೈತರು, ಹೆದ್ದಾರಿಯನ್ನು ಬಂದ್ ಮಾಡಿ ಪ್ರತಿಭಟನೆ ಮಾಡಿದರು. ಪೋಲಿಸರು ಹೆದ್ದಾರಿ ಬಂದ್ ಮಾಡಲು ಕೇವಲ ೩೦ ನಿಮಿಷ ಅವಕಾಶ ಕೊಟ್ಟಿದ್ದು, ಇದನ್ನು ತಿರಸ್ಕರಿಸಿದ ಪ್ರತಿಭಟನಾನಿರತ ರೈತರು ಮೂರು

ಗಂಟೆಗಳ ಕಾಲ ರಸ್ತೆ ಬಿಟ್ಟು ಮೇಲೇಳಲಿಲ್ಲ. ತಾಳ್ಮೆ ಕಳೆದುಕೊಂಡ ಪೊಲೀಸರು, ನೀರಾವರಿ ಹೋರಾಟ ಸಮಿತಿಯ ಅಧ್ಯಕ್ಷರು ಹಾಗೂ ಕೆಲ ರೈತ ಮುಖಂಡರನ್ನು ಸೇರಿದಂತೆ ೫೮ ಜನರನ್ನು ಬಂಧಿಸಿ ವ್ಯಾನ್‌ನಲ್ಲಿ ಕರೆದೊಯ್ದರು. ಇದೇ ಸಂದರ್ಭದಲ್ಲಿ ಮತ್ತೊಂದು ಗುಂಪು ಪ್ರತಿಭಟನೆಯನ್ನು ಮುಂದುವರೆಸಿ ರಸ್ತೆಯ ಮೇಲೆ ಮಲಗಿದರು. ಇದರಿಂದ ಸಿಟ್ಟಿಗೆದ್ದ ಪೋಲಿಸರು ಲಾಠಿ ಪ್ರಹಾರ ಮಾಡಿದರು. ರೊಚ್ಚಿಗೆದ್ದ ರೈತರು ಪೊಲೀಸರು ಹಾಗು ಅವರ ವಾಹನಗಳ ಮೇಲೆ ಕಲ್ಲು ತೂರಾಟ ನಡೆಸಿದರು.

ಕಲ್ಲು ತೂರಾಟದಲ್ಲಿ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಸೇರಿದ ೨ ಬಸ್ಸುಗಳು ಹಾಗೂ ಹತ್ತಕ್ಕೂ ಹೆಚ್ಚು ಲಾರಿಗಳ ಗಾಜು ಪುಡಿ ಪುಡಿಯಾದವು. ಓರ್ವ ಇನ್ಸ್ಪೆಕ್ಟರ್‌ರಾದ ಶಂಕರ್‌ಗೌಡ ಪಾಟೀಲರವರಿಗೆ ಗಾಯಗಳಾದವು. ಪೋಲಿಸರ ಲಾಠಿ ಪ್ರಹಾರದಿಂದ ರೈತರಿಗೆ ಪೆಟ್ಟುಗಳಾದವು. ಇದರಿಂದಾಗಿ ಪರಿಸ್ಥಿತಿ ಹತೋಟಿಗೆ ಬಂದಿತು.

ನೀರಾವರಿ ಹೋರಾಟ ಸಮಿತಿಯ ಅಧ್ಯಕ್ಷರಾದ ಪಿ.ಕೋದಂಡರಾಮಯ್ಯರವರು ಪ್ರತಿಭಟನಾಕಾರರನ್ನು ಉದ್ದೇಶಿಸಿ ಮಾತನಾಡುತ್ತಾ, ರಾಜ್ಯ ಸರ್ಕಾರದ ಎಲ್ಲಾ ನೀರಾವರಿ ತಜ್ಞರು, ಬಹುತೇಕ ನೀರಾವರಿ ಸಚಿವರು ಇದುವರೆಗೂ ಉತ್ತರ ಕರ್ನಾಟಕವನ್ನೇ ಪ್ರತಿನಿಧಿಸಿದ್ದು, ಮಧ್ಯ ಕರ್ನಾಟಕವನ್ನು ಸಂಪೂರ್ಣವಾಗಿ ಕಡೆಗಾಣಿಸಿದ್ದಾರೆ. ಇದು ಸಾಲದೆಂಬಂತೆ ಉತ್ತರ ಕರ್ನಾಟಕದ ಮತ್ತಷ್ಟು ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಸರ್ಕಾರ ಮುಂದಾಗಿದೆ. ಬಚಾವತ್ 'ಎ' ಸ್ಕೀಂನಲ್ಲಿ ಬಯಲು ಸೀಮೆಗೆ ನೀರಾವರಿ ಸೌಲಭ್ಯ ಕಲ್ಪಿಸಿ ಕೊಡಬೇಕಾಗಿತ್ತು. ತುಂಗಾಭದ್ರಾ ನದಿಯಿಂದ ಸುಮಾರು ೫೩೨ ಟಿ.ಎಂ.ಸಿ. ನೀರು ಹರಿದು ಹೋಗುತ್ತಿದ್ದು, ಎಲ್ಲಾ ನೀರು ಉತ್ತರ ಕರ್ನಾಟಕ ಹಾಗೂ ಆಂಧ್ರದ ಪಾಲಾಗಿದೆ. ನೀರೇ ಇಲ್ಲವೆನ್ನುತ್ತಿದ್ದ ಸರ್ಕಾರ ಇದೀಗ ೪೦ ಟಿ.ಎಂ.ಸಿ. ನೀರು ಕೊಡುತ್ತೇವೆ ಚಳುವಳಿ ನಿಲ್ಲಿಸಿ ಎನ್ನುತ್ತಿವೆ. ಈ ಇಲ್ಲದ ನೀರು ಬಂದಿದ್ದು ಎಲ್ಲಿಂದ ಎಂದರು. ಕನಿಷ್ಟ ೧೦೦ ಟಿ.ಎಂ.ಸಿ. ನೀರು ಕೊಡುವವರೆಗೂ ಹೋರಾಟದ ಭೂಮಿಕೆಯಿಂದ ಹಿಂದೆ ಸರಿಯುವುದಿಲ್ಲ. ರಕ್ತವನ್ನು ಚೆಲ್ಲಿಯಾದರು ಈ ನೆಲಗಳಿಗೆ ನೀರು ತರೋಣವೆಂದು ಸ್ಪಷ್ಟಪಡಿಸಿದರು.[೨]

ಈ ಹೋರಾಟದಲ್ಲಿ ನೀರಾವರಿ ಹೋರಾಟ ಸಮಿತಿಯ ಸಂಚಾಲಕರಾದ ಬಂಜಿಗೆರೆ ವಿಶ್ವನಾಥ್, ನರೇನಹಳ್ಳಿ ಅರುಣ್‌ಕುಮಾರ್, ಜೋಗಿಮಟ್ಟಿ ಮಹೇಶಬಾಬು, ಡಿ. ಶಿವಪ್ರಕಾಶ್, ರೈತ ಸಂಘದ ಸೋಮಗುದ್ದು ರಂಗಸ್ವಾಮಿ, ಮುಂತಾದ ಸಾವಿರಾರು ರೈತರು ಪಾಲ್ಗೊಂಡಿದ್ದರು.

**ನೀರಾ ಇಳಿಸಲು ಅನುಮತಿಗಾಗಿ ಚಿತ್ರದುರ್ಗ ಜಿಲ್ಲಾ ಪಂಚಾಯ್ತಿಗೆ ಮುತ್ತಿಗೆ:- ೨೩/೦೭/ ೨೦೦೧**

ಚಿತ್ರದುರ್ಗದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ೩೦೦ಕ್ಕೂ ಹೆಚ್ಚು ಕಾರ್ಯಕರ್ತರು, ನೀರಾ ಇಳಿಸಲು ಅನುಮತಿ ನೀಡುವಂತೆ ಒತ್ತಾಯಿಸಿ ಜಿಲ್ಲಾ ಪಂಚಾಯ್ತಿಯ ಕಾರ್ಯಾಲಯಕ್ಕೆ ಮುತ್ತಿಗೆ ಹಾಕಿ ಪ್ರತಿಭಟನೆ ಮಾಡಿದರು.

ನಗರದ ಪ್ರವಾಸಿ ಮಂದಿರದಿಂದ ಮೆರವಣಿಗೆಯಲ್ಲಿ ಬಂದ ರೈತ ಸಂಘದ ಕಾರ್ಯಕರ್ತರು, ಜಿಲ್ಲಾ ಪಂಚಾಯಿತಿಯ ಕಛೇರಿಯನ್ನು ನುಗ್ಗಲು ಯತ್ನಿಸಿದಾಗ ಪೋಲೀಸರು ಅವರನ್ನು ಬಾಗಿಲಲ್ಲೇ ತಡೆದರು. ನಂತರ ಕಛೇರಿಯ ಮುಂಭಾಗದಲ್ಲಿ ಸಭೆಯನ್ನು ಉದ್ದೇಶಿಸಿ ಮಾತನಾಡಿದ ಜಿಲ್ಲಾ ರೈತ ಸಂಘದ ಅಧ್ಯಕ್ಷ ಬಸವರೆಡ್ಡಿ, ನುಸಿ ಪೀಡೆಯಿಂದ ತೆಂಗು ಬೆಳೆಗಾರರು ಕಂಗಾಲಾಗಿದ್ದು ನಾಶದ ಅಂಚಿಗೆ ಸಿಲುಕಿದ್ದಾನೆ. ಹಾಗಾಗಿ ನೀರಾ ಇಳಿಸಲು ಅನುಮತಿ ನೀಡುವಂತೆ ಎಲ್ಲಾ ತಾಲೂಕುಗಳಲ್ಲಿ ಸರ್ವಾನುಮತದಿಂದ ನಿರ್ಣಯ ಕೈಗೊಂಡು ಸರ್ಕಾರಕ್ಕೆ ಕಳುಹಿಸಿದ್ದೇವೆ. ಜಿಲ್ಲಾ ಪಂಚಾಯಿತಿ ಈ ವಿಷಯದಲ್ಲಿ ಮೌನ ವಹಿಸಿದ್ದು, ರೈತ ವಿರೋಧಿ ನಿಲುವನ್ನು ತಳೆದಿದೆ ಎಂದು ಆರೋಪಿಸಿ ಜಿಲ್ಲಾ ಪಂಚಾಯಿತಿಯ ಅಧ್ಯಕ್ಷರಿಗೆ ಮನವಿ ನೀಡಿದರು.[೩೩]

ಮನವಿ ಸ್ವೀಕರಿಸಿದ ಅಧ್ಯಕ್ಷರು ನುಸಿ ರೋಗ ನಿವಾರಣೆಗೆ ಜಿಲ್ಲಾ ಪಂಚಾಯಿತಿ ಸಾಕಷ್ಟು ಶ್ರಮವಹಿಸುತ್ತಿದ್ದು, ಔಷಧಿಯ ದಾಸ್ತಾನು ಸಾಕಾಷ್ಟಿದೆ ಎಂದರು. ನೀರಾಗೆ ಅನುಮತಿ ನೀಡುವ ವಿಚಾರ ರಾಜ್ಯ ಸರ್ಕಾರಕ್ಕೆ ಸಂಬಂಧಿಸಿದ್ದು, ಜುಲೈ ೩೦ ರಂದು ನಡೆಯಲಿರುವ ಜಿಲ್ಲಾ ಪಂಚಾಯಿತಿ ಸಾಮಾನ್ಯ ಸಭೆಯಲ್ಲಿ ನೀರಾ ಇಳಿಸಲು ಅನುಮತಿ ನೀಡಿ ನಿರ್ಣಯ ಕೈಗೊಂಡು, ರಾಜ್ಯ ಸರ್ಕಾರಕ್ಕೆ ಕಳುಹಿಸಲಾಗುವುದೆಂದು ತಿಳಿಸಿದರು.

**ಸಮಗ್ರ ನೀರಾವರಿ ಯೋಜನೆಗಾಗಿ ಹೊಸದುರ್ಗ ಬಂದ್:- ೦೬/೦೮/೨೦೦೧**

ಸಮಗ್ರ ನೀರಾವರಿ ಜಾರಿಗೆ ತರುವಂತೆ ಆಗ್ರಹಿಸಿ ಚಿತ್ರದುರ್ಗ ಜಿಲ್ಲಾ ನೀರಾವರಿ ಹೋರಾಟ ಸಮಿತಿಯು ಆಗಸ್ಟ್ ೬ ೨೦೦೧ ರಂದು ಹೊಸದುರ್ಗವನ್ನು ಬಂದ್ ಮಾಡಿ ಪ್ರತಿಭಟನೆ ಮಾಡಿದರು. ಬಂದ್‌ಗೆ ನಗರದ ಶಾಲಾ ಕಾಲೇಜು, ಸಹಕಾರಿ ಬ್ಯಾಂಕ್. ಅಂಗಡಿ ಮುಗ್ಗಟ್ಟುಗಳು ಮುಚ್ಚಿದ್ದವು. ಸರ್ಕಾರಿ ಕಛೇರಿಗಳು ಬಂದ್‌ಗೆ ಬೆಂಬಲ ನೀಡಿದವು. ಚಿತ್ರದುರ್ಗ ಜಿಲ್ಲೆಗೆ ಸಮಗ್ರ ನೀರಾವರಿ ಯೋಜನೆ ಜಾರಿಗೊಳಿಸುವಂತೆ ಸಾವಿರಾರು ರೈತರು ಘೋಷಣೆ ಕೂಗುತ್ತಾ ಪ್ರವಾಸಿ ಮಂದಿರದಿಂದ ಪ್ರತಿಭಟನಾ ಮೆರವಣಿಗೆ ಮಾಡಿ ಹಳೆ ಬಸ್ ನಿಲ್ದಾಣಕ್ಕೆ ಬಂದು ಬಹಿರಂಗ ಸಭೆ ನಡೆಸಿದರು.

**ಸಮಗ್ರ ನೀರಾವರಿ ಯೋಜನೆಗಾಗಿ ಹೊಳಲ್ಕೆರೆ ಬಂದ್ ಮಾಡಿ ಪ್ರತಿಭಟನೆ:- ೨೭/೦೮/೨೦೦೧**

ಚಿತ್ರದುರ್ಗ ಜಿಲ್ಲೆಗೆ ಸಮಗ್ರ ನೀರಾವರಿ ಯೋಜನೆ ಜಾರಿಗೆ ತರಬೇಕೆಂದು ಒತ್ತಾಯಿಸಿ ಜಿಲ್ಲಾ ನೀರಾವರಿ ಹೋರಾಟ ಸಮಿತಿ ಹಾಗೂ ವಿವಿಧ ರೈತ ಸಂಘಟನೆಗಳು ಆಗಸ್ಟ್ ೨೭ ೨೦೦೧ ರಂದು ಹೊಳಲ್ಕೆರೆ ಬಂದ್ ಮಾಡಿ ಪ್ರತಿಭಟನೆ ಮಾಡಿದರು.

ಬಂದ್‌ಗೆ ಉತ್ತಮ ಪ್ರತಿಕ್ರಿಯೆ ದೊರೆತಿದ್ದು ಅಂಗಡಿ ಮುಗ್ಗಟ್ಟುಗಳು, ಶಾಲಾ ಕಾಲೇಜುಗಳು, ಬ್ಯಾಂಕುಗಳು ಹಾಗೂ ಕಛೇರಿಗಳು ಸ್ವಯಂ ಪ್ರೇರಿತವಾಗಿ ಮುಚ್ಚಿದವು. ಹೊಳಲ್ಕೆರ್ ಮಾರ್ಗವಾಗಿ ಹೋಗುವ ಎಲ್ಲಾ ಬಸ್‌ಗಳು ಸಂಚಾರ ಸ್ಥಗಿತಗೊಳಿಸಿ ಬೆಂಬಲ ನೀಡಿದವು. ನಂತರ ನಗರದ ಅಂಬೇಡ್ಕರ್ ಮಂಟಪದಲ್ಲಿ ಬಹಿರಂಗ ಸಭೆ ನಡೆಸಿದರು. ಈ ಸಮಯದಲ್ಲಿ ಮಾತನಾಡಿದ

ಜಿಲ್ಲಾ ನೀರಾವರಿ ಹೋರಾಟ ಸಮಿತಿಯ ಅಧ್ಯಕ್ಷರಾದ ಪಿ. ಕೋದಂಡರಾಮಯ್ಯರವರು, ಸಮಿತಿಯು ನೀರಾವರಿ ಯೋಜನೆಯ ಕರುಡನ್ನು ತಯಾರಿಸಿದ್ದು ಅದರಲ್ಲಿ ಹೊಳಲ್ಕೆರೆ, ಜಗಳೂರು, ಮೊಳಕಾಲ್ಮೂರು ತಾಲೂಕುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸದಿರುವುದು ದುರಾದೃಷ್ಟಕರವೆಂದು ಹೇಳಿದರು. ಇಡೀ ಮಧ್ಯ ಕರ್ನಾಟಕಕ್ಕೆ ಹಾಗೂ ಈ ಮೂರು ತಾಲೂಕುಗಳಿಗೆ ಸೇರಿಸಿ ೧೦೦ ಟಿ.ಎಂ.ಸಿ ಸಮಗ್ರ ನೀರಾವರಿ ಯೋಜನೆ ಜಾರಿ ಮಾಡುವವರೆಗೆ ಸಮಿತಿಯು ಹೋರಾಟ ನಿಲ್ಲಿಸದು ಎಂದು ತಿಳಿಸಿದರು.[೩೪]

**ರೈತರ ಮೇಲೆ ಗೋಲಿಬಾರ್: ಮುಖ್ಯಮಂತ್ರಿ ಕೃಷ್ಣರ ಅಣಕು ಶವಯಾತ್ರೆ:- ೧೧/೧೦/೨೦೦೧**

ಮಂಡ್ಯ ಜಿಲ್ಲೆಯ ಚನ್ನಪಟ್ಟಣ ತಾಲೂಕಿನಲ್ಲಿ ನೀರಾ ಚಳವಳಿಗಾರರ ಮೇಲೆ ಪೋಲಿಸರು ನಡೆಸಿದ ಗೋಲಿಬಾರ್‌ನ್ನು ಖಂಡಿಸಿ, ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಅಕ್ಟೋಬರ್ ೧೧ ೨೦೦೧ ರಂದು ಚಿತ್ರದುರ್ಗ ನಗರದಲ್ಲಿ ಪ್ರತಿಭಟನೆ ಮಾಡಿದರು.

ಪ್ರತಿಭಟನಾಕಾರರು ಮುಖ್ಯಮಂತ್ರಿ ಎಸ್.ಎಂ.ಕೃಷ್ಣರವರ ಅಣಕು ಶವಯಾತ್ರೆಯನ್ನು ರೈತ ಭವನದಿಂದ ಆರಂಭಿಸಿ, ಲಭೋ ಲಭೋ ಎಂದು ಬಡಿದುಕೊಳ್ಳುತ್ತಾ ಮೆರವಣಿಗೆ ಮಾಡಿ ಜಿಲ್ಲಾಧಿಕಾರಿಗಳ ಕಛೇರಿಯ ಬಳಿ ಬಂದು ಸುಟ್ಟು ಹಾಕಿದರು. ಸಭೆಯನ್ನು ಉದ್ದೇಶಿಸಿ ಮಾತನಾಡಿದ ಕರ್ನಾಟಕ ರಾಜ್ಯ ರೈತ ಸಂಘದ ಜಿಲ್ಲಾಧ್ಯಕ್ಷ ಬಸವರೆಡ್ಡಿ, ಗೋಲಿಬಾರ್‌ಗೆ ಸಂಬಂಧಿಸಿದಂತೆ ನಡೆಸುವ ತನಿಖೆಯ ಕಾಲಾವಧಿಯಲ್ಲಿ ಜಿಲ್ಲಾಧಿಕಾರಿ, ಜಿಲ್ಲಾ ರಕ್ಷಣಾಧಿಕಾರಿ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರನ್ನು ಅಮಾನತ್ತಿನಲ್ಲಿಡಬೇಕೆಂದು ಆಗ್ರಹಪಡಿಸಿದರು. ಅಲ್ಲದೇ ಬಂಧಿತ ರೈತರ ಮೇಲಿನ ಮೊಕದ್ದಮೆಗಳನ್ನು ವಾಪಸ್ಸು ಪಡೆಯಬೇಕು. ಹಾಗೂ ಮೃತ ರೈತರ ಕುಟುಂಬಗಳಿಗೆ ತಲಾ ೧೦ ಲಕ್ಷ ರೂ ಪರಿಹಾರ ನೀಡಬೇಕೆಂದು ಒತ್ತಾಯಿಸಿದರು.[೩೫]

**ಚಿತ್ರದುರ್ಗದಲ್ಲಿ ರೈತ ಆತ್ಮಹತ್ಯೆ ವಿರೋಧಿ ದಿನ ಆಚರಣೆ:- ೨೮/೧೦/೨೦೦೧**

ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಅಕ್ಟೋಬರ್ ೨೮೨೦೦೧ರ ಸೋಮವಾರದಂದು ಚಿತ್ರದುರ್ಗದಲ್ಲಿ ಪ್ರತಿಭಟನಾ ಮೆರವಣಿಗೆ ನಡೆಸಿ, ಜಿಲ್ಲಾಧಿಕಾರಿಯ ಕಛೇರಿ ಬಳಿ ಧರಣಿ ಮಾಡುವುದರ ಮೂಲಕ ರೈತ ಆತ್ಮಹತ್ಯೆ ವಿರೋಧಿ ದಿನ ಆಚರಿಸಿದರು.

ನಗರದ ಕೃಷಿ ಉತ್ಪನ್ನ ಮಾರುಕಟ್ಟೆಯ ರೈತ ಭವನದಿಂದ ಹೊರಟ ಮೆರವಣಿಗೆಯಲ್ಲಿ ಸಾವಿರಾರು ಕಾರ್ಯಕರ್ತರು, ರಾಜ್ಯ ಹಾಗೂ ಕೇಂದ್ರ ಸರ್ಕಾರದ ರೈತ ವಿರೋಧ ನೀತಿಯ ವಿರುದ್ಧ ಘೋಷಣೆಗಳನ್ನು ಕೂಗಿ ಜಿಲ್ಲಾಧಿಕಾರಿಗಳಿಗೆ ಮನವಿ ಪತ್ರ ಸಲ್ಲಿಸಿದರು. ಸಾಲದ ಹೊರೆಯನ್ನು ತಾಳಲಾರದೆ ರಾಜ್ಯದಲ್ಲಿ ಸುಮಾರು ೨೦೦ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಈ ಆತ್ಮಹತ್ಯೆಗೆ ವೈಜ್ಞಾನಿಕ ಬೆಲೆ ಹಾಗೂ ಸಾಲದ ನೀತಿಯೆ ಕಾರಣವಾಗಿದೆ. ಶೇ.೭೫% ರಷ್ಟು ಕೃಷಿಕರಿರುವ ಈ ದೇಶದಲ್ಲಿ ರೈತಪರವಾದ ಕೃಷಿ ನೀತಿಯನ್ನು ರೂಪಿಸಿಲ್ಲ. ರೈತರ

ಆತ್ಮಹತ್ಯೆಗೆ ಸರ್ಕಾರವೇ ನೇರ ಹೊಣೆ ಹೊರಬೇಕು. ಈ ಕೂಡಲೇ ವಿಧಾನಸಭೆಯ ವಿಶೇಷ ಅಧಿವೇಶನವನ್ನು ಕರೆದು ಆತ್ಮಹತ್ಯೆಗೆ ವೈಜ್ಞಾನಿಕ ಕಾರಣವನ್ನು ಚರ್ಚಿಸಿ, ಅವೈಜ್ಞಾನಿಕ ಸಾಲಗಳನ್ನು ರದ್ದು ಮಾಡಿ, ಬಡ್ಡಿರಹಿತವಾಗಿ ಅಥವಾ ಕನಿಷ್ಟ ದರದಲ್ಲಿ ಹೊಸ ಸಾಲ ನೀಡುವ ವೈಜ್ಞಾನಿಕ ಸಾಲದ ನೀತಿಯನ್ನು ರೂಪಿಸಬೇಕು. ಸಾಲದ ವಸೂಲಿಗಾಗಿ ರೈತನ ಮನೆ ಮತ್ತು ಆಸ್ತಿ ಜಪ್ತಿ ಮಾಡುವುದನ್ನು ಕೂಡಲೇ ನಿಲ್ಲಿಸಬೇಕು. ಕೆ.ಪಿ.ಟಿ.ಸಿ.ಎಲ್. ಸಮರ್ಪಕ ಗುಣಮಟ್ಟದ ವಿದ್ಯುತ್‌ನ್ನು ಕೃಷಿ ಪಂಪ್‌ಸೆಟ್‌ಗಳಿಗೆ ಕನಿಷ್ಟ ಪ್ರತಿದಿನ ೧೨ ಗಂಟೆ ಸರಬರಾಜು ಮಾಡಬೇಕು. ತೆಂಗು ಬೆಳೆಗಾರರು ತಲೆ ಹುಳದ ಭಾದೆ, ನುಸಿಭಾದೆ ಹಾಗೂ ಬೆಲೆ ರೋಗದ ಭಾದೆಯಿಂದ ಸರ್ವನಾಶವಾಗಿದ್ದು, ತೆಂಗಿನ ಮರಗಳಿಂದ ನೀರಾ ಇಳಿಸಲು ಮುಕ್ತವಾಗಿ ಅನುಮತಿ ನೀಡಬೇಕು. ತೆಂಗಿನ ಮರಗಳನ್ನು ಅಬಕಾರಿ ಕಾಯ್ದೆಯಿಂದ ಹೊರತುಪಡಿಸಬೇಕು. ರೋಗ ಹತೋಟಿ ಕ್ರಮಕ್ಕೆ ರಾಸಾಯನಿಕ ಬಳಕೆ ಬದಲಿಗೆ, ಪರಿಸರ ಸ್ನೇಹಿಯಾದ ಪರೋಪ ಜೀವಿಗಳಿಂದ ರೋಗ ಹತೋಟಿಗೆ ಕ್ರಮಕೈಗೊಳ್ಳಬೇಕು. ಬರ ನಿವಾರಣೆಗೆ ಶಾಶ್ವತ ನೀರಾವರಿ ಯೋಜನೆಯೊಂದನ್ನು ರೂಪಿಸಿ ಜಾರಿಗೊಳಿಸಬೇಕೆಂದು ಮನವಿಯಲ್ಲಿ ತಿಳಿಸಿದರು.[೩೬]

ಪ್ರತಿಭಟನೆಯ ನೇತೃತ್ವವನ್ನು ಜಿಲ್ಲಾಧ್ಯಕ್ಷ ಭೀಮಾರೆಡ್ಡಿ, ಉಪಾಧ್ಯಕ್ಷ ಸೋಮಗುದ್ದ ರಂಗಸ್ವಾಮಿ, ನುಲೇನೂರು ಶಂಕರಪ್ಪ, ಹಳಿಯೂರು ಮಹದೇವಪ್ಪ ಮುಂತಾದವರು ವಹಿಸಿದ್ದರು.

**ಹಣ ಕಟ್ಟಿಸಿಕೊಂಡು ವಿದ್ಯುತ್ ಕೊಡದೆ ಕೆ.ಪಿ.ಟಿ.ಸಿ.ಎಲ್. ಮಟ್ಟ ಹಾಕಲು ರೈತ ಪ್ರತಿಭಟನೆ:- ೧೨/೧೧/೨೦೦೧**

ಕೃಷಿ ಪಂಪ್‌ಸೆಟ್‌ಗಳಿಗೆ ನಿರಂತರ ವಿದ್ಯುತ್ ಪೂರೈಸುವಂತೆ ಒತ್ತಾಯಿಸಿ ಹಾಗೂ ಮೀಟರ್ ಅಳವಡಿಕೆ ವಿರೋಧಿಸಿ, ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಚಿತ್ರದುರ್ಗದ ಕೆ.ಪಿ.ಟಿ.ಸಿ.ಎಲ್. ಕಛೇರಿಗೆ ಮುತ್ತಿಗೆ ಹಾಕಿ ನವಂಬರ್ ೧೨ ೨೦೦೧ರಂದು ಪ್ರತಿಭಟನೆ ನಡೆಸಿದರು.

ನಗರದ ಕೃಷಿ ಮಾರುಕಟ್ಟೆಯಿಂದ ಮೆರವಣಿಗೆಯಲ್ಲಿ ಬಂದ ನೂರಾರು ರೈತರು, ಕೆ.ಪಿ.ಟಿ.ಸಿ.ಎಲ್. ಕಛೇರಿಗೆ ಮುತ್ತಿಗೆ ಹಾಕಲು ಪ್ರಯತ್ನಿಸಿದಾಗ, ಪೋಲಿಸರು ಅವರನ್ನು ಬಾಗಿಲಲ್ಲೆ ತಡೆದರು. ಇದರಿಂದಾಗಿ ಕಛೇರಿಯ ಮುಂಭಾಗದ ರಸ್ತೆಯ ಮೇಲೆ ಕುಳಿತು ಬಹಿರಂಗ ಸಭೆ ನಡೆಸಿದರು. ಈ ಸಮಯದಲ್ಲಿ ಮಾತನಾಡಿದ ಕರ್ನಾಟಕ ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ.ನಂಜುಂಡಸ್ವಾಮಿ, ಗುಣಮಟ್ಟದ ನಿರಂತರ ವಿದ್ಯುತ್ ಪೂರೈಕೆ ಮಾಡುವವರೆಗೂ ಚಳವಳಿ ಮುಂದುವರೆಸುವುದಾಗಿ ತಿಳಿಸಿದರು. ರಾಜ್ಯದಲ್ಲಿ ಒಟ್ಟು ಕೃಷಿ ಕ್ಷೇತ್ರದ ಉತ್ಪನ್ನದಲ್ಲಿ ಶೇ.೨೦ರಷ್ಟು ಅಣೆಕಟ್ಟು ಪ್ರದೇಶದಿಂದ ಬಂದರೆ, ಶೇ.೪೦ ಭಾಗ ಪಂಪ್‌ಸೆಟ್ ಬಳಕೆದಾರರಿಂದ ಬರುತ್ತದೆ. ಈ ಅಂಶ ಸರ್ಕಾರಕ್ಕೆ ಗೊತ್ತಿದ್ದರೂ ಬಯಲು ಸೀಮೆಯ ಹಿತಾಸಕ್ತಿಯನ್ನು ಕಡೆಗಣಿಸಲಾಗುತ್ತದೆ ಎಂದು ಆರೋಪಿಸಿದರು.[೩೭]

ಪ್ರಧಾನ ಕಾರ್ಯದರ್ಶಿ ಗಂಗಾಧರ್ ಮಾತನಾಡಿ ಕೆ.ಪಿ.ಟಿ.ಸಿ.ಎಲ್. ಕೆಲವು ಕಡೆ ಹಣ ಕಟ್ಟಿಸಿಕೊಂಡು ನಂತರ ವಿದ್ಯುತ್ ಇಲ್ಲವೆನ್ನುತ್ತಿದ್ದು, ಈ ತರಹದ ನಡವಳಿಕೆಗಳನ್ನು ಮಟ್ಟ

ಹಾಕಲು ರೈತರು ಸಜ್ಜಾಗಬೇಕೆಂದು ಕರೆ ನೀಡಿ,ಕೆ.ಪಿ.ಟಿ.ಸಿ.ಎಲ್ ಅಧಿಕಾರಿಗಳಿಗೆ ಮನವಿ ಪತ್ರ ನೀಡಿದರು.

**ಸಮರ್ಪಕ ವಿದ್ಯುತ್ ಪೂರೈಕೆಗಾಗಿ ಚಿತ್ರದುರ್ಗ ರೈತರ ಪ್ರತಿಭಟನೆ:- ೨೩/೧೧/೨೦೦೧**

ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಸಮರ್ಪಕ ವಿದ್ಯುತ್ ಪೂರೈಕೆಗಾಗಿ ಆಗ್ರಹಿಸಿ, ಚಿತ್ರದುರ್ಗ ನಗರದ ಕೆ.ಪಿ.ಟಿ.ಸಿ.ಎಲ್. ಕಚೇರಿ ಮುಂದೆ ನವೆಂಬರ್ ೨೩ ೨೦೦೧ ರಂದು ಪ್ರತಿಭಟನೆ ನಡೆಸಿದರು.

ರೈತ ಭವನದಿಂದ ಮೆರವಣಿಗೆಯ ಮೂಲಕ ಬಂದ ನೂರಾರು ರೈತರು ಸರ್ಕಾರದ ವಿದ್ಯುಚ್ಛಕ್ತಿಯ ತಾರತಮ್ಯ ನೀತಿ ವಿರುದ್ಧ ಘೋಷಣೆ ಕೂಗಿದರು. ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸರಬರಾಜು ಮಾಡುವ ಕುರಿತು ಸರ್ಕಾರ ತೆಗೆದುಕೊಂಡಿರುವ ತೀರ್ಮಾನಗಳಿಂದ ಕೃಷಿ ಕ್ಷೇತ್ರಕ್ಕೆ ಪೆಟ್ಟು ಬಿದ್ದಂತಾಗಿದೆ. ರೈತರಿಗೆ ದಿನಕ್ಕೆ ಕನಿಷ್ಠ ೧೨ ಗಂಟೆಗಳ ಕಾಲ ಪೂರ್ಣ ಪ್ರಮಾಣದ ವಿದ್ಯುತ್ ಸರಬರಾಜು ಮಾಡಬೇಕೆಂದು ಪ್ರತಿಭಟನೆಯಲ್ಲಿ ಆಗ್ರಹಿಸಿದರು. ಸಮರ್ಪಕ ವಿದ್ಯುತ್ ಪೂರೈಕೆ ಸೇರಿದಂತೆ ಬೇಡಿಕೆಗಳನ್ನು ಈಡೇರಿಸುವಂತೆ ಕೋರಿ ಇಲಾಖೆಯ ಇಂಜಿನಿಯರ್‌ಗಳಿಗೆ ಮನವಿ ಪತ್ರ ಸಲ್ಲಿಸಲಾಯಿತು. ಮನವಿ ಸ್ವೀಕರಿಸಿದ ಅಧಿಕಾರಿಗಳು ಮೇಲಿನ ಅಧಿಕಾರಿಗಳ ಜೊತೆ ಚರ್ಚಿಸಿ ಸಮರ್ಪಕ ವಿದ್ಯುತ್ ಪೂರೈಕೆ ಮಾಡುವುದಾಗಿ ಭರವಸೆ ನೀಡಿದರು.

**ಹಸಿರು ಸೇನೆಯಿಂದ ಚಿತ್ರದುರ್ಗ ಗ್ರಾಮೀಣ ಬ್ಯಾಂಕ್ ಕಛೇರಿಯ ಮುತ್ತಿಗೆ:- ೨೨/೧೨/೨೦೦೧**

ಚಿತ್ರದುರ್ಗ ಜಿಲ್ಲೆಯಲ್ಲಿ ಗ್ರಾಮೀಣ ಬ್ಯಾಂಕ್‌ನವರು ಸಾಲಕ್ಕಾಗಿ ರೈತರನ್ನು ಜೈಲಿಗೆ ಕಳುಹಿಸುತ್ತಿರುವುದನ್ನು ವಿರೋಧಿಸಿ, ಹಸಿರು ಸೇನೆಯ ನೂರಾರು ಕಾರ್ಯಕರ್ತರು ಹಾಗು ರೈತರು ಚಿತ್ರದುರ್ಗ ಗ್ರಾಮೀಣ ಬ್ಯಾಂಕ್‌ನ ಪ್ರಧಾನ ಕಛೇರಿಗೆ ಮುತ್ತಿಗೆ ಹಾಕಿ, ಅಧಿಕಾರಿಗಳಿಗೆ ದಿಗ್ಬಂದನ ಹಾಕಿದರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ರಾಜ್ಯ ಪ್ರಧಾನ ಕಾರ್ಯದರ್ಶಿ ಕೆ.ಡಿ.ಗಂಗಾಧರ್, ಜಿಲ್ಲೆಯಲ್ಲಿ ಬೆಳೆ ಕುಂಠಿತವಾಗಿದ್ದು ಅದನ್ನು ದಾಖಲಿಸಿ, ಕಂದಾಯ ಇಲಾಖೆ ಸರ್ಕಾರಕ್ಕೆ ವರದಿ ಸಲ್ಲಿಸಿದೆಯೆಂದು ಕಂದಾಯ ಇಲಾಖೆಯವರೇ ಹೇಳಿದ್ದಾರೆ, ಮುಖ್ಯಮಂತ್ರಿಯು ೧೩೫ ತಾಲೂಕುಗಳಲ್ಲಿ ಬರಗಾಲವೆಂದು ಹೇಳಿದ್ದಾರೆ. ಇದನ್ನು ಲೆಕ್ಕಿಸದೇ ಕುರಿ, ಕೋಳಿ, ಎತ್ತು, ಎಮ್ಮೆ, ಬೆಳೆ ಸಾಲಕ್ಕಾಗಿ ೫ ರಿಂದ ೧೦ ಸಾವಿರ ರೈತರನ್ನು ಜೈಲಿಗೆ ಕಳುಹಿಸಿರುವುದು ಖಂಡನೀಯ. ರೈತರನ್ನು ಕ್ಷಮೆ ಕೇಳಬೇಕು. ಬಂಧಿತರನ್ನು ತಕ್ಷಣ ಬಿಡುಗಡೆ ಮಾಡಿಸಬೇಕೆಂದರಲ್ಲದೆ, ಈ ದೇಶದಲ್ಲಿರುವ ಬಂಡವಾಳಶಾಹಿಗಳ ಸಾಲವನ್ನು ವಸೂಲಿ ಮಾಡಬೇಕೆಂದು ಆಗ್ರಹಪಡಿಸಿದರು.[೩೮]

ಆ ಸಮಯಕ್ಕೆ ಆಗಮಿಸಿದ ಬ್ಯಾಂಕ್‌ನ ಅಧ್ಯಕ್ಷ ಹಾಗೂ ಸಾಲ ವಸೂಲಾತಿ ಮ್ಯಾನೇಜರ್ ಮಾತನಾಡಿ, ಜೈಲಿಗೆ ಹೋದವರನ್ನು ಬೇಷರತ್ ಬಿಡುಗಡೆ ಮಾಡಿಸುತ್ತೇವೆ. ಸಾಲ ವಸೂಲಾತಿಗೆ

ಕ್ರಮಕೈಗೊಳ್ಳುವುದಿಲ್ಲ. ರೈತರು ಪ್ರತಿಭಟನೆಯನ್ನು ವಾಪಸ್ ಪಡೆಯಬೇಕೆಂದು ಮನವಿ ಮಾಡಿಕೊಂಡಿದ್ದರಲ್ಲದೆ, ಬ್ಯಾಂಕ್ ಅಧಿಕಾರಿಗಳು ತೊಂದರೆ ಕೊಟ್ಟರೆ ನಮ್ಮ ಗಮನಕ್ಕೆ ತರಬೇಕೆಂದು ವಿನಂತಿಸಿದರು.

ಈ ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ಬಸವರೆಡ್ಡಿ, ನಿಜಲಿಂಗಪ್ಪ, ಸಿದ್ದವೀರಪ್ಪ, ಮಂಜುನಾಥ್, ಮುನಿಯಪ್ಪ, ಹಾಸನ ಜಿಲ್ಲಾಧ್ಯಕ್ಷ ಜಯ್ಯಣ್ಣ ಮುಂತಾದವರು ಭಾಗವಹಿಸಿದ್ದರು.

**ರೈತ ಸಂಘದಿಂದ ಕೆ.ಪಿ.ಟಿ.ಸಿ.ಎಲ್. ಕಛೇರಿಯ ಮುತ್ತಿಗೆ:- ೩೦/೧೨/೨೦೦೧**

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ನೂರಾರು ಕಾರ್ಯಕರ್ತರು, ಸಮರ್ಪಕ ವಿದ್ಯುತ್ ಪೂರೈಕೆ ಮಾಡುವಂತೆ ಆಗ್ರಹಿಸಿ, ಹೊಸದುರ್ಗದ ಕೆ.ಪಿ.ಟಿ.ಸಿ.ಎಲ್. ಕಛೇರಿಗೆ ಮುತ್ತಿಗೆ ಹಾಕಿ ಅಧಿಕಾರಿಗಳಿಗೆ ದಿಗ್ಬಂದನ ಹಾಕಿದ್ದರು.

ಈ ಸಂದರ್ಭದಲ್ಲಿ ಮಾತನಾಡಿದ ಕರ್ನಾಟಕ ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ.ಎಂ.ಡಿ. ನಂಜುಂಡಸ್ವಾಮಿಯವರು, ಎಲ್ಲಿಯವರೆಗೆ ಗುಣಮಟ್ಟದ ವಿದ್ಯುತನ್ನು ಹಳ್ಳಿ, ನಗರ ಎಂಬ ತಾರತಮ್ಯವಿಲ್ಲದೆ ಸಮಾನವಾದ ವಿದ್ಯುತ್ ನೀಡುವುದಿಲ್ಲವೋ, ಅಲ್ಲಿಯ ತನಕ ರೈತರು ವಿದ್ಯುತ್ ದರವನ್ನು ಕಟ್ಟಬಾರದು ಎಂದು ಕರೆ ನೀಡಿದರು. ಭೂಮಿಯಿಂದ ಸಂಪತ್ತನ್ನು ಉತ್ಪತ್ತಿ ಮಾಡುವವರು ರೈತರು ಎಂದು ತಿಳಿಸುತ್ತ, ರೈತರು ಉತ್ಪತ್ತಿ ಮಾಡಿದ ವಸ್ತುಗಳನ್ನು ಉಪಯೋಗಿಸಿ ಮೋಜು ಮಾಡುವ ನಗರವಾಸಿಗಳಿಗೆ ಶೇ.೯೧ರಷ್ಟು ವಿದ್ಯುತ್ ನೀಡುವುದು ಯಾವ ನ್ಯಾಯ ಎಂದು ಪ್ರಶ್ನಿಸಿದರು. ಮುಂಗಡ ಪತ್ರದಲ್ಲಿ ೧೮ ಗಂಟೆಗಳ ಕಾಲ ವಿದ್ಯುತ್ ನೀಡುತ್ತೇವೆಂದವರು, ಈಗ ಕೇವಲ ೬ ಗಂಟೆ ನೀಡುತ್ತಿಲ್ಲ ಎಂದು ಟೀಕಿಸಿದರು.

ಈ ಪ್ರತಿಭಟನೆಯಲ್ಲಿ ಕೋಡಿಹಳ್ಳಿ ಚಂದ್ರಶೇಖರ್, ಜಿಲ್ಲಾಧ್ಯಕ್ಷ ಬಸವರೆಡ್ಡಿ, ಶಿವಣ್ಣನಾಗ ಶೆಟ್ಟರ್, ನಿಜಲಿಂಗಪ್ಪ ಮತ್ತಿತರ ನೂರಾರು ಕಾರ್ಯಕರ್ತರು ಪಾಲ್ಗೊಂಡಿದ್ದರು.

**ಚಿತ್ರದುರ್ಗದಲ್ಲಿ ವಿದ್ಯುತ್ ಮೀಟರ್ ವಾಪಸ್ ನೀಡಿ ರೈತ ಪ್ರತಿಭಟನೆ:- ೧೩/೦೫/೨೦೦೩**

ಅಸಮರ್ಪಕ ವಿದ್ಯುತ್ ಪೂರೈಕೆಯನ್ನು ವಿರೋಧಿಸಿ, ಕರ್ನಾಟಕ ರಾಜ್ಯ ರೈತ ಸಂಘದ ಜಿಲ್ಲಾ ಶಾಖೆ ಹಾಗೂ ಹಸಿರು ಸೇನೆ ಸಂಘನೆಗಳ ರೈತರು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಧರಣಿ ನಡೆಸಿ, ನಂತರ ವಿದ್ಯುತ್ ಮೀಟರ್ ವಾಪಸ್ಸು ನೀಡಿ ಪ್ರತಿಭಟಿಸಿದರು.

ರೈತರು ಪ್ರತಿಭಟಿಸಿ ಹಳ್ಳಿಗಳಿಗೆ, ಕೃಷಿ ಪಂಪ್‌ಸೆಟ್ ಮತ್ತು ಗ್ರಾಮೀಣ ಕೈಗಾರಿಕೆಗಳಿಗೆ ವಿದ್ಯುತ್ ಮಾರಾಟ ಮಾಡುವ ಬೆಸ್ಕಾಂ, ಬಳಕೆದಾರರ ಹಕ್ಕುಗಳನ್ನು ಒಳಗೊಳ್ಳದ ಕರಾರು ಪತ್ರದಲ್ಲಿ, ಗುಣ ಮಟ್ಟದ ನಿರಂತರ ವಿದ್ಯುತ್ ಸರಬರಾಜಿಗೆ ಬೆಸ್ಕಾಂ ಬದ್ಧ ಎಂಬ ಅಂಶ ಸೇರಿಸಬೇಕು. ವಿದ್ಯುತ್ ಏರುಪೇರಿನಿಂದಾಗಿ ಮೋಟರ್‌ಗಳು ಸುಟ್ಟಿವೆ. ಗ್ರಾಮೀಣ ವಿದ್ಯಾರ್ಥಿಗಳ ಓದಿಗೂ ಕೊರತೆ ಎದುರಾಗಿದೆ. ಎಲ್ಲಾ ಸಮಸ್ಯೆ ಪರಿಹಾರಕ್ಕೆ ಬೆಸ್ಕಾಂ ವಿದ್ಯುತ್ ಗ್ರಾಹಕರೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವಂತೆ ಒತ್ತಾಯಿಸಿದರು.

ಗುಣಮಟ್ಟದ ವಿದ್ಯುತ್ ನೀಡುವ ಕುರಿತು ಬೆಸ್ಕಾಂ ಬಳಕೆದಾರರೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕು, ಕಳಪೆ ವಿದ್ಯುತ್ ಪೂರೈಕೆಯಿಂದ ಆದ ಬೆಳೆ ನಷ್ಟ, ಮೀಟರ್ ಸುಟ್ಟಿದ್ದು ನಷ್ಟ ತುಂಬಿಕೊಡಬೇಕೆಂದು ಪಟ್ಟು ಹಿಡಿದರು. ಹಳ್ಳಿ ಮತ್ತು ನಗರಗಳಿರುವ ತಾರತಮ್ಯ ನೀತಿ ಸಂಪೂರ್ಣವಾಗಿ ಈ ಕೂಡಲೇ ಬದಲಾಗಬೇಕು ಹಾಗೂ ಮೀಟರ್ ಬಾಡಿಗೆಯ ಅವೈಜ್ಞಾನಿಕ ನೀತಿ ಬದಲಾಗಬೇಕೆಂದು ಆಗ್ರಹಿಸಿದರು. ಸಾಂಕೇತಿಕವಾಗಿ ಜಿಲ್ಲಾಧಿಕಾರಿಗಳಿಗೆ ಮೀಟರ್ ನೀಡಿದ ರೈತರು, ಕಂದಾಯ ಕಟ್ಟಲು ಶಕ್ತಿಯಿಲ್ಲ. ಆದರೂ ಕೆ.ಪಿ.ಟಿ.ಸಿ.ಎಲ್. ಇಲಾಖೆ ಹಳ್ಳಿಗಳಲ್ಲಿ ಕಾರ್ಯಚರಣೆ ನಡೆಸಿ ಬಾಕಿ ವಸೂಲಾತಿಗೆ ಮುಂದಾಗಿವೆ. ವಿದ್ಯುತ್ ಬಾಕಿಗಳು ರದ್ದಾಗಬೇಕು, ಸರ್ಕಾರ ರೈತಪರ ನೀತಿಗಳನ್ನು ಜಾರಿಗೆ ತರಬೇಕೆಂದು ಆಗ್ರಹಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ಪತ್ರ ಸಲ್ಲಿಸಿದರು.[೬೯]

ಪ್ರತಿಭಟನೆಯ ನಾಯಕತ್ವವನ್ನು ಜಿಲ್ಲಾ ರೈತ ಸಂಘದ ಅಧ್ಯಕ್ಷ ಸಿದ್ದವೀರಪ್ಪ, ರಾಜ್ಯ ಪ್ರಧಾನ ಕಾರ್ಯದರ್ಶಿ ಕೋಡಿಹಳ್ಳಿ ಚಂದ್ರಶೇಖರ್, ಚಿಕ್ಕಬ್ಬಿಗೆರೆ ನಾಗರಾಜ್‌ರವರು ವಹಿಸಿದ್ದರು.

**ಜಾಜೂರು ಜೌಟ್ ಉಪಠಾಣೆಯನ್ನು ಪೊಲೀಸ್ ಠಾಣೆಯನ್ನಾಗಿ ಮೇಲ್ದರ್ಜೆಗೇರಿಸಲು ಚಳ್ಳಕೆರೆ ರೈತರ ಪ್ರತಿಭಟನೆ:-೩೧/೦೧/೨೦೦೫**

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಜಾಜೂರು ಜೌಟ್ ಪೋಲಿಸ್ ಉಪಠಾಣೆಯನ್ನು, ಪೋಲಿಸ್ ಠಾಣೆಯಾಗಿ ಮೇಲ್ದರ್ಜೆಗೇರಿಸಲು ಒತ್ತಾಯಿಸಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ವತಿಯಿಂದ ಕೆ.ಪಿ. ಭೂತಯ್ಯರವರ ನೇತೃತ್ವದಲ್ಲಿ ಸುಮಾರು ೪೦ ಹಳ್ಳಿಯ ರೈತರು ಜಾಜೂರು ಉಪಠಾಣೆಯ ಎದುರು ಜನವರಿ ೩೧ ೨೦೦೫ರಂದು ಪ್ರತಿಭಟನೆ ಮಾಡಿದರು.

ಚಳ್ಳಕೆರೆ ತಾಲೂಕಿನ ಪರಶುರಾಂಪುರ ಪೊಲೀಸ್ ಠಾಣೆ ವ್ಯಾಪ್ತಿಗೆ, ಸುಮಾರು ೮೦ಕ್ಕಿಂತ ಹೆಚ್ಚು ಹಳ್ಳಿಗಳು ಸೇರುತ್ತವೆ. ಈ ಪೊಲೀಸ್ ಠಾಣೆಗೆ ಒಳಪಟ್ಟಿರುವ ಹಲವಾರು ಗ್ರಾಮಗಳು ೪೦ ಕಿ.ಮೀ. ದೂರವಿರುವುದರಿಂದ, ಗ್ರಾಮಗಳಲ್ಲಿ ಗಲಾಟೆಗಳು, ದೊಂಬಿ, ಕಳ್ಳತನ, ಜೂಜು ಇತ್ಯಾದಿ ಸಮಾಜ ಘಾತಕ ಶಕ್ತಿಗಳನ್ನು ನಿಯಂತ್ರಿಸಲು ಸಾಧ್ಯವಾಗುತ್ತಿಲ್ಲ. ಗ್ರಾಮದ ಜನರು ಪೊಲೀಸ್ ಠಾಣೆಗೆ ದೂರು ಸಲ್ಲಿಸಲು ಬರುವುದಕ್ಕೆ ಬಸ್ಸಿನ ದರದ ಖರ್ಚು ದುಬಾರಿಯಾಗಿರುವುದರಿಂದ ತುಂಬಾ ಹೊರೆಯಾಗುತ್ತದೆ. ಇದರಿಂದಾಗಿ ದೌರ್ಜನ್ಯದ ಪ್ರಕರಣಗಳು ಸಮಾಜ ಘಾತಕ ಘಟನೆಗಳು ಹೆಚ್ಚುತ್ತಿವೆ. ತಕ್ಷಣ ದೂರು ಸಲ್ಲಿಸಲು ಸಾಧ್ಯವಾಗದೆ ಬಹುತೇಕರು ದೌರ್ಜನ್ಯ ಸಹಿಸಿಕೊಂಡು ಜೀವಿಸುತ್ತಿದ್ದಾರೆಂದು ರೈತ ಮುಖಂಡರು ದೂರಿದರು. ಜಾಜೂರು ಉಪಠಾಣೆ ವ್ಯಾಪ್ತಿಗೆ ಬರುವ ದೊಡ್ಡ ಹೋಬಯ್ಯನ ಹಟ್ಟಿ, ಪಗಡಲ ಬಂಡೆ, ಹರವಿಗೊಂಡನಹಳ್ಳಿ, ಹಾಲಿಗೊಂಡನಹಳ್ಳಿ, ನಾಗಗೊಂಡನಹಳ್ಳಿ, ಚಿಕ್ಕ ಬಾದಿಹಳ್ಳಿ, ತಿಪ್ಪೆರೆಡ್ಡಿಹಳ್ಳಿ ಸೇರಿದಂತೆ ೪೦ ಗ್ರಾಮಗಳು, ಈ ಉಪಠಾಣೆಯ ವ್ಯಾಪ್ತಿಗೆ ಹತ್ತಿರವಿರುವ ಕಾರಣ. ಈ ಠಾಣೆಯನ್ನು ಪೊಲೀಸ್ ಠಾಣೆಯಾಗಿ ಪರಿವರ್ತಿಸಬೇಕೆಂದು ಒತ್ತಾಯಿಸಿದರು.

ಫೆಬ್ರವರಿ ೦೮ ೨೦೧೦ರಂದು ಸೋಮವಾರ ಬೆಳಿಗ್ಗೆ ೧೧:೦೦ ಗಂಟೆಗೆ ಜಾಜೂರು ಉಪಠಾಣೆಯ ಮುಂದೆ, ರೈತರು ಮತ್ತು ಮಹಿಳಾ ಸಂಘಗಳು ಹಾಗೂ ಗ್ರಾಮಸ್ಥರು ಅನಿರ್ದಿಷ್ಟ ಕಾಲ ಧರಣಿ ಮತ್ತು ಉಪವಾಸ ಸತ್ಯಾಗ್ರಹವನ್ನು ನಡೆಸಿದರು. ಈ ಭಾಗದ ಚಳ್ಳಕೆರೆ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ತಿಪ್ಪೇಸ್ವಾಮಿಯವರು, ಈ ಭಾಗದ ಜನಗಳಿಗೆ ಅನುಕೂಲವಾಗಲು ಸರ್ಕಾರಕ್ಕೆ ಪತ್ರದ ಮೂಲಕ ಶಿಫಾರಸ್ಸು ಮಾಡಿರುತ್ತಾರೆ. ಆದರೆ ಸರ್ಕಾರ ಯಾವುದೇ ಆದೇಶವನ್ನು ನೀಡದೆ ವಿಳಂಬ ನೀತಿಯನ್ನು ಅನುಸರಿಸುತ್ತಿದೆ. ಹಾಗಾಗಿ ಈ ಬಜೆಟ್‌ನಲ್ಲಿ ಮಂಜುರಾತಿ ಮಾಡಿಸಲು ಒತ್ತಾಯಿಸಿ, ಆದೇಶ ಬರುವವರೆಗೂ ಅನಿರ್ದಿಷ್ಟ ಕಾಲ ಧರಣಿ ಮತ್ತು ಉಪವಾಸ ಸತ್ಯಾಗ್ರಹ ಹಮ್ಮಿಕೊಂಡರು.[೮೦] ನಂತರ ಶಾಸಕರ ಭರವಸೆಯ ಮೇರೆಗೆ ಸತ್ಯಾಗ್ರಹ ಹಿಂಪಡೆದರು. ೫ ಮಾರ್ಚ್ ೨೦೧೨ರಂದು ಪೊಲೀಸ್ ಠಾಣೆಯನ್ನು ತೆರೆಯಲು ಮರು ಉಪವಾಸ ಸತ್ಯಾಗ್ರಹ ನಡೆಸಿದರು.

ಚಳ್ಳಕೆರೆ ಶಾಸಕರ ಭವನದ ಮುಂದೆ ರೈತ ಸಂಘದವರು, ಪೋಲಿಸ್ ಉಪಠಾಣೆಯನ್ನು ಪೋಲಿಸ್ ಠಾಣೆಯಾಗಿ ಮೇಲ್ದರ್ಜೆಗೇರಿಸಲು ಒತ್ತಾಯಿಸಿ ಮಾರ್ಚ್ ೧೪ ೨೦೧೬ರ ಸೋಮವಾರದಂದು ಪ್ರತಿಭಟನೆ ನಡೆಸಿದರು. ಆ ಸಮಯದಲ್ಲಿ ಸ್ಥಳಕ್ಕೆ ಆಗಮಿಸಿದ ಶಾಸಕರು, ಜಿಲ್ಲಾ ಪೊಲೀಸ್ ಅಧೀಕ್ಷಕರು ತಾಲೂಕು ತಹಶೀಲ್ದಾರರು, ಪೋಲಿಸ್ ಉಪ ಅಧೀಕ್ಷಕರು, ಪೋಲಿಸ್ ವೃತ್ತ ನಿರೀಕ್ಷಕರು ಮನವಿಯನ್ನು ಸ್ವೀಕರಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವ ಮೂಲಕ ಬೇಡಿಕೆಯನ್ನು ಈಡೇರಿಸುವುದಾಗಿ ಭರವಸೆ ನೀಡಿದರು.

ಈ ಪ್ರತಿಭಟನೆಯಲ್ಲಿ ರೈತ ಮುಖಂಡರಾದ ಟಿ. ನುಲೇನೂರು ಶಂಕ್ರಪ್ಪ, ಕೆ.ಪಿ. ಭೂತಯ್ಯ, ತಿಪ್ಪೇಸ್ವಾಮಿ, ಶ್ರೀನಿವಾಸರೆಡ್ಡಿ, ಎಸ್. ಪಾಲಯ್ಯ, ಎನ್. ಓಬಯ್ಯ, ಎಂ.ಎಸ್. ಸಂಗಮನಾತಶಾಸ್ತ್ರ, ರಂಗನಾಥರೆಡ್ಡಿ, ಡಿ. ಬಂಜಯ್ಯ ಮುಂತಾದವರು ಪಾಲ್ಗೊಂಡಿದ್ದರು.

**ಕೆ.ಎಸ್.ಆರ್.ಟಿ.ಸಿ.ಯ ಅಧಿಕಾರಿ ವರ್ಗಾವಣೆಗೆ ಆಗ್ರಹಿಸಿ ರೈತರ ಪ್ರತಿಭಟನೆ:–**

**೧೬/೦೨/೨೦೧೫**

ಚಳ್ಳಕೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ನೂರಾರು ವಿದ್ಯಾರ್ಥಿಗಳ ವತಿಯಿಂದ ೧೬ ಫೆಬ್ರವರಿ ೨೦೧೫ ರಂದು, ದಾವಣಗೆರೆ ಸಾರಿಗೆ ಇಲಾಖೆ ವಿಭಾಗೀಯ ನಿಯಂತ್ರಣಾಧಿಕಾರಿ ವರ್ಗಾವಣೆ ಹಾಗೂ ಕೆಲ ಮಾರ್ಗಗಳಿಗೆ ಬಸ್‌ಗಳ ಕಾರ್ಯಚರಣೆ ನಡೆಸಬೇಕೆಂದು ಆಗ್ರಹಿಸಿ, ನಗರದ ಸಾರಿಗೆ ಘಟಕದ ಬಳಿ ಪ್ರತಿಭಟನೆ ನಡೆಸಿದರು.

ರೈತ ಮುಖಂಡರು ಮಾತನಾಡಿ, ಇಲ್ಲಿನ ಜನರು ಆಂಧ್ರದ ಜತೆ ಹೆಚ್ಚಿನ ಸಂಬಂಧ ಹೊಂದಿರುವ ಮತ್ತು ಪುಣ್ಯ ಸ್ಥಳಗಳಿಗೆ ಹೋಗುವುದರಿಂದ ಚಳ್ಳಕೆರೆಯಿಂದ ಅಂತರ್‌ರಾಜ್ಯವಾಗಿ ಅನಂತಪುರ, ಮಂತ್ರಾಲಯ, ದಾವಣಗೆರೆಯಿಂದ ಚಳ್ಳಕೆರೆ ಮಾರ್ಗವಾಗಿ ಆಂಧ್ರದ ಕದರಿ ಹಾಗೂ ಈಗಾಗಲೇ ರದ್ದುಪಡಿಸಿರುವ ಚಳ್ಳಕೆರೆ, ಹೊಸಪೇಟೆ, ಮೈಸೂರು ಮಾರ್ಗಗಳನ್ನು ಮತ್ತೆ ಆರಂಭಿಸಬೇಕು. ಚಳ್ಳಕೆರೆಯಿಂದ ರಾತ್ರಿ ಸಮಯದಲ್ಲಿ ಪಾವಗಡ, ಮಡಕ, ಸಿರಾ,

ಹಿಂದುಪುರ, ಚಿಂತಾಮಣಿ, ಗೌರಿಬಿದನೂರು, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಮದನಪಲ್ಲಿ ಹಾಗೂ ತಿರುಪತಿಗೆ ಎರಡು ಬಸ್ ಕಾರ್ಯಚರಣೆ ಮಾಡಬೇಕೆಂದು ಆಗ್ರಹಿಸಿದರು.

ರೈತ ಸಂಘ ಹಲವು ವರ್ಷಗಳ ಕಾಲ ಹೋರಾಟ ನಡೆಸಿ, ಸಾರಿಗೆ ಘಟಕ ನಿರ್ಮಾಣ ಮಾಡುವಂತೆ ಮಾಡಿದ್ದಾರೆ. ಆದರೆ ಹಳ್ಳಿಗಳಿಗೆ ಬಸ್ ಕಾರ್ಯಚರಣೆ ಮಾಡದೇ ಇರುವುದರಿಂದ ವಿದ್ಯಾರ್ಥಿಗಳಿಗೆ ತುಂಬ ತೊಂದರೆಯಾಗಿದೆ. ಸಾರಿಗೆ ಘಟಕವಿದ್ದರು ಯಾವುದೇ ಪ್ರಯೋಜನವಾಗುತ್ತಿಲ್ಲವೆಂದು ಆರೋಪಿಸಿದರು.

ದಾವಣಗೆರೆ ವಿಭಾಗದ ನಿಯಂತ್ರಣಾಧಿಕಾರಿಯ ಧೋರಣೆಯಿಂದ ಅನೇಕ ಸಮಸ್ಯೆಗಳಾಗುತ್ತಿವೆ. ಖಾಸಗಿ ಬಸ್ ಮಾಲೀಕರ ಜೊತೆ ಶಾಮಿಲಾಗಿ ಅಂತರರಾಜ್ಯ ಪರವಾನಿಗೆ ಪಡೆದಿರುವ ಸಾರಿಗೆ ಮಾರ್ಗಗಳನ್ನು ರದ್ದುಗೊಳಿಸಿ, ಸರ್ಕಾರಕ್ಕೆ ಮತ್ತು ಸಂಸ್ಥೆಗೆ ನಷ್ಟ ಮಾಡುತ್ತಿದ್ದಾರೆ. ಹಾಗೇ ಗ್ರಾಮೀಣ ಪ್ರದೇಶಗಳಿಗೂ ಬಸ್‌ಗಳನ್ನು ಬಿಡುತ್ತಿಲ್ಲ. ಇಂತಹ ಅಧಿಕಾರಿಯನ್ನು ಸರ್ಕಾರ ಕೂಡಲೇ ವರ್ಗಾವಣೆ ಮಾಡಬೇಕೆಂದು ಆಗ್ರಹಿಸಿದರು.[೪೧]

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ನುಲೇನೂರು ಶಂಕರಪ್ಪ, ಮುಖಂಡರಾದ ಕೆ.ಪಿ. ಭೂತಯ್ಯ, ರಾಮಚಂದ್ರ ರೆಡ್ಡಿ, ನಿಜಲಿಂಗಪ್ಪ, ಶ್ರೀನಿವಾಸರೆಡ್ಡಿ ಮುಂತಾದ ರೈತರು ಹಾಗೂ ನೂರಾರು ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

**ವೈದ್ಯರ ನೇಮಕಕ್ಕೆ ಒತ್ತಾಯಿಸಿ ಚಳ್ಳಕೆರೆ ರೈತ ಸಂಘದ ಪ್ರತಿಭಟನೆ:– ೧೯/೦೨/೨೦೧೫**

ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ ಸಮಿತಿ ವತಿಯಿಂದ ನೂರಾರು ರೈತರು, ನಾಯಕನಟ್ಟಿ ಆರೋಗ್ಯ ಕೇಂದ್ರದ ಎದುರು ವೈದ್ಯರ ಕೊರತೆಯನ್ನು ಸರಿಪಡಿಸುವಂತೆ ಒತ್ತಾಯಿಸಿ, ಫೆಬ್ರವರಿ ೧೯ ೨೦೧೫ರಂದು ಪ್ರತಿಭಟನೆ ನಡೆಸಲಾಯಿತು.

ಹೋಬಳಿಯ ಸುತ್ತಲಿನ ಹಲವಾರು ಗ್ರಾಮಗಳಿಂದ ಚಿಕಿತ್ಸೆ ಬಯಸಿ ಆರೋಗ್ಯ ಕೇಂದ್ರಕ್ಕೆ ಬರುವ ರೋಗಿಗಳಿಗೆ ಸೂಕ್ತ ಚಿಕಿತ್ಸೆ ಇಲ್ಲದೆ ತೊಂದರೆ ಅನುಭವಿಸುವಂತಾಗಿದೆ. ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಮೂವರು ವೈದ್ಯರಿಂದ ಸಮರ್ಪಕ ಸೇವೆ ದೊರೆಯುತ್ತಿಲ್ಲ. ರಾತ್ರಿ ಪಾಳೆಯದಲ್ಲಿ ವೈದ್ಯರಿಲ್ಲದೆ ಸಮಸ್ಯೆ ಎದುರಿಸುವಂತಾಗಿದೆ. ಸಮೀಪದ ರಾಜ್ಯ ಹೆದ್ದಾರಿಯಲ್ಲಿ ನಡೆಯುವ ಅಪಘಾತಗಳಿಗೆ ಸಮಯಕ್ಕೆ ಸರಿಯಾಗಿ ಚಿಕಿತ್ಸೆ ದೊರೆಯದ ಪರಿಸ್ಥಿತಿ ಇದೆ. ಹೆರಿಗೆಗೆ ಬರುವ ಮಹಿಳೆಯರು ಅನೇಕ ಬಾರಿ ಪ್ರಾಣಾಪಾಯದ ಪರಿಸ್ಥಿತಿ ಎದುರಿಸುವಂತಾಗಿದೆ. ಹಾಗಾಗಿ ಸಾರ್ವಜನಿಕರ ಹಿತದೃಷ್ಟಿಯಿಂದ ಕೂಡಲೆ ಖಾಯಂ ವೈದ್ಯರನ್ನು ನೇಮಕ ಮಾಡಬೇಕು. ರಾತ್ರಿ ಸಮಯದಲ್ಲಿ ಕರ್ತವ್ಯ ನಿರ್ವಹಿಸಲು ವೈದ್ಯರ ವ್ಯವಸ್ಥೆ ಮಾಡಬೇಕು, ಆಸ್ಪತ್ರೆ ಸಹಾಯಕಿಯರು ಗರ್ಭಿಣಿಯರ ಮನೆಗಳಿಗೆ ಭೇಟಿ ನೀಡಿ ಯೋಗಕ್ಷೇಮ ವಿಚಾರಿಸಬೇಕು ಎಂದು ಆಗ್ರಹಿಸಿದರು.

ಪ್ರತಿಭಟನಾ ಸ್ಥಳಕ್ಕೆ ವೈದ್ಯಾಧಿಕಾರಿ ಡಾ.ಪ್ರೇಮಸುಧಾ ಭೇಟಿ ನೀಡಿ ರೈತರಿಂದ ಮನವಿ ಪತ್ರ ಸ್ವೀಕರಿಸಿ ಮಾತನಾಡಿ, ರಾತ್ರಿ ಸಮಯದಲ್ಲಿ ಕಾರ್ಯ ನಿರ್ವಹಿಸುವಂತೆ ಕ್ರಮ

ಕೈಗೊಳ್ಳಲಾಗುವುದು. ವೈದ್ಯರ ಕೊರತೆ ಸರಿಪಡಿಸಲು ಮೇಲಾಧಿಕಾರಿಗಳಿಗೆ ಮನವಿ ಮಾಡಲಾಗುವುದೆಂದು ಭರವಸೆ ನೀಡಿದಾಗ ರೈತರು ಪ್ರತಿಭಟನೆ ನಿಲ್ಲಿಸಿದರು.[೪೨]

**ಮರಳು ನೀತಿ ಸರಳಗೊಳಿಸುವಂತೆ ಆಗ್ರಹಿಸಿ ರೈತ ಪ್ರತಿಭಟನೆ:– ೦೬/೧೨/೨೦೧೫**

ಧರ್ಮಪುರದಲ್ಲಿ ಶೌಚಗೃಹ ಹಾಗೂ ಮನೆ ನಿರ್ಮಾಣಕ್ಕೆ ಎತ್ತಿನ ಬಂಡಿಯಲ್ಲಿ ಮರಳು ತರಲು ರೈತರಿಗೆ ಅವಕಾಶ ಕಲ್ಪಿಸುವಂತೆ ಆಗ್ರಹಿಸಿ, ರೈತ ಸಂಘಟನೆಯ ಕಾರ್ಯಕರ್ತರು ಡಿಸೆಂಬರ್ ೦೬ ೨೦೧೫ರಂದು ನಾಡ ಕಛೇರಿಗೆ ಬೀಗ ಹಾಕಿ ಪ್ರತಿಭಟನೆ ನಡೆಸಿದರು.

ಸರ್ಕಾರ ನಿರ್ಮಲ ಭಾರತ್ ಅಭಿಯಾನದಡಿ ಬಯಲು ಶೌಚಮುಕ್ತಗೊಳಿಸಲು, ಶೌಚಗೃಹ ನಿರ್ಮಿಸಿಕೊಳ್ಳಲು ಬಡ ಕುಟುಂಬಗಳಿಗೆ ಅನುದಾನ ನೀಡುತ್ತಿದೆ. ಆದರೆ ಕಟ್ಟಡ ನಿರ್ಮಾಣಕ್ಕೆಂದು ವೇದಾವತಿ ನದಿ ಸಮೀಪದ ಹಳ್ಳ ಕೊಳ್ಳಗಳಿಂದ ರೈತರು ಮರಳು ತರುತ್ತಿದ್ದಾರೆ. ಹಾಗಾಗಿ ಪೊಲೀಸರು ಹಾಗೂ ಕಂದಾಯ ಅಧಿಕಾರಿಗಳು ಸ್ಥಳೀಯರ ಮೇಲೆ ಪ್ರಕರಣಗಳನ್ನು ದಾಖಲಿಸುತ್ತಿದ್ದಾರೆ. ಇದು ಖಂಡನೀಯ ಎಂದು ಆಕ್ರೋಶ ವ್ಯಕ್ತಪಡಿಸಿ, ಮನವಿ ನೀಡಲು ನಾಡ ಕಛೇರಿಗೆ ತೆರಳಿದಾಗ ಯಾವೊಬ್ಬ ಅಧಿಕಾರಿಯು ಇಲ್ಲದ ಕಾರಣ, ಕಛೇರಿಗೆ ಬೀಗ ಹಾಕಿ ಆಕ್ರೋಶ ವ್ಯಕ್ತಪಡಿಸಿ, ತಹಶೀಲ್ದಾರ್‌ರರು ಸ್ಥಳಕ್ಕೆ ಬಂದು ತಮ್ಮ ಸಮಸ್ಯೆ ಪರಿಹರಿಸಬೇಕೆಂದು ಪ್ರತಿಭಟನೆ ನಡೆಸಿದರು.

ರೈತ ಸಂಘದ ಜಿಲ್ಲಾ ಉಪಾಧ್ಯಕ್ಷ ಎಚ್.ಎಲ್. ಗುಣ್ಣಯ್ಯ ಮಾತನಾಡಿ, ನಾಲ್ಕೈದು ವರ್ಷಗಳಿಂದ ವೇದಾವತಿ ನದಿಯ ದಡದಿಂದ ಸಾವಿರಾರು ಲೋಡು ಅಕ್ರಮ ಮರಳು ಸಾಗಣೆ ಮಾಡುವಾಗ, ಜಿಲ್ಲಾಡಳಿತ, ಕಂದಾಯ ಇಲಾಖೆ, ಪೊಲೀಸ್ ಇಲಾಖೆ, ಕೈಕಟ್ಟಿ ಕುಳಿತಿದ್ದು, ರೈತರು ಸೂರು ನಿರ್ಮಿಸಿಕೊಳ್ಳಲು ಎತ್ತಿನ ಬಂಡಿಯಲ್ಲಿ ಮರಳು ತಂದರೆ ಲೂಟಿಕೋರರೆಂಬಂತೆ ನಡೆದುಕೊಳ್ಳುತ್ತಿದ್ದಾರೆ. ಮನೆ ಕಟ್ಟಿಕೊಳ್ಳುವವರಿಗೆ ಮರಳು ದೊರೆಯುವಂತೆ ಕಾನೂನು ರೂಪಿಸಬೇಕು. ಇಲ್ಲದಿದ್ದರೆ ಜಿಲ್ಲಾಧಿಕಾರಿ ಕಛೇರಿ ಬಳಿ ಉಪವಾಸ ಸತ್ಯಾಗ್ರಹ ನಡೆಸಲಾಗುವುದೆಂದು ಎಚ್ಚರಿಸಿದರು.[೪೩] ಪ್ರತಿಭಟನೆಯಲ್ಲಿ ರೈತ ಮುಖಂಡರು ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ತರಕಾರಿಗಳಿಗೆ ಸೂಕ್ತ ಬೆಲೆ ದೊರಕಿಸಿಕೊಡುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:– ೦೭/೦೫/೨೦೧೬**

ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ವತಿಯಿಂದ ೫೦ಕ್ಕೂ ಹೆಚ್ಚು ರೈತರು, ತಾವು ಬೆಳೆದ ತರಕಾರಿಗಳಿಗೆ ಸೂಕ್ತ ಬೆಲೆ ದೊರಕಿಸಿ ಕೊಡಬೇಕು. ಚಳ್ಳಕೆರೆಯ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ತರಕಾರಿ ಸಗಟು ಮಾರುಕಟ್ಟೆ ಆರಂಭಿಸಬೇಕೆಂದು ಒತ್ತಾಯಿಸಿ, ಮೇ ೦೭ ೨೦೧೬ರಂದು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಪ್ರತಿಭಟನೆ ಮಾಡಿ, ಜಿಲ್ಲಾಧಿಕಾರಿ ಎಂ.ಕೆ. ರಂಗಯ್ಯರವರಿಗೆ ಮನವಿ ಸಲ್ಲಿಸಲಾಯಿತು.

ಜಿಲ್ಲೆಯಲ್ಲಿ ಇತ್ತೀಚೆಗೆ ರೈತರು ತರಕಾರಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಿದ್ದಾರೆ. ಆದರೆ ಮಾರುಕಟ್ಟೆಯಲ್ಲಿ ರೈತರನ್ನು ಶೋಷಣೆ ಮಾಡಲಾಗುತ್ತಿದೆ. ಇದನ್ನು ತಪ್ಪಿಸುವ ಸಲುವಾಗಿ ಸಗಟು ವ್ಯಾಪಾರ ಕೇಂದ್ರ ತೆರೆಯಬೇಕೆಂದು ಒತ್ತಾಯಿಸಿದರು. ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲೂಕುಗಳಲ್ಲಿ ಅನೇಕ ವರ್ಷಗಳಿಂದಲೂ ಮಳೆಯಿಲ್ಲದೆ ಕೊಳವೆ ಬಾವಿಗಳು ಬತ್ತಿ ಹೋಗಿವೆ. ಕೃಷಿ ಪಂಪ್‌ಸೆಟ್‌ಗಳಲ್ಲೂ ನೀರಿಲ್ಲ. ಇರುವ ನೀರಿನಲ್ಲೇ ತರಕಾರಿ ಬೆಳೆಯಬೇಕೆಂದರೆ ಸಮಯಕ್ಕೆ ಸರಿಯಾಗಿ ವಿದ್ಯುತ್ ಇರುವುದಿಲ್ಲ. ಇಷ್ಟೆಲ್ಲಾ ಸಮಸ್ಯೆಗಳ ನಡುವೆಯೂ ರೈತರು ಬದನೇಕಾಯಿ, ಟೊಮ್ಯಾಟೋ, ಈರುಳ್ಳಿ, ಮೆಣಸಿನಕಾಯಿ, ಬೆಂಡೆಕಾಯಿ, ಹೀರೆಕಾಯಿ, ಸೊಪ್ಪು ಇತ್ಯಾದಿಗಳನ್ನು ಬೆಳೆದು ಮಾರುಕಟ್ಟೆಗೆ ತರುತ್ತಿದ್ದಾರೆ. ಆದರೆ ಮಧ್ಯವರ್ತಿಗಳು ಮನಬಂದಂತೆ ಖರೀದಿಸಿ ಹೆಚ್ಚು ಬೆಲೆಗೆ ಮಾರಾಟ ಮಾಡಿಕೊಳ್ಳುತ್ತಿದ್ದಾರೆ. ಇದರಿಂದ ಹಗಲಿರುಳು ಶ್ರಮಿಸಿ, ಗೊಬ್ಬರ ಹಾಕಿ, ನೀರು ಕಟ್ಟಿ, ರೈತರು ಬೆಳೆಯುವ ತರಕಾರಿಗೆ ಸೂಕ್ತ ಬೆಲೆ ಸಿಗುತ್ತಿಲ್ಲ. ಕೃಷಿಗೆ ಮಾಡಿದ ಸಾಲವನ್ನು ತೀರಿಸಲು ಆಗದೆ ಮರ್ಯಾದೆಗೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆಂದು ರೈತರು ಜಿಲ್ಲಾಧಿಕಾರಿಗಳಿಗೆ ತಮ್ಮ ಅಳಲು ತೋಡಿಕೊಂಡರು.[೪೪]

ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲೂಕುಗಳ ರೈತರು ಬೆಳೆದ ತರಕಾರಿಗಳನ್ನು ಬಳ್ಳಾರಿ ಮತ್ತು ತುಮಕೂರಿಗೆ ಕೊಂಡೊಯ್ದು ಮಾರಾಟ ಮಾಡಲಾಗುತ್ತಿದೆ. ಇದರಿಂದ ಕೃಷಿಗಾಗಿ ಮಾಡಿದ ಖರ್ಚಿಗಿಂತಲೂ ಸಾಗಾಣಿಕೆ ವೆಚ್ಚವೇ ದುಬಾರಿಯಾಗುತ್ತಿದೆ. ಆದ್ದರಿಂದ ಚಳ್ಳಕೆರೆ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ತರಕಾರಿ ಸಗಟು ಹೋಲ್‌ಸೇಲ್ ಮಾರುಕಟ್ಟೆ ತೆರೆಯುವಂತೆ ಒತ್ತಾಯಿಸಿದರು.

ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು, ಸರ್ಕಾರದ ಜೊತೆ ಚರ್ಚಿಸಿ ಚಳ್ಳಕೆರೆಯ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ತರಕಾರಿ ಸಗಟು ಮಾರುಕಟ್ಟೆ ಆರಂಭಿಸುವಂತೆ ಶಿಫಾರಸ್ಸು ಮಾಡುತ್ತೇನೆಂದು ಭರವಸೆ ನೀಡಿದರು.

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ನುಲೇನೂರು ಶಂಕರಪ್ಪ, ಚಳ್ಳಕೆರೆ ತಾಲೂಕು ಅಧ್ಯಕ್ಷ ಪಿ.ಟಿ. ರಾಮಚಂದ್ರ ರೆಡ್ಡಿ, ಪ್ರಧಾನ ಕಾರ್ಯದರ್ಶಿ ತಿಪ್ಪೇಸ್ವಾಮಿ, ಕೆ.ಪಿ. ಭೂತಯ್ಯ ದಯಾನಂದ ಮೂರ್ತಿ ಮುಂತಾದ ರೈತರುಗಳು ಭಾಗವಹಿಸಿದ್ದರು.

**ಮರಳು ಟೆಂಡರ್ ರದ್ದತಿಗೆ ಒತ್ತಾಯಿಸಿ ರೈತರ ಪ್ರತಿಭಟನೆ:- ೨೬/೦೫/೨೦೧೬**

ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ವತಿಯಿಂದ ಇನ್ನೂರಕ್ಕೂ ಹೆಚ್ಚು ರೈತರು, ಚಳ್ಳಕೆರೆ ತಾಲೂಕಿನ ವೇದಾವತಿ ನದಿ ದಡದಲ್ಲಿ ಮರಳು ಹರಾಜಿಗೆ ಟೆಂಡರ್ ಕರೆದಿರುವುದನ್ನು ರದ್ದುಪಡಿಸುವಂತೆ ಒತ್ತಾಯಿಸಿ, ೨೬ ಮೇ ೨೦೧೬ರಂದು ಜಿಲ್ಲಾಧಿಕಾರಿ ಕಛೇರಿಯ ಮುಂದೆ ಪ್ರತಿಭಟನೆ ಮಾಡಿ ಮನವಿ ಸಲ್ಲಿಸಿದರು.[೪೫]

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಕೆ.ಪಿ. ಭೂತಯ್ಯರವರು ಹತ್ತು ವರ್ಷಗಳಿಂದಲೂ ವೇದಾವತಿ ನದಿ ತುಂಬಿ ಹರಿಯದ ಕಾರಣ ಅಂತರ್ಜಲ ಬತ್ತಿ ಹೋಗಿದೆ. ಇಂತಹ

ಪರಿಸ್ಥಿತಿಯಲ್ಲಿ ಮರಳು ಎತ್ತಿದರೆ ಇನ್ನೂ ನೀರು ಇಂಗುವುದಾದರೂ ಹೇಗೆ? ಹಾಗಾಗಿ ಹರಾಜು ಟೆಂಡರ್ ಪ್ರಕ್ರಿಯೆ ರದ್ದುಪಡಿಸದಿದ್ದರೆ ಮುಂದಿನ ದಿನಗಳಲ್ಲಿ ಉಗ್ರವಾದ ಹೋರಾಟ ಮಾಡಲಾಗುವುದೆಂದು ಎಚ್ಚರಿಕೆ ನೀಡಿದರು.

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ತಾಲೂಕು ಅಧ್ಯಕ್ಷ ಬಸ್ತಿಹಳ್ಳಿ ಸಿ. ಸುರೇಶ್‌ಬಾಬು ಮಾತನಾಡಿ, ಮೊದಲ ಬರಗಾಲಕ್ಕೆ ತುತ್ತಾಗಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ರೈತರು ಕೃಷಿಗಾಗಿ ಮಾಡಿರುವ ಸಾಲವನ್ನು ತೀರಿಸಲಾಗದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಇದ್ಯಾವುದನ್ನು ಪರಿಗಣಿಸಿದ ಸರ್ಕಾರ ವೇದಾವತಿ ನದಿಯಲ್ಲಿ ಮರಳು ತೆರೆಯಲು ಹರಾಜು ಟೆಂಡರ್ ಪ್ರಕ್ರಿಯೆ ಆರಂಭಿಸಿರುವುದು ಅನ್ನದಾತ ರೈತರನ್ನು ಮತ್ತಷ್ಟು ಪ್ರತಾಪಕ್ಕೆ ನೂಕಿದಂತಾಗಿದೆ. ಈ ನಿಟ್ಟಿನಲ್ಲಿ ರೈತರು ತಮ್ಮಲ್ಲಿರುವ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳನ್ನು ಬಿಟ್ಟು ಒಂದಾಗಿ ಶಕ್ತಿ ಪ್ರದರ್ಶಿಸಬೇಕಾಗಿದೆ ಎಂದು ಕರೆ ನೀಡಿದರು. ಸರ್ಕಾರದ ಈ ಕ್ರಮ ರೈತರಿಗೆ ದೊಡ್ಡ ಸವಾಲಾಗಿದ್ದು ಸಮರ್ಥವಾಗಿ ಎದುರಿಸಲು ಹಸಿರು ಟವಲ್‌ನವರೆಲ್ಲಾ ಒಂದಾಗಬೇಕು. ಇಲ್ಲವಾದಲ್ಲಿ ಮುಂದಿನ ದಿನಗಳಲ್ಲಿ ಉಳಿಗಾಲವಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕೆಂದರು. ನದಿ ಪಾತ್ರದ ಗ್ರಾಮಗಳಾದ ಮೈಲನಹಳ್ಳಿ, ಗುಡುವಳ್ಳಿ, ಚಿತ್ರನಾಯಕನಹಳ್ಳಿ, ಬೂದಿಹಳ್ಳಿ, ರೇಣುಕಾಪುರ, ಬಸವಾಪುರ, ಕೆ.ಡಿ. ಕೋಟೆ, ಕಸವಿಗೊಂಡನಹಳ್ಳಿ, ತಪ್ಪಗೊಂಡನಹಳ್ಳಿ, ಮಾದೂರು, ಕಾಮಸಮುದ್ರ, ಜಾಜೂರು, ಹರವಿಗೊಂಡನಹಳ್ಳಿ, ಸೂರನಹಳ್ಳಿ, ಒಡೆಯರಹಳ್ಳಿ, ಕೂನಿಗಾರನಹಳ್ಳಿ ಮುಂತಾದ ಗ್ರಾಮಗಳಲ್ಲಿ, ಜನ ಮತ್ತು ಜಾನುವಾರುಗಳಿಗೆ ಕುಡಿಯಲು ನೀರಿಲ್ಲದಂತಾಗಿ ರೈತರು ಕೃಷಿ ಮಾಡಲು ಆಗದಂತ ಪರಿಸ್ಥಿತಿಯಲ್ಲಿರುವುದರಿಂದ ಮರಳು ಹರಾಜು ಟೆಂಡರ್ ರದ್ದುಪಡಿಸಬೇಕೆಂದು ಆಗ್ರಹಿಸಿದರು.

ರೈತ ಮುಖಂಡರಾದ ಆರ್.ಎಂ. ದಯಾನಂದ ಮೂರ್ತಿಯವರು ಮಾತನಾಡಿ ಕುಡಿಯಲು ನೀರಿಲ್ಲದೆ ಜನ ಜಾನುವಾರುಗಳು ಸಾಯುತ್ತಿರುವಾಗ ಮರಳು ತೆಗೆಯಲು ಸರ್ಕಾರ ಟೆಂಡರ್ ಕರೆದಿದೆ. ಇನ್ನೂ ಹದಿನೈದು ದಿನಗಳೊಳಗೆ ಟೆಂಡರ್ ಹರಾಜು ರದ್ದುಪಡಿಸದಿದ್ದರೆ ಇಡೀ ಚಳ್ಳಕೆರೆ ತಾಲೂಕಿನಾದ್ಯಂತವಿರುವ ರೈತರು ತಮ್ಮ ಸಂಸಾರ ಮತ್ತು ಜಾನುವಾರುಗಳೊಡನೆ ಜಿಲ್ಲಾಧಿಕಾರಿ ಕಛೇರಿಗೆ ಆಗಮಿಸಿ ಇಲ್ಲಿಯೇ ಧರಣಿ ನಡೆಸುವುದಾಗಿ ಎಚ್ಚರಿಕೆ ನೀಡಿದರು. ಕೋಲಾರದಲ್ಲಿ ಸಾವಿರ ಅಡಿ ಕೊರೆದರೂ ನೀರು ಸಿಗುತ್ತಿಲ್ಲ. ಅಂತಹ ಹಾಹಾಕಾರ ಚಳ್ಳಕೆರೆ ತಾಲೂಕಿನಲ್ಲಿ ತಲೆದೋರಿದ್ದು, ಇಷ್ಟೆಲ್ಲಾ ಸಾಧಕ ಬಾದಕಗಳನ್ನು ಗಣನೆಗೆ ತೆಗೆದುಕೊಂಡು, ಜಿಲ್ಲಾಡಳಿತ ಮರಳು ಹರಾಜಿಗೆ ಕರೆದಿರುವ ಟೆಂಡರ್ ರದ್ದುಪಡಿಸದಿದ್ದರೆ ಅಮರಣಾಂತರ ಉಪವಾಸ ಸತ್ಯಾಗ್ರಹ ನಡೆಸುತ್ತೇವೆ. ಒಂದು ವೇಳೆ ಮರಳು ತುಂಬಲು ಅವಕಾಶ ನೀಡಿದ್ದೇ ಆದರೇ ಜೈಲಿಗೆ ಹೋಗಲು ಸಿದ್ದವೆಂದು ಹೇಳಿದರು.

ಪ್ರತಿಭಟನೆಯಲ್ಲಿ ಕೆ.ಪಿ. ಭೂತಯ್ಯ, ಧನಂಜಯ, ಪಿ.ಟಿ. ರಾಮಚಂದ್ರರೆಡ್ಡಿ, ತಿಪ್ಪೇಸ್ವಾಮಿ, ಚಂದ್ರಣ್ಣ, ರಂಗಣ್ಣ, ಭೀಮಣ್ಣ, ಈರಣ್ಣ, ಬಸವರಾಜು, ಪಂಚಾಕ್ಷರಪ್ಪ, ಓಬಳೇಶ, ಗೋವಿಂದಪ್ಪ ಮುಂತಾದ ಇನ್ನೂರಕ್ಕೂ ಹೆಚ್ಚು ರೈತರು ಪಾಲ್ಗೊಂಡಿದ್ದರು.

**ಚಿತ್ರದುರ್ಗದಲ್ಲಿ ರಾಜ್ಯ ರಸ್ತೆ ಸಾರಿಗೆ ವಿಭಾಗೀಯ ಕಚೇರಿ ಸ್ಥಾಪನೆಗೆ ಒತ್ತಾಯಿಸಿ ರೈತ ಪ್ರತಿಭಟನೆ:- ೧೫/೦೬/೨೦೧೬**

ಚಿತ್ರದುರ್ಗ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಕೆ.ಪಿ. ಭೂತಯ್ಯರವರ ನೇತೃತ್ವದಲ್ಲಿ, ನೂರಾರು ರೈತರು ರಾಜ್ಯ ರಸ್ತೆ ಸಾರಿಗೆ ನಿಗಮದ ವಿಭಾಗೀಯ ಕಛೇರಿಯನ್ನು ಹಿಂದುಳಿದ ಚಿತ್ರದುರ್ಗದಲ್ಲಿ ಸ್ಥಾಪಿಸಿಬೇಕೆಂದು ಒತ್ತಾಯಿಸಿ ಜುಲೈ ೧೫ ೨೦೧೬ರಂದು ಪ್ರತಿಭಟನೆ ಮಾಡಿದರು.

ನಗರದ ವಿವಿಧ ಕಡೆ ಪ್ರತಿಭಟನಾ ಮೆರವಣಿಗೆ ಮಾಡಿ ಜಿಲ್ಲಾಧಿಕಾರಿ ಕಛೇರಿಗೆ ಬಂದು ನೂರಾರು ರೈತರು ಧರಣಿ ಕುಳಿತರು. ಆ ಸಮಯದಲ್ಲಿ ಮಾತನಾಡಿದ ಕೆ.ಪಿ. ಭೂತಯ್ಯರವರು ಜುಲೈ ೧೬ರಂದು ನಗರದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ಡಿಪೋ ಉದ್ಘಾಟನೆಯಾಗುತ್ತಿದ್ದು, ಅಂದೇ ಸಾರಿಗೆ ಸಚಿವರಿಗೂ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಿಗೂ ಮನವಿ ಸಲ್ಲಿಸಲಾಗುವುದು. ಡಿಪೋ ಹೊರತುಪಡಿಸಿ ಉಳಿಯುವ ೧೦ ಎಕರೆ ಜಮೀನಿನಲ್ಲಿ ವಿಭಾಗೀಯ ಕಛೇರಿ ತೆರೆಯುವುದರಿಂದ ಗ್ರಾಮಾಂತರ ಪ್ರದೇಶಕ್ಕೆ, ಶಾಲಾ ಮಕ್ಕಳಿಗೆ, ಮಹಿಳೆಯರಿಗೆ, ವೃದ್ಧರಿಗೆ ಹಾಗು ಬಡವರಿಗೆ ಅನುಕೂಲವಾಗಲಿದೆ. ಇದರಿಂದ ಜಿಲ್ಲೆಯ ಎಲ್ಲಾ ಹಳ್ಳಿಗಳಿಗೂ ಸಾರಿಗೆ ಸೌಲಭ್ಯ ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಸಂಬಂಧಪಟ್ಟ ಸಚಿವರಿಗೂ ಒತ್ತಾಯಿಸಲಾಗುವುದೆಂದು ತಿಳಿಸಿದರು. ಚಿತ್ರದುರ್ಗ ಲೋಕಸಭಾ ಕ್ಷೇತ್ರ ಪರಿಶಿಷ್ಟ ಜಾತಿಗೆ ಮೀಸಲಾಗಿದ್ದು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗು ಹಿಂದುಳಿದ ಅಲ್ಪಸಂಖ್ಯಾತ ವರ್ಗದವರೇ ಜಿಲ್ಲೆಯಲ್ಲಿ ಹೆಚ್ಚಾಗಿದ್ದಾರೆ. ಹಾಗಾಗಿ ರಾಜ್ಯ ರಸ್ತೆ ಸಾರಿಗೆ ನಿಗಮದ ವಿಭಾಗೀಯ ಕಛೇರಿ ತೆರೆಯುವುದರಿಂದ ಎಲ್ಲಾ ವರ್ಗದ ಜನರಿಗೂ ಸಹಕಾರಿಯಾಗಲಿದೆ ಎಂದು ಒತ್ತಾಯಿಸಿದರು.

ಶಿರಾ ಮತ್ತು ಪಾವಗಡ, ಚಿತ್ರದುರ್ಗ ಲೋಕಸಭಾ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟಿದೆ. ಈ ಎರಡು ವಿಧಾನಸಭಾ ಕ್ಷೇತ್ರಗಳನ್ನು ಚಿತ್ರದುರ್ಗ ವಿಭಾಗೀಯ ಕಚೇರಿಯ ವ್ಯಾಪ್ತಿಗೆ ಸೇರಿಸಿಕೊಂಡು, ಡಿಪೋ ಇಲ್ಲದ ಹಿರಿಯೂರು, ಮೊಳಕಾಲ್ಮೂರು ಹಾಗು ಹೊಳಲ್ಕೆರೆಯಲ್ಲಿ ಡಿಪೋ ತೆರೆಯಬೇಕೆಂದು ಪ್ರತಿಭಟಿಸಿದರು. ಬಸ್‌ನ ಮೇಲ್ಭಾಗದಲ್ಲಿ ಕುಳಿತು ಪ್ರಯಾಣಿಸುವುದನ್ನು ಸರ್ಕಾರ ನಿಷೇಧಿಸಿದೆ. ಅದರೂ ಬಹುತೇಕ ಗ್ರಾಮೀಣ ಪ್ರದೇಶಗಳ ಕಡೆ ಹೆಚ್ಚಿನ ಬಸ್‌ಗಳ ಸಂಚಾರವಿಲ್ಲದ ಕಾರಣ ಮ್ಯಾಕ್ಸಿಕ್ಯಾಬ್, ಆಟೋ, ಅಪೆ ಗಾಡಿಗಳಲ್ಲಿ ಇಂದಿಗೂ ಪ್ರಯಾಣಿಕರು ಗ್ರಾಮೀಣ ಪ್ರದೇಶಗಳಿಂದ ನಗರಕ್ಕೆ ಬರುತ್ತಿದ್ದಾರೆ. ಇದರಿಂದ ಸಾಕಷ್ಟು ಅನಾಹುತಗಳು ಸಂಭವಿಸಿ ಅನೇಕ ಪ್ರಯಾಣಿಕರು ತಮ್ಮ ಪ್ರಾಣ ಕಳೆದುಕೊಂಡಿದ್ದಾರೆ. ಹಾಗಾಗಿ ಸರ್ಕಾರಿ ಬಸ್‌ಗಳ ಸಂಖ್ಯೆಯನ್ನು ಹೆಚ್ಚು ಮಾಡಿದರೆ ಎಲ್ಲದಕ್ಕೂ ಪರಿಹಾರವಿದೆ ಎಂದು ಆಗ್ರಹಿಸಿದರು.[೪೬]

ಪ್ರತಿಭಟನೆಯಲ್ಲಿ ಕೆ.ಪಿ. ಭೂತಯ್ಯ, ಜಿಲ್ಲಾಧ್ಯಕ್ಷ ಟಿ. ನುಲೇನೂರು ಶಂಕರಪ್ಪ, ಬಸ್ತಿಹಳ್ಳಿ ಸುರೇಶ್‌ಬಾಬು, ತಿಪ್ಪೇಸ್ವಾಮಿ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಮಹದಾಯಿ ಹೋರಾಟಗಾರರ ಮೇಲಿನ ಪೋಲಿಸ್ ದೌರ್ಜನ್ಯ ಖಂಡಿಸಿ ರೈತರ ಮೌನ ಪ್ರತಿಭಟನೆ:- ೦೧/೦೮/೨೦೧೬**

ಚಿತ್ರದುರ್ಗ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ, ೨೦೦ಕ್ಕಿಂತ ಹೆಚ್ಚು ರೈತರು ಮಹದಾಯಿ ಹೋರಾಟಗಾರರ ಮೇಲಿನ ಪೊಲೀಸ್ ದೌರ್ಜನ್ಯ ಖಂಡಿಸಿದರು. ಇದಕ್ಕೆ ಕಾರಣರಾದ ಗೃಹ ಸಚಿವರಾದ ಡಾ. ಜಿ. ಪರಮೇಶ್ವರ್ ಅವರನ್ನು ಸಂಪುಟದಿಂದ ಕೈಬಿಡುವಂತೆ ಒತ್ತಾಯಿಸಿ, ಆಗಸ್ಟ್ ೦೧ ೨೦೧೬ರಂದು ಮೌನ ಪ್ರತಿಭಟನೆ ಮಾಡಿದರು.

ಜಿಲ್ಲೆಯ ವಿವಿಧೆಡೆಗಳಿಂದ ಆಗಮಿಸಿದ್ದ ರೈತರು ಜಿಲ್ಲಾಧಿಕಾರಿಗಳ ವೃತ್ತದಿಂದ ಧರಣಿ ನಡೆಸಿ ಜಿಲ್ಲಾಧಿಕಾರಿಯವರಿಗೆ ಮನವಿ ಸಲ್ಲಿಸಿದರು. ಮಹದಾಯಿ ನ್ಯಾಯಾಧಿಕರಣದ ಮಧ್ಯಾಂತರ ತೀರ್ಪು ಖಂಡಿಸಿ ಪ್ರತಿಭಟನೆ ನಡೆಸುತ್ತಿದ್ದ, ಯಮನೂರು ಮತ್ತು ಅಳಗವಾಡಿ ಗ್ರಾಮದ ರೈತರು, ಮಹಿಳೆಯರು ಮಕ್ಕಳು ವಿದ್ಯಾರ್ಥಿಗಳ ಮೇಲೆ ಪೊಲೀಸರು ಅಮಾನುಷವಾಗಿ ಹಲ್ಲೆ ನಡೆಸಿ ದೌರ್ಜನ್ಯವೆಸಗಿದ್ದಾರೆ. ಅಲ್ಲದೆ ಮನೆಯಲ್ಲಿದ್ದ ಅಮಾಯಕರನ್ನು ಎಳೆದು ತಂದು ಮನಬಂದಂತೆ ಥಳಿಸಿದ್ದಾರೆ. ಪೊಲೀಸರಿಗೆ ಹೊಡೆಯಲು ಅಧಿಕಾರ ನೀಡಿದವರು ಯಾರು ಎಂದು ಮನವಿಯಲ್ಲಿ ಪ್ರಶ್ನಿಸಲಾಗಿದೆ. ರೈತರ ಸಮಸ್ಯೆಗಳಿಗೆ ಸ್ಪಂದಿಸದೆ ವೈಜ್ಞಾನಿಕ ಪರಿಹಾರವನ್ನು ಕಂಡುಕೊಳ್ಳದ ಸರ್ಕಾರ, ಹೋರಾಟ ನಿರತರ ಮೇಲೆ ಪೊಲೀಸ್ ಬಲ ಪ್ರಯೋಗಿಸಿ, ಮಹದಾಯಿ ಹೋರಾಟವನ್ನು ಹತ್ತಿಕ್ಕುವ ಷಡ್ಯಂತ್ರ ಮಾಡಿದೆ. ಇದು ಪ್ರಜಾಪ್ರಭುತ್ವದ ಲಕ್ಷಣವಲ್ಲ. ಇಂತಹ ಕ್ರೂರ ವರ್ತನೆಯಿಂದ ರೈತರಿಗೆ ಹೋರಾಟವನ್ನು ಹತ್ತಿಕ್ಕಲು ಸಾಧ್ಯವಿಲ್ಲ. ಈ ಹಿಂದೆ ೧೯೮೦ರ ದಶಕದಲ್ಲಿ ನಡೆದ ನರಗುಂದ ಮತ್ತು ನವಲಗುಂದ ಬಂಡಾಯ ಅಂದಿನ ಸರ್ಕಾರವನ್ನು ಉರುಳಿಸುವಲ್ಲಿ ಪ್ರಮುಖ ಪಾತ್ರವಹಿಸಿತ್ತು. ಇಂದಿನ ಯಮನೂರು ಮತ್ತು ಅಳಗವಾಡಿಗಳಲ್ಲಿ ನಡೆಸಿದ ದೌರ್ಜನ್ಯ ರಾಜ್ಯದಲ್ಲಿನ ಕಾಂಗ್ರೆಸ್ ಸರ್ಕಾರದ ಪತನಕ್ಕೆ ಕಾರಣವಾಗಲಿದೆ ಎಂದು ರೈತ ಮುಖಂಡರು ಎಚ್ಚರಿಕೆ ನೀಡಿದರು.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೈತ ವಿರೋಧಿ ಧೋರಣೆಗಳಿಂದ ರೈತಾಪಿ ವರ್ಗ ಕೃಷಿ ಕಾರ್ಮಿಕರು ಹಾಗೂ ಜನಸಾಮಾನ್ಯರು ಸರ್ಕಾರಕ್ಕೆ ಹಿಡಿಶಾಪ ಹಾಕುತ್ತಿದ್ದಾರೆ. ರಾಜ್ಯದ ರೈತರಿಗೆ ನೀರಿನ ಭಾಗ್ಯವಿಲ್ಲ. ಸಾಲಮನ್ನಾ ಇಲ್ಲ. ಸಹಾಯ ಧನವಿಲ್ಲ. ವೈಜ್ಞಾನಿಕ ಬೆಲೆಯಂತೂ ಮೊದಲೇ ಇಲ್ಲ. ಸರ್ಕಾರಗಳ ವಿಚಿತ್ರ ಧೋರಣೆಗಳ ಜೊತೆಗೆ ಪ್ರಾಕೃತಿಕ ವೈಪರೀತ್ಯಗಳು ರೈತರನ್ನು ಮತ್ತಷ್ಟು ಕಂಗಾಲಾಗುವಂತೆ ಮಾಡಿವೆ ಎಂದು ಪ್ರತಿಭಟಿಸಿದರು. ಮಹದಾಯಿ ಹೋರಾಟದಲ್ಲಿ ಭಾಗಿಯಾಗಿದ್ದಕ್ಕೆ ಬಂಧಿಸಿದ ಎಲ್ಲಾ ರೈತರನ್ನು ಕೂಡಲೇ ಬೇಷರತ್ತಾಗಿ ಬಿಡುಗಡೆ ಮಾಡಬೇಕು. ಅವರ ಮೇಲಿರುವ ಎಲ್ಲ ಪ್ರಕರಣಗಳನ್ನು ಸರ್ಕಾರ ಹಿಂದಕ್ಕೆ ಪಡೆಯಬೇಕು.

ಮಾನವೀಯ ಸಂವೇದನೆಗಳಿಲ್ಲದ ಗೃಹ ಸಚಿವ ಡಾ. ಜಿ. ಪರಮೇಶ್ವರ್ ಹಾಗೂ ದೌರ್ಜನ್ಯಕ್ಕೆ ಒಳಗಾದ ರೈತರು ಮಹಿಳೆಯರ ಬಗ್ಗೆ ಹಗುರವಾಗಿ ಮಾತನಾಡಿದ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಸಚಿವ ವಿನಯ ಕುಲಕರ್ಣಿಯವರನ್ನು ಸಂಪುಟದಿಂದ ಕೈ ಬಿಡಬೇಕು. ರೈತರ ಮೇಲೆ ಹಲ್ಲೆ ನಡೆಸಿರುವ ಪೊಲೀಸರನ್ನು ವಜಾ ಮಾಡಬೇಕು. ಮಹದಾಯಿ ಕಾವೇರಿ ಸೇರಿದಂತೆ ಅಂತರ್‌ರಾಜ್ಯ ಜಲವಿವಾದಗಳನ್ನು ವೈಜ್ಞಾನಿಕವಾಗಿ ಪರಿಹರಿಸಿಕೊಳ್ಳಲು ತುರ್ತುಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದರು.[೪೭]

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷರಾದ ನುಲೇನೂರು ಶಂಕರಪ್ಪ, ರಾಜ್ಯ ಕಾರ್ಯಾಧ್ಯಕ್ಷರಾದ ಕೆ.ಪಿ. ಭೂತಯ್ಯ, ತಾಲೂಕು ಅಧ್ಯಕ್ಷ ಬಸ್ತಿಹಳ್ಳಿ ಸುರೇಶ್ ಬಾಬು, ರೈತ ಮುಖಂಡರಾದ ತಿಮ್ಮಣ್ಣ, ಪ್ರವೀಣ್‌ಕುಮಾರ್, ಧನಂಜಯ, ಸಿ.ನಾಗರಾಜ್, ಮಾರಪ್ಪ, ರಂಗಪ್ಪ, ದಯಾನಂದ ಮೂರ್ತಿ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ರಸ್ತೆ ವಿಸ್ತರಣೆ ತಾರತಮ್ಯ ನೀತಿ ಖಂಡಿಸಿ ರೈತರ ಪ್ರತಿಭಟನೆ:- ೦೫/೦೮/೨೦೧೬**

ಚಿತ್ರದುರ್ಗ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ನೂರಾರು ರೈತರು, ಚಳ್ಳಕೆರೆ ನಗರದ ಮುಖ್ಯ ರಸ್ತೆಯಲ್ಲಿ ಅಕ್ರಮವಾಗಿ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸದೆ, ಅವೈಜ್ಞಾನಿಕವಾಗಿ ರಸ್ತೆ ನಿರ್ಮಿಸಿದ್ದು, ರಸ್ತೆ ವಿಸ್ತರಣೆಯಲ್ಲಿ ತಾರತಮ್ಯ ಮಾಡಲಾಗಿದೆ ಎಂದು ಆರೋಪಿಸಿ ಆಗಸ್ಟ್ ೦೫ ೨೦೧೬ರಂದು ಪ್ರತಿಭಟನೆ ಮಾಡಲಾಯಿತು.

ನಗರಸಭೆಯಾಗಿ ಮೇಲ್ದರ್ಜೆಗೇರಿದ ನಂತರ ಚಳ್ಳಕೆರೆ ನಗರದಲ್ಲಿ ಇತ್ತೀಚಿಗೆ ಪ್ರವಾಸಿ ಮಂದಿರದಿಂದ ಪಾವಗಡ ರಸ್ತೆವರೆಗೂ, ರಸ್ತೆ ಅಗಲೀಕರಣ ಮಾಡುವುದರ ಬಗ್ಗೆ ಸರಕಾರ ಅನುಮೋದನೆ ನೀಡಿದೆ. ಉತ್ತಮ ರಸ್ತೆ, ಪೂಟ್‌ಪಾತ್, ಚರಂಡಿ ನಿರ್ಮಿಸಿ ಸಾರ್ವಜನಿಕರ ಮೆಚ್ಚುಗೆಗೆ ಪಾತ್ರವಾಗಿದೆ. ಆದರೆ ಎಸ್.ಆರ್. ಕಾಂಪ್ಲೆಕ್ಸ್‌ನಿಂದ ನೆಹರು ಸರ್ಕಲ್‌ವರೆಗೆ ಅವೈಜ್ಞಾನಿಕ ರಸ್ತೆ ನಿರ್ಮಿಸಿ ನಿಯಮ ಉಲ್ಲಂಘನೆ ಮಾಡಲಾಗಿದೆ. ಖಾಸಗಿ ಮಾಲೀಕರ ಕಟ್ಟಡ ತೆರವುಗೊಳಸದ ಕಾರಣ, ನೆಹರು ಸರ್ಕಲ್‌ನಿಂದ ಲೋಕೋಪಯೋಗಿ ಇಲಾಖೆಯವರೆಗೆ ಪೂಟ್‌ಪಾತ್ ಇಲ್ಲದೆ ಸಾರ್ವಜನಿಕರಿಗೆ ತೊಂದರೆಯಾಗಿದೆ. ಆದ್ದರಿಂದ ಜಿಲ್ಲಾಧಿಕಾರಿಯವರು ಚಳ್ಳಕೆರೆಗೆ ಭೇಟಿ ನೀಡಿ ಪರಿಶೀಲನೆ ನಡೆಸಿ ಸೂಕ್ತ ಕ್ರಮ ಕೈಗೊಳ್ಳಬೇಕು. ಏಳು ದಿನಗಳೊಳಗಾಗಿ ನ್ಯಾಯಾಲಯದ ಆದೇಶದಂತೆ ಎಸ್.ಆರ್.ಕಾಂಪ್ಲೆಕ್ಸ್ ಹಾಗೂ ರಾಮಕೃಷ್ಣ ಹೋಟಲ್ ಕಟ್ಟಡವನ್ನು ತೆರವುಗೊಳಿಸಿ, ಸಾರ್ವಜನಿಕರಿಗೆ ಪೂಟ್‌ಪಾತ್ ನಿರ್ಮಾಣ ಮಾಡದಿದ್ದಲ್ಲಿ, ಪಾವಗಡ ರಸ್ತೆ ಸರ್ಕಲ್‌ನಲ್ಲಿ ಕಾಮಗಾರಿಗೆ ಅಡ್ಡಿಪಡಿಸಿ, ನಗರಸಭೆಗೆ ಬೀಗ ಹಾಕಿ ಪ್ರತಿಭಟನೆ ಮಾಡಲಾಗುವುದೆಂದು ಎಚ್ಚರಿಸಿ ಜಿಲ್ಲಾಡಳಿತಕ್ಕೆ ಮನವಿ ಸಲ್ಲಿಸಿದರು.[೪೮]

ಪ್ರತಿಭಟನೆಯಲ್ಲಿ ಕೆ.ಪಿ. ಭೂತಯ್ಯ, ರಾಮಚಂದ್ರರೆಡ್ಡಿ, ತಿಪ್ಪೇಸ್ವಾಮಿ, ನಾರಾಯಣಪ್ಪ ಮತ್ತು ನೂರಾರು ರೈತರು ಪಾಲ್ಗೊಂಡಿದ್ದರು.

**ಮಾರುಕಟ್ಟೆಯ ಆವರಣದಲ್ಲಿ ಬಾಬು ಭವನ ಮತ್ತು ವಿದ್ಯಾರ್ಥಿನಿಲಯ ಮಂಜೂರಾತಿಯನ್ನು ವಿರೋಧಿಸಿ ರೈತ ಪ್ರತಿಭಟನೆ:- ೨೬/೦೮/೨೦೧೬**

ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ನೂರಾರು ರೈತ ಮುಖಂಡರು, ಭರಮಸಾಗರ ಉಪ ಕೃಷಿಮಾರುಕಟ್ಟೆ ಸಮಿತಿ ಆವರಣದಲ್ಲಿ ಡಾ. ಬಾಬು ಜಗಜೀವನರಾಂ ಬಾಬೂರವರ ಭವನ ಮತ್ತು ಬಾಲಕ ಅಥವಾ ಬಾಲಕಿಯರ ವಿದ್ಯಾರ್ಥಿನಿಲಯಕ್ಕೆ ನಿವೇಶನ ಮಂಜೂರು ಮಾಡಿರುವುದನ್ನು ವಿರೋಧಿಸಿ, ಆಗಸ್ಟ್ ೨೬ ೨೦೧೬ರಂದು ಜಿಲ್ಲಾಧಿಕಾರಿ ಕಛೇರಿಯ ಮುಂದೆ ಪ್ರತಿಭಟನೆ ಮಾಡಿದರು.

೧೯೯೨ರಲ್ಲಿ ಮುಖ್ಯಮಂತ್ರಿ ಭರಮಸಾಗರ ಸುತ್ತಲಿನ ರೈತರಿಗೆ ಅನುಕೂಲವಾಗಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ೯ ಎಕರೆ ಭೂಮಿಯನ್ನು ನೀಡಿದ್ದರು. ರೈತರು ತಾವು ಬೆಳೆಯುವ ಮೆಕ್ಕೆಜೋಳ, ಸೂರ್ಯಕಾಂತಿ, ಶೇಂಗಾ, ಹತ್ತಿ, ಬೆಳೆಗಳನ್ನು ಇಲ್ಲಿನ ಮಾರುಕಟ್ಟೆಗೆ ತರುತ್ತಿದ್ದರು. ಅದರಲ್ಲಿ ಈಗ ಒಂದು ಎಕರೆ ಜಾಗವನ್ನು ಡಾ. ಬಾಬು ಜಗಜೀವನರಾಂ ಭವನ ಮತ್ತು ವಿದ್ಯಾರ್ಥಿ ನಿಲಯಕ್ಕೆ ಮಂಜೂರು ಮಾಡಿದರೆ, ರೈತರು ತರುವ ಬೆಳೆಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಜಾಗವಿಲ್ಲದಂತಾಗುತ್ತದೆ. ಕೂಡಲೆ ಆದೇಶವನ್ನು ತಡೆಹಿಡಿಯಬೇಕೆಂದು ಪ್ರತಿಭಟನಾನಿರತ ರೈತರು ಜಿಲ್ಲಾಡಳಿತವನ್ನು ಒತ್ತಾಯಿಸಿದರು. ಕೃಷಿ ಉತ್ಪನ್ನ ಮಾರುಕಟ್ಟೆಗೆ ಸೇರಿದ ೯ ಎಕರೆ ೨೫ ಗುಂಟೆಯಲ್ಲಿ, ರಾಷ್ಟ್ರೀಯ ಹೆದ್ದಾರಿಗೆ ಒಂದು ಎಕರೆ ಹೋಗಿದೆ. ರೈತರ ಬೆಳೆಗಳನ್ನು ಸಂಗ್ರಹಿಸಲು ಆರ್.ಕೆ.ವಿ.ವೈ ಯೋಜನೆಯಡಿಯಲ್ಲಿ ೧೦೦೦ ಮೆಟ್ರಿಕ್ ಟನ್ ಸಾಮರ್ಥ್ಯದ ಗೋದಾಮುಗಳನ್ನು ನಿರ್ಮಿಸಲು ಅನುಮತಿ ನೀಡಿದೆ. ಇದರಲ್ಲಿ ೫೦೦ ಮೆಟ್ರಿಕ್ ಟನ್ ಗೋದಾಮು ನಿರ್ಮಾಣವಾಗಿದೆ. ಇದರಿಂದ ಉಳಿಯುವುದು ೬ ಎಕರೆ ೨೫ ಗುಂಟೆ ಮಾತ್ರವೆಂದು, ರೈತರು ಮಾರುಕಟ್ಟೆ ಸಮಸ್ಯೆಯನ್ನು ಜಿಲ್ಲಾಧಿಕಾರಿಗೆ ಮನವರಿಕೆ ಮಾಡಿದರು. ಭರಮಸಾಗರ ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ಅಭಿವೃದ್ಧಿ ಪಡಿಸಬೇಕಾದರೆ ಇನ್ನೂ ೫ ರಿಂದ ೧೦ ಎಕರೆ ಜಾಗ ಬೇಕಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿರುವ ಜಾಗವನ್ನು ಭವನ ಮತ್ತು ವಿದ್ಯಾರ್ಥಿನಿಲಯ ನಿರ್ಮಾಣಕ್ಕೆ ನೀಡಿದರೆ ರೈತರ ಗತಿಯೇನು? ಎಂದು ರೈತರು ಸರ್ಕಾರವನ್ನು ಪ್ರಶ್ನಿಸಿದರು.[೯೯]

ಪ್ರತಿಭಟನೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಕಾರ್ಯಾಧ್ಯಕ್ಷ ಕೆ.ಪಿ. ಭೂತಯ್ಯ, ತಾಲೂಕು ಅಧ್ಯಕ್ಷ ಬಸ್ತಿಹಳ್ಳಿ ಸಿ. ಸುರೇಶ್ ಬಾಬು, ಸಿ.ಆರ್. ತಿಮ್ಮಣ್ಣ, ಧನಂಜಯ, ಕಲ್ಲೇಗೌಡ, ವಿಜಯ್‌ಕುಮಾರ್, ಡಿ.ವಿ. ಶರಣಪ್ಪ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಅಕ್ರಮ ಮರಳು ಸಾಗಾಣಿಕೆ ತಡೆಗಟ್ಟಲು ರೈತ ಪ್ರತಿಭಟನೆ:- ೦೩/೧೦/೨೦೧೬**

ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ನೂರಾರು ರೈತರು, ಕಾನೂನು ಬಾಹಿರವಾಗಿ ಮರಳು ಸಾಗಾಣಿಕೆ ನಡೆಸುತ್ತಿರುವದನ್ನು ವಿರೋಧಿಸಿ ಜಿಲ್ಲಾಧಿಕಾರಿಗಳ ಕಛೇರಿಯ ವೃತ್ತದಲ್ಲಿ ಸೆಪ್ಟೆಂಬರ್ ೦೩ ೨೦೧೬ರಂದು ಪ್ರತಿಭಟನೆ ಮಾಡಿದರು.

ಅಧಿಕಾರಿಗಳು ಜನಪ್ರತಿನಿಧಿಗಳು ಅಕ್ರಮ ಮರಳು ಸಾಗಾಣಿಕೆಯಲ್ಲಿ ಭಾಗಿಯಾಗಿದ್ದು, ಅಕ್ರಮ ತಡೆಯುವಲ್ಲಿ ತಾಲೂಕು ಆಡಳಿತ ಸಂಪೂರ್ಣ ವಿಫಲವಾಗಿದೆ. ಚಳ್ಳಕೆರೆ ತಾಲೂಕಿನ ರಾಣಿಕೆರೆ, ಗರಣಿಹಾಳ್ಯ, ಮೀರಸಾಬಿಹಳ್ಳಿ, ರಂಗವ್ವನಹಳ್ಳಿ, ಕರೀಕೆರೆ, ವಿಶ್ವೇಶ್ವರಪುರ ಗ್ರಾಮಗಳಿಂದ ಸಹಸ್ರಾರು ಲಾರಿ ಮತ್ತು ಟ್ರಾಕ್ಟರ್‌ಗಳು, ಅಕ್ರಮವಾಗಿ ಅಣುಸ್ಥಾವರ ಕಂಪನಿಗಳಿಗೆ ಮರಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿವೆ ಎಂದು ಪ್ರತಿಭಟನಾಕಾರರು ಆರೋಪಿಸಿದರು. ಚಳ್ಳಕೆರೆ ತಾಲೂಕಿನ ವಿವಿಧ ವಿಜ್ಞಾನ ಕೇಂದ್ರಗಳು ಸೇರಿದಂತೆ ವಿವಿಧ ಕಂಪನಿಗಳು ಹತ್ತು ಸಾವಿರ ಎಕರೆ ವಿಸ್ತೀರ್ಣದಲ್ಲಿ ನಾನಾ ರೀತಿಯ ಕಟ್ಟಡ ನಿರ್ಮಿಸಲು ಸರಕಾರದಿಂದ ಪರವಾನಿಗೆ ಪಡೆದಿವೆ. ಆದರೆ ಕಟ್ಟಡಗಳನ್ನು ನಿರ್ಮಿಸದೆ ಮರಳನ್ನು ಸಾಗಾಣಿಕೆ ಮಾಡುತ್ತ ಸರ್ಕಾರಕ್ಕೆ ವಂಚಿಸಿ, ಪರಿಸರ ಮತ್ತು ಸಂಪತ್ತನ್ನು ನಾಶ ಮಾಡುತ್ತಿದ್ದಾರೆ. ಮರಳನ್ನು ಬೃಹತ್ ಲಾರಿಗಳ ಮೂಲಕ ಬೆಂಗಳೂರು ಸೇರಿದಂತೆ ವಿವಿಧ ನಗರಗಳಿಗೆ ಸಾಗಿಸಲಾಗುತ್ತಿದೆ ಎಂದು ಪ್ರತಿಭಟನೆ ಮಾಡಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು.[೫೦]

ರೈತ ಸಂಘದ ಮುಖಂಡರ ಮನವಿಯ ಹಿನ್ನೆಲೆಯಲ್ಲಿ ಉಪವಿಭಾಗಾಧಿಕಾರಿ ಟಿ. ರಾಘವೇಂದ್ರರವರು ಚಳ್ಳಕೆರೆ ತಾಲೂಕಿನ ವಿವಿಧ ಗ್ರಾಮಗಳ ಮರಳು ಅಡ್ಡೆಗಳ ಮೇಲೆ ದಾಳಿ ನಡೆಸಿದರು. ರಂಗವ್ವನಹಳ್ಳಿ, ಕರೀಕೆರೆ, ವಿಡಪನಕುಂಟೆ, ಬೊಮ್ಮಸಮುದ್ರ, ಮೀರಸಾಬಿಹಳ್ಳಿ ಮೊದಲಾದ ಕಡೆ ೧೫೦ಕ್ಕೂ ಹೆಚ್ಚು ಲೋಡ್ ಅಕ್ರಮ ಮರಳನ್ನು ವಶಕ್ಕೆ ಪಡೆದರು. ಈ ಸಮಯದಲ್ಲಿ ರಾಜ್ಯ ರೈತ ಸಂಘದ ಜಿಲ್ಲಾ ಕಾರ್ಯದರ್ಶಿ ಕೆ.ಪಿ. ಭೂತಯ್ಯರವರು ಮಾತನಾಡಿ ತಾಲೂಕಿನ ವಿವಿಧ ಗ್ರಾಮಗಳಲ್ಲಿ ಅಕ್ರಮ ಮರಳಿನ ದಂಧೆಕೋರರು ರಾತ್ರಿ ವೇಳೆ ಮರಳನ್ನು ಟ್ರಾಕ್ಟರ್ ಮತ್ತು ಲಾರಿಗಳ ಮೂಲಕ ತಂದು ದಾಸ್ತಾನು ಮಾಡುತ್ತಿದ್ದಾರೆ. ಆಕ್ರಮ ಮರಳು ದಂಧೆ ತಡೆಯುವಂತೆ ಒತ್ತಾಯಿಸಿ ರೈತ ಸಂಘ ಹಾಗೂ ವಿವಿಧ ಸಂಘಟನೆಗಳು ಮುಖ್ಯಮಂತ್ರಿ ಸಿದ್ಧರಾಮಯ್ಯರವರಿಗೆ, ಜಿಲ್ಲಾ ಉಸ್ತುವಾರಿ ಸಚಿವರಾದ ಎಸ್. ಆಂಜನೇಯ ಹಾಗೂ ಶಾಸಕರಾದ ಎಸ್. ರಘುಮೂರ್ತಿ ಮನವಿ ಸಲ್ಲಿಸುತ್ತಲೇ ಬಂದಿದ್ದರೂ, ಅಕ್ರಮ ಮರಳು ದಂಧೆ ನಿಯಂತ್ರಣ ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣ ಜಿಲ್ಲಾ ಹಾಗೂ ತಾಲೂಕು ಆಡಳಿತಗಳು ಇವರೊಂದಿಗೆ ಶಾಮೀಲಾಗಿದ್ದಾರೆ, ಎಂಬ ಸಂಶಯ ಉಂಟಾಗಿದೆ ಎಂದು ಆರೋಪಿಸಿದರು. ಈ ಸಮಯದಲ್ಲಿ ಮಾತನಾಡಿದ ಟಿ. ರಾಘವೇಂದ್ರ ಉಪವಿಭಾಗಾಧಿಕಾರಿ ಮಾತನಾಡಿ ಸುಮಾರು ೧೫೦ಕ್ಕೂ ಹೆಚ್ಚು ಲೋಡ್ ಮರಳನ್ನು ವಶಪಡಿಸಿಕೊಳ್ಳಲಾಗಿದೆ.[೫೧] ಮುಂದಿನದಿನಗಳಲ್ಲಿ ಅಕ್ರಮವಾಗಿ ಮರಳು ಸಾಗಿಸುವ ವಾಹನಗಳನ್ನು ಜಪ್ತಿ ಮಾಡುತ್ತೇವೆಂದು ಎಚ್ಚರಿಸಿದರು.

**ಬ್ಯಾಂಕ್ ಸಾಲ ಮನ್ನಾ ಹಾಗೂ ಗೋಶಾಲೆಗಳ ಹೆಚ್ಚಳಕ್ಕೆ ಆಗ್ರಹಿಸಿ ರೈತ ಪ್ರತಿಭಟನೆ:– ೨೨/೧೨/೨೦೧೬**

ಮೊಳಕಾಲ್ಮೂರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ಗಳ ಸಾಲ ಮನ್ನಾ ಸೇರಿದಂತೆ ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ ರೈತರು ೨೨ ಡಿಸೆಂಬರ್ ೨೦೧೬ರಂದು ತಾಲೂಕು ಕಛೇರಿಯ ಎದುರು ಪ್ರತಿಭಟನೆ ಮಾಡಿದರು.

ರೈತ ಸಂಘದ ನೇತೃತ್ವದಲ್ಲಿ ನೂರಾರು ರೈತರು ನಗರದ ಬಸ್ ನಿಲ್ದಾಣದಿಂದ ಪ್ರತಿಭಟನಾ ಮೆರವಣಿಗೆ ಆರಂಭಿಸಿ, ತಾಲೂಕು ಕಛೇರಿಗೆ ಬಂದು ತಹಶೀಲ್ದಾರ್‌ರಿಗೆ ಮನವಿ ಸಲ್ಲಿಸಿದರು. ಸತತ ಬರದ ದವಡೆಗೆ ಸಿಲುಕಿದ ರೈತರು ಸಾಕಷ್ಟು ನಷ್ಟ ಅನುಭವಿಸುತ್ತಿದ್ದಾರೆ. ಆದ್ದರಿಂದ ಸಹಕಾರ ಸಂಘಗಳು ಹಾಗೂ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಮಾಡಿರುವ ರೈತರ ಸಾಲ ಮನ್ನಾ ಮಾಡಬೇಕು. ಜಾನುವಾರುಗಳು ಮೇವು ನೀರಿಲ್ಲದೆ ಕಸಾಯಿಖಾನೆ ಪಾಲಾಗುತ್ತಿವೆ ಎಂದು ದೂರಿದರು. ತಾಲೂಕಿನಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ಜಾನುವಾರುಗಳಿದ್ದು, ಕೇವಲ ಎರಡು ಗೋಶಾಲೆಗಳನ್ನು ತೆರೆಯಲಾಗಿದೆ. ಕಳೆದ ವರ್ಷ ಎಂಟು ಗೋಶಾಲೆ ತೆರೆಯಲಾಗಿತ್ತು. ಈ ಬಾರಿ ತಾರತಮ್ಯ ಏಕೆ, ಮೂಕ ಪ್ರಾಣಿಗಳ ಬಗ್ಗೆ ಕರುಣೆ ಇರಲೆಂದು ತಾಲೂಕು ಆಡಳಿತದ ವಿರುದ್ಧ ರೈತರು ಆಕ್ರೋಶ ವ್ಯಕ್ತಪಡಿಸಿದರು.[೫೨]

ಪ್ರತಿಭಟನೆಯಲ್ಲಿ ರೈತ ಸಂಘದ ಅಧ್ಯಕ್ಷ ಬೆಳಗಲ್ ಈಶ್ವರಯ್ಯ, ಬೇಡರೆಡ್ಡಿಹಳ್ಳಿ ಬಸವರೆಡ್ಡಿ, ರವಿಕುಮಾರ್, ಅನಂತರೆಡ್ಡಿ ಮುಂತಾದ ರೈತರು ಪಾಲ್ಗೊಂಡಿದ್ದರು.

**ಅಚ್ಚುಕಟ್ಟು ಪ್ರದೇಶಗಳಿಗೆ ನೀರು ಹಾಯಿಸಲು ಒತ್ತಾಯಿಸಿ ರೈತ ಪ್ರತಿಭಟನೆ:– ೨೧/೦೧/೨೦೧೭**

ಹಿರಿಯೂರು ತಾಲೂಕಿನ ವಿ.ವಿ ಸಾಗರದ ಎಡ ಮತ್ತು ಬಲದಂಡೆ ನಾಲೆಗಳಿಗೆ ನೀರು ಹಾಯಿಸುವಂತೆ ಒತ್ತಾಯಿಸಿ, ಭಾರತೀಯ ಕಿಸಾನ್ ಸಂಘದ ನೇತೃತ್ವದಲ್ಲಿ ನೂರಾರು ರೈತರು ಬೃಹತ್ ಪ್ರತಿಭಟನೆ ನಡೆಸಿ, ನೀರಾವರಿ ಇಲಾಖೆಗೆ ಮುತ್ತಿಗೆ ಹಾಕಿದರು.

ಕುಡಿಯುವ ನೀರಿಗಾದರೂ ವಿ.ವಿ ಸಾಗರದಿಂದ ನೀರು ಹರಿಸುವಂತೆ ಹಲವು ಬಾರಿ ಸಂಬಂಧಿಸಿದ ಇಲಾಖೆ, ಜಿಲ್ಲಾಧಿಕಾರಿ ಹಾಗೂ ಜನಪ್ರತಿನಿಧಿಗಳ ಗಮನಕ್ಕೂ ತಂದರೂ ಪ್ರಯೋಜನವಾಗಿಲ್ಲ. ಮಾನವೀಯ ದೃಷ್ಟಿಯಿಂದ ನಾಲೆಗಳಿಗೆ ನೀರು ಹರಿಸಬೇಕು. ಇಲ್ಲದಿದ್ದರೆ ಜಿಲ್ಲಾಧಿಕಾರಿ ಕಛೇರಿಯ ಬಳಿ ಅಹೋರಾತ್ರಿ ಧರಣಿ ನಡೆಸಲಾಗುವುದೆಂದು ಎಚ್ಚರಿಸಿದರು.

ಕಿಸಾನ್ ಸಂಘದ ಕಸವನಹಳ್ಳಿ ರಮೇಶ್ ಮಾತನಾಡಿ ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ ನಗರಗಳಿಗೆ ಕುಡಿಯುವ ನೀರಿನ ಪ್ರಮಾಣವನ್ನು ನಿಗದಿಪಡಿಸಬೇಕು. ಜಲಾಶಯದಲ್ಲಿ ೦.೪೮ ಟಿಎಂಸಿ ಅಡಿ ನೀರು ಲಭ್ಯವಿದೆ. ಎರಡು ನಾಲೆಗಳಿಗೆ ನೀರು ಹರಿಸಿದರೆ ೦.೯೮ ಟಿಎಂಸಿ ಅಡಿ ಹೆಚ್ಚುವರಿ ನೀರು ಉಳಿಯುತ್ತದೆ. ೧.೮೭ ಟಿಎಂಸಿ ಅಡಿಗಳಷ್ಟು (೬೦ ಅಡಿ ಕೆಳಭಾಗದ ನೀರು) ನೀರನ್ನು ಕುಡಿಯುವ ನೀರಿಗೆ ಬಳಸಿಕೊಳ್ಳಲು ಅವಕಾಶವಿದೆಯೆಂದು ವಾಣಿ ವಿಲಾಸ ಉಪವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮಾಹಿತಿ ನೀಡಿದ್ದು, ಜಿಲ್ಲಾಧಿಕಾರಿಗಳು ನೀರು ಹರಿಸಲು ಆದೇಶ ನೀಡಬೇಕೆಂದು ರೈತರು ಒತ್ತಾಯಿಸಿ ಮನವಿ ನೀಡಿದರು.[೫೩] ಅಲ್ಲದೆ ಜಿಲ್ಲಾಧಿಕಾರಿಗಳು ತಕ್ಷಣ ಸಂಬಂಧಪಟ್ಟ ಅಧಿಕಾರಿಗಳು ಮತ್ತು ರೈತ ಮುಖಂಡರ ಸಭೆಯನ್ನು ಕರೆಯಬೇಕೆಂದು ಒತ್ತಾಯಿಸಿದರು. ಪ್ರತಿಭಟನೆಯಲ್ಲಿ ನೂರಾರು ರೈತರು ಪಾಲ್ಗೊಂಡಿದ್ದರು.

**ಸಮರ್ಪಕ ವಿದ್ಯುತ್ ಪೂರೈಸುವಂತೆ ಆಗ್ರಹಿಸಿ ರೈತರ ಪ್ರತಿಭಟನೆ:- ೨೪/೦೧/೨೦೧೭**

ಕೃಷಿ ಪಂಪ್‌ಸೆಟ್‌ಗಳಿಗೆ ಆರು ಗಂಟೆ ಗುಣಮಟ್ಟದ ವಿದ್ಯುತ್ ಪೂರೈಸುವಂತೆ ಆಗ್ರಹಿಸಿ ಹೊಸದುರ್ಗ ತಾಲೂಕಿನ ನೂರಾರು ರೈತರು, ಕರ್ನಾಟಕ ರಾಜ್ಯ ರೈತ ಸಂಘದ ನೇತೃತ್ವದಲ್ಲಿ ಬೆಸ್ಕಾಂ ಕಛೇರಿಗೆ ಮುತ್ತಿಗೆ ಹಾಕಿದರು.

ಹೊಸದುರ್ಗ ತಾಲೂಕಿನ ವಿವಿಧ ಗ್ರಾಮಗಳ ರೈತರು ನಗರದಲ್ಲಿ ಸಮರ್ಪಕ ವಿದ್ಯುತ್ ಪೂರೈಕೆ ಮಾಡುವಂತೆ ಆಗ್ರಹಿಸಿ ಪ್ರತಿಭಟನೆ ಮಾಡಲಾಯಿತು. ಎ.ಇ.ಇ. ಕಛೇರಿಗೆ ಮುತ್ತಿಗೆ ಹಾಕಿದ ರೈತರು, ಹಿರಿಯ ಅಧಿಕಾರಿಗಳನ್ನು ಸ್ಥಳಕ್ಕೆ ಕರೆಯಿಸಿ ಸಮಸ್ಯೆ ಬಗೆಹರಿಸುವಂತೆ ಪಟ್ಟು ಹಿಡಿದರು. ಬೆಸ್ಕಾಂ ಕೃಷಿ ಪಂಪ್‌ಸೆಟ್‌ಗಳಿಗೆ ನೀಡುತ್ತಿರುವ ಮೂರು ಗಂಟೆ ಕಳಪೆ ವಿದ್ಯುತ್ ಯಾವುದಕ್ಕೂ ಸಾಲುತ್ತಿಲ್ಲ. ಗ್ರಾಮಗಳಲ್ಲಿ ಕುಡಿವ ನೀರಿಗೂ ಜನ ಪರದಾಡುವಂತಾಗಿದೆ. ವೋಲ್ಟೇಜ್ ಕಡಿಮೆ ಇರುವುದರಿಂದ ಪಂಪ್‌ಸೆಟ್‌ಗಳು ಸುಟ್ಟು ಹೋಗುತ್ತಿವೆ. ಈ ಸಮಸ್ಯೆಗಳು ಯಾವಾಗಲು ಇರುವುದರಿಂದ ಬಹುವಾರ್ಷಿಕ ಬೆಳೆಗಳಾದ ತೆಂಗು, ಅಡಿಕೆ, ದಾಳಿಂಬೆ ಬೆಳೆಗಳು ನೀರಿಲ್ಲದೆ ಒಣಗುತ್ತಿವೆ. ಜಾನುವಾರುಗಳಿಗೆ ಮೇವು ಬೆಳೆಯಲು ಸಾಧ್ಯವಾಗುತ್ತಿಲ್ಲ ಎಂದು ಆರೋಪಿಸಿದರು. ತಾಲೂಕಿನ ಕೆಲವಡೆ ಜನನಾಯಕರ ಪ್ರಭಾವ ಬೆಳಸಿ ಕೆಲವರು ನಿರಂತರ ಜ್ಯೋತಿ ಸಂಪರ್ಕ ಪಡೆದು ಕೃಷಿ ಪಂಪ್‌ಸೆಟ್ ನಡೆಸುತ್ತಿದ್ದಾರೆ. ಬೆಸ್ಕಾಂಗೆ ಈ ಕುರಿತು ಮಾಹಿತಿ ಇದ್ದರೂ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಕೂಡಲೇ ಅಕ್ರಮ ವಿದ್ಯುತ್ ಸಂಪರ್ಕ ಕಡಿತಗೊಳಿಸಬೇಕು. ಕೃಷಿ ಪಂಪ್‌ಸೆಟ್‌ಗಳಿಗೆ ಆರು ಗಂಟೆ ಗುಣಮಟ್ಟದ ವಿದ್ಯುತ್ ನೀಡಬೇಕೆಂದು ಒತ್ತಾಯಿಸಿದರು.[೫೪]

ಬೆಸ್ಕಾಂ ಅಧಿಕಾರಿಗಳು ಇದಕ್ಕೆ ಪ್ರತಿಕ್ರಿಯಿಸಿ ಮೇಲಿನ ಅಧಿಕಾರಿಗಳೊಂದಿಗೆ ಚರ್ಚಿಸಿ ಸಮರ್ಪಕ ವಿದ್ಯುತ್ ನೀಡುವದಾಗಿ ಭರವಸೆ ನೀಡಿದರು. ಜೊತೆಗೆ ನಿರಂತರ ಜ್ಯೋತಿ ಸಂಪರ್ಕವನ್ನು ದುರ್ಬಳಕೆ ಮಾಡಿದವರ ಮೇಲೆ ಕ್ರಮಕೈಗೊಳ್ಳುವದಾಗಿ ತಿಳಿಸಿದರು.

**ಮೊಳಕಾಲ್ಮೂರಿಗೆ ಭದ್ರಾ ನೀರು ಹರಿಸಲು ಆಗ್ರಹಿಸಿ ರೈತ ಪ್ರತಿಭಟನೆ:- ೨೫/೦೧/೨೦೧೭**

ಮೊಳಕಾಲ್ಮೂರು ತಾಲೂಕಿಗೆ ಭದ್ರಾ ಮೇಲ್ದಂಡೆ ಯೋಜನೆಯಡಿ ಶಾಶ್ವತ ಕುಡಿವ ನೀರಿನ ಅನುಕೂಲ ಮಾಡಬೇಕೆಂದು ಒತ್ತಾಯಿಸಿ ನೀರಾವರಿ ಹೋರಾಟ ಸಮಿತಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಪ್ರಗತಿಪರ ಸಂಘಟನೆಗಳ ಪದಾಧಿಕಾರಿಗಳು ಪಟ್ಟಣದಲ್ಲಿ ಪ್ರತಿಭಟನೆ ನಡೆಸಿದರು.

ನಗರದ ನುಂಕಪ್ಪನ ದೇವಸ್ಥಾನದಿಂದ ಮೆರವಣಿಗೆ ಹೊರಟ ಪ್ರತಿಭಟನಾಕಾರರು, ಬಸ್‌ನಿಲ್ದಾಣದಲ್ಲಿ ಮಾನವ ಸರಪಳಿ ನಿರ್ಮಿಸಿ ಸರ್ಕಾರದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿ ತಾಲೂಕು ಕಛೇರಿಯ ಬಳಿ ಸಮಾವೇಶಗೊಂಡರು. ನೀರಾವರಿ ಹೋರಾಟ ಸಮಿತಿಯ ತಾಲೂಕು ಅಧ್ಯಕ್ಷ ವಿ.ಮಾರನಾಯಕ ಮಾತನಾಡಿ ಮೂಲ ಸೌಲಭ್ಯ ಕಲ್ಪಿಸುವುದು ಸರ್ಕಾರದ ಕರ್ತವ್ಯ, ಕೂಡಲೇ ಭದ್ರಾ ಮೇಲ್ದಂಡೆ ಯೋಜನೆಯಡಿ ತಾಲೂಕಿಗೆ ಶಾಶ್ವತ ನೀರಾವರಿ ವ್ಯವಸ್ಥೆಗೆ ಕ್ರಮಕೈಗೊಳ್ಳಬೇಕೆಂದು ಆಗ್ರಹಿಸಿದರು.

ರಾಜ್ಯ ರೈತ ಸಂಘದ ಪ್ರಧಾನ ಕಾರ್ಯದರ್ಶಿ ಬೇಡರೆಡ್ಡಿಹಳ್ಳಿ ಬಸವರೆಡ್ಡಿ ಮಾತನಾಡಿ ಸರ್ಕಾರ ನೊಂದವರ ತಾಳ್ಮೆ ಪರೀಕ್ಷಿಸದೇ ಕುಡಿವ ನೀರಿಗೆ ಶಾಶ್ವತ ಪರಿಹಾರ ಕಲ್ಪಿಸಲು ಮುಂದಾಗಬೇಕೆಂದು ಆಗ್ರಹಿಸಿದರು. ರೈತ ಮುಖಂಡ ಕೆ. ಜಗಲೂರಯ್ಯ ಮಾತನಾಡಿ, ಜಿಲ್ಲೆಯ ಎಲ್ಲಾ ತಾಲೂಕುಗಳಿಗೂ ಭದ್ರ ಮೇಲ್ದಂಡೆ ಯೋಜನೆಯಡಿ ಶಾಶ್ವತ ನೀರು ಹರಿಸುವ ಸಾಧಕ ಬಾದಕಗಳ ಬಗ್ಗೆ ಎಸ್. ನಿಜಲಿಂಗಪ್ಪನವರು ಮುಖ್ಯಮಂತ್ರಿಯಿದ್ದಾಗ ಚಿಂತನೆ ನಡೆಸಿ ಯೋಜನೆ ರೂಪಿಸಿದ್ದರು. ಅದರನ್ವಯ ಮೊಳಕಾಲ್ಮೂರು ತಾಲೂಕಿಗೆ ಯೋಜನೆಯಡಿ 'ಎ' ಸ್ಕೀಂನಲ್ಲಿ ೩ ಟಿಎಂಸಿ ನೀರು ಹರಿಸಬೇಕೆಂದು ಹೇಳಿದರೂ ಸರ್ಕಾರ ಯಾವುದೇ ಕ್ರಮಕ್ಕೂ ಮುಂದಾಗದೇ ಇರುವುದು ವಿಪರ್ಯಾಸವೇ ಸರಿ ಎಂದರು.[೫೫] ಈ ಪ್ರತಿಭಟನೆಯಲ್ಲಿ ನೂರಾರು ರೈತರು, ವಿವಿಧ ಪ್ರಗತಿ ಪರ ಸಂಘಟನೆಗಳ ಕಾರ್ಯಕರ್ತರು ಪಾಲ್ಗೊಂಡಿದ್ದರು.

**ವಿವಿ ಸಾಗರದಿಂದ ನಾಲೆಗಳಿಗೆ ನೀರು ಹರಿಸುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:– ೨೮/೦೧/೨೦೧೭**

ಕುಡಿಯುವ ನೀರಿನ ಉದ್ದೇಶಕ್ಕೆ ವಿವಿ ಸಾಗರದಿಂದ ಎಡ–ಬಲ ದಂಡೆ ನಾಲೆಗಳಿಗೆ ನೀರು ಹಾಯಿಸುವಂತೆ ಆಗ್ರಹಿಸಿ ಭಾರತೀಯ ಕಿಸಾನ್ ಸಂಘ ಕರೆ ನೀಡಿದ್ದ ಬಂದ್‌ಗೆ ಜನವರಿ ೨೮ ೨೦೧೭ರ ಶನಿವಾರದಂದು ನೂರಾರು ರೈತರು ಭಾಗವಹಿಸಿ ಪ್ರತಿಭಟನೆ ಮಾಡಿದರು.

ಚಿತ್ರದುರ್ಗದಲ್ಲಿ ಬೆಳಗ್ಗೆಯಿಂದ ಸಂಜೆಯವರೆಗೆ ಸುಮಾರು ೧೦ ಗಂಟೆಗಳ ಕಾಲ ಪಟ್ಟಣದ ಎಲ್ಲಾ ಅಂಗಡಿ ಮುಂಗಟ್ಟುಗಳನ್ನು ಸ್ವಯಂ ಪ್ರೇರಿತವಾಗಿ ಮುಚ್ಚಿ ಬಂದ್‌ಗೆ ಬೆಂಬಲ ವ್ಯಕ್ತಪಡಿಸಿದರು. ಬಸ್ ಸಂಚಾರ, ಬ್ಯಾಂಕ್ ವ್ಯವಹಾರ, ಆಸ್ಪತ್ರೆ, ಔಷಧ ಅಂಗಡಿಗಳು ನಿತ್ಯದ ವ್ಯವಹಾರಗಳು ಎಂದಿನಂತೆ ನಡೆದವು. ಶಾಲೆ ಕಾಲೇಜುಗಳಿಗೆ ರಜೆ ನೀಡಲಾಗಿತ್ತು. ಸಂತೆಯ ದಿನವಾದ ಶನಿವಾರದಂದು ಪಟ್ಟಣದಲ್ಲಿ ನಡೆದಾಡಲು ಸ್ಥಳ ಇರುತ್ತಿರಲಿಲ್ಲ. ಆದರೆ ಬಂದ್ ನಿಮಿತ್ತ ಪಟ್ಟಣದ ಮುಖ್ಯ ರಸ್ತೆಗಳು ಬಿಕೋ ಎನ್ನುತ್ತಿದ್ದವು. ಕಿಸಾನ್ ಸಂಘದ ಕಾರ್ಯಕರ್ತರು ಹಾಗೂ ನೂರಾರು ರೈತರು ಪಟ್ಟಣದಾದ್ಯಂತ ಪ್ರತಿಭಟನಾ ಮೆರವಣಿಗೆ ಮಾಡಿದ್ದರಿಂದ ವಾಹನ ಸಂಚಾರ ಸ್ಥಗಿತಗೊಂಡಿತು.[೫೬]

ರೈತ ಮುಖಂಡರಾದ ಯಶವಂತ್ ಮಾತನಾಡಿ, ವಿವಿ ಸಾಗರದ ಎಡ–ಬಲ ದಂಡೆಗಳ ನಾಲೆಗಳ ವ್ಯಾಪ್ತಿಯ ೪೨ ಗ್ರಾಮದಲ್ಲಿ ಅಂತರ್ಜಲ ಅಪಾಯದ ಮಟ್ಟ ತಲುಪಿದ್ದು ಕುಡಿಯುವ ನೀರಿಗೆ ಹಾಹಾಕಾರ ಇದೆ. ರೈತರು ಅಡಕೆ, ತೆಂಗು ಇತರ ತೋಟಗಾರಿಕೆ ಬೆಳೆ ಉಳಿಸಿಕೊಳ್ಳಲು ಹರಸಾಹಸ ನಡೆಸುತ್ತಿದ್ದು, ವಿವಿ ಸಾಗರದಿಂದ ಎರಡು ನಾಲೆಗಳಿಗೆ ಒಂದು ಬಾರಿ ನೀರು ಹರಿಸಿದರೆ ನಾಲ್ಕೈದು ತಿಂಗಳುಗಳ ಕಾಲ ರೈತರು ಬೆಳೆಗಳನ್ನು ಉಳಿಸಿಕೊಳ್ಳಬಹುದಾಗಿದೆ. ೧೯೯೫ರಲ್ಲಿ ಭೀಕರ ಬರಗಾಲವಿದ್ದ ಸಂದರ್ಭದಲ್ಲಿ ವಿವಿ ಸಾಗರದಿಂದ ನೀರು ಹರಿಸಲಾಗಿತ್ತು. ಜಲಾಶಯದಲ್ಲಿ ೧.೮೭ ಟಿಎಂಸಿ ನೀರು ಲಭ್ಯವಿದ್ದು, ನಾಲೆಗಳಿಗೆ ನೀರು ಹಾಯಿಸಿದರೆ ೦.೯೮

ಟಿಎಂಸಿ ಹೆಚ್ಚುವರಿ ನೀರು ಉಳಿಯುತ್ತದೆ ಎಂದರು. ಪ್ರತಿಭಟನೆಯಲ್ಲಿ ಸಾವಿರಾರು ಸಾವಿರಾರು ರೈತರು ಪಾಲ್ಗೊಂಡಿದ್ದರು.

**ಗೋಮಾಳದಲ್ಲಿ ಕ್ರೀಡಾಂಗಣ ನಿರ್ಮಾಣ ವಿರೋಧಿಸಿ ರೈತರ ಪ್ರತಿಭಟನೆ:– ೨೮/೦೧/೨೦೧೭**

ಚಳ್ಳಕೆರೆ ನಗರದ ಪಾವಗಡ ರಸ್ತೆಯಲ್ಲಿನ ಸರ್ಕಾರಿ ಗೋಮಾಳದಲ್ಲಿ ಕ್ರೀಡಾಂಗಣ ನಿರ್ಮಿಸಲು ತಾಲೂಕು ಆಡಳಿತ ಮತ್ತು ರೈತ ಸಂಘದ ನಡುವೆ ಜಿದ್ದಾಜಿದ್ದಿಯು ಮುಂದುವರೆದಿದ್ದು, ಇದನ್ನು ವಿರೋಧಿಸಿ ರೈತರು ಪ್ರತಿಭಟಿಸಿದರು.

ತಾಲೂಕು ಆಡಳಿತ ಜನವರಿ ೨೮ ೨೦೧೭ರಂದು ಕಾಮಗಾರಿ ಆರಂಭ ಮಾಡಿದ್ದರಿಂದ, ದೊಡ್ಡೇರಿ, ಉಪ್ಪಾರಹಟ್ಟಿ, ದಾಸನಾಯ್ಕನಹಟ್ಟಿಯ ಗ್ರಾಮಗಳ ನೂರಾರು ರೈತರು, ರೈತ ಸಂಘಟನೆಯೊಂದಿಗೆ ಕಾಮಗಾರಿಗೆ ಅಡ್ಡಿ ಪಡಿಸಿದರು. ದಿನವಿಡೀ ಗೋಮಾಳದಲ್ಲಿ ಧರಣಿ ಕುಳಿತ ಹೋರಾಟಗಾರರು, ಜಾನುವಾರುಗಳಿಗೆ ಆಧಾರವಾದ ಸರ್ಕಾರಿ ಗೋಮಾಳ ಭೂಮಿಯಲ್ಲಿ ಕ್ರೀಡಾಂಗಣ ನಿರ್ಮಿಸಲು ಬಿಡುವುದಿಲ್ಲವೆಂದು ಆಗ್ರಹಿಸಿದರು. ಗ್ರಾಮ ನಿರ್ಮಾಣ ಮತ್ತು ವಸತಿ ರಹಿತ ಕುಟುಂಬಗಳಿಗೆ ನಿವೇಶನ ಹಂಚಿಕೆ ಜೊತೆಗೆ ಜಾನುವಾರಗಳ ಸಾಕಾಣಿಕೆಗೆ ಆಧಾರ ಆಗಬೇಕೆಂದು ಪಟ್ಟು ಹಿಡಿದಿರುವ ಸ್ಥಳೀಯರು, ಮೂರು ದಿನಗಳ ಕಾಲ ಧರಣಿ ಮುಂದುವರೆಸುವದಾಗಿ ಎಚ್ಚರಿಸಿದರು.[೫೭] ಈ ಸಮಯದಲ್ಲಿ ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರ್ ಶ್ರೀಧರ್ ಮೂರ್ತಿ ಎಸ್. ಪಂಡಿತ್ ಮಾತನಾಡಿ ಸಾರ್ವಜನಿಕರ ಹಿತಕ್ಕಾಗಿ ಬಳಸಲು ಸರ್ಕಾರಿ ಗೋಮಾಳ ಭೂಮಿ ಈಗಾಗಲೇ ಸರ್ಕಾರದ ಅಧೀನದಲ್ಲಿದೆ. ಒಟ್ಟು ೯೦ ಎಕರೆ ಭೂಮಿಯಲ್ಲಿ ಕೇವಲ ಹತ್ತು ಎಕರೆ ಪ್ರದೇಶದಲ್ಲಿ ಕ್ರೀಡಾಂಗಣ ನಿರ್ಮಿಸಲಾಗುವುದು. ಇದಕ್ಕೆ ಯಾವ ಅಡ್ಡಿ ಬಂದರೂ ನಿಲ್ಲಿಸುವುದಿಲ್ಲ. ಸರ್ಕಾರಿ ಕೆಲಸಕ್ಕೆ ಅಡ್ಡಿ ಪಡಿಸಿದರೆ ಕಾನೂನು ಕ್ರಮಕೈಗೊಳ್ಳುವುದಾಗಿ ತಿಳಿಸಿದರು

**ರಾಂಪುರ ಗೋಶಾಲೆ ಎದುರು ರೈತರ ಪ್ರತಿಭಟನೆ:– ಫೆಬ್ರವರಿ ೦೨ ೨೦೧೭**

ಮೊಳಕಾಲ್ಮೂರು ತಾಲೂಕಿನ ನೂರಾರು ರೈತರು ಜಾನುವಾರುಗಳಿಗೆ ಸಮರ್ಪಕ ಮೇವು, ನೀರು ಮತ್ತು ನೆರಳಿನ ವ್ಯವಸ್ಥೆಯನ್ನು ಮಾಡುವಂತೆ ಆಗ್ರಹಿಸಿ ರಾಂಪುರ ಗೋಶಾಲೆಯ ಎದುರು ಪ್ರತಿಭಟನೆ ಮಾಡಿದರು.

ರಾಂಪುರದ ಗೋಶಾಲೆಯಲ್ಲಿ ವಿವಿಧ ಗ್ರಾಮಗಳ ೧೫೦೦ಕ್ಕೂ ಹೆಚ್ಚು ಜಾನುವಾರುಗಳು ಆಶ್ರಯ ಪಡೆದಿವೆ. ಕಳೆದ ವಾರದಿಂದ ದಿನಕ್ಕೆ ಒಂದು ಲಾರಿ ಲೋಡ್ ಮೇವು ಮತ್ತು ಒಂದು ಟ್ಯಾಂಕರ್ ನೀರು ಸರಬರಾಜು ಮಾಡಲಾಗುತ್ತಿದ್ದು, ಇದು ಯಾವುದಕ್ಕೂ ಸಾಲದಾಗಿದೆ. ಈ ಬಗ್ಗೆ ಅಧಿಕಾರಿಗಳಿಗೂ ಮಾಹಿತಿ ನೀಡಿದರು ಯಾವುದೇ ಪ್ರಯೋಜನವಾಗಿಲ್ಲ. ಜಿಲ್ಲಾಡಳಿತ ಕೂಡಲೇ ಪ್ರತಿ ಜಾನುವಾರುಗಳಿಗೂ ದಿನಕ್ಕೆ ತಲಾ ೮ ಕೆ.ಜಿ.ಮೇವು ಮತ್ತು ಸಾಕಾಗುವಷ್ಟು ನೀರಿನ ವ್ಯವಸ್ಥೆ ಮಾಡಬೇಕು ಎಂದು ಮನವಿ ಮಾಡಿ ರೈತರು ಗೋಶಾಲೆಯ ಎದುರು ಪ್ರತಿಭಟನೆ ಮಾಡಿದರು.

ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರರು ರೈತರ ಮನವಿಯನ್ನು ಸ್ವೀಕರಿಸಿ ಇನ್ನೆರಡು ದಿನಗಳಲ್ಲಿ ಮೇವು ಮತ್ತು ನೀರಿನ ಪೂರೈಕೆ ಮಾಡುವದಾಗಿ ತಿಳಿಸಿದರು. ಇದರಿಂದಾಗಿ ರೈತರು ಪ್ರತಿಭಟನೆ ಹಿಂಪಡೆದರು. ಫೆಬ್ರವರಿ ೦೫ ೨೦೧೭ ರಂದು ತಹಶೀಲ್ದಾರರು ಜಿಲ್ಲಾಧಿಕಾರಿಗಳ ಜೊತೆ ಚರ್ಚಿಸಿ ರಾಂಪುರ ಗೋಶಾಲೆಗೆ ಅಗತ್ಯವಿರುವಷ್ಟು ನೀರು ಮತ್ತು ಮೇವಿನ ಪೂರೈಕೆ ಮಾಡಲಾಯಿತು.

**ಚಿತ್ರದುರ್ಗದಲ್ಲಿ ಕೃಷಿ ಸಾಲ ಮನ್ನಾಕ್ಕೆ ಆಗ್ರಹಿಸಿ ರೈತ ಪ್ರತಿಭಟನೆ:– ೧೭/೦೪/೨೦೧೭**

ಚಿತ್ರದುರ್ಗ ಜಿಲ್ಲೆಯ ವಿವಿಧ ತಾಲೂಕುಗಳಾದ ಚಿತ್ರದುರ್ಗ, ಹಿರಿಯೂರು, ಹೊಳಲ್ಕೆರೆಗಳಲ್ಲಿ ಕೃಷಿ ಸಾಲ ಮನ್ನಾ ಹಾಗೂ ಬೆಳೆಗಳಿಗೆ ಪರಿಹಾರ ನೀಡಬೇಕೆಂದು ಒತ್ತಾಯಿಸಿ ರೈತ ಸಂಘಟನೆಗಳು ಹಾಗೂ ನೂರಾರು ರೈತರು ಏಪ್ರಿಲ್ ೧೭ ೨೦೧೭ರಂದು ಪ್ರತಿಭಟನೆ ಮಾಡಿದರು.

ಚಿತ್ರದುರ್ಗ ನಗರದಲ್ಲಿ ನೂರಾರು ರೈತರು ಕೃಷಿ ಸಾಲ ಸಂಪೂರ್ಣ ಮನ್ನಾ ಮಾಡುವಂತೆ ಆಗ್ರಹಿಸಿ ಜಿಲ್ಲಾಧಿಕಾರಿ ಕಛೇರಿಗಳ ಮುಂದೆ ಪ್ರತಿಭಟನೆ ಕೈಗೊಂಡರು ನಂತರ ಜಿಲ್ಲಾಧಿಕಾರಿಗೆ ಮನವಿ ನೀಡಿ, ರೈತರ ನೆರವಿಗೆ ಸರ್ಕಾರಗಳು ಕೂಡಲೇ ಧಾವಿಸಬೇಕೆಂದು ಆಗ್ರಹಿಸಿದರು.

ಹೊಳಲ್ಕೆರೆ ತಾಲೂಕಿನ ರೈತ ಸಂಘಟನೆಗಳು ಹಾಗೂ ನೂರಾರು ರೈತರು, ಸರ್ಕಾರಗಳು ರೈತರ ಕುರಿತು ನಿರ್ಲಕ್ಷ್ಯ ಹೊಂದಿವೆ ಎಂದು ಆರೋಪಿಸಿ ತಹಶೀಲ್ದಾರ್ ಕಛೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆ ಮಾಡಿದರು. ರಾಜ್ಯದಲ್ಲಿ ೩೦ ವರ್ಷಗಳಿಂದ ಬರ ಅವರಿಸಿದ್ದು, ನಮ್ಮನ್ನಾಳಿದ ಸರ್ಕಾರಗಳು ಭವಿಷ್ಯದ ಬಗ್ಗೆ ಕಿಂಚಿತ್ತು ಯೋಚಿಸದೇ ಸ್ಪರ್ಧ ರಾಜಕಾರಣದಲ್ಲಿ ತೊಡಗಿವೆ. ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರ ತಯಾರು ಮಾಡುವಂತಹ ಕಂಪನಿಗಳ ಏಜೆಂಟರಾಗಿ ಮತ್ತು ವಿದೇಶಿ ಕಂಪನಿಗಳ ಗುಲಾಮರಾಗಿವೆ ಎಂದು ಆರೋಪಿಸಿದರು.

**ಚಿತ್ರದುರ್ಗದಲ್ಲಿ ಕೃಷಿ ಸಾಲ ಮನ್ನಾಕ್ಕೆ ಆಗ್ರಹಿಸಿ ರೈತ ಪ್ರತಿಭಟನೆ:– ೧೭/೦೪/೨೦೧೭**

ಚಳ್ಳಕೆರೆ ತಾಲೂಕಿನಲ್ಲಿ ರೈತರ ಬ್ಯಾಂಕ್ ಸಾಲ ಮನ್ನಾ ಮಾಡಬೇಕೆಂದು ಒತ್ತಾಯಿಸಿ, ರಾಜ್ಯ ರೈತ ಸಂಘದ ನೇತೃತ್ವದಲ್ಲಿ ನೂರಾರು ರೈತರು ನಗರದಲ್ಲಿ ಏಪ್ರಿಲ್ ೧೭ ೨೦೧೭ರ ಸೋಮವಾರದಂದು ರೈತರು ಪ್ರತಿಭಟನೆ ನಡೆಸಿದರು. ನೆಹರು ವೃತ್ತದಲ್ಲಿ ಮಾನವ ಸರಪಳಿ ನಿರ್ಮಿಸಿದ ಪ್ರತಿಭಟನಾಕಾರರು, ಸರ್ಕಾರದ ವಿರುದ್ಧ ಘೋಷಣೆ ಕೂಗಿದರು. ನಂತರ ತಾಲೂಕು ಕಛೇರಿಯ ಮುಂದೆ ಜಮಾಯಿಸಿ, ರೈತರ ರಾಷ್ಟ್ರೀಕೃತ ಬ್ಯಾಂಕ್‌ಗಳು ಹಾಗೂ ಸಹಕಾರ ಸಂಘಗಳಲ್ಲಿರುವ ರೈತರ ಸಾಲ ಮನ್ನಾ ಮಾಡಬೇಕು ಎಂದು ಆಗ್ರಹಿಸಿದರು. ಬರ ಪ್ರದೇಶದ ರೈತರಿಗೆ ಒಂದು ಎಕರೆಗೆ ಇಪ್ಪತ್ತು ಸಾವಿರ ರೂ. ಪರಿಹಾರ ನೀಡಬೇಕು ಭದ್ರಾ ಮೇಲ್ದಂಡೆ ಯೋಜನೆಯನ್ನು ಪೂರ್ಣಗೊಳಿಸಬೇಕು. ಮುಂಗಾರು ಬಿತ್ತನೆಗೆ ಬೀಜ, ಗೊಬ್ಬರವನ್ನು ಉಚಿತವಾಗಿ ನೀಡಬೇಕು. ರೈತ ಕುಟುಂಬಗಳಿಗೆ ಉಚಿತ ಪಡಿತರ ವಿತರಣೆ ಆಗಬೇಕು, ಪಂಪ್‌ಸೆಟ್‌ಗಳಿಗೆ ೧೨ ಗಂಟೆ ಗುಣಮಟ್ಟದ ವಿದ್ಯುತ್ ನೀಡಬೇಕು, ಗೋಶಾಲೆಗಳು ಮತ್ತು ಮೇವು ಬ್ಯಾಂಕುಗಳನ್ನು ನಿರಂತರವಾಗಿ ಮುಂದುವರಿಸಬೇಕೆಂದು ಆಗ್ರಹಿಸಿದರು. ಬೆಳೆ ಪರಿಹಾರ

ವಿತರಣೆಯಲ್ಲಿ ಅರ್ಹ ರೈತರಿಗೆ ಪರಿಹಾರ ಸಿಗುತ್ತಿಲ್ಲ ಇದಕ್ಕೆ ಕಂದಾಯ ಇಲಾಖೆ ಅಧಿಕಾರಿಗಳ ಬೇಜವಬ್ದಾರಿ ಕಾರಣವಾಗಿದೆ. ಸರ್ಕಾರದ ಯಾವುದೇ ಸೌಲಭ್ಯಗಳು ರೈತರಿಗೆ ಸುಲಭವಾಗಿ ಸಿಗುತ್ತಿಲ್ಲ. ಹಾಗಾಗಿ ನಿರ್ಲಕ್ಷ ಅಧಿಕಾರಿಗಳ ವಿರುದ್ಧ ಕೂಡಲೇ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದರು.[೫೮]

ಜಿಲ್ಲಾಧಿಕಾರಿಗಳು ಪ್ರತಿಭಟನಾನಿರತ ರೈತರನ್ನು ಉದ್ದೇಶಿಸಿ ಮಾತನಾಡಿ ಈಗಾಗಲೇ ಬಿತ್ತನೆ ಬೀಜ ಮತ್ತು ಗೊಬ್ಬರಗಳನ್ನು ಕೃಷಿ ಇಲಾಖೆಯಲ್ಲಿ ಸಬ್ಸಿಡಿ ದರದಲ್ಲಿ ನೀಡಲಾಗುತ್ತಿದೆ. ರೈತ ಕುಟುಂಬಗಳಿಗೆ ಉಚಿತ ಪಡಿತರ ಚೀಟಿ ವಿತರಣೆ ಮಾಡಲಾಗುತ್ತಿದ್ದು, ಮಳೆಗಾಲದವರೆಗೆ ಗೋಶಾಲೆಗಳು ಮತ್ತು ಮೇವು ಬ್ಯಾಂಕುಗಳನ್ನು ನಿರಂತರವಾಗಿ ಮುಂದುವರೆಸುವದಾಗಿ ಹೇಳಿದರು. ಉಳಿದ ಬೇಡಿಕೆಗಳನ್ನು ಸರ್ಕಾರದ ಜೊತೆ ಚರ್ಚಿಸಿ ಮುಂದಿನ ಕ್ರಮ ಕೈಗೊಳ್ಳುವದಾಗಿ ಭರವಸೆ ನೀಡಿದರು.

**ಬೆಳೆ ಪರಿಹಾರ ವಿಳಂಬ ನೀತಿಯನ್ನು ಖಂಡಿಸಿ ರೈತ ಪ್ರತಿಭಟನೆ:– ೧೧/೦೫/೨೦೧೭**

ಬೆಳೆ ಪರಿಹಾರ ನೀಡಲು ರಾಜ್ಯ ಸರ್ಕಾರ ಅನುಸರಿಸುತ್ತಿರುವ ವಿಳಂಬ ನೀತಿ ಖಂಡಿಸಿ, ಭಾರತೀಯ ಕಿಸಾನ್ ಸಂಘದ ಕಾರ್ಯಕರ್ತರು ಹಾಗೂ ನೂರಾರು ರೈತರು ನಾಯಕನಹಟ್ಟಿಯಲ್ಲಿ ಗುರುವಾರ ಪ್ರತಿಭಟನೆ ಮಾಡಿದರು.

ಪ್ರತಿಭಟನಾ ರೈತರು ಮೆರವಣಿಗೆಯ ಮೂಲಕ ತೆರಳಿ ಉಪತಹಶೀಲ್ದಾರ್ ಜಗದೀಶ್‌ರವರಿಗೆ ಮನವಿ ಸಲ್ಲಿಸಿ, ಸರ್ಕಾರದ ಗಮನಕ್ಕೆ ತರುವಂತೆ ಮನವಿ ಮಾಡಿದರು. ಕೇಂದ್ರ ಸರ್ಕಾರ ಬೆಳೆ ಪರಿಹಾರ ಬಿಡುಗಡೆ ಮಾಡಿ ಹಲವು ತಿಂಗಳು ಕಳೆದಿದೆ. ಆದರೂ ರಾಜ್ಯ ಸರ್ಕಾರ ಬೆಳೆ ಪರಿಹಾರವನ್ನು ಆರ್ಹ ರೈತರಿಗೆ ತಲುಪಿಸುವಲ್ಲಿ ವಿಫಲವಾಗಿದೆ ಎಂದು ಅಪಾದಿಸಿದರು. ಲಕ್ಷಾಂತರ ರೈತರಿಗೆ ಈವರೆಗೆ ಪರಿಹಾರದ ಹಣ ಬ್ಯಾಂಕ್ ಖಾತೆಗೆ ಪಾವತಿಯಾಗಿಲ್ಲ. ಈ ಬಗ್ಗೆ ಕಂದಾಯ ಇಲಾಖೆ ಅಧಿಕಾರಿಗಳನ್ನು ಕೇಳಿದರೆ ಹಲವು ಕಾರಣ ಹಾಗೂ ನೆಪಗಳನ್ನು ಹೇಳಿ ಹಿಂದಕ್ಕೆ ಕಳುಹಿಸುತ್ತಿದ್ದಾರೆ ಎಂದು ಅಸಮಾಧಾನ ವ್ಯಕ್ತಪಡಿಸಿದರು. ವಿಳಂಬಕ್ಕೆ ಸರ್ಕಾರ ಈ ಕೂಡಲೇ ರೈತರಿಗೆ ನಿರ್ದಿಷ್ಟ ಕಾರಣ ನೀಡಬೇಕೆಂದು ಒತ್ತಾಯಿಸಿದರು.[೫೯]

ರೈತರ ಮನವಿ ಸ್ವೀಕರಿಸಿ ಮಾತನಾಡಿದ ಉಪತಹಶೀಲ್ದಾರ್, ಹೋಬಳಿಯ ಏಳು ಸಾವಿರ ರೈತರಿಗೆ ಈಗಾಗಲೇ ಬೆಳೆ ಪರಿಹಾರ ವಿತರಣೆಯಾಗಿದೆ. ಹಲವು ತಾಂತ್ರಿಕ ಕಾರಣಗಳಿಂದ ಕೆಲ ರೈತರಿಗೆ ಪರಿಹಾರ ದೊರೆತಿಲ್ಲ. ರೈತರ ಖಾತೆ, ಪಹಣಿ, ಆಧಾರ್‌ಕಾರ್ಡ್ ಹೊಂದಾಣಿಕೆ ಪರೀಕ್ಷಿಸಬೇಕು. ಪರಿಹಾರ ದೊರೆಯದ ರೈತರು ಸಂಬಂಧಿಸಿದ ಗ್ರಾಮ ಲೆಕ್ಕಾಧಿಕಾರಿಗಳನ್ನು ಸಂಪರ್ಕಿಸುವಂತೆ ಸೂಚಿಸಿದರು. ಇದರಿಂದ ರೈತರು ತಮ್ಮ ಪ್ರತಿಭಟನೆಯನ್ನು ಹಿಂಪಡೆದರು.

**ಕೃಷಿ ಸಾಲ ಮನ್ನಾಕ್ಕೆ ಒತ್ತಾಯಿಸಿ ರೈತರ ಪ್ರತಿಭಟನೆ:– ೧೭/೦೫/೨೦೧೭**

ಬರಗಾಲಕ್ಕೆ ತುತ್ತಾಗಿರುವ ಚಿತ್ರದುರ್ಗ ಜಿಲ್ಲೆ ಸಹಿತ, ರಾಜ್ಯದ ಎಲ್ಲಾ ರೈತರ ಕೃಷಿ ಸಾಲ ಮನ್ನಾ ಹಾಗೂ ನಾನಾ ಬೇಡಿಕೆಗಳ ಈಡೇರಿಕೆಗೆ ಆಗ್ರಹಿಸಿ, ಆಖಿಲ ಭಾರತ್ ಕಿಸಾನ್ ಸಭಾ ಕಾರ್ಯಕರ್ತರು ಮೇ ೧೭ ೨೦೧೭ರಂದು ಜಿಲ್ಲಾಧಿಕಾರಿ ಕಚೇರಿ ಬಳಿ ಪ್ರತಿಭಟನೆ ಮಾಡಿದರು.

ರಾಜ್ಯದ ರೈತರು ಸತತ ಬರಗಾಲದಿಂದ ಕಂಗೆಟಿದ್ದು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಬೂಬು ಹೇಳದೇ ಕೂಡಲೇ ಕೃಷಿ ಸಾಲ ಮನ್ನಾ ಮಾಡಬೇಕು. ಅರಣ್ಯ ಹಕ್ಕು ಸಮಿತಿಯ ಮುಂದೆ ನೆನೆಗುದಿಗೆ ಬಿದ್ದಿರುವ ಅರ್ಜಿಗಳನ್ನು ತ್ವರಿತವಾಗಿ ಇತ್ಯರ್ಥ ಪಡಿಸಬೇಕು ಎಂದು ಆಗ್ರಹಿಸಿದರು.

ಬಗರ್ ಹುಕುಂ ಸಾಗುವಳಿದಾರರಿಗೆ ಹಕ್ಕು ಪತ್ರ ಕೊಡಬೇಕು. ಹೊಸದಾಗಿ ಅರ್ಜಿ ಸಲ್ಲಿಸಲು ಬಗರ್ ಹುಕುಂ ಸಾಗುವಳಿದಾರರಿಗೆ ಅವಕಾಶ ನೀಡಬೇಕು. ಭದ್ರಾ ಮೇಲ್ದಂಡೆ ಯೋಜನೆ ಕಾಮಗಾರಿಯನ್ನು ತ್ವರಿತವಾಗಿ ಅನುಷ್ಠಾನಗೊಳಿಸಬೇಕು. ೬೦ ವರ್ಷ ಮೀರಿದ ರೈತರಿಗೆ, ಕೃಷಿ ಕಾರ್ಮಿಕರಿಗೆ, ಕುಶಲ–ಕರ್ಮಿಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪ್ರತಿ ತಿಂಗಳು ಐದು ಸಾವಿರ ರೂಗಳ ಕಿಸಾನ್ ಪಿಂಚಣಿ ಕೊಡಬೇಕು. ನಾನಾ ಸಂಸ್ಥೆಗಳಿಗೆ ವಿತರಿಸುವ ಅಮೃತ್ ಮಹಲ್ ಕಾವಲು ಭೂಮಿಯನ್ನು ಮರಳಿ ಪಡೆಯಬೇಕು, ನಿವೇಶನ, ವಸತಿ ರಹಿತರಿಗೆ, ಅಂಗವಿಕಲರಿಗೆ ನಿವೇಶನ ಹಾಗೂ ಮನೆ ನಿರ್ಮಿಸಿ ಕೊಡುವುದು ಸೇರಿದಂತೆ ನಾನಾ ಬೇಡಿಕೆಗಳ ಈಡೇರಿಕೆಗೆ ಪ್ರತಿಭಟನೆ ಮಾಡಿ ಜಿಲ್ಲಾಧಿಕಾರಿಗೆ ಮನವಿ ಸಲ್ಲಿಸಿದರು.[೬೦]

ಪ್ರತಿಭಟನೆಯಲ್ಲಿ ಕಿಸಾನ್ ಸಭಾದ ರಾಜ್ಯಾಧ್ಯಕ್ಷ ದೊಡ್ಡ ಉಳ್ಳಾರ್ತಿ ಕರಿಯಣ್ಣ, ಮುಖಂಡರಾದ ಸತೀಶ್, ರಾಮಣ್ಣ, ತಿಪ್ಪೇಸ್ವಾಮಿ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಬ್ಯಾಂಕ್ ಸಾಲ ಮನ್ನಾಕ್ಕಾಗಿ ಮೊಳಕಾಲ್ಮೂರು ರೈತರ ಪ್ರತಿಭಟನೆ:– ೧೫/೦೬/೨೦೧೭**

ಬ್ಯಾಂಕ್ ಸಾಲ ಮನ್ನಾ ಹಾಗೂ ರೈತರ ಮೇಲೆ ಗೋಲಿಬಾರ್ ನಡೆಸಿದ ಮಧ್ಯಪ್ರದೇಶದ ಸರ್ಕಾರವನ್ನು ಕೂಡಲೇ ವಜಾ ಮಾಡಬೇಕೆಂದು ಆಗ್ರಹಿಸಿ, ರೈತ ಸಂಘದ ನೂರಾರು ಕಾರ್ಯಕರ್ತರು ಜೂನ್ ೧೫ ೨೦೧೭ರಂದು ತಹಶೀಲ್ದಾರ್ ಕಛೇರಿಯ ಮುಂದೆ ಪ್ರತಿಭಟನೆ ಮಾಡಿದರು.

ಮೊಳಕಾಲ್ಮೂರಿನ ಕೆ.ಇ.ಬಿ. ವೃತ್ತದಿಂದ ಮೆರವಣಿಗೆ ಆರಂಭವಾಯಿತು. ಕಾರ್ಯಕರ್ತರು ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತ ತಾಲೂಕು ಕಛೇರಿಗೆ ತೆರಳಿ ತಹಶೀಲ್ದಾರ್‌ರಿಗೆ ಮನವಿ ಸಲ್ಲಿಸಿದರು. ಮನವಿಯಲ್ಲಿ ರೈತರು ಭೀಕರ ಬರದಿಂದ ಸಂಕಷ್ಟ ಅನುಭವಿಸುತ್ತಿದ್ದು, ಇವರ ಸಾಲವನ್ನು ಮನ್ನಾ ಮಾಡಬೇಕು ಹಾಗೂ ಮಧ್ಯಪ್ರದೇಶದ ಸರ್ಕಾರ ರೈತರ ಮೇಲೆ ಗುಂಡಿನ ದಾಳಿ ನಡೆಸಿದ್ದು, ಅಮಾಯಕ ಆರು ಮಂದಿ ರೈತರು ಪ್ರಾಣ ಬಿಟ್ಟಿದ್ದಾರೆ. ಹೋರಾಟಗಳನ್ನು ಹತ್ತಿಕ್ಕುವ ಸರ್ಕಾರದ ಕ್ರಮ ಖಂಡನೀಯ, ಕೂಡಲೇ ಮೃತ ರೈತ ಕುಟುಂಬಗಳಿಗೆ ತಲಾ ೨೫ ಲಕ್ಷ ರೂ. ಪರಿಹಾರ ನೀಡಬೇಕೆಂದು ಒತ್ತಾಯಿಸಲಾಗಿತ್ತು.

ರಾಜ್ಯದಲ್ಲಿ ಬರದ ತೀವ್ರತೆ ಹೆಚ್ಚಿದ್ದು, ರೈತರ ಸಂಕಷ್ಟ ಹೇಳತೀರದು. ಸಾಲಮನ್ನಾ ಮಾಡುವಂತೆ ಆಗ್ರಹಿಸಿ ಹಲವು ಬಾರಿ ಹೋರಾಟ ನಡೆಸಿದರೂ ಪ್ರಯೋಜನವಾಗಿಲ್ಲ. ರೈತರ ಹೆಸರೇಳಿಕೊಂಡು ಅಧಿಕಾರಕ್ಕೆ ಬಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪ್ರತಿಯೊಬ್ಬರಿಗೂ

ಸಾಮಾಜಿಕ ನ್ಯಾಯ ಒದಗಿಸಿ ಕೊಡುವಲ್ಲಿ ಸಂಪೂರ್ಣ ವಿಫಲವಾಗಿವೆ. ಮುಂದಿನ ಚುನಾವಣೆಯಲ್ಲಿ ಜನತೆ ತಕ್ಕ ಪಾಠ ಕಲಿಸಲಿದ್ದಾರೆ ಎಂದು ಹೆಚ್ಚರಿಸಿದರು. ಹಾಗೂ ತಾರತಮ್ಯ ಮಾಡದೇ ಮೂರು ಸಾವಿರ ರೂ. ದರದಲ್ಲಿ ಶೇಂಗಾ ಬಿತ್ತನೆ ಬೀಜ ವಿತರಿಸಬೇಕೆಂದು ಒತ್ತಾಯಿಸಿದರು. ಮನವಿ ಸ್ವೀಕರಿಸಿ ಮಾತನಾಡಿದ ತಹಶೀಲ್ದಾರರು, ಜಿಲ್ಲಾಧಿಕಾರಿಗಳ ಜೊತೆ ಚರ್ಚಿಸಿ ಬೇಡಿಕೆಗಳನ್ನು ಈಡೇರಿಸುವದಾಗಿ ಭರವಸೆ ನೀಡಿದರು.

**ಸಾಲ ಮನ್ನಾಕ್ಕೆ ಒತ್ತಾಯಿಸಿ ಪತ್ರ ಚಳವಳಿ:– ೧೦/೦೭/೨೦೧೭**

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ)ಯು ಸಂಪೂರ್ಣ ಸಾಲಮನ್ನಾಕ್ಕೆ ಆಗ್ರಹಿಸಿ, ಜುಲೈ ೧೦ ೨೦೧೭ರಂದು ಪತ್ರ ಚಳವಳಿಯನ್ನು ಚಿತ್ರದುರ್ಗ ನಗರದಲ್ಲಿ ಮಾಡಿದರು. ಈ ಚಳವಳಿಗೆ ಜಿಲ್ಲೆಯ ವಿವಿಧೆಡೆಯಿಂದ ನಗರಕ್ಕೆ ರೈತರ ದಂಡೇ ಹರಿದು ಬಂದಿತು.

ಬೆಳಗ್ಗೆ ೧೦ ಗಂಟೆಗೆ ಸರಿಯಾಗಿ ವಾಹನಗಳಲ್ಲಿ ಆಗಮಿಸಿದ ಸಾವಿರಾರು ರೈತರು, ಮುಖ್ಯ ರಸ್ತೆಯಲ್ಲಿ ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತಾ ಜಿಲ್ಲಾಧಿಕಾರಿ ಕಛೇರಿಯ ವೃತ್ತಕ್ಕೆ ಆಗಮಿಸಿದರು. ೧೨ ಗಂಟೆಗೆ ಸರಿಯಾಗಿ ನಗರದಲ್ಲಿ ಎತ್ತ ಕಣ್ಣು ಹಾಯಿಸಿದರೂ ಹಸಿರು ಶಾಲುಗಳು ಕಾಣುತ್ತಿದ್ದವು. ಬಿಸಿಲನ್ನೂ ಲೆಕ್ಕಿಸದೆ ರಸ್ತೆ ಮಧ್ಯೆ ಕುಳಿತ ರೈತರು ಸತತ ನಾಲ್ಕು ವರ್ಷದಿಂದ ಜಿಲ್ಲೆಯಲ್ಲಿ ಬರ ಅವರಿಸಿದೆ, ಬೆಳೆ ಕೈಗೆ ಸಿಗದೆ ಸಂಕಷ್ಟದಲ್ಲಿದ್ದೇವೆ, ಇಂತಹ ಸಮಯದಲ್ಲಿ ಸಾಲ ಪಾವತಿಗೆ ಬ್ಯಾಂಕ್ ಅಧಿಕಾರಿಗಳು ಕಾಟ ಕೊಡುತ್ತಿದ್ದಾರೆ ಎಂದು ಪ್ರತಿಭಟನೆ ಮಾಡಿದರು. ಈ ಸಮಯದಲ್ಲಿ ರೈತ ಮುಖಂಡರು ಮಾತನಾಡಿ ಸಾಲದ ಮಾಹಿತಿ ಅರ್ಜಿಗಳನ್ನು ಜಿಲ್ಲಾಧಿಕಾರಿ ಕಛೇರಿಗೆ ನೀಡಿ ಸ್ವೀಕೃತಿ ಪಡೆದು ಬ್ಯಾಂಕ್‌ನವರು ಬಂದಾಗ ತೋರಿಸಿ ಎಂದರು. ಕೂಡಲೇ ರೈತರು ಅರ್ಜಿಗಳನ್ನು ಹಿಡಿದು ಜಿಲ್ಲಾಧಿಕಾರಿ ಕಛೇರಿಗೆ ನುಗ್ಗಿದರು.[೬೧] ಇದರಿಂದ ತಬ್ಬಿಬಾದ ಅಧಿಕಾರಿಗಳು ಡಿ.ಸಿ.ಯವರ ಸೂಚನೆಯಂತೆ ಅರ್ಜಿಗಳಿಗೆ ಸೀಲು ಹಾಕಿ ಕಳುಹಿಸಿದರು. ಆರು ತಾಲೂಕುಗಳಿಂದ ಸಾವಿರಾರು ರೈತರು ಆಗಮಿಸಿದ್ದರಿಂದ ಕಛೇರಿಯ ಆವರಣದಲ್ಲಿ ನೂಕುನುಗ್ಗಲು ಹೆಚ್ಚಾಯಿತು. ಇದನ್ನು ಗಮನಿಸಿದ ಹೆಚ್ಚುವರಿ ಜಿಲ್ಲಾಧಿಕಾರಿ ಪಿ.ಎನ್. ರವೀಂದ್ರ ಆವರಣದಲ್ಲಿ ನಾಲ್ಕೈದು ಕೌಂಟರ್ ತೆರೆದು ಅರ್ಜಿ ಸ್ವೀಕಾರಕ್ಕೆ ವ್ಯವಸ್ಥೆ ಮಾಡಿದರು.ಅಷ್ಟಾದರು ನಿಯಂತ್ರಣಕ್ಕೆ ಬಾರದಿದ್ದಾಗ ಅಧಿಕಾರಿಗಳು ಕಟ್ಟೆಗಳ ಮೇಲೆ ಕುಳಿತು ಅರ್ಜಿಗೆ ಸೀಲು ಹಾಕಿದರು. ಅರ್ಜಿಗೆ ಸೀಲು ಹಾಕಿಸಿಕೊಂಡು ಹೋದರೆ ಬ್ಯಾಂಕಿನವರು ಸಾಲ ವಾಪಸ್ ಕೇಳಲ್ಲ ಅಂತ ನಮ್ಮ ಮುಖಂಡ್ರು ಹೇಳವ್ರೆ, ಮನ್ನಾ ಆಗೋದು ಮುಂದಿನ ಮಾತು. ಸದ್ಯಕ್ಕೆ ಬ್ಯಾಂಕಿನವರು ಮನೆ ಬಾಗಿಲಿಗೆ ಬಂದು ಮಾತನಾಡದಿದ್ರೆ ಸಾಕು. ಮಳೆ ಬಂದ್ರೆ ಒಂದೇ ವರ್ಷದಲ್ಲಿ ಸರ್ಕಾರಕ್ಕೆ ನಾವೇ ಸಾಲ ಕೊಡುತ್ತೇವೆ. ಎಂದು ಹಲವಾರು ರೈತರು ಹೇಳಿದರು.

ಜಿಲ್ಲೆಯ ಪ್ರತಿ ಗ್ರಾಮಕ್ಕೂ ಭೇಟಿ ನೀಡಿದ ರೈತ ಮುಖಂಡರು ಪತ್ರ ಚಳವಳಿಯ ಬಗ್ಗೆ ಅರಿವು ಮೂಡಿಸಿದರು. ಜಿಲ್ಲಾಧಿಕಾರಿ ಮುಖಾಂತರ ರಾಜ್ಯ ಮತ್ತು ಕೇಂದ್ರ ಸರ್ಕಾರಕ್ಕೆ ಶೀರ್ಷಿಕೆಯಡಿ ಮುದ್ರಿಸಿದ ಅರ್ಜಿ ನೀಡಿದ್ದು, ಅರ್ಜಿ ಭರ್ತಿ ಮಾಡಿ, ಆಧಾರ್‌ಕಾರ್ಡ್, ಪಹಣಿ, ಮತದಾರರ ಗುರುತಿನ ಚೀಟಿಯೊಂದಿಗೆ ಸಲ್ಲಿಸುತ್ತಿರುವುದಾಗಿ ಹೇಳಿದರು. ಈ ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ರೆಡ್ಡಿಹಳ್ಳಿ ವೀರಣ್ಣ, ಹೊನ್ನೂರು ಮುನಿಯಪ್ಪ, ಸಿದ್ದವೀರಪ್ಪ, ರಾಜಶೇಖರಪ್ಪ ಮುಂತಾದ ರೈತ ಮುಖಂಡರು ಪಾಲ್ಗೊಂಡಿದ್ದರು.

**ಶೀಘ್ರವೇ ಬೆಳೆ ವಿಮೆ ಪಾವತಿಸಲು ಹಿರಿಯೂರು ರೈತರ ಪ್ರತಿಭಟನೆ:- ೧೭/೦೭/೨೦೧೭**

ಪ್ರಧಾನಮಂತ್ರಿ ಪಸಲ್ ಭೀಮಾ ಯೋಜನೆಯಡಿ ೨೦೧೫-೧೬ನೇ ಸಾಲಿನ ಬೆಳೆವಿಮೆ ಪಾವತಿಸಿದ ರೈತರಿಗೆ, ವಿಮೆ ಪಾವತಿಯಲ್ಲಿ ವಿಳಂಬವಾಗಿದೆ. ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಅಖಂಡ ಕರ್ನಾಟಕ ರೈತ ಸಂಘ ಮತ್ತು ಹಿರಿಯೂರಿನ ರೈತರು, ಬೆಂಗಳೂರಿನಲ್ಲಿರುವ ಕೃಷಿ ಇಲಾಖೆಗೆ ಮುತ್ತಿಗೆ ಹಾಕಿ ಪ್ರತಿಭಟನೆ ಮಾಡಿ, ಕೃಷಿ ಇಲಾಖೆಯ ಆಯುಕ್ತ ಸತೀಶ್‌ರವರಿಗೆ ಮನವಿ ಸಲ್ಲಿಸಿದರು.

ಜಿಲ್ಲೆಯಲ್ಲಿ ೧೮,೮೦೦ ರೈತರು ಬೆಳೆ ವಿಮೆ ತುಂಬಿದ್ದು, ೧೨,೮೦೦ ರೈತರಿಗೆ ೪೪ ಕೋಟಿ ರೂ ಬೆಳೆನಷ್ಟ ಪರಿಹಾರ ಬಂದಿದೆ. ಆರು ಸಾವಿರ ರೈತರಿಗೆ ವಿಮಾ ಪರಿಹಾರ ಬರಬೇಕಾಗಿದ್ದು, ಈ ಬಗ್ಗೆ ಸಂಬಂಧಿಸಿದ ವಿಮಾ ಅಧಿಕಾರಿಗಳು, ಕೃಷಿ ಇಲಾಖೆ ಗಮನಕ್ಕೂ ತಂದರೂ ಪ್ರಯೋಜನವಾಗಿಲ್ಲ. ಕಳೆದ ಐದಾರು ವರ್ಷಗಳಿಂದ ಬೀಕರ ಬರಗಾಲ, ಮಳೆ ಕೊರತೆಯಿಂದ ರೈತರು ತೀವ್ರ ಸಂಕಷ್ಟದಲ್ಲಿದ್ದು, ಸಾಲ-ಸೂಲ ಮಾಡಿ ಬೆಳೆವಿಮೆ ಪಾವತಿಸಿದ್ದಾರೆ. ಶೇ.೮೦ರಷ್ಟು ಬೆಳೆ ಹಾನಿಯಾಗಿದ್ದು ಕೆಲವೆಡೆ ಕೃಷಿ ಇಲಾಖೆಯ ಅಧಿಕಾರಿಗಳು ಅಸಮರ್ಪಕ ಮಾಹಿತಿ ನೀಡಿದ್ದಾರೆ. ಹಿರಿಯೂರು ತಾಲೂಕಿನ ಯರಬಹಳ್ಳಿ, ಖಂಡೇನಹಳ್ಳಿ, ಧರ್ಮಪುರ ಗ್ರಾಮ ಪಂಚಾಯ್ತಿಯ ರೈತರಿಗೆ ಈವರೆಗೆ ಬೆಳೆ ವಿಮೆ ಪಾವತಿಯಾಗಿಲ್ಲ ಎಂದು ಒತ್ತಾಯಿಸಿದರು.

ಮನವಿಯನ್ನು ಸ್ವೀಕರಿಸಿ ಮಾತನಾಡಿದ ಕೃಷಿ ಇಲಾಖೆಯ ಆಯುಕ್ತ ಸತೀಶ್ ೧೫ ದಿನದೊಳಗೆ ಬೆಳೆ ವಿಮೆ ಹಣ ರೈತರಿಗೆ ಪಾವತಿಸಲು ಸಂಬಂಧಿಸಿದ ಅಧಿಕಾರಿಗಳಿಗೆ ಸೂಚಿಸಲಾಗುವುದೆಂದು ಭರವಸೆ ನೀಡಿದರು. ಇದೇ ಸಮಯದಲ್ಲಿ ಕೃಷಿ ಸಚಿವ ಕೃಷ್ಣ ಭೈರೇಗೌಡರವರಿಗೂ ಬೆಳೆವಿಮೆ ಪಾವತಿ ವಿಳಂಬ ಸಮಸ್ಯೆ ಬಗೆಹರಿಸುವಂತೆ ರೈತರು ಮನವಿ ಸಲ್ಲಿಸಿದರು.

**ಗ್ರಾಮೀಣ ಭಾಗಕ್ಕೆ ಬಸ್ಸುಗಳ ಸೌಲಭ್ಯ ಕಲ್ಪಿಸಲು ಒತ್ತಾಯಿಸಿ ರೈತ ಸಂಘದ ಪ್ರತಿಭಟನೆ:- ೧೯/೦೭/೨೦೧೭**

ಚಿತ್ರದುರ್ಗದಿಂದ ತೋಪರಮಾಳಿಗೆ ಮಾರ್ಗವಾಗಿ ಚಳ್ಳಕೆರೆಗೆ ಬಸ್ಸಿನ ಸೌಲಭ್ಯ ಕಲ್ಪಿಸಲು ಆಗ್ರಹಿಸಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕಾರ್ಯಕರ್ತರು ಜುಲೈ ೧೯ ೨೦೧೭ರಂದು ಚಿತ್ರದುರ್ಗ ನಗರದಲ್ಲಿ ಪ್ರತಿಭಟನೆ ಮಾಡಿದರು.

ನಗರದ ಸಾರಿಗೆ ಘಟಕದ ಮುಂದೆ ಜಮಾಯಿಸಿದ ಕಾರ್ಯಕರ್ತರು ಗ್ರಾಮಕ್ಕೆ ಬಸ್ಸಿನ ವ್ಯವಸ್ಥೆಯಿಲ್ಲದೆ ಸಾರ್ವಜನಿಕರು, ವಿದ್ಯಾರ್ಥಿಗಳು, ರೈತರು, ವ್ಯಾಪಾರಿಗಳು ಸಮಸ್ಯೆ ಎದುರಿಸುತ್ತಿದ್ದಾರೆ. ತೋಪರಮಾಳಿಗೆ ಮಾರ್ಗವಾಗಿ ಎಣ್ಣೆಗೆರೆ, ಪಲ್ಲವಗೆರೆ, ಸೊಂಡೆಕೆರೆ, ಮಧುರೆ, ಗೊಂಜುಗುಂಟೆ ಮೂಲಕ ಬಸ್ಸಿನ ಸಂಚಾರಕ್ಕೆ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದರು. ಈಗಾಗಲೇ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಮನವಿ ಸಲ್ಲಿಸಿದರೂ ಕ್ರಮಕ್ಕೆ ಮುಂದಾಗಿಲ್ಲ. ಕೂಡಲೇ ಸೂಕ್ತ ಕ್ರಮ ಕೈಗೊಳ್ಳದಿದ್ದರೆ ಉಗ್ರ ಹೋರಾಟ ನಡೆಸಲಾಗುವುದೆಂದು ಎಚ್ಚರಿಸಿದರು.[೨] ನಂತರ ಸಾರಿಗೆ ಅಧಿಕಾರಿಗಳು ಮಾತನಾಡಿ ತಿಂಗಳೊಳಗೆ ಬಸ್ಸಿನ ಸಂಚಾರಕ್ಕೆ ಕ್ರಮ ಕೈಗೊಳ್ಳಲಾಗುವುದೆಂದು ಭರವಸೆ ನೀಡಿದರು.

ಪ್ರತಿಭಟನೆಯಲ್ಲಿ ರೈತ ಸಂಘದ ರಾಜ್ಯ ಉಪಾಧ್ಯಕ್ಷ ಕೆ.ಪಿ.ಭೂತಯ್ಯ, ಜಿಲ್ಲಾಧ್ಯಕ್ಷ ಟಿ ನುಲೇನೂರು ಎಂ.ಶಂಕರಪ್ಪ, ತಾಲೂಕು ಅಧ್ಯಕ್ಷ ಬಸ್ತಿಹಳ್ಳಿ ಜಿ.ಸುರೇಶ್‌ಬಾಬು, ಜಿಲ್ಲಾ ಉಪಾಧ್ಯಕ್ಷ ತಿಪ್ಪೇಸ್ವಾಮಿ ಮುಂತಾದ ರೈತ ಮುಖಂಡರು ಪಾಲ್ಗೊಂಡಿದ್ದರು.

**ಗೋಶಾಲೆಗಳಿಗೆ ಸಮರ್ಪಕ ಮೇವು ಪೂರೈಕೆಗಾಗಿ ರೈತ ಸಂಘದ ಪ್ರತಿಭಟನೆ:–**

**೨೬/೦೭/೨೦೧೭**

ಚಳ್ಳಕೆರೆ ತಾಲೂಕಿನ ಗೋಶಾಲೆಗಳಿಗೆ ಸಮರ್ಪಕ ಮೇವಿಲ್ಲದೆ ಬೇಸತ್ತ ನೂರಾರು ರೈತರು, ಜುಲೈ ೨೬ ೨೦೧೭ ರಂದು ತಾಲೂಕು ಕಚೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆ ಮಾಡಿದರು.

ದೊಡ್ಡ ಉಳ್ಳಾರ್ತಿ, ಪರಶುರಾಮಪುರ, ಸಾಣೀಕೆರೆಗಳಿಂದ ಆಗಮಿಸಿದ್ದ ನೂರಾರು ರೈತರು ಬರಗಾಲದಲ್ಲಿ ಗೋಶಾಲೆ ತೆರೆದು ಜಾನುವಾರು ರಕ್ಷಣೆಗೆ ಸರ್ಕಾರ ನೆರವು ನೀಡಿದ್ದರೂ, ಮೇವು ಪೂರೈಕೆ ಸ್ಥಗಿತಗೊಳಿಸಲಾಗಿದೆ. ಈ ಬಗ್ಗೆ ಗುತ್ತಿಗೆದಾರರನ್ನು ವಿಚಾರಿಸಿದರೆ ತಾಲೂಕು ಆಡಳಿತ ಕೊಡಬೇಕಾಗಿದ್ದ ಲಕ್ಷ ಗಟ್ಟಲೆ ಹಣ ಬಾಕಿ ಇಟ್ಟುಕೊಂಡಿದೆ. ಇದರಿಂದ ಲಾರಿ ಬಾಡಿಗೆ ಪಡೆಯಲು ಸಮಸ್ಯೆಯಾಗಿದೆ ಎಂದು ಹೇಳುತ್ತಾರೆ. ಕೂಡಲೇ ರಾಜ್ಯ ಸರ್ಕಾರ ಗೋಶಾಲೆಗಳಿಗೆ ಮೇವು ಪೂರೈಕೆ ಹಾಗೂ ರಾಷ್ಟ್ರೀಕೃತ ಬ್ಯಾಂಕ್‌ಗಳ ಬೆಲೆ ಸಾಲ ಮನ್ನಾ ಮಾಡಬೇಕೆಂದು ಒತ್ತಾಯಿಸಿದರು. ಹವಾಮಾನ ವೈಪರಿತ್ಯ ಬೆಳೆ ವಿಮೆ ಯೋಜನೆಯಡಿ ದಾಳಿಂಬೆ, ಮಾವು, ಮೋಸಂಬಿ, ಪಪ್ಪಾಯಿ ಬೆಳೆಗಳಿಗೆ ವಿಮೆ ಕೊಡಿಸಬೇಕು. ೬೦ ವರ್ಷ ತುಂಬಿದ ರೈತರಿಗೆ ಕೂಲಿ ಕಾರ್ಮಿಕರಿಗೆ ಐದು ಸಾವಿರ ರೂ.ಪಿಂಚಣಿ ವ್ಯವಸ್ಥೆ ಜಾರಿ ಮಾಡಬೇಕೆಂದು ಆಗ್ರಹಿಸಿ ತಹಶೀಲ್ದಾರರಿಗೆ ಮನವಿ ಸಲ್ಲಿಸಿದರು.

ಮನವಿ ಸ್ವೀಕರಿಸಿ ಮಾತನಾಡಿದ ತಹಶೀಲ್ದಾರ್ ಟಿ.ಸಿ.ಕಾಂತರಾಜ್ ತಾಲೂಕಿನ ಬರ ಪರಿಸ್ಥಿತಿ ಅರಿತು, ಹೆಚ್ಚುವರಿಯಾಗಿ ನಾಗಗೊಂಡನಹಳ್ಳಿ, ಕಾಲುವೇಹಳ್ಳಿ, ಅಜ್ಜನಗುಡಿ, ಸಾಣೀಕೆರೆ, ಚೌಳೂರು, ದೊಡ್ಡಉಳ್ಳಾರ್ತಿ, ಹಿರೇಕೆರೆ ಪ್ರದೇಶದಲ್ಲಿ ಗೋಶಾಲೆ ತೆರೆಯಲಾಗಿದೆ. ಒಂದು ಜಾನುವರಿಗೆ ೭೦ರೂನಂತೆ ಖರ್ಚು ಮಾಡಲು ಸರ್ಕಾರದ ನಿರ್ದೇಶನವಿದೆ, ಜೊತೆಗೆ ೧೮೦ ದಿನಗಳವರೆಗೆ ಗೋಶಾಲೆ ನಡೆಸಲು ಅವಕಾಶವಿದೆ. ಇಲ್ಲಿನ ಪರಿಸ್ಥಿತಿಗೆ ಈಗಾಗಲೇ ೮ ತಿಂಗಳು

ನಿರ್ವಹಿಸಲಾಗಿದೆ. ಮೇವು ಸರಬರಾಜುದಾರರಿಗೆ ೧೮ ಕೋಟಿ ರೂ. ಬಾಕಿ ಉಳಿಸಿಕೊಂಡಿದ್ದೇವೆ. ಸಂಬಂಧಪಟ್ಟ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿ ಹಣ ಬಿಡುಗಡೆಗೆ ಕಾಯುತ್ತಿದ್ದೇವೆ ಎಂದರು.

**ಸಾರಿಗೆ ಸೌಲಭ್ಯಕ್ಕೆ ಆಗ್ರಹಿಸಿ ರೈತರ ಪ್ರತಿಭಟನೆ:- ೧೧/೦೮/೨೦೧೭**

ಸಾರಿಗೆ ಸೌಲಭ್ಯಕ್ಕೆ ಆಗ್ರಹಿಸಿ ಚನ್ನಗಿರಿ ತಾಲೂಕಿನ ರೈತ ಸಂಘದ ಪದಾಧಿಕಾರಿಗಳು ಕೊರಟಗೆರೆ ಹಾಗೂ ಸುತ್ತಮುತ್ತಲಿನ ಗ್ರಾಮಗಳ ರೈತರು, ವಿದ್ಯಾರ್ಥಿಗಳು ತಾಲೂಕಿನ ದುಮ್ಮಿ ಬಳಿಯ ರಾಷ್ಟ್ರೀಯ ಹೆದ್ದಾರಿಯಲ್ಲಿ ಕೆ.ಎಸ್.ಆರ್.ಟಿ.ಸಿ.ಬಸ್ಸುಗಳನ್ನು ತಡೆದು ಪ್ರತಿಭಟನೆ ಮಾಡಿದರು.

ಸಾರಿಗೆ ಸಂಸ್ಥೆ ಕೇವಲ ಪಟ್ಟಣ ಪ್ರದೇಶದ ಜನರನ್ನು ಗಮನದಲ್ಲಿಟ್ಟುಕೊಂಡು ವಾಹನಗಳನ್ನು ಓಡಿಸುತ್ತಿವೆ. ಗ್ರಾಮೀಣ ಭಾಗದ ವಿದ್ಯಾರ್ಥಿಗಳು ಹಾಗೂ ಸಾರ್ವಜನಿಕರು ತೊಂದರೆ ಅನುಭವಿಸುವಂತಾಗಿದೆ ಎಂದು ದೂರಿದರು. ಚನ್ನಗಿರಿ ತಾಲೂಕಿನ ಕೊರಟಗೆರೆ, ಚಿಕ್ಕಗಂಗೂರು, ಹಿರೆಗಂಗೂರು, ಗರಗ, ಗುಳ್ಳಹಳ್ಳಿ, ಸೇರಿದಂತೆ ಹತ್ತಕ್ಕೂ ಹೆಚ್ಚು ಹಳ್ಳಿಗಳಿಗೆ ಸಾರಿಗೆ ಸೌಲಭ್ಯವಿಲ್ಲ. ಈ ಗ್ರಾಮದ ಮಕ್ಕಳು ಪ್ರೌಢಶಾಲೆಗೆ ತಮ್ಮ ಶಿಕ್ಷಣವನ್ನು ಮೊಟಕುಗೊಳಿಸುತ್ತಿದ್ದಾರೆ, ಎಂದು ಅತಂಕ ವ್ಯಕ್ತಪಡಿಸಿದರು. ಶಾಲಾ ಕಾಲೇಜುಗಳಿಗೆ ಹೋಗುವ ವಿದ್ಯಾರ್ಥಿಗಳು ಹತ್ತಾರು ಕಿ.ಮೀ. ದೂರದ ಗ್ರಾಮಗಳಿಂದ, ಚಿತ್ರದುರ್ಗ-ಶಿವಮೊಗ್ಗ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡ ದುಮ್ಮಿ ಗ್ರಾಮಕ್ಕೆ ಬರಬೇಕು. ಯಾವುದೇ ಬಸ್ಸುಗಳಿಲ್ಲ, ಆಟೋಗಳಿಲ್ಲದಿದ್ದರೆ ಕಾಲ್ನಡಿಗೆಯಲ್ಲೇ ಬರುವ ಸ್ಥಿತಿ ಬಂದೊದಗಿದೆ. ಈ ಬಗ್ಗೆ ಚಿತ್ರದುರ್ಗ, ದಾವಣಗೆರೆ ಡಿಪೋಗಳಿಗೆ ಹಲವು ಬಾರಿ ಮನವಿ ಸಲ್ಲಿಸಿದರೂ ಪ್ರಯೋಜನವಾಗಿಲ್ಲ. ಹೊಳಲ್ಕೆರೆಯಿಂದ ಮಲ್ಲಾಡಿಹಳ್ಳಿ, ದುಮ್ಮಿ, ಕೊರಟಗೆರೆ, ಚಿಕ್ಕಗಂಗೂರು, ಹಿರೇಗಂಗೂರು, ನೀತಗೆರೆ, ನುಗ್ಗೆಹಳ್ಳಿ, ದೇವರಹಳ್ಳಿ, ಗರಗ, ಗುಳ್ಳಹಳ್ಳಿ ಮೂಲಕ ಚನ್ನಗಿರಿ ಮಾರ್ಗ ಬಸ್ ಬಿಡಬೇಕೆಂದು ಒತ್ತಾಯಿಸಿದರು. ಸ್ಥಳಕ್ಕೆ ಅಗಮಿಸಿದ ಸಾರಿಗೆ ಅಧಿಕಾರಿಗಳು ರೈತರ ಹಾಗೂ ವಿದ್ಯಾರ್ಥಿಗಳ ಮನವಿ ಸ್ವೀಕರಿಸಿ ಇನ್ನೆರಡು ದಿನಗಳಲ್ಲಿ ಸರ್ಕಾರಿ ಬಸ್ಸಿನ ಸೌಲಭ್ಯ ಒದಗಿಸುವದಾಗಿ ಭರವಸೆ ನೀಡಿದರು.

ಪ್ರತಿಭಟನೆಯಲ್ಲಿ ಜಿಲ್ಲಾ ರೈತ ಸಂಘದ ಅಧ್ಯಕ್ಷ ನಾಗೇನಹಳ್ಳಿ ಹಾಲಪ್ಪ, ಚನ್ನಗಿರಿ ತಾಲೂಕು ರೈತ ಸಂಘದ ಅಧ್ಯಕ್ಷ ಲಕ್ಷ್ಮೀಪತಿ, ನೂರಾರು ರೈತರು ಹಾಗೂ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

**ರೈತರ ಸಮಸ್ಯೆಗೆ ಸ್ಪಂದಿಸದಿದ್ದರೆ ಚುನಾವಣೆ ಬಹಿಷ್ಕಾರ : ರೈತ ಸಂಘದ ಪ್ರತಿಭಟನೆ:- ೨೧/೦೮/೨೦೧೭**

ಚಿತ್ರದುರ್ಗ ಜಿಲ್ಲೆಯಲ್ಲಿ ರೈತ ಸಂಘ ಹಾಗೂ ಹಸಿರು ಸೇನೆ, ಅಖಿಲ ಭಾರತ ಕಿಸಾನ್ ಸಭಾಗಳ ಕಾರ್ಯಕರ್ತರು ಸರ್ಕಾರ ವಿರುದ್ಧ ಪ್ರತಿಭಟನೆ ಮಾಡಿ, ರೈತರ ಸಮಸ್ಯೆಗೆ ಸ್ಪಂದಿಸದಿದ್ದರೆ ಮುಂಬರುವ ವಿಧಾನಸಭೆ, ಲೋಕಸಭೆ ಚುನಾವಣೆಯ ಮತದಾನವನ್ನು ಬಹಿಷ್ಕರಿಸಲಾಗುವುದೆಂದು ರೈತ ಮುಖಂಡರು ಎಚ್ಚರಿಸಿದರು.

ಅನ್ನದಾತರ ಸಾಲ ಮನ್ನಾ, ಡಾ.ಎಂ.ಎಸ್. ಸ್ವಾಮಿನಾಥನ್ ವರದಿ ಜಾರಿಗೆಗೆ ಆಗ್ರಹಿಸಿದರು. ಇಷ್ಟು ವರ್ಷ ಅಧಿಕಾರ ನಡೆಸಿದ ಪಕ್ಷಗಳು ರೈತರಿಗೆ ಸ್ಪಂದಿಸುತ್ತಿಲ್ಲ. ಎಲ್ಲಾ ಪಕ್ಷಗಳಿಗೆ ಕೊನೆ

ಅವಕಾಶ ನೀಡಲಾಗಿದೆ. ಸಾಲ ಮಾಡಿ ಬೆಳೆದು ದೇಶಕ್ಕೆ ಅನ್ನಕೊಡುವ ರೈತರ ಸಾಲ ಮನ್ನಾ ಮಾಡಿ ಎಂದು ಕೇಳುತ್ತಿರುವುದನ್ನು, ಸರ್ಕಾರಗಳುಪ್ಯಾಷನ್ ಎಂದು ಗೇಲಿ ಮಾಡುತ್ತಿವೆ. ರಂಗುರಂಗಿನ ಯೋಜನೆಗಳನ್ನು ಬಿಟ್ಟು, ಮೊದಲು ರೈತರ ಸಾಲ ಮನ್ನಾ ಮಾಡಿ, ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿಪಡಿಸಬೇಕೆಂದು ಒತ್ತಾಯಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು.[೬೩] ಮನವಿ ಸ್ವೀಕರಿಸಿದ ಜಿಲ್ಲಾಧಿಕಾರಿಗಳು ಸರ್ಕಾರದ ಗಮನಕ್ಕೆ ತಂದು ಸಮಸ್ಯೆಗಳನ್ನು ಬಗೆಹರಿಸುವುದಾಗಿ ಭರವಸೆ ನೀಡಿದರು.

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ನುಲೇನೂರು ಶಂಕರಪ್ಪ, ರೈತ ಮುಖಂಡರುಗಳಾದ ಉಳ್ಳಾರ್ತಿ ಕರಿಯಣ್ಣ, ಬಸ್ತಿಹಳ್ಳಿ ಜಿ. ಸುರೇಶ್‌ಬಾಬು, ಕೇಶವಮೂರ್ತಿ, ಶಿವರುದ್ರಪ್ಪ, ವಿಜಯ್‌ಕುಮಾರ್, ಮುಂತಾದ ನೂರಾರು ಪಾಲ್ಗೊಂಡಿದ್ದರು.

**ಸಮರ್ಪಕ ವಿದ್ಯುತ್‌ಗಾಗಿ ಒತ್ತಾಯಿಸಿ ಮೊಳಕಾಲ್ಮೂರಿನ ರೈತರ ಪ್ರತಿಭಟನೆ:–**

**೨೧/೦೮/೨೦೧೭**

ಮೊಳಕಾಲ್ಮೂರಿನಲ್ಲಿ ಆಕ್ರಮ–ಸಕ್ರಮದಡಿ ಹಣ ಸಂದಾಯ ಮಾಡಿರುವ ರೈತರಿಗೆ ಶೀಘ್ರವೇ ಟಿ.ಸಿ. ಮತ್ತು ವಿದ್ಯುತ್ ಸಂಪರ್ಕ ಕಲ್ಪಿಸಬೇಕೆಂದು ಆಗ್ರಹಿಸಿ, ರೈತ ಸಂಘದ ಪದಾಧಿಕಾರಿಗಳು ಬೆಸ್ಕಾಂ ಕಛೇರಿಯ ಎದುರು ಪ್ರತಿಭಟನೆ ನಡೆಸಿದರು.

ಕರೆಂಟ್ ಕದಿಯಬೇಡಿ, ನೀವು ಹಣ ಕಟ್ಟಿದರೆ ತಕ್ಷಣ ವಿದ್ಯುತ್ ಸಂಪರ್ಕ ಕಲ್ಪಿಸಿಕೊಡುತ್ತೇವೆಂದು, ಹೇಳಿ ಹಣ ಕಟ್ಟಿಸಿಕೊಂಡು ೨–೩ ವರ್ಷವಾದರೂ ವಿದ್ಯುತ್ ಸಂಪರ್ಕ ಕಲ್ಪಿಸಿಕೊಟ್ಟಿಲ್ಲ. ಈ ಬಗ್ಗೆ ಅಧಿಕಾರಿಗಳನ್ನು ವಿಚಾರಿಸಿದರೆ ಹಾರಿಕೆ ಉತ್ತರ ನೀಡುತ್ತಾರೆ. ಇವರ ನಿರ್ಲಕ್ಷದಿಂದ ಬೆಳೆಗಳು ಒಣಗಲಾರಂಭಿಸಿವೆ. ಭೀಕರ ಬರದಿಂದ ತೋಟಗಾರಿಕೆ ಮತ್ತು ವಾಣಿಜ್ಯ ಬೆಳೆಗಳು ಒಣಗಿವೆ. ಅಲ್ಪಸ್ವಲ್ಪ ನೀರಲ್ಲಿ ತರಕಾರಿ ಬೆಳೆದುಕೊಳ್ಳುತ್ತಿದ್ದು, ಇದಕ್ಕೂ ಬೆಸ್ಕಾಂ ಸಿಬ್ಬಂದಿ ಕಲ್ಲು ಹಾಕುತ್ತಿದ್ದಾರೆ. ಕೂಡಲೇ ವಿದ್ಯುತ್ ಸಂಪರ್ಕ ಕಲ್ಪಿಸದಿದ್ದರೆ ಉಗ್ರ ಹೋರಾಟ ನಡೆಸಬೇಕಾಗುತ್ತದೆ ಎಂದು ಎಚ್ಚರಿಸಿದರು. ಪ್ರತಿಭಟನೆಯಲ್ಲಿ ನೂರಾರು ರೈತರು ಪಾಲ್ಗೊಂಡಿದ್ದರು.

**ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ರೈತರ ಪ್ರತಿಭಟನೆ:– ೨೧/೦೮/೨೦೧೭**

ಚಿತ್ರದುರ್ಗ ನಗರದಲ್ಲಿ ಜಿಲ್ಲಾಧಿಕಾರಿ ಕಚೇರಿಯ ಮುಂದೆ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಇನ್ನೂರಕ್ಕಿಂತ ಹೆಚ್ಚು ರೈತರ ಸಾಲಮನ್ನಾ, ಡಾ. ಎಂ.ಎಸ್. ಸ್ವಾಮಿನಾಥನ್ ವರದಿ ಜಾರಿಗೆಗೊಳಿಸುವುದು ಸೇರಿದಂತೆ ಹಲವಾರು ಬೇಡಿಕೆಗಳನ್ನು, ರಾಜ್ಯ ಮತ್ತು ಕೇಂದ್ರ ಸರ್ಕಾರ ಈಡೇರಿಸುವಂತೆ ಒತ್ತಾಯಿಸಿ ಆಗಸ್ಟ್ ೨೧ ೨೦೧೭ರಂದು ಪ್ರತಿಭಟನೆ ನಡೆಸಿದರು.

ಮೂರ್‍ನಾಲ್ಕು ವರ್ಷಗಳಿಂದ ಸತತ ಬರಗಾಲ ಎದುರಿಸುತ್ತಿರುವ ರೈತರು ಕೃಷಿಗಾಗಿ ಮಾಡಿದ ಸಾಲವನ್ನು ತೀರಿಸಲಾಗದೆ ಮರ್ಯಾದೆಗೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಸಾಲ ಮನ್ನಾ ಮಾಡದೆ ದೇಶದ ಪ್ರಧಾನಿ ನರೇಂದ್ರ ಮೋದಿ ಬಂಡವಾಳ ಶಾಹಿಗಳ,

ಉದ್ಯಮಿಗಳ, ಕರ್ಪೊರೇಟರ್‌ಗಳ ಹನ್ನೆರಡು ಲಕ್ಷ ಕೋಟಿ ರೂ.ಗಳ ಸಾಲ ಮನ್ನಾ ಮಾಡಿದ್ದಾರೆ. ಮೊಸಳೆ ಕಣ್ಣೀರು ಸುರಿಸುತ್ತಿರುವ ಪ್ರಧಾನಿ ಮೋದಿಗೆ ರೈತರ ಸಂಕಷ್ಟ ಏಕೆ ಅರ್ಥವಾಗುತ್ತಿಲ್ಲವೆಂದು ರೈತ ಮುಖಂಡರು ಆಕ್ರೋಶ ವ್ಯಕ್ತಪಡಿಸಿದರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ನುಲೇನೂರು ಶಂಕರಪ್ಪರವರು ಸಾಲ ಮಾಡಿ ಬೆಳೆದು ದೇಶಕ್ಕೆ ಅನ್ನ ಕೊಡುವ ರೈತನ ಸಾಲ ಮನ್ನಾ ಮಾಡಿ ಎಂದು ಕೇಳುತ್ತಿರುವುದನ್ನು, ಆಳುವ ಸರ್ಕಾರಗಳು ಪ್ಯಾಷನ್ ಎಂದು ಗೇಲಿ ಮಾಡುತ್ತಿವೆ. ಸರ್ಕಾರ ಬೂಟಾಟಿಕೆ ಯೋಜನೆಗಳನ್ನು ಬಿಟ್ಟು ಮೊದಲು ರೈತರ ಸಾಲಮನ್ನಾ ಮಾಡಿ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನೀಡುವಂತೆ ಒತ್ತಾಯಿಸಿದರು. ರೈತರು ಸಾಲ ಮಾಡಿ ಹಣ ತಂದು ಫಸಲ್ ಭೀಮಾ ಯೋಜನೆಗೆ ಹಣ ಕಟ್ಟಿದ್ದಾರೆ. ರೈತರನ್ನು ಕಡೆಗಾಣಿಸಿದರೆ ೨೦೧೮-೧೯ರಲ್ಲಿ ನಡೆಯುವ ವಿಧಾನಸಭೆ ಮತ್ತು ಲೋಕಸಭೆ ಚುನಾವಣೆಯಲ್ಲಿ ತಕ್ಕ ಉತ್ತರ ಕೊಡುವ ಮೂಲಕ ಸರಿಯಾದ ಪಾಠ ಕಲಿಸಲಾಗುವುದು. ಅರವತ್ತು ವರ್ಷವಾಗಿರುವ ರೈತರಿಗೆ ಮಾಸಿಕ ಐದು ಸಾವಿರ ರೂಪಾಯಿ, ಕಿಸಾನ್ ಪಿಂಚಣಿ ನೀಡಿ ಸ್ವಾಮಿನಾಥನ್ ವರದಿಯನ್ನು ಜಾರಿಗೆ ತರಬೇಕೆಂದು ಆಗ್ರಹಿಸಿದರು.[೬೪]

ರೈತ ಸಂಘದ ರಾಜ್ಯ ಉಪಾಧ್ಯಕ್ಷರಾದ ಕೆ.ಪಿ. ಭೂತಯ್ಯರವರು ಮಾತನಾಡಿ ಬರಗಾಲವು ಸುಮಾರು ೪೦ ವರ್ಷಗಳ ಹಿಂದಿನ ಭೀಕರತೆಯನ್ನು ನೆನೆಪಿಸುವಂತಿದೆ. ಬ್ಯಾಂಕ್ ಮತ್ತು ಖಾಸಗಿಯಾಗಿ ರೈತರು ಕೃಷಿಗಾಗಿ ಸಾಲ ಮಾಡಿರುವುದಲ್ಲದೆ ಬಂಡವಾಳದ ಶ್ರಮವನ್ನು ಕಳೆದುಕೊಂಡ ಹೆಂಡತಿ ಮತ್ತು ಮಕ್ಕಳ ಮೇಲಿನ ಆಭರಣಗಳನ್ನು ಒತ್ತೆಯಿಟ್ಟು ನರಳುತ್ತಿದ್ದಾನೆ. ಇಷ್ಟಾದರೂ ಎರಡು ಸರ್ಕಾರಗಳು ರೈತರನ್ನು ನಿರ್ಲಕ್ಷಿಸುತ್ತಿರುವುದು ನೋವಿನ ಸಂಗತಿ ಎಂದು ಬೇಸರ ವ್ಯಕ್ತಪಡಿಸಿದರು.

ಜಿಲ್ಲೆಯ ವಿವಿಧ ತಾಲೂಕುಗಳಿಂದ ಆಗಮಿಸಿದ್ದ ರೈತರು ನಗರದ ಗಾಂಧಿ ವೃತ್ತದಿಂದ ಮೆರವಣಿಗೆಯಲ್ಲಿ ಬಂದು ಜಿಲ್ಲಾಧಿಕಾರಿ ಕಚೇರಿ ಮುಂಭಾಗ ಸಭೆ ಮಾಡಿದರು. ಒಂದು ಹಂತದಲ್ಲಿ ಮನವಿ ಸ್ವೀಕರಿಸಲು ಸ್ಥಳಕ್ಕೆ ಜಿಲ್ಲಾಧಿಕಾರಿಗಳು ಆಗಮಿಸಬೇಕೆಂದು ಕಾರ್ಯಕರ್ತರು ಪಟ್ಟು ಹಿಡಿದರು. ಜಿಲ್ಲಾಧಿಕಾರಿ ಜ್ಯೋತ್ಸ್ನಾ ಬರುವುದು ತಡವಾದ್ದರಿಂದ, ರೊಚ್ಚಿಗೆದ್ದ ರೈತರು ಜಿಲ್ಲಾಧಿಕಾರಿ ಕಚೇರಿಗೆ ಮುತ್ತಿಗೆ ಹಾಕಲು ಯತ್ನಿಸಿದರು. ಈ ಸಂದರ್ಭದಲ್ಲಿ ರೈತರು ಮತ್ತು ಪೊಲೀಸರ ನಡುವೆ ಮಾತಿನ ಚಕಮಕಿ ನಡೆಯಿತು. ಅನ್ನದಾತರ ಸಮಸ್ಯೆಯನ್ನು ಆಲಿಸುವುದು ಬಿಟ್ಟು ಜಿಲ್ಲಾಧಿಕಾರಿಗೆ ಬೇರೆ ಏನು ಕೆಲಸವಿದೆ? ಒಕ್ಕಲುತನ ಮಾಡುವುದು ಬಿಟ್ಟು ಎಲ್ಲರೂ ಧಾವಿಸಿ ಬಂದಿದ್ದೇವೆ. ಜಿಲ್ಲಾಧಿಕಾರಿಗಳೆಂದರೆ ದಂತಗೋಪುರದಲ್ಲಿ ಕುಳಿತು ಕಾರ್ಯನಿರ್ವಹಿಸುವುದಲ್ಲ, ಸ್ಥಳಕ್ಕೆ ಆಗಮಿಸಿ ಮನವಿ ಸ್ವೀಕರಿಸಬೇಕು. ಅವರು ಬರುವ ತನಕ ಜಾಗ ಬಿಟ್ಟು ಕದಲುವುದಿಲ್ಲವೆಂದು ಪ್ರತಿಭಟನೆ ಆರಂಭಿಸಿದರು. ಇದರಿಂದಾಗಿ ಕೆಲ ಕಾಲ ಉದ್ವಿಗ್ನ ವಾತಾವರಣ ನಿರ್ಮಾಣವಾಗಿದ್ದರಿಂದ ಜಿಲ್ಲಾಧಿಕಾರಿಗಳು ಆಗಮಿಸಿ ಮನವಿ ಪಡೆದರು ಹಾಗಾಗಿ ವಾತಾವರಣ ತಿಳಿಯಾಯಿತು.

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ನುಲೇನೂರು ಶಂಕರಪ್ಪ, ರಾಜ್ಯ ಉಪಾಧ್ಯಕ್ಷರಾದ ಕೆ.ಪಿ. ಭೂತಯ್ಯ, ತಾಲ್ಲೂಕು ಅಧ್ಯಕ್ಷರಾದ ಬಸ್ತಿಹಳ್ಳಿ, ಜಿ. ಸುರೇಶ್‌ಬಾಬು, ರೈತ ಮುಖಂಡರುಗಳಾದ ಹೊರಕೇರಪ್ಪ, ಕೇಶವಮೂರ್ತಿ, ಸತ್ಯಕೀರ್ತಿ, ಸಿ.ವೈ. ಶಿವರುದ್ರಪ್ಪ, ವಿಜಯಕುಮಾರ್ ಮುಂತಾದವರು ಪಾಲ್ಗೊಂಡಿದ್ದರು.

**ಭದ್ರಾ ಮೇಲ್ದಂಡೆ ಯೋಜನೆಯ ಹಳೆಯ ಮಾರ್ಗ ಮುಂದುವರೆಸುವಂತೆ ರೈತರ ಪ್ರತಿಭಟನೆ:-೧೮/೧೨/೨೦೧೭**

ಚಿತ್ರದುರ್ಗ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಮತ್ತು ಜಿಲ್ಲಾ ನೀರಾವರಿ ಹೋರಾಟ ಸಮಿತಿಯ ವತಿಯಿಂದ ಆರುನೂರಕ್ಕಿಂತ ಹೆಚ್ಚು ರೈತರು, ಭದ್ರ ಮೇಲ್ದಂಡೆ ಯೋಜನೆಗೆ ಮಾರ್ಗ ಬದಲಿಸಲು ರಚಿಸಿರುವ ಪರಿಶೀಲನ ಸಮಿತಿ ವಿಸರ್ಜಿಸಿ, ಹಳೆಯ ಮಾರ್ಗವನ್ನೇ ಮುಂದುವರಿಸಬೇಕೆಂದು ಒತ್ತಾಯಿಸಿ ಡಿಸೆಂಬರ್ ೧೮ ೨೦೧೭ರಂದು ಪ್ರತಿಭಟನೆ ನಡೆಸಿದರು.

ನಗರದ ಪ್ರವಾಸಿ ಮಂದಿರದಿಂದ ಮೆರವಣಿಗೆಯ ಮೂಲಕ ಜಿಲ್ಲಾಧಿಕಾರಿಯ ಕಚೇರಿಗೆ ಬಂದ ರೈತ ಮುಖಂಡರು ಮತ್ತು ಜಿಲ್ಲಾ ನೀರಾವರಿ ಹೋರಾಟ ಸಮಿತಿಯ ಸದಸ್ಯರು ಹಾಗೂ ಕೆರೆ ಅಚ್ಚುಕಟ್ಟುದಾರರು ಬೇಡಿಕೆಯನ್ನು ಈಡೇರಿಸುವಂತೆ ಒತ್ತಾಯಿಸಿದರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಟಿ. ನುಲೇನೂರು ಶಂಕರಪ್ಪ ಭದ್ರಾ ಮೇಲ್ದಂಡೆ ಯೋಜನೆಯಡಿ ಮೊದಲ ಕಾತ್ರಾಳ್ ಕೆರೆಯಿಂದ, ಸಂಗೇನಹಳ್ಳಿ ಕೆರೆಯ ಮೂಲಕ ಜಗಳೂರಿಗೆ ನೀರು ಹರಿಸುವ ಯೋಜನೆಯಾಗಿದ್ದು, ಈ ಯೋಜನೆಯನ್ನು ನೀರಾವರಿ ತಜ್ಞ ಎನ್.ಡಿ. ದೇಸಾಯಿ ರೂಪಿಸಿದ್ದರು. ಈ ಯೋಜನೆಯಿಂದ ಜಗಳೂರಿಗೆ ನೀರು ಹರಿಯುವದಿಲ್ಲವೆಂದು ಅಲ್ಲಿನ ರೈತರು ಮುಖ್ಯಮಂತ್ರಿಗಳ ಮೇಲೆ ಒತ್ತಡ ಹಾಕಿ ಮಾರ್ಗ ಬದಲಿಸಲು ಒತ್ತಾಯಿಸಿದ್ದಾರೆ. ಅದರಂತೆ ಬೆಳಗಟ್ಟ ಮಾರ್ಗವಾಗಿ ರಾಷ್ಟ್ರೀಯ ಹೆದ್ದಾರಿ ದಾಟಿ ಸಂಗೇನಹಳ್ಳಿ ಕೆರೆಗೆ ನೀರು ತುಂಬಿಸಲು ಕೇಳಿದ್ದಾರೆ. ಇದರಿಂದ ಕಾತ್ರಾಳ್ ಕೆರೆಗೆ ನೀರು ಬರುವುದಿಲ್ಲ, ಚಿತ್ರದುರ್ಗ ರೈತರಿಗೆ ನಷ್ಟವಾಗುತ್ತದೆ. ಹಾಗಾಗಿ ಮಾರ್ಗ ಬದಲಾಯಿಸುವದನ್ನು ಕೈಬಿಡಬೇಕೆಂದು ಒತ್ತಾಯಿಸಿದರು.[೨೨]

ಜಿಲ್ಲಾ ನೀರಾವರಿ ಹೋರಾಟ ಸಮಿತಿಯ ಸಂಚಾಲಕರಾದ ಚಿಕ್ಕಪ್ಪನಹಳ್ಳಿ ಷಣ್ಮುಖಪ್ಪರವರು ಮಾತನಾಡಿ ಭದ್ರಾ ಮೇಲ್ದಂಡೆ ಯೋಜನೆಯಲ್ಲಿ ನೀರು ಹರಿಯುವ ಮಾರ್ಗ ರೂಪಿಸಿದ್ದೇ ಎನ್.ಡಿ. ದೇಸಾಯಿರವರು. ಹೊಸದಾಗಿ ಪರಿಶೀಲನಾ ಸಮಿತಿ ರಚಿಸಿರುವುದು ಸಮಂಜಸವಲ್ಲ. ಈ ಹಂತದಲ್ಲಿ ಸಮಿತಿ ರಚನೆ ಹಾಗೂ ವರದಿ ನೀಡುವದರಿಂದ ಗೊಂದಲ ಸೃಷ್ಟಿಯಾಗುತ್ತದೆ. ಇದರಿಂದಾಗಿ ಯೋಜನೆ ಮತ್ತಷ್ಟು ವಿಳಂಬವಾಗುತ್ತದೆ. ಒಂದೊಮ್ಮೆ ಸಮಿತಿ ವರದಿ ನೀಡಿ ವ್ಯತ್ಯಾಸವಾದರೆ ಭದ್ರ ಮೇಲ್ದಂಡೆ ಯೋಜನೆಗಾಗಿ ಹೋರಾಟ ಆರಂಭಿಸಿದ ಚಿತ್ರದುರ್ಗ ತಾಲೂಕಿಗೆ ನೀರು ಸಿಗದಂತಾಗುತ್ತದೆ. ಈ ಸಮಿತಿಯನ್ನು ವಿಸರ್ಜಿಸಿ ಹಳೇ ಮಾರ್ಗವನ್ನೇ ಮುಂದುವರಿಸಬೇಕೆಂದು ಪ್ರತಿಭಟಿಸಿದರು. ಈ ಸಂಬಂಧವಾಗಿ ರೈತ ಸಂಘ ಹಾಗೂ ನೀರಾವರಿ

ಹೋರಾಟ ಸಮಿತಿ ಕಾತ್ರಾಳು ಕೆರೆ ಅಚ್ಚುಕಟ್ಟುದಾರರು ಸೇರಿ ಶೀಘ್ರದಲ್ಲೇ ಮುಖ್ಯಮಂತ್ರಿ ಬಳಿ ನಿಯೋಗ ಹೋಗಿ ಸಮಿತಿ ವಿಸರ್ಜನೆಗೆ ಮನವಿ ಮಾಡಬೇಕು. ಜಿಲ್ಲಾ ಉಸ್ತುವಾರಿ ಸಚಿವರಾದ ಎಚ್. ಆಂಜನೇಯರವರು ಮುತುವರ್ಜಿ ವಹಿಸಿ ಮಾರ್ಗ ಬದಲಾಗದಂತೆ ನೋಡಿಕೊಳ್ಳಬೇಕೆಂದರು. ಜಗಳೂರು ಪ್ರಾಂತ್ಯಕ್ಕೆ ನೀರು ಹರಿಸಲು ಜಿಲ್ಲಾ ನೀರಾವರಿ ಹೋರಾಟ ಸಮಿತಿಯು, ಜಗಳೂರು ತಾಲೂಕಿನ ಜನರ ಪರವಾಗಿ ನಿಲ್ಲುತ್ತದೆ. ಯೋಜನೆ ಬದಲಿಸಿದರೆ ಪ್ರತಿಭಟನೆ ಅನಿವಾರ್ಯವೆಂದು ಎಚ್ಚರಿಸಿದರು.

ಪ್ರತಿಭಟನೆಯಲ್ಲಿ ತಾಲೂಕು ರೈತ ಸಂಘದ ಅಧ್ಯಕ್ಷ ಬಸ್ತಿಹಳ್ಳಿ ಸುರೇಶ್, ರೈತ ಮುಖಂಡರಾದ ಕೆ.ಪಿ. ಭೂತಯ್ಯ, ರುದ್ರಮುನಿ, ನುಲೇನೂರು ಶಂಕರಪ್ಪ, ಹಂಪಯ್ಯನಮಾಳಿಗೆ, ಧನಂಜಯ, ಕೆ.ಆರ್. ದಯಾನಂದ್, ಚಿಕ್ಕಪ್ಪನಹಳ್ಳಿ, ಷಣ್ಮುಖ ಮುಂತಾದ ನೂರಾರು ರೈತರು ಪಲ್ಗೊಂಡಿದ್ದರು.

**ತೊಗರಿ ಬೆಳೆ ನಷ್ಟ ಪರಿಹಾರ ನೀಡಲು ಆಗ್ರಹಿಸಿ ರೈತರ ಪ್ರತಿಭಟನೆ:– ೧೦/೦೧/೨೦೧೮**

ಚಳ್ಳಕೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಕೆ.ಪಿ. ಭೂತಯ್ಯರವರ ನೇತೃತ್ವದಲ್ಲಿ, ೮೦ಕ್ಕಿಂತ ಹೆಚ್ಚು ರೈತರು ಮುಂಗಾರು ಬಿತ್ತನೆಯ ತೊಗರಿಬೆಳೆ ನಷ್ಟಕ್ಕೆ ಪ್ರಕೃತಿ ವಿಕೋಪ ಯೋಜನೆಯಡಿ, ರೈತರಿಗೆ ಪರಿಹಾರ ನೀಡಬೇಕೆಂದು ಒತ್ತಾಯಿಸಿ ಜನವರಿ ೧೦ ೨೦೧೮ರಂದು ಪ್ರತಿಭಟನೆ ಮಾಡಿದರು.

ರೈತ ಸಂಘದ ಕಾರ್ಯಕರ್ತರು ನಗರದ ತಾಲೂಕಿನ ತಹಶೀಲ್ದಾರ್ ಕಚೇರಿಯ ಮುಂದೆ ಪ್ರತಿಭಟನೆ ಮಾಡಿ ತಹಶೀಲ್ದಾರ್‌ರಾದ ಟಿ.ಸಿ. ಕಾಂತರಾಜ್‌ರವರಿಗೆ ಮನವಿ ಸಲ್ಲಿಸಿದರು. ನಂತರ ಮಾತನಾಡಿದ ಕೆ.ಪಿ. ಭೂತಯ್ಯರವರು ತಾಲೂಕಿನ ೪೫೦೦ ಹೆಕ್ಟೇರ್ ಪ್ರದೇಶದಲ್ಲಿ ತೊಗರಿ ಬೆಳೆಯಲಾಗಿದೆ ಹವಮಾನ ವೈಪರೀತ್ಯದಿಂದಾಗಿ ತೊಗರಿ ಬೆಳೆ, ಹೂ, ಕಾಯಿ ಕಟ್ಟಿಲ್ಲ. ಇದರಿಂದ ರೈತರು ಸಾಲಗಾರರಾಗಿದ್ದಾರೆ. ಕೇಂದ್ರ ಮತ್ತು ರಾಜ್ಯ ಸರ್ಕಾರ ರೈತರ ಅನುಕೂಲಕ್ಕೆ ಯಾವುದೇ ಯೋಜನೆ ಜಾರಿ ಮಾಡಿಲ್ಲ. ಕೃಷಿ ಉತ್ಪನ್ನಕ್ಕೆ ಬೆಂಬಲ ಬೆಲೆ ಸಿಗುತ್ತಿಲ್ಲ. ಕೂಡಲೇ ತೊಗರಿ ಬೆಳೆ ನಷ್ಟವಾಗಿರುವ ರೈತರಿಗೆ ಬೆಳೆವಿಮೆ ಯೋಜನೆಯಡಿ ಧನ ಸಹಾಯ ಮಾಡಬೇಕು. ೨೦೧೬–೧೭ನೇ ಸಾಲಿನ ಬೆಳೆ ನಷ್ಟ ಪರಿಹಾರದಲ್ಲಿ ರೈತರಿಗೆ ಇನ್ನೂ ಶೇ. ೩೦ರಷ್ಟು ಪರಿಹಾರ ಸಿಗಬೇಕಿದ್ದು ಸಂಬಂಧಪಟ್ಟ ಅಧಿಕಾರಿಗಳು ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿದರು.[೬೬]

ತಹಶೀಲ್ದಾರ್ ಟಿ.ಸಿ. ಕಾರಂತರಾಜ್ ಮನವಿ ಸ್ವೀಕರಿಸಿ ಮಾತನಾಡಿ, ಈ ಮನವಿಯನ್ನು ಜಿಲ್ಲಾಧಿಕಾರಿಗಳ ಮೂಲಕ ಸರ್ಕಾರದ ಗಮನಸೆಳೆದು ಬೆಳೆವಿಮೆ ಸಮಸ್ಯೆಯನ್ನು ಬಗೆಹರಿಸುವುದಾಗಿ ತಿಳಿಸಿದರು. ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.

ಪ್ರತಿಭಟನೆಯಲ್ಲಿ ಕೆ.ಪಿ. ಭೂತಯ್ಯ, ಆರ್. ರಾಜಪ್ಪ, ಶ್ರೀನಿವಾಸ್‌ರೆಡ್ಡಿ, ಬಿ.ಟಿ. ನಾರಾಯಣಪ್ಪ, ಜಿ.ಹೆಚ್. ತಿಪ್ಪೇಸ್ವಾಮಿ, ಎಸ್. ಸೂರಪ್ಪ, ಡಿ.ಬಿ. ಮಂಜುನಾಥ್, ಬಿ.ಎಸ್. ಮುರುಳಿ ವೆಂಕಟೇಶ್ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಮರಳಿನ ಟೆಂಡರ್ ರದ್ದತಿಗಾಗಿ ರೈತರ ಪ್ರತಿಭಟನೆ:- ೧೬/೦೧/೨೦೧೮**

ಚಿತ್ರದುರ್ಗ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಮುನ್ನೂರಕ್ಕಿಂತ ಹೆಚ್ಚು ರೈತರು ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು ತಾಲೂಕುಗಳಲ್ಲಿ ನಡೆಯುತ್ತಿರುವ ಮರಳು ದಂಧೆ ತಡೆಯಲು ಕೂಡಲೇ ಟೆಂಡರ್ ರದ್ದುಗೊಳಿಸಿ, ರೈತರ ಜೀವ ಉಳಿಸಿ ಎಂದು ಜನವರಿ ೧೬ ೨೦೧೮ರಂದು ಪ್ರತಿಭಟನೆ ಮಾಡಿದರು. ಜನಸ್ಪಂದನಾ ಕಾರ್ಯಕ್ರಮ ನಡೆಯುತ್ತಿರುವಾಗಲೇ ಜಿಲ್ಲಾಧಿಕಾರಿಯ ಮುಂಭಾಗದಲ್ಲಿ ಕುಳಿತ ಪ್ರತಿಭಟನಾನಿರತ ರೈತರು, ಸರ್ಕಾರ ಮತ್ತು ಜಿಲ್ಲಾಡಳಿತ ವಿರುದ್ಧ ದಿಕ್ಕಾರ ಕೂಗಿದರಲ್ಲದೆ ಟೆಂಡರ್ ರದ್ದುಗೊಳಿಸಬೇಕೆಂದು ಒತ್ತಾಯಿಸಿ ಜಿಲ್ಲಾಧಿಕಾರಿ ವಿ.ವಿ. ಜೋತ್ಸ್ನಾ ಅವರಿಗೆ ಮನವಿ ಸಲ್ಲಿಸಿದರು.

ನಂತರ ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಕೆ.ಪಿ. ಭೂತಯ್ಯರವರು ಜಿಲ್ಲೆಯಲ್ಲಿರುವ ಪ್ರಮುಖ ನದಿ ವೇದಾವತಿ. ಈ ನದಿಯು ಕೆಲವರಿಗೆ ಜೀವನದಿಯು ಹೌದು. ಇಲ್ಲಿನ ದಡದ ತೀರದಲ್ಲಿ ಮರಳು ದಂಧೆಯು ಹೆಚ್ಚಾಗಿರುವ ಕಾರಣ ವಿವಿಧ ರೀತಿಯ ಸಮಸ್ಯೆ ಉಂಟಾಗುವ ಸಾಧ್ಯತೆಯಿದೆ ಎಂದು ದೂರಿದರು. ಕಲಮರಹಳ್ಳಿ, ಗೊರ್ಲತ್ತು, ಸಾಲಹುಣಸೆ, ಹೊಸಹಳ್ಳಿ, ಯಳವರಹಟ್ಟಿ ಇನ್ನೂ ಮುಂತಾದ ಗ್ರಾಮಗಳ ಮಧ್ಯೆ ವೇದಾವತಿ ನದಿ ಹರಿಯುತ್ತದೆ. ಈ ನದಿಯ ದಡದ ಮರಳನ್ನು ತೆಗೆದು ಚಿತ್ರದುರ್ಗ ನಿರ್ಮಿತ ಕೇಂದ್ರಕ್ಕೆ ಪೂರೈಸಲು ೨೦೧೨ರಲ್ಲಿ ಪರವಾನಿಗೆ ನೀಡಲಾಗಿತ್ತು. ೨೦೧೩ರಿಂದ ೨೦೧೫ರವರೆಗೂ ಖಾಸಗಿಯವರಿಗೆ ನೀಡಲಾಗಿದೆ. ಅದು ಈಗಲೂ ಮುಂದುವರೆದಿದ್ದು, ಪ್ರತೀ ನಿತ್ಯ ದಡದ ತೀರದಿಂದ ನಿಯಮ ಬಾಹಿರವಾಗಿ ನೂರಾರು ಲೋಡ್ ಮರಳು ಸಾಗಾಣಿಕೆಯಾಗುತ್ತದೆ ಎಂದು ಆರೋಪಿಸಿದರು.

ಮರಳು ತೆಗೆಯಲು ಸರ್ಕಾರ ನಿಯಮಾನುಸಾರ ಜಿಲ್ಲಾಡಳಿತದಿಂದ ಕೆಲವರು ಟೆಂಡರ್ ಪಡೆದಿದ್ದಾರೆ. ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿಯಮವನ್ನು ಗಾಳಿಗೆ ತೂರಿ, ಒಂದು ಮೀಟರ್ ಬದಲು ಎರಡರಿಂದ ಮೂರು ಮೀಟರ್ ಆಳ ತೆಗೆದು ಸರ್ಕಾರಕ್ಕೆ ವಂಚನೆ ಮಾಡುತ್ತಿದ್ದಾರೆ. ಇದರಿಂದ ಈ ಭಾಗದ ರೈತರ ಕೊಳವೆ ಬಾವಿಗಳಲ್ಲಿ ನೀರು ಬತ್ತಿ ಹೋಗುತ್ತಿವೆ. ಅಡಕೆ, ದಾಳಿಂಬೆ, ತೆಂಗಿನ ತೋಟಗಳು ಒಣಗಿ ಹೋಗುತ್ತಿವೆ. ಅವುಗಳನ್ನು ಉಳಿಸಿಕೊಳ್ಳಲು ಪುನಃ ಕೊಳವೆಬಾವಿ ಕೊರೆಸಲು ಮುಂದಾಗಿ ರೈತರು ಸಾಲಗಾರರಾಗಿದ್ದಾರೆ. ಜನ ಮತ್ತು ಜಾನುವಾರುಗಳಿಗೆ ಕುಡಿಯುವ ನೀರಿನ ಹಾಹಾಕಾರ ಉಂಟಾಗಿದೆಯೆಂದು ಅಳಲು ತೋಡಿಕೊಂಡರು. ಮರಳು ದಂಧೆಗೆ ಪೋಲಿಸ್ ಮತ್ತು ಕಂದಾಯ ಇಲಾಖೆಯ ಕೆಲ ಅಧಿಕಾರಿಗಳು ರಕ್ಷಣೆಯಾಗಿ ನಿಂತಿದ್ದಾರೆ. ಇದನ್ನು ತಡೆಯಲು ಹೋದ ರೈತರ ವಿರುದ್ಧ ಗುಂಡಾ ಕಾಯ್ದೆಯಡಿ ಬಂದಿಸುವದಾಗಿ ಬೆದರಿಕೆ ಹಾಕಿದ್ದಾರೆ. ಈ ವಿಚಾರವಾಗಿ ಅನೇಕ ರೈತರು ತೀವ್ರ ಅಕ್ಷೇಪ ವ್ಯಕ್ತಪಡಿಸಿ ಪ್ರತಿಭಟಿಸಿದ ಸಂದರ್ಭದಲ್ಲಿ, ಕೆಲವೊಮ್ಮೆ ವಾಹನ ವಶಕ್ಕೆ ಪಡೆದರು ಕೂಡ,

ದಂಡ ಕಟ್ಟಿ ಮರುದಿನ ಪುನಃ ಇದೇ ಮರಳು ಸಾಗಾಣಿಕೆ ಬಳಕೆಯಗುತ್ತದೆ. ಅದ್ದರಿಂದ ಮುಂದಿನ ದಿನಗಳಲ್ಲಿ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳಬೇಕು ಎಂದು ಕೋರಿದರು.[೬೭]

ಹರಿಯಬ್ಬೆ ಗ್ರಾಮಪಂಚಾಯ್ತಿಯ ಅಧ್ಯಕ್ಷ ವಿರೇಶ್ ಮಾತನಾಡಿ ನಾಲ್ಕೈದು ವರ್ಷಗಳಿಂದ ಸಮರ್ಪಕ ಮಳೆಯಾಗದೆ, ಅನೇಕ ರೈತರು ಸಂಕಷ್ಟದಲ್ಲಿದ್ದಾರೆ. ಈಚೆಗೆ ಸುರಿದ ಮಳೆಯಿಂದಾಗಿ ನೀರಿನ ಸಮಸ್ಯೆ ಕಡಿಮೆಯಾಗಿದ್ದು, ಪರವಾನಿಗೆ ರದ್ದುಗೊಳಿಸಿದರೆ ರೈತರಿಗೆ ಮತ್ತು ಜಾನುವಾರುಗಳಿಗೆ ಅನುಕೂಲವಾಗುತ್ತದೆ. ಇದನ್ನು ತಡೆಯದಿದ್ದಲ್ಲಿ ಉಗ್ರ ಪ್ರತಿಭಟನೆ ನಡೆಸಲಾಗುವುದೆಂದು ಎಚ್ಚರಿಸಿದರು.

ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿ ವಿ.ವಿ. ಜೋತ್ಸ್ನರವರು ಇನ್ನೆರಡು ದಿನಗಳಲ್ಲಿ ಅಕ್ರಮ ಮರಳು ದಂಧೆ ತಡೆಯಲು ಸೂಕ್ತ ಕ್ರಮ ಕೈಗೊಳ್ಳುವದಾಗಿ ಭರವಸೆ ನೀಡಿದರು.

**ಸಾಲ ಮನ್ನಾಕ್ಕಾಗಿ ಚಿತ್ರದುರ್ಗ ರೈತರ ಪ್ರತಿಭಟನೆ:– ೧೯/೦೬/೨೦೧೮**

ಚಿತ್ರದುರ್ಗ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ನೂಲೇನೂರು ಶಂಕರಪ್ಪರವರ ನೇತೃತ್ವದಲ್ಲಿ ನೂರಾರು ರೈತರು ಸಾಲ ಮನ್ನಾ ಮಾಡುವಂತೆ ಅಗ್ರಹಿಸಿ ಜೂನ್ ೧೯ ೨೦೧೮ರಂದು ಪ್ರತಿಭಟನೆ ಮಾಡಿದರು.

ನಗರದಾದ್ಯಂತ ಪ್ರತಿಭಟನಾ ಮೆರವಣಿಗೆ ಮಾಡಿದ ನೂರಾರು ರೈತರು ಸಾಲ ಮನ್ನಾ ವಿಚಾರದಲ್ಲಿ ವಿಳಂಬ ನೀತಿಯನ್ನು ಅನುಸರಿಸುತ್ತಿದ್ದು, ಕೂಡಲೇ ಮನ್ನಾ ಮಾಡಲು ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿ ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ಪ್ರತಿಭಟನೆ ಮಾಡಿ ಹೆಚ್ಚುವರಿ ಜಿಲ್ಲಾಧಿಕಾರಿಯಾದ ಸಂಗಪ್ಪ ಅವರಿಗೆ ಮನವಿ ಸಲ್ಲಿಸಿದರು.

ರೈತ ಸಂಘದ ಉಪಾಧ್ಯಕ್ಷ ಕೆ.ಪಿ. ಭೂತಯ್ಯ ಮಾತನಾಡಿ ಹಲವು ವರ್ಷಗಳಿಂದಲೂ ಜಿಲ್ಲೆಯಲ್ಲಿ ನಿರಂತರವಾಗಿ ಬರ ಇರುವುದರಿಂದ ಅಂತರ್ಜಲ ಬತ್ತಿ ಹೋಗಿದ್ದು, ನೂರಾರು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅಲ್ಲದೇ ಇದಕ್ಕೆ ಮೂಲ ಕಾರಣ ಸರ್ಕಾರ ರೈತರನ್ನು ಕಡೆಗಣಿಸುತ್ತಿದೆ ಎಂದು ದೂರಿದರು. ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ೨೪ ಗಂಟೆಯೊಳಗೆ ರೈತರ ಸಾಲ ಮನ್ನಾ ಮಾಡುವುದಾಗಿ ಭರವಸೆ ನೀಡಿದ್ದ ಎಚ್.ಡಿ. ಕುಮಾರಸ್ವಾಮಿ ಒಂದು ತಿಂಗಳಾದರೂ ಆ ಕೆಲಸ ಮಾಡಿಲ್ಲ. ಸಾಲ ಮನ್ನಾ ಘೋಷಿಸಲು ೧೫ ದಿನಗಳ ಗಡುವು ಕೇಳಿದ್ದರು, ಅದೂ ಮೀರಿ ಹೋಗಿದೆ. ಮಾತಿಗೆ ತಪ್ಪದೇ ಸಾಲ ಮನ್ನಾ ಮಾಡಬೇಕೆಂದು ಒತ್ತಾಯಿಸಿದರು. ೨೦೧೭–೧೮ನೇ ಸಾಲಿನಲ್ಲಿ ಬೆಳೆ ವಿಮೆ ಪಾವತಿಸಿರುವ ರೈತರಿಗೆ ವಿಮಾ ಕಂಪನಿಗಳು ಆ ಹಣ ನೀಡಿಲ್ಲ. ರೈತರನ್ನು ಸುಲಿಗೆ ಮಾಡುತ್ತಿವೆ. ಈ ರೀತಿಯಾದರೆ ಬೆಳೆ ವಿಮೆ ಕಂಪನಿಗಳನ್ನು ನಂಬುವುದು ಹೇಗೆ ಎಂದು ಪ್ರಶ್ನಿಸಿದರು.[೬೮] ತಡ ಮಾಡದೆ ರೈತರ ಬ್ಯಾಂಕ್ ಖಾತೆಗಳಿಗೆ ವಿಮೆ ಹಣ ಜಮಾ ಮಾಡಬೇಕು ಎಂದು ಕೋರಿದರು.

ರೈತ ಸಂಘದ ಜಿಲ್ಲಾಧ್ಯಕ್ಷರಾದ ನುಲೇನೂರು ಶಂಕರಪ್ಪ ಮಾತನಾಡಿ, ಬೆಳೆವಿಮೆ ಹಣ ನೇರವಾಗಿ ರೈತರಿಗೆ ತಲುಪುತ್ತಿಲ್ಲ. ಪಂಚಾಯ್ತಿ ಮಟ್ಟದಲ್ಲಿರುವುದನ್ನು ಸರ್ವೇ ಮಟ್ಟಕ್ಕೆ ತಂದಾಗ ಮಾತ್ರ ಬೆಳೆ ವಿಮೆಹಣ ರೈತರ ಕೈ ಸೇರಲಿದೆ. ಇದನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಜಿಲ್ಲಾಧಿಕಾರಿಗಳಿಗೆ ಮನವಿ ಮಾಡಿದರು.

ಪ್ರತಿಭಟನೆಯಲ್ಲಿ ಬಸ್ತಿಹಳ್ಳಿ ಜಿ. ಸುರೇಶ್‌ಬಾಬು, ಬಿ.ಟಿ. ಹನುಮಂತಪ್ಪ, ಧನಂಜಯ್, ರುದ್ರುಸ್ವಾಮಿ, ದಯಾನಂದ ಮೂರ್ತಿ ಮುಂತಾದ ನೂರಾರು ರೈತರು ಮತ್ತು ಮುಖಂಡರು ಪಾಲ್ಗೊಂಡಿದ್ದರು.

**ಸಾಲ ಸೌಲಭ್ಯ ನೀಡಲು ಆಗ್ರಹಿಸಿ ರೈತ ಪ್ರತಿಭಟನೆ:- ೨೫/೦೬/೨೦೧೮**

ಚಿತ್ರದುರ್ಗ ಜಿಲ್ಲಾ ಕೇಂದ್ರದಲ್ಲಿ ಡಿ.ಸಿ.ಸಿ. ಬ್ಯಾಂಕ್‌ನ ಮುಂದೆ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಸುಮಾರು ನೂರಕ್ಕೂ ಹೆಚ್ಚು ರೈತರು ಸಾಲ ವಿತರಣೆಯಲ್ಲಿ ತಾರತಮ್ಯ, ಸಹಕಾರ ಸಂಘದಲ್ಲಿನ ರೈತರ ಸಾಲ ಮನ್ನಾ ಮಾಡದ ಕ್ರಮವನ್ನು ಖಂಡಿಸಿ ಜೂನ್ ೨೫ ೨೦೧೮ರಂದು ಪ್ರತಿಭಟನೆ ಮಾಡಿದರು.

ಬ್ಯಾಂಕ್‌ನ ಮುಂದೆ ಪ್ರತಿಭಟನೆ ಆರಂಭವಾದಾಗ ಡಿ.ಸಿ.ಸಿ. ಬ್ಯಾಂಕ್ ಅಧಿಕಾರಿಗಳಿಗೂ ರೈತರಿಗೂ ಕೆಲಕಾಲ ಮಾತಿನ ಚಕಾಮಕಿ ನಡೆಯಿತು. ಸಾಲ ನೀಡದ ಹೊರತು ಇಲ್ಲಿಂದ ಕದಲುವದಿಲ್ಲ. ಮಳೆಗಾಲದಲ್ಲಿ ನೀಡದೆ ಬೇಸಿಗೆಯಲ್ಲಿ ನೀಡುತ್ತೀರಾ ಎಂದು ಪ್ರಶ್ನಿಸಿದ ರೈತರು, ನಮ್ಮ ಕಡೆ ಮಳೆಯಾಗಿದ್ದು ಸಾಲ ನೀಡಬೇಕು ಎಂದು ಪಟ್ಟು ಹಿಡಿದರು. ನಮ್ಮ ಗ್ರಾಮದ ಅಕ್ಕಪಕ್ಕದಲ್ಲಿರುವ ಸೊಸೈಟಿಗಳಲ್ಲಿ ರೈತರಿಗೆ ಬೆಳೆ ಸಾಲ, ಅಭಿವೃದ್ಧಿ ಸಾಲ ನೀಡಲಾಗಿದೆ. ಯಳಗೋಡು ಕೃಷಿ ಪತ್ತಿನ ಸಹಕಾರ ಸಂಘದ ಸೊಸೈಟಿಯಲ್ಲಿ ಮೂರು ವರ್ಷಗಳಿಂದ ಯಾವುದೇ ಸಾಲ ನೀಡಿಲ್ಲ. ಇದಕ್ಕೆ ಸಹಕಾರ ಬ್ಯಾಂಕ್‌ನಲ್ಲಿನ ಲೋಪವೇ ಕಾರಣ ಎಂದು ದೂರಿದರು. ಹಿಂದಿನ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಮನ್ನಾ ಮಾಡಿದ ಸಾಲದ ಬಾಬ್ತು ಕೂಡ ರೈತರ ಖಾತೆಗಳಿಗೆ ಜಮಾ ಮಾಡದೇ, ಸಂಬಂಧಪಟ್ಟ ಸೊಸೈಟಿ ಕಾರ್ಯದರ್ಶಿ ಬೇಜವಬ್ದಾರಿ ಉತ್ತರ ನೀಡುತ್ತ ರೈತರನ್ನು ವಂಚಿಸುತ್ತಿದ್ದಾರೆ ಎಂದು ಆಕ್ರೋಶ ವ್ಯಕ್ತಪಡಿಸಿದ್ದಾರೆ.

ಹತ್ತು ಎಕರೆ ಜಮೀನು ಇರುವ ರೈತರಿಗೆ ಕೇವಲ ಮೂವತ್ತು ಸಾವಿರದಿಂದ ನಲ್ವತ್ತು ಸಾವಿರ ಸಾಲ ನೀಡುತ್ತಿದ್ದು, ಎರಡ್ಮೂರು ಎಕರೆ ಹೊಂದಿದವರಿಗೆ ಎರಡು ಲಕ್ಷದವರೆಗೂ ಸಾಲ ನೀಡಲಾಗುತ್ತಿದೆ. ಇದರಲ್ಲಿಯೂ ರಾಜಕೀಯ ನಡೆಯುತ್ತಿದ್ದು, ಇದು ಯಾವ ರೀತಿಯ ನ್ಯಾಯ? ಕಮಿಷನ್ ಕೊಟ್ಟ ರೈತರಿಗೆ ಮಾತ್ರ ಹೆಚ್ಚಿನ ಸಾಲ ಸೌಲಭ್ಯ ನೀಡುವ ಧೋರಣೆ ಸೊಸೈಟಿಯಲ್ಲಿ ನಡೆಯುತ್ತಲೇ ಬರುತ್ತಿದೆ ಎಂದು ರೈತ ಮುಖಂಡರು ದೂರಿದರು. ನಾವೆಲ್ಲ ಒಬ್ಬಂಟಿಗರು, ಮನೆ, ಮಠ, ದನಕರುಗಳನ್ನು ಬಿಟ್ಟು ಡಿ.ಸಿ.ಸಿ. ಬ್ಯಾಂಕ್, ಸೊಸೈಟಿ ಸಾಲಕ್ಕಾಗಿ ನಿತ್ಯ ಅಲೆದಾಡಲು ಸಾಧ್ಯವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಬ್ಯಾಂಕ್ ಅಧಿಕಾರಿಗಳು ಮನಬಂದಂತೆ ವರ್ತಿಸುತ್ತಿದ್ದಾರೆ ಎಂದು ರೈತ ಮಹಿಳೆಯರು ದೂರಿದರು. ಯಳಗೋಡು ಸೊಸೈಟಿಯಲ್ಲಾಗಲೀ,

ಸಹಕಾರಿ ಬ್ಯಾಂಕ್‌ನಲ್ಲಾಗಲೀ ಸಾವಿರಾರು ರೈತರು ಕಟ್ಟುತ್ತಿರುವ ಷೇರು ಹಣದ ಮಾಹಿತಿಯೇ ಸಿಗುತ್ತಿಲ್ಲ. ಕೇಳಿದರೆ ಉಡಾಫೆಯ ಉತ್ತರ ನೀಡುತ್ತಿದ್ದಾರೆ. ಷೇರು ಹಣವೇ ಇಲ್ಲವೆಂಬ ಅನುಮಾನ ಮೂಡುತ್ತಿದೆ ಎಂದು ಕೆಲ ರೈತರ ಅಭಿಪ್ರಾಯವಾಗಿದೆ. ಮೂರು ವರ್ಷಗಳಿಂದ ಯಾವ ಹೊಸ ಸಾಲ ನೀಡುತ್ತಿಲ್ಲ. ಸಿರಿಗೆರೆ, ಹುಳಿಯಾಳು ಗ್ರಾಮಗಳ ರೈತರಿಗೆ ಸಾಲ ನೀಡಲಾಗಿದೆ. ನಮ್ಮ ಗ್ರಾಮದ ರೈತರಿಗೆ ತಾರತಮ್ಯ ಮಾಡುತ್ತಿರುವುದಾದರೂ ಏಕೆ ಎಂದು ಪ್ರಶ್ನಿಸಿದರು.

**೬.೨ ದಾವಣಗೆರೆ ಜಿಲ್ಲೆಯ ರೈತ ಪ್ರತಿಭಟನೆಗಳು**

**ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಆಗ್ರಹಿಸಿ ರೈತ ಪ್ರತಿಭಟನೆ:– ೦೨/೦೨/೧೯೯೯**

ರೈತ ಸಂಘದ ಕಾರ್ಯಕರ್ತರು ವಿವಿಧ ೧೦ ಬೇಡಿಕೆಗಳನ್ನು ಈಡೇರಿಸುವಂತೆ ಸರ್ಕಾರವನ್ನು ಒತ್ತಾಯಿಸಿ, ಖಾನಾಹೊಸಹಳ್ಳಿ ಬಳಿ ರಾಷ್ಟ್ರೀಯ ಹೆದ್ದಾರಿ–೧೩ರಲ್ಲಿ ಮೂರ್‍ನಾಲ್ಕು ಗಂಟೆಗಳ ಕಾಲ ರಸ್ತೆ ತಡೆದು ಪ್ರತಿಭಟನೆ ಮಾಡಿದರು. ಇದಕ್ಕೂ ಮೊದಲು ಹೊಸಹಳ್ಳಿಯ ಪ್ರಮುಖ ಬೀದಿಗಳಲ್ಲಿ ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತಾ, ಪ್ರತಿಭಟನಾ ಮೆರವಣಿಗೆ ನಡೆಸಿದರು. ಭದ್ರಾ ಮೇಲ್ದಂಡೆ ಕಾಲುವೆ ನಿರ್ಮಾಣ, ರೇಷ್ಮೆ ಆಮದು ನಿಲ್ಲಿಸಬೇಕು, ಅತಿವೃಷ್ಟಿಯಿಂದಾಗಿ ಸಂಭವಿಸಿರುವ ಹಾನಿಗೆ ಸರ್ಕಾರ ಪರಿಹಾರ ನೀಡಬೇಕು, ಖಾನಾಹೊಸಹಳ್ಳಿಯಲ್ಲಿ ಹೊಸ ಬಸ್ಸಿನ ನಿಲ್ದಾಣವಾಗಬೇಕೆಂದು ಒತ್ತಾಯಿಸಿ ಸಹಸ್ರಾರು ರೈತರು ಪ್ರತಿಭಟನೆಯಲ್ಲಿ ತೊಡಗಿದರು. ವಿಷಯ ತಿಳಿದು ಸ್ಥಳಕ್ಕೆ ಆಗಮಿಸಿದ ಕೆ.ಎಸ್.ಆರ್.ಟಿ.ಸಿ. ಹಾಗೂ ಕೆ.ಇ.ಇ. ಗುರುಶಾಂತಪ್ಪ ರೈತರನ್ನು ಉದ್ದೇಶಿಸಿ ಮಾತನಾಡಿ ನಮ್ಮ ವ್ಯಾಪ್ತಿಯೊಳಗೆ ಬರುವ ಬೇಡಿಕೆಗಳನ್ನು ಕೂಡಲೇ ಈಡೇರಿಸುತ್ತೇವೆ. ಉಳಿದ ಸಮಸ್ಯೆಗಳ ಬಗ್ಗೆ ಸರ್ಕಾರಕ್ಕೆ ತಿಳಿಸುತ್ತೇವೆಂದು ಆಶ್ವಾಸನೆ ನೀಡಿದರು. ನಂತರ ಚಳುವಳಿಯನ್ನು ಹಿಂತೆಗೆದುಕೊಳ್ಳಲಾಯಿತು.[೬] ಚಳುವಳಿಯ ನೇತೃತ್ವವನ್ನು ರೈತ ಸಂಘದ ಜಿಲ್ಲಾಧ್ಯಕ್ಷ ಜಿ.ವೀರಣ್ಣ, ತಾಲೂಕು ರೈತ ಸಂಘ ಅಧ್ಯಕ್ಷ ಕಲ್ಲೇಶಪ್ಪ, ಪ್ರಮುಖ ರೈತ ಮುಖಂಡರು ವಹಿಸಿದ್ದರು.

**ನೀರಾ ಇಳಿಸಲು ಅನುಮತಿಗಾಗಿ ದಾವಣಗೆರೆ ಜಿಲ್ಲೆಯ ರೈತರ ಪ್ರತಿಭಟನೆ:– ೨೩/೦೭/೨೦೦೧**

ನುಸಿರೋಗ ಬಂದಿರುವ ತೆಂಗಿನ ಮರಗಳಿಂದ ನೀರಾ ಇಳಿಸುವುದಕ್ಕೆ ಸರ್ಕಾರ ಅನುಮತಿ ಕೊಡಬೇಕು. ಇಲ್ಲದಿದ್ದರೆ ರೈತರಿಗೆ ಸರ್ಕಾರವೇ ಜೀವನ ವ್ಯವಸ್ಥೆ ಮಾಡುತ್ತದೆಯೇ? ಇಲ್ಲ. ರೈತರೇ ಜೀವನ ವ್ಯವಸ್ಥೆ ಮಾಡಿಕೊಳ್ಳಬೇಕು ಇಲ್ಲವೇ ಆತ್ಮಹತ್ಯೆ ಮಾಡಿಕೊಳ್ಳಬೇಕು. ಆದರೆ ರೈತರು ಈ ಎರಡನೆಯದನ್ನು ಆಯ್ಕೆ ಮಾಡಿಕೊಳ್ಳುವುದು ಬೇಡ. ತೆಂಗು ಬೆಳೆದ ರೈತರಿಗೆ ತಮ್ಮ ಮರದಿಂದ ರಸ ಇಳಿಸುವ ಹಕ್ಕು ಇದೆ. ಈಗಾಗಲೇ ೧೩ ಜಿಲ್ಲೆಗಳಲ್ಲಿ ಅಬಕಾರಿ ಇಲಾಖೆಯಿಂದ ನಿರ್ಬಂಧಿಸುವ ಕಾನೂನು ತೆಗೆದಿದ್ದೇವೆ. ವಿಧಾನಸೌದದವರು ಇನ್ನು ತೆಗೆದಿಲ್ಲ ಅಷ್ಟೇ. ಎಂದು ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ॥ ಎಂ.ಡಿ.ನಂಜುಂಡಸ್ವಾಮಿ ನೀರಾ

ಇಳಿಸುವುದನ್ನು ಸಮರ್ಥಿಸಿಕೊಂಡು, ಎ.ಪಿ.ಎಂ.ಸಿ. ರೈತ ಭವನದಲ್ಲಿ ನೀರಾ ಕುಡಿಯುವುದರ ಮೂಲಕ, ಜಿಲ್ಲೆಯಲ್ಲಿ ನೀರಾ ಚಳವಳಿಯನ್ನು ಉದ್ಘಾಟಿಸಿ, ರೈತರಿಗೆ ಆ ಬಗ್ಗೆ ಸಮಗ್ರ ಮಾಹಿತಿ ನೀಡಿದರು.

ನೀರಾ ಇಳಿಸುವುದು, ಕುಡಿಯುವುದು ಅಪರಾಧವಲ್ಲ, ನೀರಾ ಮಾದಕ ಪಾನೀಯ ಅಲ್ಲ. ನೀರಾ ಇಳಿಸುವುದು ಕಾನೂನು ಬದ್ಧ ಚಟುವಟಿಕೆ. ಏಕೆಂದರೆ ತೆಂಗು ಬೆಳೆಯುವುದನ್ನು ಯಾವ ಕಾನೂನು ನಿಷೇದಿಸಿಲ್ಲ. ಇದು ಕಾನೂನು ಪ್ರಕಾರ ಬೆಳೆಯುವ ಬೆಳೆ ಇದರಲ್ಲಿನ ಎಲ್ಲಾವಸ್ತುಗಳನ್ನು ಬಳಸಿಕೊಳ್ಳಬಹುದು. ಕಾಯಿ, ಕಾಂಡ, ಎಳೆನೀರು, ನಾರು ಎಲ್ಲವನ್ನು ಉಪಯೋಗಿಸುವುದಕ್ಕೆ ಕಾನೂನುನಿನ ಅಡ್ಡಿಯಿಲ್ಲ ಆದರೆ ಇದರಿಂದ ಬರುವ ರಸವನ್ನು ತೆಗೆದು ಏಕೆ ಮಾರಬಾರದು? ಎಂದು ಪ್ರಶ್ನಿಸಿದರು. ನೀರಾ ಇಳಿಸುವ ಪ್ರಸಂಗ ಏಕೆ ಬಂತು. ರಾಜ್ಯದಲ್ಲಿ ತೆಂಗಿನ ಮರಗಳಿಗೆ ಬಂದಿರುವ ನುಸಿ ರೋಗಕ್ಕೆ ಇದುವರೆಗೂ ವಿಜ್ಞಾನಿಗಳು ಯಾವುದೇ ಔಷಧಿ ಕಂಡುಹಿಡಿದಿಲ್ಲ. ತೆಂಗಿನ ಕಾಯಿಗಳನ್ನು ಕಚ್ಚಿಕೊಂಡಿರುವ ತೊಟ್ಟಿನ ಭಾಗದಲ್ಲಿ ಈ ನುಸಿ ಸೇರುತ್ತದೆ. ನುಸಿ ನಿವಾರಿಸಲು ಅದು ಯಾವ ಜಾಗದಲ್ಲಿ ಬರುತ್ತದೆಯೋ ಆ ಜಾಗವನ್ನೇ ಇಲ್ಲದಂತೆ ಮಾಡಿದರೆ? ಅಂದರೆ ಹೊಂಬಾಳೆ ಕೊಯ್ದು ಹಾಕುವುದು ದಾರಿ. ನಂತರ ಜೀವನಕ್ಕೆ ಏನು ಎಂಬ ಪ್ರಶ್ನೆ ಬರುತ್ತದೆಯಲ್ಲ? ಸರ್ಕಾರವಂತೂ ಜೀವನ ವ್ಯವಸ್ಥೆ ಮಾಡುವುದಿಲ್ಲ. ರೈತರೇ ಜೀವನ ವ್ಯವಸ್ಥೆ ಮಾಡಿಕೊಳ್ಳಲೇಬೇಕು. ಆದ್ದರಿಂದ ಪೌಷ್ಠಿಕಾಂಶವಿರುವ ನೀರಾ ಕಬ್ಬಿನ ಹಾಲಿಗಿಂತ ಹೆಚ್ಚು ಸಿಹಿ. ಗ್ಲೊಕೋಸ್ ಇರುವುದರಿಂದ ಇದರ ಬಳಕೆ ಏಕೆ ಮಾಡಬಾರದು? ನಮ್ಮ ಕಾರ್ಯಕ್ರಮ ಹೆಂಡ ಮಾಡುವುದಲ್ಲ. ನೀರಾದಲ್ಲಿ ಶೇ.೧% ರಷ್ಟು ಮಾದಕತೆ ಇಲ್ಲ. ಹಿಂದೆ ಅಬಕಾರಿ ಕೂಟಕ್ಕೆ ಹತ್ತಿರವಾಗಿದ್ದವರೊಬ್ಬರು, ಹಣಕಾಸು ಮಂತ್ರಿಯಾಗಿದ್ದಾಗ ನೀರಾ ಇಳಿಸುವುದನ್ನು ಅಬಕಾರಿ ಕಾಯ್ದೆಗೆ ಸೇರಿಸಿದ್ದರು. ಸರ್ಕಾರಿ ಸರಾಯಿಯಿಂದ ಜನರಿಗೆ ತೊಂದರೆ ಇದೆಯೇ ಹೊರತು ನೀರಾದಿಂದ ಅಲ್ಲ. ನೀರಾ ಅಪರಾಧವಲ್ಲ, ಹೆಂಡವಲ್ಲ, ಅದಕ್ಕಾಗಿ ನೀರಾ ಚಳುವಳಿ ಆರಂಭಿಸಿದ್ದಾರೆ. ನೀರಾ ಚಳುವಳಿ ಎಂದರೆ ಅಬಕಾರಿ ಸರಾಯಿ ವಿರುದ್ಧ ನಡೆಯುವ ಚಳುವಳಿ ಎಂದು ಹೇಳಿದರು.

ನಂಜುಂಡಸ್ವಾಮಿಯವರ ಕರೆಗೆ ಓಗೊಟ್ಟು, ನಗರದಲ್ಲಿ ಜುಲೈ ೨೦ ೨೦೦೧ ರಂದು ನೀರಾ ಇಳಿಸಲು ಅನುಮತಿ ನೀಡುವುದಿಲ್ಲ, ಎಂದು ಹೇಳಿಕೆ ನೀಡಿರುವ ಕೃಷಿ ಸಚಿವ ಟಿ.ಬಿ.ಜಯಚಂದ್ರರವರ ಕ್ರಮವನ್ನು ಖಂಡಿಸಿದರು. ಇದನ್ನು ವಿರೋಧಿಸಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕಾರ್ಯಕರ್ತರು ನಗರದಾದ್ಯಂತ ಪ್ರತಿಭಟನಾ ಮೆರವಣಿಗೆ ನಡೆಸಿ ಜಿಲ್ಲಾಧಿಕಾರಿಗಳ ಕಛೇರಿ ಬಳಿ ಕೃಷಿ ಸಚಿವರ ಪ್ರತಿಕೃತಿಯನ್ನು ಸುಟ್ಟು ಹಾಕಿ, ರಾಜೀನಾಮೆ ನೀಡುವಂತೆ ಆಗ್ರಹಿಸಿದರು. ನೆರೆಹೊರೆ ರಾಜ್ಯಗಳಲ್ಲಿ ರೈತರಿಗೆ ನೀರಾ ಇಳಿಸಲು ಅನುಮತಿ ಕೊಡಲಾಗಿದೆ, ಆದರೆ ಕರ್ನಾಟಕ ಸರ್ಕಾರ ಅಬಕಾರಿ ದೊರೆಗಳೊಂದಿಗೆ ಶಾಮೀಲಾಗಿ ನೀರಾ ಇಳಿಸಲು ಅನುಮತಿ ನೀಡುತ್ತಿಲ್ಲ. ನೀರಾ ಸರ್ವ ಕಾಯಿಲೆಗಳಿಗೆ ರಾಮಬಾಣವಿದ್ದಂತೆ ಎಂದು ರೈತ ಮುಖಂಡರು ತಿಳಿಸಿ ಜಿಲ್ಲಾಧಿಕಾರಿಗೆ ಮನವಿ ನೀಡಿದರು.[೨೦]

ಈ ಪ್ರತಿಭಟನೆಯು ಹೊನ್ನೂರು ಮುನಿಯಪ್ಪ, ಹುಚ್ಚವನಹಳ್ಳಿ ಮಂಜುನಾಥ್, ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ರೇವಣ್ಣ, ಚಿಕ್ಕನಹಳ್ಳಿ ಮಲ್ಲೇಶಪ್ಪ ಮುಂತಾದ ರೈತ ಮುಖಂಡರ ನೇತೃತ್ವದಲ್ಲಿ ನಡೆಯಿತು.

**ರೈತರ ಆತ್ಮಹತ್ಯೆ ತಡೆಗಟ್ಟಲು ಕ.ರಾ.ರೈ.ಸಂಘದ ಒತ್ತಾಯ:- ೨೨/೧೦/೨೦೦೧**

ಕಳೆದೆರಡು ವರ್ಷಗಳಿಂದ ದೇಶದ ವಿವಿಧ ಭಾಗಗಳಲ್ಲಿ ಹಾಗೂ ರಾಜ್ಯದಲ್ಲಿ ದಿನನಿತ್ಯ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಸರ್ಕಾರವು ಈ ಬಗ್ಗೆ ಗಂಭೀರವಾಗಿ ಚಿಂತಿಸದೆ ಸಾಮಾನ್ಯ ಸಾವಿನಂತೆ ಪರಿಗಣಿಸಿರುವ ಸರ್ಕಾರದ ರೈತ ವಿರೋಧಿ ನೀತಿಯನ್ನು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ, ದಾವಣಗೆರೆ ಜಿಲ್ಲಾ ಘಟಕ ತೀವ್ರವಾಗಿ ಖಂಡಿಸಿದೆ.

ರೈತ ಸಂಘಟನೆಯ ಕಾರ್ಯಕರ್ತರು ಅಕ್ಟೋಬರ್ ೨೨ ೨೦೦೧ ರಂದು ಬೆಳಿಗ್ಗೆ ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ಪ್ರತಿಭಟನೆ ನಡೆಸಿದರು, ನಂತರ ರೈತರ ಆತ್ಮಹತ್ಯೆ ತಡೆಗಟ್ಟಲು ಜಿಲ್ಲಾಧಿಕಾರಿಗಳ ಮೂಲಕ ಸರ್ಕಾರಕ್ಕೆ ಮನವಿ ಸಲ್ಲಿಸಿದರು. ರೈತ ಸಂಘಟನೆಯು ಮಿತಿ ಮೀರಿದ ಸಾಲದ ಹೊರೆ, ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ಸಿಗದಿರುವುದು, ಖಾಸಗಿ ಸಾಲದ ವಿಪರೀತ ಬಡ್ಡಿ, ಬ್ಯಾಂಕ್ ಸಾಲದ ನೀತಿ ಸರಿ ಇಲ್ಲದೇ ಇರುವುದರ ವಿರುದ್ಧ, ಪ್ರತಿಭಟನೆ ಮಾಡುವುದರ ಮೂಲಕ ಸರ್ಕಾರಕ್ಕೆ ಎಚ್ಚರಿಕೆ ನೀಡಿದರು. ರೈತರಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲವನ್ನು ಸಮರ್ಪಕವಾಗಿ ಸಕಾಲಕ್ಕೆ ನೀಡಬೇಕು. ರೈತ ಬೆಳೆದ ಬೆಳೆಗಳಿಗೆ ಮಾರುಕಟ್ಟೆ ವ್ಯವಸ್ಥೆ ರೂಪಿಸಬೇಕು. ಕೆ.ಪಿ.ಟಿ.ಸಿ.ಎಲ್. ೬ ಗಂಟೆ ವಿದ್ಯುತ್ ನೀಡುವ ಧೋರಣೆಯನ್ನು ನಿಲ್ಲಿಸಬೇಕು, ಬೇಸಿಗೆ ಬೆಳೆಗೆ ಸರಿಯಾದ ವಿದ್ಯುತ್ ನೀಡಬೇಕು. ಸರಿಯಾದ ರೀತಿಯಲ್ಲಿ ಬರ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕು ಮುಂತಾದ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟರು.[೮೧] ಪ್ರತಿಭಟನೆಯ ನೇತೃತ್ವವನ್ನು ರೈತ ಸಂಘದ ಜಿಲ್ಲಾಧ್ಯಕ್ಷ ಅರುಣ್‌ಕುಮಾರ್ ಕುರುಡಿ, ತಾಲೂಕು ಅಧ್ಯಕ್ಷ ಹೊನ್ನೂರು ಹನುಮಂತಪ್ಪರವರು ವಹಿಸಿದ್ದರು.

**ಸರ್ಕಾರದ ರೈತ ವಿರೋಧ ನೀತಿ ಹಾಗೂ ಪಂಪ್‌ಸೆಟ್‌ಗಳಿಗೆ ಮೀಟರ್ ಅಳವಡಿಸುವುದನ್ನು ವಿರೋಧಿಸಿ ರೈತ ಪ್ರತಿಭಟನೆ:- ೧೨/೧೧/೨೦೦೧**

ದಾವಣಗೆರೆ ಜಿಲ್ಲೆಯ ರೈತರ ಪಂಪ್‌ಸೆಟ್‌ಗಳಿಗೆ ದಿನದಲ್ಲಿ ಕೇವಲ ಆರು ಗಂಟೆ ವಿದ್ಯುತ್ ಕೊಡುವುದು ಮತ್ತು ಪಂಪ್‌ಸೆಟ್‌ಗಳಿಗೆ ಮೀಟರ್ ಅಳವಡಿಸುವುದನ್ನು ವಿರೋಧಿಸಿ, ದಾವಣಗೆರೆ ಜಿಲ್ಲಾ ರೈತಸಂಘನೆ ಪ್ರತಿಭಟನೆ ಮಾಡಲು ಕರೆ ಕೊಟ್ಟಿತು. ಈ ಹಿನ್ನಲೆಯಲ್ಲಿ ವಿದ್ಯುತ್ ಪ್ರಸರಣ ನಿಗಮದ ಸೂಪರಿಂಟೆಂಡೆಂಟ್ ಕಛೇರಿಯ ಮುಂದೆ ನೂರಾರು ರೈತರು ಪ್ರತಿಭಟನೆ ಮಾಡಿ, ಅಂದಿನ ಮುಖ್ಯಮಂತ್ರಿಯಾಗಿದ್ದ ಎಸ್.ಎಮ್.ಕೃಷ್ಣರವರ ಪ್ರತಿಕೃತಿ ದಹನ ಮಾಡಿದರು.

ವಿದ್ಯುಚ್ಛಕ್ತಿ ನೀತಿಯಲ್ಲಿ ಬದಲಾಗಬೇಕೆಂದು, ರೈತ ಸಂಘದ ಅಧ್ಯಕ್ಷ ಹೊನ್ನೂರು ಮುನಿಯಪ್ಪರವರ ನೇತೃತ್ವದಲ್ಲಿ, ಹಸಿರು ಶಲ್ಯಾದ ರೈತರು ವಿದ್ಯುಚ್ಛಕ್ತಿ ಕಛೇರಿಗೆ ಮುತ್ತಿಗೆ ಹಾಕುವ ಮೂಲಕ, ಮೀಟರ್ ಬೇಡವೆಂದು ತಮ್ಮ ಜೊತೆಗೆ ತಂದಿದ್ದ ಮೀಟರ್‌ಗಳನ್ನು ನಿಗಮದ ಅಧಿಕಾರಿಗಳಿಗೆ ಒಪ್ಪಿಸಿ ಪ್ರತಿಭಟಿಸಿದರು.

ನಂತರ ಪ್ರತಿಭಟನಾನಿರತ ರೈತರ ಸಭೆಗೆ ಬಂದು ಮಾತನಾಡಿದ ಕರ್ನಾಟಕ ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ॥ ನಂಜುಂಡಸ್ವಾಮಿ ಮಾತನಾಡಿ, ವಿದ್ಯುತ್ ಅಧಿಕಾರಿಗಳು ಮೊದಲು ರೈತರನ್ನು ಮನುಷ್ಯರೆಂದು ತಿಳಿದು ವ್ಯವಹರಿಸಬೇಕು ಹಾಗೂ ತಾವು ಮನುಷ್ಯರೆಂದು ತೋರಿಸಿಕೊಳ್ಳಬೇಕು. ಬಯಲಲ್ಲಿ ಕೆಲಸ ಮಾಡುವವರಿಗೆ ರಾತ್ರಿ ಕರೆಂಟ್, ಫ್ಯಾಕ್ಟರಿಯಲ್ಲಿ ಕೆಲಸ ಮಾಡುವವರಿಗೆ ಹಗಲು ಕರೆಂಟ್ ಕೊಡುವುದು ಯಾವ ನ್ಯಾಯ. ರೈತರು ಹಂದಿ, ಹಾವು, ಆನೆಯೊಡನೆ ಸೆಣಸಾಡಿ ಸಾಯಬೇಕೆ? ಎಂದು ಪ್ರೊ॥ ನಂಜುಂಡಸ್ವಾಮಿಯವರು ಪ್ರಶ್ನಿಸಿದರು. ರೈತರ ವಿರುದ್ಧ ಕಾನೂನು ಮಾಡುವ ಸರ್ಕಾರದ ಹಿಂದೆ ಕೈ ಚೀಲ ಹಿಡಿದು ಓಡಾಡುವ ರೈತರಿಗೆ ಮಾನ ಮರ್ಯಾದೆ ಇದೆಯೇ ಎಂದು ಕೇಳಿದರು. ರೈತರು ಅಧಿಕಾರಿಗಳಿಗೆ ದುಡ್ಡು ಕೊಟ್ಟು ಕೆಲಸ ಮಾಡಿಸಿಕೊಳ್ಳುವುದನ್ನು ನಿಲ್ಲಿಸಿ. ಯಾರ್‍ಯಾರು ಎಷ್ಟೆಷ್ಟು ಕೊಟ್ಟಿದ್ದೀರಿ ಪಟ್ಟಿ ಮಾಡಿಕೊಂಡು ಬನ್ನಿ. ಒದ್ದು ವಸೂಲಿ ಮಾಡುವ ಕಾರ್ಯಕ್ರಮ ಹಾಕಿಕೊಳ್ಳೋಣ ಎಂದು ರೈತರಿಗೂ ಅಧಿಕಾರಿಗಳಿಗೂ ಚುರುಕು ಮುಟ್ಟಿಸಿದರು. ವಿದ್ಯುತ್ ಏರಿಳಿತದಿಂದ ಒಂದು ಲಕ್ಷ ಪಂಪ್‌ಸೆಟ್‌ಗಳು ಹಾಳಾಗಿವೆ ಎಂದು ಸರ್ಕಾರ ಹೇಳಿದೆ. ಆದರೆ ಹಾಳಾಗಿರುವುದು ಕೇವಲ ಒಂದು ಲಕ್ಷ ಮೋಟರ್‌ಗಳಲ್ಲ, ಹದಿನಾಲ್ಕು ಲಕ್ಷ ಮೋಟರ್‌ಗಳು. ಇವುಗಳ ರಿಪೇರಿಗೆ ರೈತರಿಗೆ ಆಗಿರುವ ಖರ್ಚು ತಲಾ ಎರಡು ಸಾವಿರದಂತೆ ೨.೮ ಕೋಟಿ ರೂಗಳು ರೈತರಿಗೆ ಸರಿಯಾಗಿ ವಿದ್ಯುತ್ ಕೊಡದೆ ಬೆಳೆ ಹಾಳಾಗಿರುವುದು ಪ್ರತಿ ಎಕರೆಗೆ ಐದು ಸಾವಿರದಂತೆ ಲೆಕ್ಕ ಹಾಕಿದರೂ ರೈತರಿಗೆ ೩.೫೦೦ ಕೋಟಿ ನಷ್ಟವಾಗಿದೆ. ವಿದ್ಯುತ್ ಇಲಾಖೆ ಈ ಹಣವನ್ನು ಮೊದಲು ರೈತರಿಗೆ ಕೊಡಲಿ, ನಂತರ ರೈತರು ನಿಗಮಕ್ಕೆ ಕೊಡುವ ಬಾಕಿ ಕೇಳಲಿ ಎಂದು ವಿದ್ಯುತ್ ಅವಸ್ಥೆಯಿಂದ ಉಂಟಾದ ಹಾನಿಯನ್ನು ಬಿಡಿ ಬಿಡಿಯಾಗಿ ತಿಳಿಸಿದರು. ರೈತರಿಗೆ ವಿದ್ಯುತ್ ಕಡಿಮೆ ಮಾಡಲು ಬರುವುದಿಲ್ಲ. ಗಾಳಿ, ನೀರು, ಇದ್ದಂತೆ ವಿದ್ಯುತ್ ಕೂಡ ಅವಶ್ಯ ಸಂಪನ್ಮೂಲ. ಆ ನೀತಿ ಕೈ ಬಿಡದಿದ್ದರೆ ರೈತರ ಪ್ರತಿಭಟನೆ ಉಗ್ರ ಸ್ವರೂಪ ಪಡೆಯುತ್ತದೆ ಎಂದು ಹೇಳಿದರು. ನಾವು ಕೊಡುವ ತೆರಿಗೆಗೆ ಸರ್ಕಾರ ಏನು ಕೊಟ್ಟಿದೆ? ಎಂದು ಪ್ರಶ್ನಿಸಿ, ಸೇವೆ ಸಲ್ಲಿಸಿದ್ದಕ್ಕೆ ಕೊಡುವುದು ತೆರಿಗೆ ಎಂದು ತೆರಿಗೆಯ ಅರ್ಥವನ್ನು ರೈತರಿಗೆ ತಿಳಿಸಿದರು.[೨]

ರೈತರು ಕೆ.ಪಿ.ಟಿ.ಸಿ.ಎಲ್. ಕಚೇರಿ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ರೈತರಷ್ಟೇ ಸಂಖ್ಯೆಯಲ್ಲಿ ಪೊಲೀಸರೂ ಹಾಜರಿದ್ದು ಬಿಗಿ ಬಂದೋಬಸ್ತ್ ಏರ್ಪಡಿಸಿದ್ದರು.

**ರೈತರ ಸಮಸ್ಯೆ ಪರಿಹಾರಕ್ಕೆ ತಾಲೂಕು ರೈತ ಸಂಘದ ಪ್ರತಿಭಟನೆ:– ೧೩/೦೭/೨೦೦೨:–**

ಜಗಳೂರು ತಾಲೂಕಿನಲ್ಲಿ ಸಕಾಲಿಕ ಮಳೆ ಇಲ್ಲದೆ ರೈತರು ಕಂಗಾಲಾಗಿದ್ದಾರೆ. ಬಿತ್ತನೆಯಾಗಿರುವ ಬೆಳೆಗಳು ಒಣಗುತ್ತಿವೆ. ರೈತರ ಬದುಕು ದುಸ್ತರವಾಗುತ್ತಿದ್ದು, ಸರ್ಕಾರ ತಕ್ಷಣದಿಂದಲೇ ಬರ ಕಾಮಗಾರಿಗಳನ್ನು ಆರಂಭಿಸಬೇಕೆಂದು, ತಾಲೂಕು ರೈತ ಸಂಘ ಪುಟ್ಟಣ್ಣಯ್ಯ ಬಣ ಒತ್ತಾಯಿಸಿದೆ.

ಗ್ರಾಮಗಳಲ್ಲಿ ಕುಡಿಯುವ ನೀರು ಮತ್ತು ಜಾನುವಾರುಗಳು ಮೇವಿಲ್ಲದೆ ತೊಂದರೆಯಾಗಿದ್ದು, ಸರ್ಕಾರ ಜಾನುವಾರುಗಳಿಗೆ ಮೇವು ಒದಗಿಸಲು ಕ್ರಮ ಕೈಗೊಳ್ಳಬೇಕು. ರೈತರ ಸಮಸ್ಯೆ ಬಗೆಹರಿಸಲು ಅಧಿಕಾರಿಗಳು ರಾಜಕಾರಣಿಗಳ ಗಮನಕ್ಕೆ ತರಬೇಕೆಂದು ರೈತ ಸಂಘಟನೆ ಒತ್ತಾಯಿಸಿತು.

**ಅಡಿಕೆ ಬೆಳೆಗಾರರ ಪ್ರತಿಭಟನೆ:- ೦೧/೦೮/೨೦೦೨**

ಗುಟ್ಕಾ ನಿಷೇಧ ವಿರೋಧಿಸಿ ಹಾಗೂ ಕೆಂಪು ಅಡಿಕೆಗೆ ಬೆಂಬಲ ಬೆಲೆಗೆ ಒತ್ತಾಯಿಸಿ ಚಿತ್ರದುರ್ಗ ಜಿಲ್ಲೆಯಲ್ಲಿ ಅಡಿಕೆ ಬೆಳೆಗಾರರು ಭಾರೀ ಪ್ರತಿಭಟನೆ ನಡೆಸಿದರು. ಚಿತ್ರದುರ್ಗ ತಾಲೂಕಿನಾದ್ಯಂತ ಸಹಸ್ರಾರು ಅಡಿಕೆ ಬೆಳೆಗಾರರು ಭಾಗವಹಿಸಿದ್ದು, ನಗರದ ಹೊಳಲ್ಕೆರೆ ಟೋಲ್‌ಗೇಟ್‌ನಿಂದ ಆರಂಭವಾದ ಮೆರವಣಿಗೆ, ನಗರದ ಪ್ರಮುಖ ಬೀದಿಗಳಲ್ಲಿ ಹೊರಟು, ನಂತರ ಜಿಲ್ಲಾಧಿಕಾರಿಗಳ ಕಛೇರಿ ಬಳಿ ಸಭೆ ನಡೆಸಿ ಸರ್ಕಾರವನ್ನು ಆಗ್ರಹಿಸಿದರು.

ಕರ್ನಾಟಕ ರಾಜ್ಯದಲ್ಲಿ ೧.೬೯ ಲಕ್ಷ ಹೆಕ್ಟೇರ್ ಪ್ರದೇಶವನ್ನು ಅಡಿಕೆ ಬೆಳೆಯಲಾಗುತ್ತಿದ್ದು, ಸುಮಾರು ೪.೫ ಲಕ್ಷ ಕುಟುಂಬಗಳು ಅಡಿಕೆ ಬೆಳೆಯನ್ನು ನಂಬಿಕೊಂಡು ಜೀವನ ನಡೆಸುತ್ತಿದ್ದು ಸುಮಾರು ೧೦ ಲಕ್ಷ ಕೂಲಿ ಕಾರ್ಮಿಕರಿಗೆ ಜೀವನಾಧಾರವಾಗಿದೆ.

ಗುಟ್ಕಾದಲ್ಲಿ ಶೇ.೯೦% ರಷ್ಟು ಅಡಿಕೆಯಿಂದ ಪ್ರತಿ ವರ್ಷ ರಾಜ್ಯ ಸರ್ಕಾರಕ್ಕೆ ೨೫೫ ಕೋಟಿ, ಹಾಗೂ ಕೇಂದ್ರ ಸರ್ಕಾರಕ್ಕೆ ೧೦ ಸಾವಿರ ಕೋಟಿ ಆದಾಯ ಸಂದಾಯವಾಗುತ್ತಿದೆ. ರಾಜ್ಯದಲ್ಲಿ ೧೫ ಸಾವಿರ ವರ್ತಕರಿದ್ದು ಎರಡು ಲಕ್ಷ ಜನರಿಗೆ ಉದ್ಯೋಗ ಒದಗಿಸಿದ್ದಾರೆ.

**ಡಬ್ಲ್ಯೂಟಿ ಒಪ್ಪಂದ ವಿರೋಧಿಸಿ ದಾವಣಗೆರೆ ಜಿಲ್ಲೆ ರೈತರ ಪ್ರತಿಭಟನೆ:- ೦೯/೧೦/೨೦೦೨**

ವಿಶ್ವ ವ್ಯಾಪಾರ ಸಂಘಟನೆಯ ಒಪ್ಪಂದಗಳ ನಿಯಮಗಳು ೧೦ ವರ್ಷದಿಂದ ಹಂತ ಹಂತವಾಗಿ ಜಾರಿಗೊಳ್ಳುತ್ತಾ ಬಂದಿವೆ. ಕೃಷಿ ಕ್ಷೇತ್ರದ ಮೇಲೆ ಇದರ ದುಷ್ಪರಿಣಾಮವಾಗಿ, ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂದು ಆರೋಪಿಸಿ ಭಾರತೀಯ ಕಿಸಾನ್ ಸಂಘ ನಗರದಲ್ಲಿ ಪ್ರತಿಭಟನೆ ಆರಂಭಿಸಿ ಜಿಲ್ಲಾಧಿಕಾರಿಗಳ ಮೂಲಕ ಮುಖ್ಯಮಂತ್ರಿಗಳಿಗೆ ಮನವಿ ಸಲ್ಲಿಸಿದರು.

ದೇಶದಲ್ಲಿ ವಿದೇಶಿ ಬಲಾಢ್ಯ ಬಹುರಾಷ್ಟ್ರೀಯ ಕಂಪನಿಗಳ ಎದುರು, ದೇಶೀಯ ಎರಡೂವರೆ ಲಕ್ಷ ಸಣ್ಣ ಕೈಗಾರಿಕೆಗಳು ಮುಚ್ಚಿಹೋಗಿ, ಕೋಟ್ಯಾಂತರ ಕುಟುಂಬಗಳು ನಿರ್ಗತಿಕವಾಗಿ ಕಾರ್ಮಿಕ ಹಾಗೂ ರೈತರ ಸ್ಥಿತಿ ಒಂದೇ ಆಗಿದೆ.

ವಿಶ್ವ ವ್ಯಾಪಾರ ಸಂಘಟನೆಯು ಶ್ರೀಮಂತ ದೇಶಗಳ ಬಾಲಂಗೋಸಿಯಾಗಿರುತ್ತದೆ. ಬಲಾಢ್ಯ ದೇಶಗಳು ಈ ಸಂಘಟನೆಯನ್ನು ಕೇವಲ ಅವರ ಆರ್ಥಿಕ ಹಿತರಕ್ಷಣೆಗಾಗಿ ಮಾಡಿಕೊಂಡಿದ್ದು, ಆ ದೇಶದ ರೈತರಿಗೆ ಮಾತ್ರ ಲಾಭಗಳು ಲಭ್ಯವಾಗುತ್ತಿವೆ.

ಈ ಕಾರಣದಿಂದ ಅಲ್ಲಿಯ ಕೃಷಿಯ ಉತ್ಪನ್ನಗಳು ತುಂಬಾ ಅಗ್ಗದ ದರದಲ್ಲಿ ಲಭ್ಯವಾಗುತ್ತಿದೆ. ಆದರೆ ಅಭಿವೃದ್ಧಿಶೀಲ ದೇಶಗಳ ಕೃಷಿ ಕ್ಷೇತ್ರಕ್ಕೆ ಯಾವುದೇ ಅಂತರರಾಷ್ಟ್ರೀಯ

ಮಾರುಕಟ್ಟೆಯಲ್ಲಿ ನಮ್ಮ ದೇಶದ ರೈತರು ಸ್ಪರ್ಧಿಸಲು ವಿಫಲರಾಗಿದ್ದಾರೆ, ಎಂದು ಆರೋಪಿಸಲಾಗಿದೆ. ಬರುವ ಡಿಸೆಂಬರ್‌ನಲ್ಲಿ ವಿಶ್ವ ವ್ಯಾಪಾರ ಸಂಘಟನೆಯ ಶೃಂಗ ಸಭೆಯು ಹಾಕಾಂಗ್‌ನಲ್ಲಿ ನಡೆಯಲಿದೆ. ಈ ಸಭೆಯಲ್ಲಿ ಭಾರತ ದೇಶದ ರೈತರ, ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡಲು ಕೇಂದ್ರ ಸರ್ಕಾರವು ವಿಶ್ವ ವ್ಯಾಪಾರ ಸಂಘಟನೆಯ ಮೇಲೆ ಒತ್ತಡ ತರಬೇಕು. ಒತ್ತಡಕ್ಕೆ ಮಣಿಯದಿದ್ದಲ್ಲಿ ವಿಶ್ವ ವ್ಯಾಪಾರ ಸಂಘಟನೆಯಿಂದಲೇ ಹೊರಬರಬೇಕೆಂದು ರೈತರು ಪ್ರತಿಭಟಿಸಿದರು. ಇದರಲ್ಲಿ ಕಿಸಾನ್ ಸಭಾದ ಜಿಲ್ಲಾಧ್ಯಕ್ಷ ಇಟಗಿ ಶಿವಣ್ಣ ನಿಟ್ಟೂರು ಹಾಗೂ ನೂರಾರು ರೈತರು ಭಾಗವಹಿಸಿದ್ದರು.

**ಕೃಪಾಂಕ ಮುಂದುವರೆಸಲು ಆಗ್ರಹಿಸಿ ಜಗಳೂರಿನಲ್ಲಿ ರೈತ ಸಂಘದ ಪ್ರತಿಭಟನೆ:- ೨೦/೦೫/೨೦೦೩**

ಜಗಳೂರು ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಕೃಪಾಂಕ ಮುಂದುವರೆಸಲು ಆಗ್ರಹಿಸಿ, ಮೇ ೨೦ ೨೦೦೩ ರಂದು ತಾಲ್ಲೂಕು ಕಛೇರಿಯ ಎದುರು ಸಾಂಕೇತಿವಾಗಿ ಪ್ರತಿಭಟನೆ ಮಾಡಿದರು.

ಗ್ರಾಮೀಣ ಪ್ರದೇಶದ ಶಾಲಾ ಕಾಲೇಜುಗಳ ದುಸ್ಥಿತಿ ಹಾಗೂ ವಿದ್ಯಾರ್ಥಿಗಳಿಗೆ ಸಂಜೆ ಓದಲು ಸಹ ವಿದ್ಯುತ್ ಇರುವುದಿಲ್ಲ. ಮನೆಪಾಠವಂತೂ ಇಲ್ಲವೇ ಇಲ್ಲ, ಇಂತಹ ಸಂಧರ್ಭದಲ್ಲಿ ನಗರ ಪ್ರದೇಶದವರೊಂದಿಗೆ ಸ್ಪರ್ಧಿಸಲು ಗ್ರಾಮೀಣ ಮಕ್ಕಳಿಗೆ ಕೃಪಾಂಕ ಅಗತ್ಯ. ಇದನ್ನು ಗ್ರಾಮೀಣ ಗೌರವ ಅಂಕ ಎಂದು ಪರಿಗಣಿಸಬೇಕೆಂದು ಪ್ರತಿಭಟನೆಯ ಮುಖಂಡತ್ವ ವಹಿಸಿದ ಹುಚ್ಚವನಹಳ್ಳಿ ಮಂಜುನಾಥ್‌ರವರು ಮಾತನಾಡಿ ಈ ಸೌಲಭ್ಯವು ರಾಜ್ಯದ ಕೋಟ್ಯಾಂತರ ಗ್ರಾಮೀಣ ರೈತರ ಮಕ್ಕಳಿಗೆ ನೀಡಬೇಕೆಂದು ಆಗ್ರಹಿಸಿದರು.[೭೩] ರಾಜ್ಯ ಸರ್ಕಾರಕ್ಕೆ ಎಚ್ಚರಿಕೆ ನೀಡಲು ಬರುವ ಜುಲೈ ೧ ರಂದು ಬಂದ್ ಮಾಡಿ ಪ್ರತಿಭಟನೆ ಮಾಡುವ ಚಳುವಳಿ ಹಮ್ಮಿಕೊಂಡಿದ್ದೇವೆಂದು ತಿಳಿಸಿದರು.

**ಗೋಶಾಲೆಯ ಆರಂಭಕ್ಕಾಗಿ ಜಗಳೂರು ರೈತರ ಪ್ರತಿಭಟನೆ:- ೩೧/೦೫/೨೦೦೩**

ಜಗಳೂರು ತಾಲೂಕಿನಾದ್ಯಂತ ಉಂಟಾಗಿರುವ ಬರ ಪರಿಸ್ಥಿತಿಯಿಂದ, ನೀರು ಮತ್ತು ಮೇವಿನ ಅಭಾವ ಉಂಟಾಗಿದೆ. ದನಕರುಗಳಿಗೆ ಸಮರ್ಪಕ ಮೇವು ಒದಗಿಸಬೇಕೆಂದು ಹಾಗೂ ಗೋಶಾಲೆಗಳನ್ನು ಆರಂಭಿಸಬೇಕೆಂದು ಆಗ್ರಹಿಸಿ, ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು ಜಗಳೂರು ತಾಲೂಕು ಕಚೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆ ಮಾಡಿದರು.

ಜಗಳೂರು ತಾಲೂಕಿನಲ್ಲಿ ಬರ ಪರಿಸ್ಥಿತಿಯಿಂದಾಗಿ ಹಳ್ಳಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಉಂಟಾಗಿದೆ. ದನಕರುಗಳಿಗೆ ಮೇವಿನ ಕೊರತೆಯಾಗಿದೆ. ರೈತರು ದನಕರುಗಳನ್ನು ಕಸಾಯಿಖಾನೆಗೆ ತಳುವ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಹಾಗಾಗಿ ಜಿಲ್ಲಾಡಳಿತ ತಕ್ಷಣ ಮೇವು ಸರಬರಾಜು ಮಾಡಬೇಕು. ಗೋಶಾಲೆ ಆರಂಭಿಸಬೇಕು. ಇಲ್ಲದಿದ್ದರೆ ದನಕರುಗಳನ್ನು ತಾಲೂಕು ಕಛೇರಿಯ ಆವರಣದಲ್ಲಿ ತಂದು ನಿಲ್ಲಿಸುತ್ತೇವೆ ಎಂದು ರೈತ ಮುಖಂಡರು ಆಗ್ರಹಪಡಿಸಿ, ತಹಶೀಲ್ದಾರ್‌ರಾದ ಎಂ.ಎಚ್.ಕೊಪ್ಪದ ಅವರಿಗೆ ಮನವಿ ಸಲ್ಲಿಸಿ ಪ್ರತಿಭಟನೆ ನಿಲ್ಲಿಸಿದರು.[೭೪]

ಜೂನ್ ೨ ರಂದು ತಾಲೂಕಿಗೆ ಜಿಲ್ಲಾಧಿಕಾರಿಗಳು ಎಂ.ಎಸ್. ರವಿಶಂಕರ್ ಭೇಟಿ ನೀಡಿದಾಗ ರೈತರು ಬಂದು ಮೌಖಿಕವಾಗಿ ಮನವಿ ಮಾಡಿಕೊಂಡರು. ಜಿಲ್ಲಾಧಿಕಾರಿಗಳು ಮಾತನಾಡಿ ಜಗಳೂರು ತಾಲ್ಲೂಕಿನಲ್ಲಿ ಯಾವುದೇ ಕೆರೆಯಲ್ಲಿ ನೀರಿಲ್ಲದ ಕಾರಣಗೋಶಾಲೆ ಆರಂಭಿಸಲು ತೊಂದರೆಯಾಗುತ್ತದೆ ಎಂದು ಹೇಳಿದರು. ಆಗ ಪ್ರತಿಕ್ರಿಯಿಸಿದ ಹುಚ್ಚವನಹಳ್ಳಿ ಮಂಜುನಾಥ್ ೧೦ ರಿಂದ ೨೦ ಪಂಪ್‌ಸೆಟ್‌ಗಳನ್ನು ಹಾಕಿಸಿ, ಭೂಮಿಯಿಂದ ನೀರನ್ನು ಹೊರ ತೆಗೆದು ಅಂತಹ ಜಾಗದಲ್ಲಿ ಗೋಶಾಲೆಯನ್ನು ತೆರೆಯಬಹುದೆಂದು ತಿಳಿಸಿದರು. ಅಲ್ಲದೆ ತಾಲೂಕಿಗೆ ೪ ರಿಂದ ೫ ಲೋಡ್ ಮೇವನ್ನು ಒದಗಿಸಿದ್ದರೂ ಸಹ ಅದು ಸರಿಯಾಗಿ ವಿಲೇವಾರಿಯಾಗಿಲ್ಲವೆಂದು ಜಿಲ್ಲಾಧಿಕಾರಿಗಳಿಗೆ ದೂರಿದರು.

**ವಿಮೆಯ ಹಣಕ್ಕಾಗಿ ಕಬ್ಬು ಬೆಳೆಗಾರರ ಪ್ರತಿಭಟನೆ:- ೩೦/೦೬/೨೦೦೩**

ದಾವಣಗೆರೆ ಜಿಲ್ಲೆಯ ಕಬ್ಬು ಬೆಳೆಗಾರರ ಸಂಘವು, ಬೆಳೆಗಾರರಿಗೆ ಕಬ್ಬು ಬೆಳೆಯ ವಿಮಾ ಹಣವನ್ನು ಈ ಕೂಡಲೇ ಕೊಡಬೇಕೆಂದು ಸರ್ಕಾರವನ್ನು ಆಗ್ರಹಪಡಿಸಿ, ನಗರದಲ್ಲಿ ಬೃಹತ್ ಪ್ರತಿಭಟನಾ ಮೆರವಣಿಗೆ ಮಾಡಿದರು.

ಜಿಲ್ಲೆಯ ಕಬ್ಬು ಬೆಳೆಗಾರರ ಹೋರಾಟ ಸಮಿತಿಯ ಆಶ್ರಯದಲ್ಲಿ ಏರ್ಪಾಡಾಗಿದ್ದ ಮೆರವಣಿಗೆಯು, ಬೀರಲಿಂಗೇಶ್ವರ ದೇವಸ್ಥಾನದ ಮೈದಾನದಿಂದ ಆರಂಭಗೊಂಡು, ಪಿ.ಬಿ.ರಸ್ತೆಯ ಮೂಲಕ ಜಿಲ್ಲಾಧಿಕಾರಿಗಳ ಕಚೇರಿಗೆ ತೆರಳಿದರು. ರೈತರು ಮೆರವಣಿಗೆಯಲ್ಲಿ ಒಣಗಿದ ಕಬ್ಬಿನ ಬೆಳೆಯನ್ನು ಕೈಯಲ್ಲಿ ಹಿಡಿದುಕೊಂಡು ಮೆರವಣಿಗೆಯಲ್ಲಿ ಭಾಗವಹಿಸಿ, ಸರ್ಕಾರದ ವಿರುದ್ಧ ಘೋಷಣೆಗಳನ್ನು ಹಾಕುತ್ತಾ ಸಾಗಿದರು. ವಿರಕ್ತ ಮಠದ ಶ್ರೀ ಜಯ ಮೃತ್ಯುಂಜಯ ಸ್ವಾಮೀಜಿಯವರು ಮೆರವಣಿಗೆಯಲ್ಲಿ ಪಾಲ್ಗೊಂಡು ತಮ್ಮ ಬೆಂಬಲ ವ್ಯಕ್ತಪಡಿಸಿದರು. ಜಿಲ್ಲಾಧಿಕಾರಿಗಳ ಕಛೇರಿಯ ಮುಂಭಾಗ ಬಂದ ಪ್ರತಿಭಟನಾಕಾರರು ಸಭೆಯನ್ನು ನಡೆಸಿದರು. ಸಭೆಯನ್ನು ಉದ್ದೇಶಿಸಿ ಮಾತನಾಡಿದ ಜಿಲ್ಲಾ ಕಬ್ಬು ಬೆಳೆಗಾರರ ಹೋರಾಟ ಸಮಿತಿಯ ಅಧ್ಯಕ್ಷರಾದ ಅರುಣ್‌ಕುಮಾರ್ ಕುರುಡಿ, ಕಾರ್ಯದರ್ಶಿ ಬುಳ್ಳಾಪುರದ ಹನುಮಪ್ಪ, ರವಿಕುಮಾರ್ ಬಲ್ಲೂರ್ ಮತ್ತಿತರರು ಸರ್ಕಾರದ ಕ್ರಮವನ್ನು ಖಂಡಿಸಿ ಜಿಲ್ಲಾಧಿಕಾರಿಗೆ ಮನವಿ ಪತ್ರ ಸಲ್ಲಿಸಿದ್ದರು.

ಕಬ್ಬಿನ ಬೆಳೆಗೆ ಪ್ರತಿ ಎಕರೆಗೆ ಬೀಜ, ಗೊಬ್ಬರ ಮತ್ತು ಉಳುಮೆಯ ನಷ್ಟ ೧೫,೦೦೦ರೂ. ಬೆಳೆ ಪರಿಹಾರ ಮೊತ್ತ ೧೦,೦೦೦ರೂ ಕೊಡಬೇಕು. ಬೆಳೆ ವಿಮೆ ಇದ್ದರೂ, ಇಲ್ಲದಿದ್ದರೂ ಅಂತಹ ನೀರಾವರಿ ಬೆಳೆಗಳಿಗೆ ಪ್ರತಿ ಎಕರೆಗೆ ೧೫,೦೦೦ರೂ ಕೊಡಬೇಕು. ತೋಟದ ಯಾವುದೇ ಬೆಳೆ ಇರಲಿ ಪ್ರತಿ ಎಕರೆಗೆ ೧ ಲಕ್ಷ ಪರಿಹಾರ ನೀಡಬೇಕು. ಮಳೆ ಆಶ್ರಿತ ಬೆಳೆಗಳಿಗೆ ಪ್ರತಿ ಎಕರೆಗೆ ೫,೦೦೦ರೂ. ಬೆಳೆ ಸಾಲದಿಂದ ನಷ್ಟ ಅನುಭವಿಸಿ ಆತ್ಮಹತ್ಯೆ ಮಾಡಿಕೊಂಡ ರೈತ ಕುಟುಂಬಕ್ಕೆ ೧ ಲಕ್ಷ ರೂ ಪರಿಹಾರ ಕೊಡುವುದಲ್ಲದೇ, ಆ ಕುಟುಂಬದ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ ನೀಡಬೇಕು. ಜಿಲ್ಲೆಯಲ್ಲಿ ದನಕರು, ಜಾನುವಾರುಗಳಿಗೋಸ್ಕರ ಮೇವಿನ ಬ್ಯಾಂಕ್ ತೆರೆಯಬೇಕು ಎಂದು ಮನವಿ ಪತ್ರದಲ್ಲಿ ಒತ್ತಾಯಿಸಲಾಗಿತ್ತು.[೫]

ಈ ಪ್ರತಿಭಟನೆಯಲ್ಲಿ ತಾಲೂಕು ಕಾರ್ಯದರ್ಶಿ ರೇವಣಸಿದ್ದಪ್ಪ, ಕಾನೂನು ಸಲಹೆಗಾರ ಎಲ್.ಎಚ್.ಅರುಣ್‌ಕುಮಾರ್, ಅವರೆಗೆರೆ ರುದ್ರಮುನಿ, ತೇಜಸ್ವಿಪಾಟೇಲ್, ರವಿಕುಮಾರ್ ಬಲ್ಲೂರ್, ಮತ್ತಿತರ ರೈತ ಮುಖಂಡರು ಪಾಲ್ಗೊಂಡಿದ್ದರು.

**ಕಳಪೆ ಬಿತ್ತನೆ ಬೀಜ: ಪರಿಹಾರಕ್ಕೆ ಒತ್ತಾಯಿಸಿ ಜಗಳೂರುನಲ್ಲಿ ರೈತರ ಪ್ರತಿಭಟನೆ:– ೨೧/೦೮/೨೦೦೩**

ಜಗಳೂರು ತಾಲ್ಲೂಕಿನಲ್ಲಿ ಕಳಪೆ ಬಿತ್ತನೆ ಬೀಜ ವಿತರಿಸುವ ಕೃಷಿ ಇಲಾಖೆಯ ಕಛೇರಿಯ ಎದುರು ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಕಾರ್ಯಕರ್ತರು ಪರಿಹಾರ ನೀಡಬೇಕೆಂದು ಒತ್ತಾಯಿಸಿ ಧರಣಿ ಸತ್ಯಾಗ್ರಹ ಆರಂಭಿಸಿದ್ದರು.

ಪ್ರವಾಸಿ ಮಂದಿರದಿಂದ ಹೊರಟ ರೈತ ಸಮೂಹ, ಭ್ರಷ್ಟ ಅಧಿಕಾರಿಗಳು, ಹಾಗೂ ರಾಜ್ಯ ಬೀಜ ನಿಗಮದ ಅಧಿಕಾರಿಗಳ ವಿರುದ್ಧ ಘೋಷಣೆ ಕೂಗುತ್ತಾ, ರೈತ ಸಂಪರ್ಕ ಕೇಂದ್ರ ಹಾಗೂ ಕೃಷಿ ಇಲಾಖೆ ಕಛೇರಿಗೆ ತೆರಳಿ ಸಹಾಯಕ ಕೃಷಿ ನಿರ್ದೇಶಕರಿಗೆ ಅಹವಾಲು ಸಲ್ಲಿಸಿದರು. ಸರ್ಕಾರದ ಇಲಾಖೆಯಿಂದಲೇ ಸುಮಾರು ೨೦ ಟನ್ ಕಳಪೆ ಬಿತ್ತನೆ ಬೀಜ ವಿತರಿಸಲಾಗಿದೆ. ಬಿತ್ತನೆಯಾಗಿರುವ ಬೀಜದಲ್ಲಿ ಶೇ.೩೦% ರಷ್ಟು ಮಾತ್ರ ಮೊಳಕೆ ಬಂದಿದ್ದು, ನಾಲ್ಕರಿಂದ ಏಳು ಸಾವಿರ ಎಕರೆ ಬಿತ್ತನೆ ಮಾಡಿರುವ ರೈತರು ಕಂಗಾಲಾಗಿದ್ದಾರೆ. ನೀರಾವರಿ ಜಮೀನಿಗೆ ಬಿತ್ತನೆ ಮಾಡಿರುವ ಬೀಜವೂ ಮೊಳಕೆ ಬಂದಿಲ್ಲ. ಎಂದು ರೈತ ಮುಖಂಡರು ದೂರಿದರು. ಕರ್ನಾಟಕ ಬೀಜ ನಿಗಮ ಮತ್ತು ರೈತ ಸಂಪರ್ಕ ಕೇಂದ್ರದ ಅಧಿಕಾರಿಗಳ ಬೇಜವಾಬ್ದಾರಿಯಿಂದ ರೈತರಿಗೆ ಈ ನಷ್ಟ ಉಂಟಾಗಿದೆ. ಎಕರೆಗೆ ಕನಿಷ್ಠ ಮೂರು ಸಾವಿರ ರೂ ಪರಿಹಾರ ನೀಡಬೇಕೆಂದು ಆಗ್ರಹಪಡಿಸಿದರು. ಪತ್ರಕರ್ತರೊಂದಿಗೆ ಮಾತನಾಡಿದ ಜಿಲ್ಲಾ ಪ್ರಧಾನ ಕಾರ್ಯದರ್ಶಿ ಹುಚ್ಚವನಹಳ್ಳಿ ಮಂಜುನಾಥ್ ನಷ್ಟ ಉಂಟಾಗಿರುವ ರೈತರಿಗೆ ೧.೨೦ ಕೋಟಿ ಪರಿಹಾರ ವಿತರಿಸುವವರೆಗೆ, ಹಂತ ಹಂತವಾಗಿ ಪ್ರತಿದಿನವೂ ಕೃಷಿ ಕಛೇರಿಯ ಎದುರು ಒಂದೊಂದು ಗ್ರಾಮದ ರೈತರು ಧರಣಿ ನಡೆಸುತ್ತಿದ್ದು, ಪ್ರತಿಭಟನೆಯು ಶಾಂತಿಯುತವಾಗಿ ನಡೆಯಲಿದೆ ಎಂದು ತಿಳಿಸಿದರು.[೭೬]

ರೈತ ಮುಖಂಡರು ಮಾತನಾಡಿ ಬರದ ನೋವು ಅನುಭವಿಸಿದ ರೈತರಿಗೆ ಅಧಿಕಾರಿಗಳು ಕಳಪೆ ಬೀಜ ನೀಡಿ ಮತ್ತಷ್ಟು ತೊಂದರೆ ನೀಡಿದ್ದಾರೆ. ಆದ್ದರಿಂದ ಕೃಷಿ ಇಲಾಖೆ ಅಧಿಕಾರಿಗಳು ಹಾಗೂ ರಾಜ್ಯ ಬೀಜ ನಿಗಮದ ಅಧಿಕಾರಿಗಳ ಮೇಲೆ ೪೨೦ ವಂಚನೆ ಪ್ರಕರಣ ದಾಖಲಿಸಲಾಗುವುದು ಹಾಗೂ ಪರಿಹಾರ ಕೋರಿ ಗ್ರಾಹಕರ ವೇದಿಕೆಯ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲಾಗುವುದೆಂದು ತಿಳಿಸಿದರು.

**ಹದಡಿ ಕೆರೆಗೆ ನೀರು ಬಿಡಲು ರೈತ ಪ್ರತಿಭಟನೆ:– ೨೨/೦೫/೨೦೦೪**

ದಾವಣಗೆರೆ ತಾಲೂಕಿನ ಹದಡಿ ರೈತರು ತಮ್ಮ ಹೊಲಗಳಿಗೆ ಹಾಗೂ ಕೆರೆಗೆ ನೀರು ಬಿಡುವಂತೆ ಆಗ್ರಹಿಸಿ, ನೀರಾವರಿ ಇಲಾಖೆಯ ಮುಂಭಾಗದಲ್ಲಿ ರಸ್ತೆ ತಡೆ ಚಳುವಳಿ ನಡೆಸಿದರು.

ಸುಮಾರು ೨೦ ಟ್ರಾಕ್ಟರ್‌ಗಳಲ್ಲಿ ಬಂದ ರೈತರು ನೀರಾವರಿ ಇಲಾಖೆಯ ಕಾರ್ಯಪಾಲಕ ಅಭಿಯಂತರ ಕಛೇರಿಯ ಎದುರು ಒಂದು ಗಂಟೆಗೂ ಹೆಚ್ಚು ಕಾಲ ರಸ್ತೆ ತಡೆ ನಡೆಸಿದರು. ಇಲಾಖೆಯ ಕಾರ್ಯಪಾಲಕ ಅಭಿಯಂತರರಾದ ಬಾನ್ ಅವರು ನೀರು ಹಾಯಿಸಲು ಒಪ್ಪಿದ್ದರಿಂದ ರಸ್ತೆ ತಡೆ ತೆರವುಗೊಳಿಸಿದರು.

ಭದ್ರಾ ಜಲಾಶಯದಿಂದ ಬಿಡುವ ನೀರು ಹದಡಿ ಕೆರೆಗೆ ನಿಗದಿಪಡಿಸಿದ ೧೦ ದಿನಗಳಲ್ಲಿ ೭ ದಿನ ಕಳೆದರೂ, ಒಂದು ಹನಿ ನೀರೂ ಹೊಲ, ಗದ್ದೆ, ಕೆರೆಗಳಿಗೆ ಹರಿಯಲಿಲ್ಲ. ಕಾರಣ ಕೆರೆಗೆ ಬರುವ ನೀರಿನ ಕೊಳವೆ ಮಾರ್ಗಗಳನ್ನು ಎತ್ತರಿಸಿದ್ದರಿಂದ ನೀರು ಬಂದಿರಲಿಲ್ಲ. ಹಾಗಾಗಿ ರೈತರು ಪ್ರತಿಭಟನೆ ಅರಂಭಿಸಿ ರಸ್ತೆ ತಡೆ ಮಾಡಿ ನೀರು ಹಾಯಿಸುವಂತೆ ಒತ್ತಾಯಿಸಿದರು. ಆಗ ಇಂಜಿನಿಯರ್ ಬಾನ್‌ರವರು ರೈತರ ಜೊತೆ ಸೇರಿ ಕುರ್ಕಿ ಬಳಿ ಇರುವ ಮುಖ್ಯ ಚಾನಲ್ ಗೇಟ್ ಹತ್ತಿರ ತೆರಳಿ, ಹದಡಿ ಕೆರೆ ಹಾಗೂ ಚಾನಲ್‌ಗೆ ೬೫ ಕ್ಯೂಸೆಕ್ ನೀರು ಬಿಡಿಸುವಲ್ಲಿ ಯಶಸ್ವಿಯಾದರು. ಈ ಪ್ರತಿಭಟನೆಯಲ್ಲಿ ಹಸಿರು ಸೇನೆಯ ಸಂಚಾಲಕ ಹುಚ್ಚವನಹಳ್ಳಿ ಮಂಜುನಾಥ, ನಿಟುವಳ್ಳಿ ಕೆಂಗಪ್ಪ, ಗಂಗನಕಟ್ಟೆ ತಿಪ್ಪಣ್ಣ, ಹದಡಿ ಶೇಖರಪ್ಪ, ಹಾಲಪ್ಪ, ಕರಿಯಪ್ಪರವರ ನೇತೃತ್ವದಲ್ಲಿ ನೂರಾರು ರೈತರು ಪಾಲ್ಗೊಂಡಿದ್ದರು.

**ಮಾನ್ಸೆಂಟೋ ಕಂಪನಿ ವಿರೋಧಿಸಿ ಜಗಳೂರು ರೈತರ ಪ್ರತಿಭಟನೆ:– ೧೮/೦೮/೨೦೦೪**

ಜಗಳೂರು ತಾಲೂಕಿನ ಕೊಡದಗುಡ್ಡ, ಬಸವಾಪುರ ಗ್ರಾಮಗಳ ರೈತರು ಸುಮಾರು ೧೦೦ ಎಕರೆ ಜಮೀನಿಗೆ ಮಹಿಕೋ–ಮಾನ್ಸೆಂಟೋ ಕಂಪನಿಯ ರೋಗ ನಿರೋಧಕ ಬಿ.ಟಿ. ಹತ್ತಿ ಬೆಳೆ ಹಾಕಿದರು. ಈ ಹತ್ತಿ ಬೆಳೆಗೆ ರೋಗ ತಗುಲಿ ರೈತರಿಗೆ ಅಧಿಕ ನಷ್ಟ ಉಂಟಾಯಿತು. ಕಾರಣ ಈ ಬಿ.ಟಿ. ಬೀಜ ಪ್ರತಿ ೪೫೦ ಗ್ರಾಂ ಒಂದಕ್ಕೆ. ಪ್ಯಾಕ್‌ಗೆ ೬೦೦ ರೂ ಬೆಲೆ ತೆತ್ತು ತಂದಿದ್ದರು. ಬಿತ್ತನೆಯಾದ ಮೇಲೆ ಸುಮಾರು ಐದಾರು ಸಾವಿರ ರೂಗಳನ್ನು ಪ್ರತಿ ಎಕರೆಗೆ ಔಷಧಿ ಗೊಬ್ಬರಗಳಿಗೆ ವೆಚ್ಚ ಮಾಡಿದ್ದರೂ ಪ್ರಯೋಜನವಿಲ್ಲದಂತಾಯಿತು. ಕಂಪನಿಯವರು ಸೂಚನೆ ನೀಡಿದಂತೆ ಐದಾರು ಬಾರಿ ಔಷಧಿ ಸಿಂಪಡಿಸಿ ಗೊಬ್ಬರ ಹಾಕಿದರು. ರೋಗ ಹತೋಟಿಗೆ ಬರಲಿಲ್ಲ. ಹತ್ತಿ ಬೀಜ ಬಿತ್ತಿ ಅದು ಹೂವಾಗಿ ಕಾಯಿ ಬಲಿಯಲಿಕ್ಕೆ ಬಂದಾಗ, ರೋಗ ಕಾಣಿಸಲು ಪ್ರಾರಂಭವಾಗುತ್ತಿತ್ತು ಇದರಿಂದಾಗಿ ಈ ಭಾಗದ ರೈತರು ಆತಂಕಕ್ಕೀಡಾದರು.

ಬಿ.ಟಿ. ತಂತ್ರಜ್ಞಾನದ ಬಿ.ಟಿ. ಹತ್ತಿ ಬೆಳೆ ವಿಶ್ವದ ಯಾವುದೇ ಭಾಗದಲ್ಲೂ ಯಶಸ್ಸು ಕಂಡಿಲ್ಲ. ರೋಗ ತಡೆಗಟ್ಟಲು ಸಾಧ್ಯವಾಗಿಲ್ಲ. ಕೃಷಿ ಇಲಾಖೆ ಈ ಬಗ್ಗೆ ಗಮನ ಹರಿಸಿ ಪರಿಹಾರ ಅಥವಾ ಪರ್ಯಾಯ ವ್ಯವಸ್ಥೆ ಕಲ್ಪಿಸಬೇಕೆಂದು ಹುಚ್ಚವನಹಳ್ಳಿ ಮಂಜುನಾಥರವರ ನೇತೃತ್ವದಲ್ಲಿ ದಾವಣಗೆರೆಯ ಕೃಷಿ ಇಲಾಖೆ ಮುಂದೆ ಪ್ರತಿಭಟನೆ ಮಾಡಿದರು.[೭೭] ಆ ಸಮಯದಲ್ಲಿ ಬಂದ ಕೃಷಿ ಅಧಿಕಾರಿಗಳು ಹತ್ತಿ ಬೆಳೆದ ಜಮೀನುಗಳಿಗೆ ಭೇಟಿ ನೀಡಿ ರೋಗ ತಡೆಗಟ್ಟಲು ಸಲಹೆ ಹಾಗೂ ಪರಿಹಾರ ನೀಡುವ ಭರವಸೆ ನೀಡಿದರು.

**ಅತಿವೃಷ್ಟಿ: ಪರಿಹಾರಕ್ಕೆ ಜಗಳೂರು ರೈತ ಸಂಘದ ಪ್ರತಿಭಟನೆ:- ೦೧/೧೦/೨೦೦೫**

ಜಗಳೂರು ತಾಲೂಕಿನಾದ್ಯಂತ ಸುರಿದ ಭಾರೀ ಮಳೆಯಿಂದಾಗಿ ಸಾವಿರಾರು ಎಕರೆ ಬೆಳೆ ಹಾನಿಯಾಗಿದ್ದು ಶೇಂಗಾ, ರಾಗಿ, ಮೆಕ್ಕೆಜೋಳ, ಈರುಳ್ಳಿ ಬೆಳೆ ಶೇಕಡ ೮೦% ರಷ್ಟು ನಾಶವಾಗಿದೆ. ಹಾಗಾಗಿ ಜಿಲ್ಲಾಧಿಕಾರಿಗಳು ಜಗಳೂರು ತಾಲೂಕನ್ನು ಅತಿವೃಷ್ಟಿ ತಾಲೂಕು ಎಂದು ಘೋಷಿಸಬೇಕು ಹಾಗೂ ತಕ್ಷಣವೇ ಸರ್ವೇ ಮಾಡಿ ತೊಂದರೆಗೀಡಾದ ರೈತರಿಗೆ ಪರಿಹಾರ ನೀಡಬೇಕೆಂದು, ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಮುಖಂಡ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ನೂರಾರು ರೈತರು ಪ್ರತಿಭಟನೆ ಮಾಡಿದರು.

**ಮೆಕ್ಕೆಜೋಳದ ಖರೀದಿ ಅವಧಿ ವಿಸ್ತರಣೆಗೆ ರೈತ ಪ್ರತಿಭಟನೆ:- ೦೨/೦೪/೨೦೦೯**

ದಾವಣಗೆರೆ ಜಿಲ್ಲೆಯ ಮಳೆಯಾಶ್ರಿತ ಪ್ರದೇಶದ ಮೆಕ್ಕೆಜೋಳ ಖರೀದಿಯನ್ನು ಮಾರ್ಚ್ ೩೧ ೨೦೦೯ ರಂದು ನಿಲ್ಲಿಸಲಾಗಿದೆ. ಮುಕ್ತ ಮಾರುಕಟ್ಟೆಯಲ್ಲಿ ಬೆಂಬಲ ಬೆಲೆಗಿಂತ ಕಡಿಮೆ ಬೆಲೆ ಇದ್ದು, ಸರ್ಕಾರ ಬೆಂಬಲ ಬೆಲೆಯಲ್ಲಿ ಮೆಕ್ಕೆಜೋಳ ಖರೀದಿಯನ್ನು ಮುಂದುವರಿಸಬೇಕು. ಕಾರಣ ಜಿಲ್ಲೆಯಲ್ಲಿ ೧೪ ಲಕ್ಷ ಕ್ವಿಂಟಾಲ್ ಮೆಕ್ಕೆಜೋಳವನ್ನು ಖರೀದಿ ಕೇಂದ್ರಗಳ ಮೂಲಕ ಖರೀದಿಸಲಾಗಿದೆ. ಇನ್ನೂ ಖರೀದಿ ಕೇಂದ್ರಕ್ಕೆ ಬರುವ ಕನಿಷ್ಠ ೨೦ ಲಕ್ಷ ಟನ್ ಮೆಕ್ಕೆಜೋಳ ಜಿಲ್ಲೆಯಲ್ಲಿ ದಾಸ್ತಾನು ಇದೆ ಎಂದು ಆಗ್ರಹಿಸಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾ ಕಾರ್ಯಕರ್ತರು, ಕೊಗ್ಗನೂರಿನ ಬಳಿ ರಾಷ್ಟ್ರೀಯ ಹೆದ್ದಾರಿಯನ್ನು ಏಪ್ರಿಲ್ ೨ ರಂದು ಬಂದ್ ಮಾಡುವ ಮೂಲಕ ಪ್ರತಿಭಟನೆ ಮಾಡಿದರು.

ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾಧ್ಯಕ್ಷ ಹೊನ್ನೂರು ಮುನಿಯಪ್ಪ, ರೈತ ಮುಖಂಡ ಬುಳ್ಳಾಪುರದ ಹನುಮಂತಪ್ಪ, ಚಿಕ್ಕನಹಳ್ಳಿ ರೇವಣಸಿದ್ದಪ್ಪ ಮುಂತಾದ ರೈತ ಮುಖಂಡರು ಮಾತನಾಡಿ, ಮೆಕ್ಕೆಜೋಳ ಖರೀದಿ ಕೇಂದ್ರವನ್ನು ಮುಂದುವರೆಸದಿದ್ದರೆ, ಹಂತಹಂತವಾಗಿ ಹೋರಾಟ ಮಾಡುವುದಾಗಿ ಎಚ್ಚರಿಸಿದರು. ಸುಮಾರು ಒಂದು ಗಂಟೆಗೂ ಹೆಚ್ಚು ಕಾಲ ರಾಷ್ಟ್ರೀಯ ಹೆದ್ದಾರಿ ೪ ರಲ್ಲಿ ರಸ್ತೆ ತಡೆ ಮಾಡಿದ್ದರಿಂದ ವಾಹನ ಸಂಚಾರ ಸಂಪೂರ್ಣ ಬಂದ್ ಆಗಿತ್ತು. ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರವರು ರೈತರನ್ನು ಸಮಾಧಾನಪಡಿಸಿ, ಎರಡು ದಿನಗಳ ಕಾಲಾವಕಾಶ ನೀಡಿ ಮೆಕ್ಕೆಜೋಳ ಖರೀದಿ ಕೇಂದ್ರ ಮುಂದುವರೆಸಲು ಸರ್ಕಾರಕ್ಕೆ ಮನವಿ ಸಲ್ಲಿಸಲಾಗುವುದೆಂದು ಭರವಸೆ ನೀಡಿದರು ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.[೮೮]

ಏಪ್ರೀಲ್ ೩ ೨೦೦೯ ರಂದು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಕಾರ್ಯಕರ್ತರು ಎರಡನೇ ಬಾರಿಗೆ ಹುಣಸೆಕಟ್ಟೆ ಬಳಿ ಹೆದ್ದಾರಿ ಬಂದ್ ಮಾಡಿ ಮೆಕ್ಕೆಜೋಳ ಖರೀದಿ ಕೇಂದ್ರವನ್ನು ಆರಂಭಿಸುವಂತೆ ಒತ್ತಾಯಿಸಿದರು. ಪ್ರತಿಭಟನೆಯಲ್ಲಿ ಹುಣಸೇಕಟ್ಟೆ, ಮಂಡಲೂರು, ಕಾಟೆಹಳ್ಳಿ, ಗುಮ್ಮನೂರು, ಗುಡಾಳ್, ಹೆಬ್ಬಾಳ್, ಲಕ್ಕಮುತ್ತೇನಹಳ್ಳಿ, ನೀರ್ಥಡಿ ಗ್ರಾಮದ ಸಾವಿರಾರು ರೈತರು ಪಾಲ್ಗೊಂಡಿದ್ದರು. ಖರೀದಿ ಕೇಂದ್ರ ಆರಂಭಿಸುವವರೆಗೂ

ಪ್ರತಿಭಟನೆಯನ್ನು ಹಂತ ಹಂತವಾಗಿ ಪ್ರತಿ ದಿನ ಮುಂದುವರೆಸುವುದಾಗಿ ಹೇಳಿ, ಏಪ್ರೀಲ್ ೪ ಮತ್ತು ೬ ರಂದು ಸುಲ್ತಾನಿಪುರ ಹಾಗು ಅಣಜಿಯಲ್ಲಿ ಪ್ರತಿಭಟನೆ ನಡೆಸಲಾಗುವುದೆಂದು ಹೇಳಿದರು.

ರೈತ ಪ್ರತಿಭಟನೆ ಮುಂದುವರೆದಿದ್ದು ಏಪ್ರೀಲ್ ೪ ೨೦೦೯ ರಂದು ನೂರಾರು ರೈತರು ಮೆಕ್ಕೆಜೋಳದ ಖರೀದಿ ಕೇಂದ್ರವನ್ನು ಆರಂಭಿಸುವಂತೆ ಒತ್ತಯಿಸಿ ಸುಲ್ತಾನಿಪುರದಲ್ಲಿ ರಸ್ತೆ ತಡೆ ನಡೆಸಿದರು. ಪ್ರತಿಭಟನೆಯಲ್ಲಿ ಈಚಘಟ್ಟ, ಚಿನ್ನಸಮುದ್ರ, ನರಗನಹಳ್ಳಿ, ಹೊನ್ನನಾಯಕನಹಳ್ಳಿ, ಬಾವಿಹಾಳ್ ಗಂಗನಕಟ್ಟೆ, ಕೊಡಗನೂರು, ನೇರ್ಲಿಗೆ ಹಾಗೂ ಇನ್ನಿತರ ಮೆಕ್ಕೆಜೋಳ ಬೆಳೆದ ಗ್ರಾಮಗಳ ರೈತರು ಭಾಗಹಿಸಿದ್ದರು.

ಮೆಕ್ಕೆಜೋಳ ಖರೀದಿ ಕೇಂದ್ರವನ್ನು ಆರಂಭಿಸುವಂತೆ ಒತ್ತಾಯಿಸಿದ್ದರು ಸರ್ಕಾರ ವಿಳಂಬ ನೀತಿಯನ್ನು ಅನುಸರಿಸುತ್ತಿದೆಯೆಂದು ವಿರೋಧಿಸಿ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ವತಿಯಿಂದ ಏಪ್ರೀಲ್ ೬ ೨೦೦೯ ರಂದು ಅಣಜಿಯಲ್ಲಿ ರಸ್ತೆ ತಡೆ ಮಾಡಿ ಪ್ರತಿಭಟನೆ ಮಾಡಿದರು. ಈ ಪ್ರತಿಭಟನೆಯಲ್ಲಿ ಹುಲಿಕಟ್ಟೆ, ಚಿಕ್ಕವನಾಗ್ತಿಹಳ್ಳಿ, ದ್ಯಾಮವ್ವನಹಳ್ಳಿ, ಹೆಮ್ಮನಬೇತೂರು, ಕಿತ್ತೂರು, ಕುರುಡಿ, ಗೊಲ್ಲರಹಳ್ಳಿ ಗ್ರಾಮದ ರೈತರು ಭಾಗವಹಿಸಿದ್ದರು.

ಏಪ್ರೀಲ್ ೭ ೨೦೦೯ ರಂದು ಪ್ರತಿಭಟನೆ ಮುಂದುವರೆದು ಮೆಕ್ಕೆಜೋಳ ಬೆಂಬಲ ಬೆಲೆ ಖರೀದಿ ಹಾಗೂ ಖರೀದಿಸಿದ ಮೆಕ್ಕೆಜೋಳಕ್ಕೆಹಣ ಪಾವತಿ ಮಾಡಲು ಒತ್ತಾಯಿಸಿ ಕೊಗ್ಗನೂರಿನ ರಾಷ್ಟ್ರೀಯ ಹೆದ್ದಾರಿಯಲ್ಲಿ ಸಾವಿರಾರು ರೈತರು ರಸ್ತೆ ತಡೆ ಮಾಡಿದರು. ಇದರಿಂದ ಪೋಲಿಸರು ಸುಮಾರು ೧೯ ರೈತ ಮುಖಂಡರನ್ನು ಬಂಧಿಸಿ ನಂತರ ಬಿಡುಗಡೆ ಮಾಡಿದರು.[೯] ರೈತರ ಪ್ರತಿಭಟನೆಗೆ ಪ್ರತಿಕ್ರಯಿಸಿ ಸರ್ಕಾರ ಏಪ್ರಿಲ್ ೮ ರಂದು ಖರೀದಿ ಕೇಂದ್ರವನ್ನು ಪ್ರಾರಂಭಿಸಿತು.

**ಭತ್ತಕ್ಕೆ ವೈಜ್ಞಾನಿಕ ಬೆಲೆಗಾಗಿ-ರೈತ ಪ್ರತಿಭಟನೆ:- ೧೧/೦೫/೨೦೧೧**

ದಾವಣಗೆರೆ ಜಿಲ್ಲೆಯ ಪ್ರಮುಖ ಬೆಳೆ ಭತ್ತವಾಗಿದ್ದು, ರೈತರು ಬೆಳೆದ ಭತ್ತಕ್ಕೆ ವೈಜ್ಞಾನಿಕ ಬೆಲೆ ನೀಡುವಂತೆ ಆಗ್ರಹಿಸಿ ಮುಖ್ಯಮಂತ್ರಿಗಳಿಗೆ ಮನವಿ ಸಲ್ಲಿಸಿದ್ದರೂ, ಬೇಡಿಕೆ ಈಡೇರಿಲ್ಲ. ಆದ್ದರಿಂದ ಈ ರೀತಿಯ ರೈತ ವಿರೋಧ ನೀತಿಯನ್ನು ಖಂಡಿಸಿ ಸ್ವಾತಂತ್ರ್ಯ ಸಂಗ್ರಾಮದ ರೀತಿಯಿಲ್ಲಿಮೇ ೧೧ರಿಂದ ೧೮ ರವರೆಗೆ ಜಾಗೃತಿ ಜಾಥಾ, ಬಹಿರಂಗ ಸಭೆ ಹಾಗು ಪ್ರತಿಭಟನೆ ನಡೆಸಲಾಗುವುದೆಂದು ತಿಳಿಸಿದರು. ದಿನಾಂಕ ೧೧ ರಂದು ದಾವಣಗೆರೆ ತಾಲೂಕಿನ ಹಳ್ಳಿಗಳಲ್ಲಿ ದಿನಾಂಕ ೧೩,೧೪ ರಂದು ಚನ್ನಗಿರಿ, ದಿನಾಂಕ ೧೫ ರಂದು ಹೊನ್ನಾಳಿ, ದಿನಾಂಕ ೧೬, ೧೭ರಂದು ಹರಿಹರ ತಾಲೂಕಿನಲ್ಲಿ ಜಾಗೃತಿ ಜಾಥಾ ನಡೆಯಲಿದೆ. ದಿನಾಂಕ ೧೮ ರಂದು ಬೆಳಗ್ಗೆ ೧೧ ಗಂಟೆಗೆ ಜಿಲ್ಲಾಧಿಕಾರಿಯ ಕಛೇರಿಯ ಮುಂದೆ ಪ್ರತಿಭಟನೆ ಮಾಡಲಾಗುವುದು ಈ ಪ್ರತಿಭಟನೆಯಲ್ಲಿ ರೈತರು ಭಾಗವಹಿಸುವಂತೆ ಮನವಿ ಮಾಡಿಕೊಂಡರು.

**ಬಗರ್ ಹುಕುಂ ಸಾಗುವಳಿ ಹಕ್ಕು ಒತ್ತಾಯಿಸಿ ಜಗಳೂರು ರೈತರ ಪ್ರತಿಭಟನೆ:- ೨೮/೦೫/೨೦೧೨**

ಜಗಳೂರು ತಾಲ್ಲೂಕಿನಲ್ಲಿ ನೂರಾರು ವರ್ಷಗಳಿಂದಲೂ ಬಗರ್ ಹುಕುಂ ಸಾಗುವಳಿಯಲ್ಲಿ ತೊಡಗಿಕೊಂಡಿದ್ದ ರೈತರು ಫಾರಂ ೫೦ ಮತ್ತು ಫಾರಂ ೫೩ ಭೂ ಮಂಜೂರಾತಿಗಾಗಿ ಅರ್ಜಿ ಸಲ್ಲಿಸಿದ್ದಾರೆ. ಆದರೆ ಸರ್ಕಾರಗಳು ಮತ್ತು ಅಧಿಕಾರಿ ವರ್ಗದವರು ಈವರೆಗೆ ಸರಿಯಾಗಿ ಕ್ರಮ ಕೈಗೊಳ್ಳದೆ ಕಾಲಕಾಲಕ್ಕೆ ರಚಿಸಬೇಕಾದ ಸಮಿತಿಗಳನ್ನು ರಚಿಸದೇ, ಬಡ ರೈತ ವರ್ಗದ ಕುಟುಂಬಗಳ ಮೇಲೆ ದೌರ್ಜನ್ಯವೆಸಗಿದ್ದಾರೆ. ಇದನ್ನು ವಿರೋಧಿಸಿದ ತಾಲೂಕು ರೈತ ಸಂಘ ಮೇ ೨೭.೨೦೧೨ ರಂದು ಬೆಳಗ್ಗೆ ೧೧ ಗಂಟೆಗೆ ತಹಶೀಲ್ದಾರ್ ಕಛೇರಿಯ ಮುಂಬಾಗ ಬಗರ್‌ಹುಕುಂ ಸಾಗುವಳಿ ಹಕ್ಕು ಒತ್ತಾಯಿಸಿ, ಹಸಿರು ಸೇನೆ ತಾಲ್ಲೂಕು ಅಧ್ಯಕ್ಷ ಕಾನನಕಟ್ಟೆ ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ ಬೃಹತ್ ಪ್ರತಿಭಟನೆ ಮಾಡಿದರು.

ಮಾನವೀಯತೆ ದೃಷ್ಟಿಯಿಂದ ಸರ್ಕಾರಗಳು ಕೆಲ ರೈತರಿಗೆ ಸಾಗುವಳಿ ಹಕ್ಕುಪತ್ರ ನೀಡಿದರೂ, ಅದಕ್ಕೆ ಮಾನ್ಯತೆ ಕೊಡದೇ ಅರಣ್ಯ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಪಟ್ಟಾ ಇರುವ ಭೂಮಿಗಳ ಮೇಲೂ ಪ್ರಕರಣ ದಾಖಲಿಸಿದ್ದಾರೆ. ಇದು ಇಲಾಖೆಯ ಅಧಿಕಾರಿಗಳ ಮೌಢ್ಯ ಅಥವಾ ಮೂರ್ಖತನವೆಂದು ಪರಿಗಣಿಸಬೇಕಾಗಿದೆ. ಸೆಕ್ಷೆನ್-೪ ಎಂಬ ಅಸಂವಿಧಾನಿಕ ವಿಧಾನದಿಂದ ರೈತರ ಭೂಮಿಗಳನ್ನು ಕಾಯ್ದಿಟ್ಟ ಅರಣ್ಯವೆಂದು ಕರೆದುಕೊಂಡು ಅಮಾಯಕ ರೈತರನ್ನು ಒಕ್ಕಲೆಬ್ಬಿಸುತ್ತಿದ್ದಾರೆ. ಮಾನವನ ಶಕ್ತಿ ಸಂಪತ್ತಿನಿಂದ ಬಂಜರನ್ನು ಹಸನುಗೊಳಿಸಿಕೊಂಡ ಭೂಮಿಯಲ್ಲಿ, ಭಾರೀ ಯಂತ್ರಗಳನ್ನು ಬಳಸಿ ಆಳೆತ್ತರದ ಟ್ರಂಚ್ ನಿರ್ಮಾಣ ಮಾಡಿ ರೈತರನ್ನು ಬೆದರಿಸುತ್ತಿರುವ ಅರಣ್ಯ ಇಲಾಖೆಯ ಕ್ರಮವನ್ನು ಉಗ್ರವಾಗಿ ಖಂಡಿಸಲಾಯಿತು.

ಅರಣ್ಯ ಇಲಾಖೆಯವರು ಗಾಳಿ ಫ್ಯಾನ್ ಹಾಕುವವರಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ, ಗ್ರಾಮ ಲೆಕ್ಕಿಗರು ತಹಶೀಲ್ದಾರ್‌ರವರಿಗೆ ಮತ್ತು ಮೇಲಾಧಿಕರಿಗಳಿಗೆ ಸುಳ್ಳು ಮಾಹಿತಿ ನೀಡುವುದರಿಂದ ರೈತರಿಗೆ ಅನ್ಯಾಯವಾಗುತ್ತಿದೆ. ಮಾನ್ಯ ಉಚ್ಚನ್ಯಾಯಾಲಯ ಹಾಗೂ ಘನವೆತ್ತ ಸರ್ವೋಚ್ಚ ನ್ಯಾಯಾಲಯಗಳು ನೀಡಿದ ನಿರ್ದೇಶನಗಳು, ಜನ ಮತ್ತು ಜಾನುವಾರುಗಳ ಕ್ಷೇಮಕ್ಕಾಗಿ ಭೂಮಿಯನ್ನು ಉಳುಮೆ ಮಾಡಿಕೊಂಡವರಿಗಾಗಿ, ಅರಣ್ಯವಾಸಿಗಳಿಗಾಗಿ, ಆದಿವಾಸಿಗಳಿಗಾಗಿ, ಬುಡಕಟ್ಟು ಜನರಿಗಾಗಿ ಮತ್ತು ಅದಕ್ಕೆ ತತ್ಸಮವೆನಿಸುವ ಇತರೆ ೧೮೫ ಸಣ್ಣ ಮತ್ತು ಅತೀ ಸಣ್ಣ ಜನಾಂಗಗಳಿಗೆ ಅನ್ವಯವಾಗುತ್ತದೆ. ರೈತರ ಕ್ಷೇಮವನ್ನು ದಮನಗೊಳಿಸುವ ಪ್ರಯತ್ನದಲ್ಲಿ ತೊಡಗಿರುವ ಅಧಿಕಾರಿಗಳ ಕ್ರಮವನ್ನು ವಿರೋಧಿಸಿ ನೂರಾರು ರೈತರು ಪ್ರತಿಭಟನೆ ಮಾಡಿ ಬಗರ್ ಹುಕುಂ ಸಾಗುವಳಿ ಹಕ್ಕು ಒತ್ತಾಯಿಸಿ ನಮೂನೆ ೫೩ರ ಭೂಮಂಜೂರಾತಿ ಅರ್ಜಿಯನ್ನು ತಹಶೀಲ್ದಾರರಿಗೆ ನೀಡಿದರು.[೮೦]

**ಸತತ ೧೨ ತಾಸು ವಿದ್ಯುತ್‌ಗಾಗಿ ರೈತ ಪ್ರತಿಭಟನೆ ಬೆಸ್ಕಾಂ ಮತ್ತು ತಾಲೂಕು ಕಚೇರಿಯ ಮುತ್ತಿಗೆ:- ೦೪/೦೨/೨೦೧೩**

ಸರ್ಕಾರ ಸರಿಯಾದ ರೀತಿಯಲ್ಲಿ ರೈತರಿಗೆ ಮತ್ತು ವಿದ್ಯಾರ್ಥಿಗಳಿಗೆ ವಿದ್ಯುತ್ ನೀಡದಿರುವದನ್ನು ಖಂಡಿಸಿ, ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ನೂರಾರು ರೈತರು ಹಾಗೂ ಪುಟಾಣಿ ವಿದ್ಯಾರ್ಥಿಗಳು ಹಸಿರು ಶಾಲನ್ನು ಹಾಕಿಪ್ರತಿಭಟನೆ ಮಾಡಿದರು. ಜಗಳೂರು ತಾಲೂಕಿನ ಪಟ್ಟಣದ ಪ್ರವಾಸಿ ಮಂದಿರದಿಂದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಸಿ, ಬೆಸ್ಕಾಂ ಹಾಗೂ ತಾಲೂಕು ಕಚೇರಿಯನ್ನು ಮುತ್ತಿಗೆ ಹಾಕಿದರು.

ವಿದ್ಯಾರ್ಥಿಗಳಿಗೆ ಮುಂಬರುವ ದಿನಗಳಲ್ಲಿ ಪರೀಕ್ಷೆಗಳು ಆರಂಭವಾಗುವದರಿಂದ ರಾತ್ರಿಯ ಸಂದರ್ಭದಲ್ಲಿ ಸಮರ್ಪಕ ವಿದ್ಯುತ್ ನೀಡಬೇಕು. ಹಾಗೂ ರೈತರ ಪಂಪ್‌ಸೆಟ್‌ಗಳಿಗೆ ರಾತ್ರಿ ವೇಳೆ ವಿದ್ಯುತ್ ನೀಡುವುದರಿಂದ ರೈತರು ಇಡೀ ರಾತ್ರಿ ಜಾಗರಣೆ ಮಾಡಬೇಕಾದಂತಹ ಪ್ರಸಂಗ ಎದುರಾಗಿದೆ. ರಾತ್ರಿ ಸಮಯದಲ್ಲಿ ಒಂದೆರೆಡು ಘಂಟೆ ವಿದ್ಯುತ್ ನೀಡಿ ನಾಲ್ಕೈದು ಭಾರಿ ಕಡಿತಗೊಳಿಸುತ್ತಾರೆ. ಇದರಿಂದ ರೈತರು ಪಂಪ್‌ಸೆಟ್‌ನಿಂದ ದೂರದ ಜಮೀನುಗಳಿಗೆ ಹೋಗುವಾಗ ವಿಷಜಂತುಗಳಿಗೆ ತುತ್ತಾಗಿ, ರೈತರು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ಇದರಿಂದಾಗಿ ಹಗಲು ವೇಳೆ ನಿರಂತರ ೧೨ ತಾಸು ಕೃಷಿ ನಿರತ ರೈತರಿಗೆ ವಿದ್ಯುತ್ ನೀಡಬೇಕು.

ಈ ವಿಷಯ ತಿಳಿದ ಅಧಿಕಾರಿಗಳು ಮತ್ತು ಸರ್ಕಾರ ಇದರ ಬಗ್ಗೆ ಗಮನ ಹರಿಸದೆ ಜಾಣ ಕುರುಡನಂತೆ ವರ್ತಿಸುತ್ತಿದೆ ಎಂದು ಅಸಮಧಾನ ವ್ಯಕ್ತಪಡಿಸಿದರು. ಈ ಕೂಡಲೆ ತಲೆದೋರಿರುವ ವಿದ್ಯುತ್ ಸಮಸ್ಯೆಯನ್ನು ಬಗೆಹರಿಸದೇ ಹೋದಲ್ಲಿ ರಾಷ್ಟ್ರೀಯ ಹೆದ್ದಾರಿ–೧೩ ಬಂದ್ ಮಾಡಲಾಗುವುದೆಂದು ಎಚ್ಚರಿಸಿದರು.[೮೧]

ತಾಲೂಕಿನಲ್ಲಿರುವ ಟಿಸಿ ಪೆಟ್ಟಿಗೆಗಳು ಓವರ್‌ಲೋಡ್ ಆಗಿ ಪದೇ ಪದೇ ಸುಟ್ಟು ಹೋಗುತ್ತಿವೆ. ಇದರಿಂದ ರೈತರ ಬೆಳೆಗಳು ಕೈಗೆ ಬಂದ ತುತ್ತು, ಬಾಯಿಗೆ ಬರದಂತಾಗಿರುವುದು ಮಾಮೂಲಾಗಿದೆ. ಇದರಿಂದಾಗಿ ಬೆಸ್ಕಾಂ ಅಧಿಕಾರಿಗಳು ಮತ್ತು ರಾಜ್ಯ ಸರ್ಕಾರ ತಾಲೂಕಿಗೆ ಹೆಚ್ಚುವರಿಯಾಗಿ ೨೦೦ ಟಿಸಿಗಳನ್ನು ಬಜೆಟ್‌ನಲ್ಲಿ ಮಂಜೂರು ಮಾಡಬೇಕು. ಬೆಂಗಳೂರು ಕಂಪನಿಗೆ ದಾವಣಗೆರೆ, ಚಿತ್ರದುರ್ಗ, ತುಮಕೂರು, ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳನ್ನು ಸೇರಿಸಿದ್ದಾರೆ. ಇದರಿಂದಾಗಿ ಹೆಚ್ಚು ವಿದ್ಯುತ್ ಬೃಹತ್ ಕೈಗಾರಿಕೆಗಳಿಗೆ ಬಳಕೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುತ್ ಪೂರೈಕೆ ಮಾಡುತ್ತಿಲ್ಲವೆಂದು ಆರೋಪಿಸಿ ಕೂಡಲೇ ತುಮಕೂರು, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳನ್ನು ಪ್ರತ್ಯೇಕಿಸಬೇಕೆಂದು ಒತ್ತಾಯಿಸಿದರು.[೮೨]

ಈ ಸಂದರ್ಭದಲ್ಲಿ ಬೆಸ್ಕಾಂ ಇಲಾಖೆಯ ಎ.ಇ.ಇ ಮಂಜುನಾಥ ಮಾತನಾಡಿ, ಮೇಲಿನ ಅಧಿಕಾರಿಗಳೊಂದಿಗೆ ಈ ಬಗ್ಗೆ ಪತ್ರ ವ್ಯವಹಾರ ನಡೆಸಿದ್ದು, ಇದೇ ತಿಂಗಳು ೧೦ ರಿಂದ ೬ ತಾಸು ತ್ರಿಪೇಸ್ ವಿದ್ಯುತ್ ನೀಡುವ ಭರವಸೆ ನೀಡಿದಾಗ, ರೈತರು ಪ್ರತಿಭಟನೆಯನ್ನು

ಹಿಂಪಡೆದರು. ಈ ಪ್ರತಿಭಟನೆಯಲ್ಲಿ ರೈತ ಸಂಘದ ರಾಜ್ಯ ಸಂಚಾಲಕ ಹುಚ್ಚವ್ವನಹಳ್ಳಿ ಮಂಜುನಾಥ್, ಹಸಿರು ಸೇನೆ ಅಧ್ಯಕ್ಷ ಕಾನನಕಟ್ಟೆ ತಿಪ್ಪೇಸ್ವಾಮಿ ಮತ್ತು ನೂರಾರು ರೈತರು ಭಾಗವಹಿಸಿದ್ದರು.

**ಬಿ.ಟಿ. ಕನಕ ಹತ್ತಿ ಬೀಜ ನಿಷೇಧಕ್ಕೆ ರೈತರ ಪ್ರತಿಭಟನೆ:- ೦೮/೦೫/೨೦೧೪**

ದಾವಣಗೆರೆಯಲ್ಲಿ ಬಿ.ಟಿ. ಕನಕ ಹತ್ತಿ ಬೀಜ ನಿಷೇಧ ಹಾಗೂ ನಷ್ಟಕ್ಕೊಳಗಾದ ರೈತರಿಗೆ ಪರಿಹಾರ ನೀಡುವಂತೆ ಆಗ್ರಹಿಸಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಕಾರ್ಯಕರ್ತರು ಬುಧವಾರ ಹತ್ತಿ ಬೀಜ ಸುಟ್ಟು ಆಕ್ರೋಶ ವ್ಯಕ್ತಪಡಿಸಿದರು.

ನಗರದ ಗಾಂಧಿವೃತ್ತದಿಂದ ಪ್ರತಿಭಟನಾ ಮೆರವಣಿಗೆ ಆರಂಭಿಸಿದ ರೈತರು, ನರಸಿಂಹರಾಜ್ ಒಡೆಯರ್ ರಸ್ತೆಯಲ್ಲಿರುವ ಬಿತ್ತನೆ ಬೀಜ ಮಾರಾಟ ಕೇಂದ್ರಗಳ ಎದುರು, ಬಿ.ಟಿ. ಹತ್ತಿ ಬೀಜಗಳಿಗೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದರು. ಕಳೆದ ವರ್ಷ ರಾಜ್ಯದ ೯ ಜಿಲ್ಲೆಗಳ ಲಕ್ಷಾಂತರ ರೈತರು ಕಳಪೆ ಬೀಜದಿಂದ ಅಪಾರ ನಷ್ಟಕ್ಕೆ ಒಳಗಾಗಿದ್ದಾರೆ. ಸರ್ಕಾರ ಕಂಪನಿಯಿಂದ ಪರಿಹಾರ ಕೊಡಿಸುವ ಬದಲು, ತಾನೇ ಪ್ರತೀ ಹೆಕ್ಟೇರ್‌ಗೆ ೬ ಸಾವಿರ ರೂ ನೀಡಿದೆ. ಇದರೊಂದಿಗೆ ಸರ್ಕಾರವೂ ಕಂಪನಿಯೊಂದಿಗೆ ಶಾಮೀಲಾಗಿರುವ ಶಂಕೆ ಹುಟ್ಟಿದೆ ಎಂದರು. ಕಂಪನಿಯನ್ನು ಕಪ್ಪು ಪಟ್ಟಿಗೆ ಸೇರಿಸಬೇಕೆಂದು ರೈತರು ಪ್ರತಿಭಟನೆ ಮಾಡಿದರು. ಹೋರಾಟಕ್ಕೆ ಮಣಿದ ಸರ್ಕಾರ ಈ ಬೀಜಗಳ ಮೇಲೆ ನಿಷೇಧವೇರಿತ್ತು. ಆದರೆ ಕಂಪನಿ ಹೈಕೋರ್ಟ್‌ನಿಂದ ತಡೆತಂದಿದೆ. ಈ ತಡೆ ತೆರವುಗೊಳಿಸಲು ಸರ್ಕಾರಿ ವಕೀಲರು ಮುಂದಾಗಿಲ್ಲ. ಕಪ್ಪುಪಟ್ಟಿಗೆ ಸೇರಿದ ಹತ್ತಿ ಬೀಜ ಮತ್ತೆ ಮಾರುಕಟ್ಟೆಗೆ ಕಾಲಿಟ್ಟಿದೆ. ರೈತರನ್ನು ಎದುರು ಹಾಕಿಕೊಂಡು ಯಾವುದೇ ಸರ್ಕಾರಗಳು ಉಳಿದಿಲ್ಲ. ರೈತಪರ ಕೆಲಸ ಮಾಡಬೇಕಾದ ಕೃಷಿ ಸಚಿವರು ಸಹ ಕಂಪನಿಯ ಪರ ಕೆಲಸ ಮಾಡುತ್ತಿದ್ದಾರೆ. ಕಾರಣ ಅವರು ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿ ಕಂಪನಿಯಲ್ಲಿ ಕೆಲಸ ಮಾಡುವುದು ಸೂಕ್ತವೆಂದು ಆಕ್ರೋಶ ವ್ಯಕ್ತಪಡಿಸಿದರು.[೮೩] ಈ ಪ್ರತಿಭಟನೆಯಲ್ಲಿ ಹುಚ್ಚವ್ವನಹಳ್ಳಿ ಮಂಜುನಾಥ್, ಲಿಂಗರಾಜ್, ತಿಪ್ಪೇಸ್ವಾಮಿ ಮುಂತಾದ ನೂರಾರು ರೈತರು ಭಾಗವಹಿಸಿದ್ದರು.

**ರಸ್ತೆ ದುರಸ್ತಿಗೆ ಆಗ್ರಹಿಸಿ ರೈತರ ಪ್ರತಿಭಟನೆ:- ೧೯/೧೦/೨೦೧೪**

ಮಲೆಬೆನ್ನೂರು ಸಮೀಪದ ಎಕ್ಕೆಗೊಂದಿಯಿಂದ, ನಂದಿಗುಡಿಗೆ ಸಂಪರ್ಕ ಕಲ್ಪಿಸುವ ರಸ್ತೆ ದುರಸ್ತಿಗೆ ಆಗ್ರಹಿಸಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನಾ ಕಾರ್ಯಕರ್ತರು ಸೋಮವಾರದಂದು ಹೆದ್ದಾರಿ ತಡೆ ನಡೆಸಿದರು.

ಜಿಲ್ಲಾ ಮುಖ್ಯ ರಸ್ತೆಯಲ್ಲಿ ನೂರಾರು ಗುಂಡಿಗಳು ಬಿದ್ದಿದ್ದು ದುರಸ್ತಿ ಕಂಡಿಲ್ಲ. ಈ ರಸ್ತೆಯಲ್ಲಿ ಜನ ಜಾನುವಾರು ಸಂಚರಿಸುವುದೇ ದುಸ್ತರ. ಕಳೆದ ಎಂಟು ತಿಂಗಳಿಂದ ಈ ರಸ್ತೆ ದುರಸ್ತಿ ಮಾಡುವಂತೆ ಒತ್ತಾಯಿಸಿದ್ದರೂ ಪ್ರಯೋಜನವಾಗಿಲ್ಲ ಎಂದರು. ರಸ್ತೆ ದುರಸ್ತಿಗೆ

ಟೆಂಡರ್ ಆಗಿದೆ. ಶೀಘ್ರ ಕಾಮಗಾರಿ ಆರಂಭವಾಗುತ್ತದೆ ಎಂದು ಲೋಕೋಪಯೋಗಿ ಒಳನಾಡು ಬಂದರು ಹಾಗೂ ಜಲಸಾರಿಗೆ ಇಲಾಖೆಯ ಎ.ಇ.ಇ. ನೀಲಗಿರಿಯಪ್ಪ ಹೇಳಿದರು. ಆದರೆ ಧರಣಿ ನಿರತ ರೈತರು, ತಹಶೀಲ್ದಾರ್ ಮತ್ತು ಎಸ್.ಐ ಅವರನ್ನು ಸ್ಥಳಕ್ಕೆ ಕರೆಸುವಂತೆ ಒತ್ತಾಯಿಸಿದರು. ತಹಶೀಲ್ದಾರ್ ಮತ್ತು ಎಸ್.ಐ ಬಂದ ನಂತರ ಎಲ್ಲರನ್ನೂ ಟ್ರಾಕ್ಟರ್‌ನಲ್ಲಿ ಕೂರಿಸಿಕೊಂಡು ರಸ್ತೆಯ ದರ್ಶನ ಮಾಡಿಸಲು ರೈತರು ಸಿದ್ಧತೆ ಮಾಡಿಕೊಂಡರು. ಆದರೆ ಅಧಿಕಾರಿಗಳು ನಾವು ಹದಗೆಟ್ಟ ಈ ರಸ್ತೆ ನೋಡಿದ್ದೇವೆ ಎಂದು ರೈತರನ್ನು ಸಮಾಧಾನಪಡಿಸಿದರು. ತಹಶೀಲ್ದಾರರು ಮಾತನಾಡಿ ರೈತರ ಜೊತೆ ಚರ್ಚಿಸಿ, ರಸ್ತೆಯ ಗುಂಡಿಗಳನ್ನು ಮುಚ್ಚಲು ಬುಧವಾರದಿಂದ ಪ್ರಾರಂಭ ಮಾಡುವುದಾಗಿ ಆಶ್ವಾಸನೆ ನೀಡಿದರು. ಒಂದು ವೇಳೆ ಬುಧವಾರ ಕಾಮಗಾರಿ ಆರಂಭಿಸದಿದ್ದರೆ, ಈ ಎಂಜಿನಿಯರ್ ಮೇಲೆ ಕ್ರಮ ಜರುಗಿಸಲು ಶಿಫಾರಸ್ಸು ಮಾಡುವುದಾಗಿ ತಹಶೀಲ್ದಾರ್ ನಜ್ಮಾ ತಿಳಿಸಿದ ನಂತರ ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ರೈತರ ವಿರುದ್ಧ ಸುಳ್ಳು ಮೊಕದ್ದಮೆ: ಹರಿಹರ ರೈತರ ಪ್ರತಿಭಟನೆ:- ೨೨/೧೧/೨೦೧೪**

ಹರಿಹರ ತಾಲೂಕಿನ ತಹಶೀಲ್ದಾರರು ತಮ್ಮಗಳ ಮೇಲೆ ಸುಳ್ಳು ದೂರು ನೀಡಿದ್ದಾರೆಂದು ಪ್ರತಿಭಟಿಸಿ, ರೈತ ಮುಖಂಡರು ಹಾಗೂ ರೈತ ಸಂಘಟನೆಯ ಕಾರ್ಯಕರ್ತರು ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮೂಲಕ ತೀವ್ರ ಪ್ರತಿಭಟನೆ ನಡೆಸಿದರು.

ಹರಿಹರ ತಾಲೂಕಿನ ತಹಶೀಲ್ದಾರರಾದ ಜಿ. ನಜ್ಮಾರವರು ತಾಲೂಕಿನ ವಿನಾಯಕ ನಗರ ಕ್ಯಾಂಪ್‌ನ ಸ್ವರೂಪಾಶ್ರಮದ ಭೂ–ವಿವಾದದ ಬಗ್ಗೆ ಏಕಪಕ್ಷೀಯ ನಿರ್ಧಾರ ಕೈಗೊಂಡಿದ್ದಾರೆ. ಇದನ್ನು ವಿಚಾರಿಸಲು ಕಚೇರಿಯೊಳಗೆ ಪ್ರವೇಶಿಸಿದಾಗ ತಮಗೆ ಏಕವಚನ, ಅವಾಚ್ಯ ಶಬ್ದಗಳಿಂದ ನಿಂದಿಸಿದ್ದಾರೆ. ವಸ್ತುಸ್ಥಿತಿ ಹೀಗಿರುವಾಗ ನಾವು ನಿಂದಿಸಿದೆವೆಂದು ಪೋಲಿಸರಲ್ಲಿ ಸುಳ್ಳು ದೂರು ದಾಖಲಿಸಿದ್ದಾರೆ. ಇದನ್ನು ಆರೋಪಿಸಿದ ರೈತ ಮುಖಂಡರು, ಸುಳ್ಳು ದೂರು ದಾಖಲಿಸಿರುವ ತಹಶೀಲ್ದಾರರನ್ನು ಅಮಾನತು ಮಾಡಿ, ಭೂವಿವಾದದ ಬಗ್ಗೆ ತನಿಖೆ ನಡೆಸಬೇಕೆಂಬ ಬೇಡಿಕೆಗಳನ್ನು ಇಟ್ಟುಕೊಂಡು ಜಿಲ್ಲಾಧಿಕಾರಿಯನ್ನು ಆಗ್ರಹಿಸಿ ಪ್ರತಿಭಟನೆ ನಡೆಸಿದರು.[೮೪]

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ತೇಜಸ್ವಿ ಪಟೇಲ್, ಭೂ ವಿವಾದವನ್ನು ನ್ಯಾಯಯುತವಾಗಿ ತೀರ್ಮಾನ ಮಾಡಿದ್ದರೆ, ರೈತರು ಪ್ರತಿಭಟಿಸಲು ಮುಂದಾಗುತ್ತಿರಲಿಲ್ಲ. ಪ್ರತಿಭಟಿಸಿದ ರೈತ ಮುಖಂಡರ ಮೇಲೆ ತಹಶೀಲ್ದಾರ್ ಸುಳ್ಳು ಮೊಕದ್ದಮೆ ನೀಡಿರುವುದು ಒಳ್ಳೆಯ ಬೆಳವಣಿಗೆಯಲ್ಲ. ನ್ಯಾಯದ ಆಧಾರದ ಮೇಲೆ ವಿವಾದ ಬಗೆಹರಿಸುವಂತೆ ಒತ್ತಾಯಿಸಿದರು. ಪ್ರತಿಭಟನೆ ತೀವ್ರಸ್ವರೂಪ ಪಡೆದಾಗ, ಜಿಲ್ಲಾಧಿಕಾರಿಯ ಪರವಾಗಿ ಆಗಮಿಸಿದ ಹೆಚ್ಚುವರಿ ಜಿಲ್ಲಾಧಿಕಾರಿ ಇಬ್ರಾಹಿಂ ಮೈಗೂರುರವರು ರೈತರ ಮನವಿ ಸ್ವೀಕರಿಸಿ, ವಿಚಾರಣೆ ನಡೆಸಿ ಕ್ರಮಕೈಗೊಳ್ಳುವದಾಗಿ ತಿಳಿಸಿ ವಾತಾವರಣವನ್ನು ತಿಳಿಗೊಳಿಸಿದರು.

**ಪೊಲೀಸ್ ದೌರ್ಜನ್ಯ ಹಾಗೂ ಕೋಡಿಹಳ್ಳಿ ಚಂದ್ರಶೇಖರ್ ಬಂಧನ ವಿರೋಧಿಸಿ ರೈತ ಪ್ರತಿಭಟನೆ:-೨೫/೧೨/೨೦೧೪**

ತುಮಕೂರು ಜಿಲ್ಲೆ ಕಟ್ಟಿಗೆಹಾಳ್ ಗ್ರಾಮದ ರೈತರ ಮೇಲೆ ಪೊಲೀಸರು ದೌರ್ಜನ್ಯ ನಡೆಸಿದ್ದು, ಹೋರಾಟದಲ್ಲಿ ಬಲಿಯಾದ ಅಮಾಯಕ ಶಿವಕುಮಾರನ ಕುಟುಂಬಕ್ಕೆ ಪರಿಹಾರ ನೀಡದಿದ್ದನ್ನು ಖಂಡಿಸಿದರು. ಕೋಡಿಹಳ್ಳಿ ಚಂದ್ರಶೇಖರ್‌ರವರ ಬಂಧನ ವಿರೋಧಿಸಿ ದಾವಣಗೆರೆ ಜಿಲ್ಲೆಯ ರೈತರು ನಗರದಲ್ಲಿ ಗುರುವಾರ ಡಿಸೆಂಬರ್ ೨೫ ೨೦೧೪ ರಂದು ಪ್ರತಿಭಟನೆ ನಡೆಸಿದರು.

ನಗರದ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಮುಂಭಾಗದ ಹಳೆ ಪಿ.ಬಿ. ರಸ್ತೆಯಲ್ಲಿ, ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಜಿಲ್ಲಾ ಘಟಕದ ಪದಾಧಿಕಾರಿಗಳು ಹಾಗೂ ಮುಖಂಡರ ನೇತೃತ್ವದಲ್ಲಿ ರಸ್ತೆ ತಡೆನಡೆಸಿದರು. ಪ್ರತಿಭಟನಾಕಾರರು ಕಟ್ಟಿಗೇನಹಳ್ಳಿ ರೈತರ ಮೇಲೆ ಪೊಲೀಸರು ದೌರ್ಜನ್ಯ ನಡೆಸಿದ್ದು, ಹಾಗೂ ಕೇಸ್ ದಾಖಲಿಸಿದ್ದನ್ನು ಖಂಡಿಸಿ ಘೋಷಣೆ ಕೂಗಿದರು. ತುಮಕೂರು ನಗರದ ಕಸ ತ್ಯಾಜ್ಯವನ್ನು ವಿಲೇವಾರಿ ಮಾಡಲು ಕಟ್ಟಿಗೇನಹಳ್ಳಿ ಗ್ರಾಮ ಗುರುತಿಸಲಾಗಿದ್ದು, ಅಲ್ಲಿ ವಿಲೇವಾರಿ ಮಾಡಿದರೆ ಕೃಷಿಗೆ ಸಂಕಷ್ಟ ಬಂದೊದಗುತ್ತದೆಂದು ರೈತರು ಪ್ರತಿಭಟನೆಗಳಿಗಿಳಿದಿದ್ದರು. ಇದೇ ವೇಳೆ ಒಬ್ಬ ರೈತ ಆತ್ಮಹತ್ಯೆ ಮಾಡಿಕೊಂಡನು. ಈ ವಿಚಾರಕ್ಕೆ ಹಾಗೂ ಕಸ ವಿಲೇವಾರಿಗೆ ಸಂಬಂಧಿಸಿದಂತೆ ಮುಷ್ಕರ ಮಾಡಲು ಬಂದ ಕೋಡಿಹಳ್ಳಿ ಚಂದ್ರಶೇಖರ್‌ರವರನ್ನು ಬಂಧಿಸಲಾಯಿತು. ಇದನ್ನು ವಿರೋಧಿಸಿ ದಾವಣಗೆರೆ ಜಿಲ್ಲೆಯ ರೈತ ಸಂಘಟನೆ ಹಾಗೂ ನೂರಾರು ರೈತರು, ಆತ್ಮಹತ್ಯೆ ಮಾಡಿಕೊಂಡ ಶಿವಕುಮಾರನ ಕುಟುಂಬಕ್ಕೆ ೧೦ ಲಕ್ಷ ಪರಿಹಾರ ಹಾಗೂ ರೈತ ಮುಖಂಡರನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರವನ್ನು ಒತ್ತಾಯಿಸಿ ಪ್ರತಿಭಟನೆ ಮಾಡಿದರು.[೮೫]

ಪ್ರತಿಭಟನೆಯ ನಾಯಕತ್ವವನ್ನು ಕಾರ್ಯದರ್ಶಿ ಹೊನ್ನೂರು ಮುನಿಯಪ್ಪ, ಜಿಲ್ಲಾಧ್ಯಕ್ಷ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ಪ್ರಧಾನ ಕಾರ್ಯದರ್ಶಿ ಚನ್ನಬಸಪ್ಪ, ಶೇಖರ್‌ನಾಯ್ಕ, ಮುಂತಾದವರು ವಹಿಸಿದ್ದರು.

**ಖಾಸಗಿ ಫೈನಾನ್ಸ್ ಹಾಗೂ ಬ್ಯಾಂಕ್‌ಗಳ ಬಲವಂತದ ಸಾಲ ವಸೂಲಾತಿ ವಿರೋಧಿಸಿ ರೈತ ಪ್ರತಿಭಟನೆ:-**

**೨೬/೧೨/೨೦೧೪**

ಖಾಸಗಿ ಪೈನಾನ್ಸ್ ಬ್ಯಾಂಕ್‌ಗಳು ಬಲವಂತವಾಗಿ ರೈತರಿಂದ ಸಾಲ ವಸೂಲಾತಿ ಮಾಡುತ್ತಿದ್ದಾರೆಂದು ಆರೋಪಿಸಿ, ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ನೇತೃತ್ವದಲ್ಲಿ, ತಾಲೂಕಿನ ರೈತರು ಹಿರೇಮಲ್ಲನಹೊಳೆ ಕ್ರಾಸ್‌ನ ರಾಷ್ಟ್ರೀಯ ಹೆದ್ದಾರಿ-೧೩ರಲ್ಲಿ ಕುಳಿತು, ಪ್ರತಿಭಟನೆ ನಡೆಸುವ ಮೂಲಕ ಖಾಸಗಿ ಫೈನಾನ್ಸ್ ಹಾಗೂ ಬ್ಯಾಂಕ್‌ಗಳ ಕ್ರಮವನ್ನು ಖಂಡಿಸಿದರು.

ಈ ಸಮಯದಲ್ಲಿ ಹಸಿರು ಸೇನೆ ತಾಲೂಕು ಅಧ್ಯಕ್ಷ ಕಾನನಕಟ್ಟೆ ತಿಪ್ಪೇಸ್ವಾಮಿಯವರು ಮಾತನಾಡಿ, ರಾಷ್ಟ್ರೀಯ ಬ್ಯಾಂಕ್‌ಗಳ ಮತ್ತು ಆರ್.ಬಿ.ಐ. ನೀತಿ ನಿರ್ದೇಶನಗಳನ್ನು ಪಾಲಿಸದೆ ಒಂದು ಮತ್ತು ಎರಡು ಎಕರೆ ಭೂಮಿ ಇದ್ದವರಿಗೆಲ್ಲ ಟ್ರ್ಯಾಕ್ಟರ್, ಆಪೆ ಆಟೋ ಸೇರಿದಂತೆ ವಿವಿಧ ಸಾಲ ನೀಡಿ, ಪ್ರತಿ ತಿಂಗಳು ಕಂತುಗಳ ಮೂಲಕ ಸಾಲ ತೀರಿಸಬೇಕೆಂದು ನಿಯಮದ ಮೇಲೆ ಸಾಲ ನೀಡುತ್ತಾರೆ. ಆದರೆ ೩ ಕಂತು ಹಣ ತುಂಬದಿದ್ದರೆ ಟ್ರ್ಯಾಕ್ಟರ್ ತೆಗೆದುಕೊಂಡು ಹೋಗಿ ಆನ್‌ಲೈನ್‌ನಲ್ಲಿ ಮಾರಾಟ ಮಾಡಿ ಉಳಿದ ಹಣಕ್ಕೆ ಸಂಬಂಧಪಟ್ಟ ರೈತನ ವಿರುದ್ಧ ಹೊರ ರಾಜ್ಯದ ಹೈಕೋರ್ಟ್‌ಗಳಲ್ಲಿ ದಾವೆ ಹೂಡಿ, ಬಂಧಿಸುವ ಆದೇಶ ತರುತ್ತಾರೆಂದು ಅರೋಪಿಸುವ ಮೂಲಕ ಆಕ್ರೋಶ ವ್ಯಕ್ತಪಡಿಸಿದರು.[೮೬]

ರೈತ ಸಂಘದ ಮುಖಂಡ ಹುಚ್ಚವ್ವನಹಳ್ಳಿ ಮಂಜುನಾಥ್‌ರವರು ಮಾತನಾಡಿ ರಿಕವರಿ ಏಜೆನ್ಸಿಗಳಿಂದ ರೈತರಿಗೆ ಕಿರುಕುಳ ನೀಡಿ ಸಾಲ ವಸೂಲಾತಿಗಾಗಿ ರೌಡಿಗಳನ್ನು ಕಳುಹಿಸುತ್ತಿದ್ದಾರೆ. ಈಗಾಗಲೇ ಹಲವು ಗ್ರಾಮಗಳಲ್ಲಿ ಇಂತಹ ಪ್ರಕರಣಗಳು ನಡೆದಿವೆ. ಬ್ಯಾಂಕ್‌ಗಳ ಸಾಲವನ್ನು ಮಂಜೂರು ಮಾಡುವ ಮೊದಲೇ ರೈತರಿಂದ ಖಾಲಿ ಹಾಳೆಗಳಿಗೆ ತಮ್ಮ ಅನುಕೂಲಕ್ಕೆ ತಕ್ಕಂತೆ ಸಹಿಗಳನ್ನು ಮಾಡಿಸಿಕೊಂಡು ಅಧಿಕಾರಿಗಳು ರೈತರ ಆಸ್ತಿಯನ್ನು ಜಪ್ತಿ ಮಾಡುತ್ತಾರೆ. ನಂತರ ಒಂದು ತಿಂಗಳಲ್ಲಿ ಮೊತ್ತ ಪಾವತಿಸದಿದ್ದರೆ ನಿಮ್ಮ ಟ್ರ್ಯಾಕ್ಟರ್ ಹರಾಜು ಮಾಡಲಾಗುವದೆಂದು ಅಂಚೆಯ ಮೂಲಕ ನೋಟೀಸು ನೀಡುತ್ತಾರೆಂದು ಆಕ್ರೋಶ ವ್ಯಕ್ತಪಡಿಸಿದರು. ರೈತರಿಂದ ಸಾಲ ವಸೂಲಿ ಮಾಡುತ್ತಿರುವ ಮತ್ತು ಅನಾವಶ್ಯಕವಾಗಿ ಕಿರುಕುಳ ನೀಡುತ್ತಿರುವ ಖಾಸಗಿ ಫೈನಾನ್ಸ್‌ಗಳ ವಿರುದ್ಧ ಕ್ರಮಕೈಗೊಳ್ಳುವಂತೆ ಒತ್ತಾಯಿಸಿ ರಸ್ತೆ ತಡೆ ಮಾಡಿದರು. ಈ ಸಮಯದಲ್ಲಿ ಆಗಮಿಸಿದ ಪೊಲೀಸರು ಮನವಿ ಮಾಡಿದರೂ, ಸಹ ಮಣಿಯದ ರೈತರನ್ನು ಅನಿವಾರ್ಯವಾಗಿ ಬಂಧಿಸಿ ರಸ್ತೆ ಸಂಚಾರಕ್ಕೆ ಅನುವು ಮಾಡಿಕೊಟ್ಟರು. ಬಂಧಿಸಿದ ರೈತರನ್ನು ನಂತರ ಬಿಡುಗಡೆ ಮಾಡಲಾಯಿತು. ಈ ಪ್ರತಿಭಟನೆಯಲ್ಲಿ ನೂರಾರು ರೈತರು ಪಾಲ್ಗೊಂಡಿದ್ದರು.

**ಶ್ರೀ ರಾಮ್ ಫೈನಾನ್ಸ್ ಕಛೇರಿಯ ಮುಂದೆ ರೈತ ಪ್ರತಿಭಟನೆ:– ೩೦/೧೨/೨೦೧೪**

ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕಾರ್ಯಕರ್ತರು, ದಾವಣಗೆರೆ ತಾಲೂಕಿನಲ್ಲಿ ರೈತರಿಂದ ಬಲವಂತದ ಸಾಲ ವಸೂಲಿ, ಟ್ರಾಕ್ಟರ್ ಜಪ್ತಿ ವಿರುದ್ಧ ಕೆಲ ದಿನಗಳಿಂದ ಹೋರಾಟ ಮಾಡುತ್ತಿದ್ದಾರೆ. ಅದೇ ರೀತಿಯಾಗಿ ಡಿಸೆಂಬರ್ ೩೦ ೨೦೧೪ರ ಮಂಗಳವಾರದಂದು ಶ್ರೀ ರಾಮ್ ಫೈನಾನ್ಸ್ ಮುಂದೆ ಪ್ರತಿಭಟನೆ ನಡೆಸಿ, ಜಪ್ತಿ ಮಾಡಿದ್ದ ಟ್ರ್ಯಾಕ್ಟರ್‌ನ್ನು ರೈತರಿಗೆ ವಾಪಸ್ಸು ಕೊಡಿಸಿದರು.

ನಗರದ ಪಿ.ಬಿ. ರಸ್ತೆಯಲ್ಲಿರುವ ಶ್ರೀ ರಾಮ್ ಫೈನಾನ್ಸ್ ಮುಂಭಾಗದಲ್ಲಿ, ರೈತ ಸಂಘದ ರಾಜ್ಯಾಧ್ಯಕ್ಷ ಹುಚ್ಚವನಹಳ್ಳಿ ಮಂಜುನಾಥ್ ಸೇರಿದಂತೆ ಹಲವಾರು ಮುಖಂಡರು ಹಾಗೂ ಕಾರ್ಯಕರ್ತರ ನೇತೃತ್ವದಲ್ಲಿ ಡಿಸೆಂಬರ್ ೩೦ ೨೦೧೪ ರಂದು ಪ್ರತಿಭಟನೆ ಮಾಡಿ, ಟ್ರ್ಯಾಕ್ಟರ್‌ನ್ನು ಮರಳಿ ಕೊಡುವಂತೆ ತಾಕೀತು ಮಾಡಿದರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಹುಚ್ಚವನಹಳ್ಳಿ ಮಂಜುನಾಥ್ ಕಳೆದ ಕೆಲವು ದಿನಗಳಿಂದಲೂ ರೈತ ಸಂಘ–ಹಸಿರು ಸೇನೆ ಹೋರಾಟ ನಡೆಸಿದ್ದರೂ, ಇನ್ನು ಬ್ಯಾಂಕ್ ಮತ್ತು ಫೈನಾನ್ಸ್‌ಗಳು ತಮ್ಮ ವರ್ತನೆ ತಿದ್ದುಕೊಂಡಿಲ್ಲ. ಇನ್ನು ಮುಂದೆ ಇಂತಹದ್ದಕ್ಕೆಲ್ಲಾ ಅವಕಾಶವಿಲ್ಲವೆಂದರು. ರೈತರಿಂದ ಬಲವಂತದ ಸಾಲವಸೂಲಿಗೆ ಮುಂದಾದರೆ ಪರಿಣಾಮ ನೆಟ್ಟಗಿರದು. ಈವರೆಗೆ ರೈತರಿಂದ ಜಪ್ತಿ ಮಾಡಿರುವ ಟ್ರಾಕ್ಟರ್‌ಗಳನ್ನು ಬೇಷರತ್ತಾಗಿ ಮರಳಿಸಬೇಕು. ಶ್ರೀ ರಾಮ ಹೆಸರಿನಲ್ಲಿ ಸಂಸ್ಥೆ ಕಟ್ಟಿಕೊಂಡು ರೈತರನ್ನು ಸುಲಿಗೆ ಮಾಡುತ್ತಿರುವುದು ಖಂಡನೀಯ ಎಂದು ಆಕ್ರೋಶ ವ್ಯಕ್ತಪಡಿಸಿದರು. ಸೀಜಿಂಗ್ ಏಜೆನ್ಸಿಗಳು ರೈತರಿಗೆ ಕಿರುಕುಳ ನೀಡಿದಲ್ಲಿ, ರೈತರ ಮೇಲೆ ದೌರ್ಜನ್ಯ ಎಸಗಿದಲ್ಲಿ ರೈತರು ತಮ್ಮ ಕೈಗಳಿಗೆ ಬಾರಿಕೋಲು, ಕಣಗಗಳನ್ನು ತೆಗೆದುಕೊಂಡು ತಕ್ಕಪಾಠ ಕಲಿಸಿದ್ದಾರೆ. ಇಡೀ ಜಿಲ್ಲೆ ಅತೀವೃಷ್ಠಿ ಹಾಗೂ ಬರಕ್ಕೆ ತುತ್ತಾಗಿದ್ದು ರೈತರು ಸಂಕಷ್ಟದಲ್ಲಿದಾರೆ. ಇಂತಹ ಪರಿಸ್ಥಿತಿಯಲ್ಲಿ ಬಲವಂತದ ಸಾಲ ವಸೂಲಿ, ಟ್ರ್ಯಾಕ್ಟರ್ ಜಪ್ತಿ ಸರಿಯಲ್ಲ ಎಂದು ಆಕ್ಷೇಪಿಸಿದರು. ಅಂತಿಮವಾಗಿ ಫೈನಾನ್ಸ್‌ನ ಅಧಿಕಾರಿಗಳು ರೈತ ಮುಖಂಡರ ಮಧ್ಯೆ ಮಾತುಕತೆ ನಡೆಸಿ ಜಪ್ತಿ ಮಾಡಿದ್ದ ಟ್ರ್ಯಾಕ್ಟರ್‌ಗಳನ್ನು ಮರಳಿಸುವುದಾಗಿ ಅಧಿಕಾರಿಗಳು ಆಶ್ವಾಸನೆ ನೀಡಿ, ರೈತರು ಸಾಧ್ಯವಾದಷ್ಟು ಸಾಲದ ಕಂತು ಪಾವತಿಸುವಂತೆ ವ್ಯವಸ್ಥಾಪಕ ಶಿವಾನಂದ ಮನವಿ ಮಾಡಿದರು.[೮೭]

**ಜಗಳೂರು ತಾಲೂಕಿನಲ್ಲಿ ಗೋ ಶಾಲೆ ಆರಂಭಿಸುವಂತೆ ಹಾಗೂ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ರೈತ ಸಂಘದ ಪ್ರತಿಭಟನೆ:– ೨೭/೦೭/೨೦೧೫**

೨೦೧೫ರಂದು ಜಗಳೂರಿನಲ್ಲಿ ಮಳೆಯು ಸಂಪೂರ್ಣವಾಗಿ ವಿಫಲವಾಗಿದ್ದು, ದನಕರುಗಳಿಗೆ ಕುಡಿಯಲು ಹಾಗೂ ತಿನ್ನಲು, ನೀರಿನ ಮತ್ತು ಮೇವಿನ ಬವಣೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದು, ದನಕರುಗಳ ಸ್ಥಿತಿ ಶೋಚನೀಯವಾಗಿದೆ. ಹಾಗಾಗಿ ಜಾನುವಾರುಗಳಿಗೆ ಗೋಶಾಲೆಗಳನ್ನು ಆರಂಭಿಸುವಂತೆ ಒತ್ತಾಯಿಸಿ, ತಾಲೂಕು ಕರ್ನಾಟಕ ರಾಜ್ಯ ರೈತ ಸಂಘ ಹಾಗು ಹಸಿರು ಸೇನೆಯ, ಹುಚ್ಚವನಹಳ್ಳಿ ಮಂಜುನಾಥ ಬಣದ ಪದಾಧಿಕಾರಿಗಳು ಹಾಗೂ ನೂರಾರು ರೈತರು ಬೃಹತ್ ಪ್ರತಿಭಟನೆಯ ಮೂಲಕ ಆಗ್ರಹಪಡಿಸಿದರು.

ಜಗಳೂರು ತಾಲೂಕಿನ ಪಟ್ಟಣದ ಪ್ರವಾಸಿ ಮಂದಿರದಿಂದ ಮಿನಿವಿಧಾನಸೌಧದವರೆಗೂ ಪ್ರತಿಭಟನಾ ಮೆರವಣಿಗೆ ಮಾಡುವುದರ ಮೂಲಕ ರೈತರು ತಹಶೀಲ್ದಾರ್ ಕಛೇರಿಗೆ ತೆರಳಿ ಮನವಿ ಪತ್ರ ಸಲ್ಲಿಸಿದರು.

ಈ ಮನವಿ ಪತ್ರದಲ್ಲಿ ಗೋಶಾಲೆಯನ್ನು ಆರಂಭಿಸುವುದರ ಜೊತೆಗೆ ರೈತರ ಆತ್ಮಹತ್ಯೆ ತಡೆಯಲು, ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿಪಡಿಸಬೇಕು. ರೈತರು ಬ್ಯಾಂಕ್‌ಗಳಲ್ಲಿ ಮಾಡಿರುವ ಸಾಲಗಳನ್ನು ಮನ್ನಾ ಮಾಡಬೇಕು. ಎಲ್ಲಾ ಹಳ್ಳಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸಬೇಕು. ರೈತರು ಮತ್ತು ಕೃಷಿಕರು ಗುಳೇ ಹೋಗದಂತೆ ಉದ್ಯೋಗ ಭದ್ರತೆ ಮಾಡಬೇಕು. ರೈತರ

ಪಂಪ್ ಸೆಟ್‌ಗಳಿಗೆ ಹಗಲು ವೇಳೆ ೮ ಗಂಟೆ ವಿದ್ಯುತ್ ಸೌಲಭ್ಯ ನೀಡಬೇಕೆಂಬ ವಿವಿಧ ಬೇಡಿಕೆಗಳಿದ್ದವು.[೮೮] ಇವುಗಳನ್ನು ಈಡೇರಿಸುವಂತೆ ರೈತ ಮುಖಂಡರು ಒತ್ತಾಯಿಸಿದರು.

**ಬೆಂಗಳೂರಿನಲ್ಲಿ ಬಂಧಿತ ರೈತ ನಾಯಕರ ಬಿಡುಗಡೆಗಾಗಿ, ದಾವಣಗೆರೆ ಜಿಲ್ಲೆಯ ರೈತರ ಪ್ರತಿಭಟನೆ: ೦೪/೦೩/೨೦೧೬**

ದಾವಣಗೆರೆ ತಾಲೂಕಿನ ಹೊನ್ನೂರು ಗೊಲ್ಲರಹಟ್ಟಿ ಎನ್.ಹೆಚ್.೪ ರಾಷ್ಟ್ರೀಯ ಹೆದ್ದಾರಿಯ ಬಳಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ)ವತಿಯಿಂದ, ಮಾರ್ಚ್ ೦೪ ೨೦೧೬ರಂದು ನೂರಾರು ರೈತರು ಪ್ರತಿಭಟನೆ ಮಾಡಿದರು.

ಬೆಂಗಳೂರಿನಲ್ಲಿ ಶಾಶ್ವತ ನೀರಾವರಿ ಯೋಜನೆಯನ್ನು ಜಾರಿಗೆ ತರಬೇಕು ಹಾಗು ಕಬ್ಬಿನ ಬಾಕಿ ಹಣ ನೀಡುವಂತೆ ಒತ್ತಾಯಿಸಿ, ಬೆಂಗಳೂರು ನಗರದ ವಿಲ್ಸನ್ ಮ್ಯಾನರ್ ವೃತ್ತದಲ್ಲಿ ಪ್ರತಿಭಟನೆ ನಡೆಸುತ್ತಿದ್ದಾಗ, ರೈತರ ಮೇಲೆ ಪೋಲಿಸರು ಲಾಠಿ ಪ್ರಹಾರ ಮಾಡಿದರು. ಈ ಸಮಯದಲ್ಲಿ ಕೋಡಿಹಳ್ಳಿ ಚಂದ್ರಶೇಖರ್ ಸೇರಿದಂತೆ ಕೆಲ ರೈತ ಮುಖಂಡರನ್ನು ಬಂದಿಸಿದ್ದರು. ಇದನ್ನು ವಿರೋಧಿಸಿ ಹೊನ್ನೂರು ಗೊಲ್ಲರಹಟ್ಟಿ ಎನ್.ಹೆಚ್.೪ರಲ್ಲಿ ರಸ್ತೆ ತಡೆ ನಡೆಸುವ ಮೂಲಕ ರಾಜ್ಯ ಸರ್ಕಾರದ ವಿರುದ್ಧ ಪ್ರತಿಭಟನೆ ನಡೆಸಿದರು.

ಆ ಸಮಯದಲ್ಲಿ ಸ್ಥಳಕ್ಕೆ ದಾವಣಗೆರೆ ತಹಶೀಲ್ದಾರರು ಭೇಟಿ ನೀಡಿ ಪ್ರತಿಭಟನಾಕಾರರೊಂದಿಗೆ ಚರ್ಚಿಸಿ, ಈ ಬಗ್ಗೆ ರಾಜ್ಯ ಸರ್ಕಾರದ ಗಮನಕ್ಕೆ ತರಲಾಗುವುದೆಂದು ಹೇಳಿದರು. ಆ ಸಂದರ್ಭದಲ್ಲಿ ರೈತರು ಎನ್.ಹೆಚ್.೪ ರಸ್ತೆಗೆ ಸರ್ವಿಸ್ ರಸ್ತೆ ನಿರ್ಮಿಸಿಕೊಡಬೇಕೆಂದು ಆಗ್ರಹಿಸಿದಾಗ, ತಹಶೀಲ್ದಾರರು ಪ್ರತಿಕ್ರಿಯಿಸಿ ಈ ಬಗ್ಗೆ ಸಂಬಂಧಪಟ್ಟ ಹೈವೆ ಅಥಾರಿಟಿಯವರಿಗೆ ತಿಳಿಸಿ ಕ್ರಮಕೈಗೊಳ್ಳುವದಾಗಿ ಹೇಳಿದರು. ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.

ಇದೇ ದಿನ ೧೨:೩೦ಕ್ಕೆ ಚನ್ನಗಿರಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ) ವತಿಯಿಂದ ಶ್ರೀ ಬೆಂಕಿಕೆರೆ ಕುಮಾರಸ್ವಾಮಿಯರ ನೇತೃತ್ವದಲ್ಲಿ ನೂರಕ್ಕೂ ಹೆಚ್ಚು ರೈತರು, ಬೆಂಗಳೂರಿನಲ್ಲಿ ನಡೆದ ಘಟನೆಯನ್ನು ಖಂಡಿಸಿ, ಎನ್.ಹೆಚ್.೧೩ ರಾಷ್ಟ್ರೀಯ ಹೆದ್ದಾರಿ ಬಳಿ ರಸ್ತೆ ತಡೆ ನಡೆಸಿದರು. ಮುಂಜಾಗ್ರತಾ ಕ್ರಮವಾಗಿ ವಾಹನ ಸಂಚಾರ ಹಿತದೃಷ್ಟಿಯಿಂದ, ಕಲಂ ೭೧ ಕಾಯ್ದೆ ಪ್ರಕಾರ, ಬೆಂಕಿಕೆರೆ ಕುಮಾರಸ್ವಾಮಿ ಹಾಗೂ ನೂರಾರು ರೈತರನ್ನು ಮಧ್ಯಾಹ್ನ ೧:೦೦ ಗಂಟೆಗೆ ದಸ್ತಗಿರಿ ಮಾಡಿ ನಂತರ ಮಧ್ಯಾಹ್ನ ೨:೦೦ ಗಂಟೆಗೆ ಬಿಡುಗಡೆಗೊಳಿಸಲಾಯಿತು.

**ಚನ್ನಗಿರಿಯ ಧ್ರುವ ಗ್ಯಾಸ್ ಏಜೆನ್ಸಿಸ್ ವಿರುದ್ಧ ರೈತರ ಪ್ರತಿಭಟನೆ:– ೨೧/೦೩/೨೦೧೬.**

ಚನ್ನಗಿರಿ ಪಟ್ಟಣದಲ್ಲಿ ತಾಲ್ಲೂಕು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ, ತಾಲೂಕು ಅಧ್ಯಕ್ಷರಾದ ಬೆಂಕಿಕೆರೆ ಕುಮಾರಸ್ವಾಮಿಯವರ ನೇತೃತ್ವದಲ್ಲಿ ನೂರಾರು ರೈತರು, ಪಟ್ಟಣದ ಧ್ರುವ ಗ್ಯಾಸ್ ಏಜೆನ್ಸಿಯ ವಿರುದ್ಧ ಪ್ರತಿಭಟನೆ ಮಾಡಿದರು.

ಧ್ರುವ ಗ್ಯಾಸ್ ಏಜೆನ್ಸಿಯ, ಗ್ಯಾಸ್ ವಿತರಕರು ಗ್ರಾಹಕರಿಗೆ ಐ.ಓ.ಸಿ. ಕಂಪನಿಯ ಆದೇಶದಂತೆ ೫ ಕಿ.ಮೀ. ಒಳಗೆ ಇದ್ದರೆ ಗ್ಯಾಸ್‌ಗಳನ್ನು ೬೦ ಪೈಸೆ ನಿಗಧಿಪಡಿಸಿ ವಿತರಿಸಬೇಕು. ಆದರೆ ಧ್ರುವ ಗ್ಯಾಸ್ ಏಜೆನ್ಸಿಯವರು ಗ್ರಾಹಕರಿಂದ ಹೆಚ್ಚಿನ (೭೫/-) ಹಣ ವಸೂಲಿ ಮಾಡುತ್ತಿದ್ದಾರೆ. ವಿತರಕರು ಕಚೇರಿಯ ಮುಂಭಾಗದಲ್ಲಿ ರೀಫಿಲ್ ದರದ ಪಟ್ಟಿಯನ್ನು ಹಾಕಬೇಕೆಂದು ಒತ್ತಾಯಿಸಿ ಗ್ಯಾಸ್ ಏಜೆನ್ಸಿಯ ಮುಂದೆ ಪ್ರತಿಭಟನೆ ಮಾಡಿ, ಮೆರವಣಿಗೆಯ ಮೂಲಕ ತಹಶೀಲ್ದಾರ್ ಕಚೇರಿಗೆ ಬಂದು ತಹಶೀಲ್ದಾರ್‌ರಿಗೆ ಮನವಿ ಸಲ್ಲಿಸಿದರು.

ಈ ಸಂಬಂಧ ತಹಶೀಲ್ದಾರರು ಸಂಬಂಧಪಟ್ಟ ಗ್ಯಾಸ್ ಏಜೆನ್ಸಿ ಮಾಲೀಕರನ್ನು ಸ್ಥಳಕ್ಕೆ ಕರೆಯಿಸಿ, ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಬೇಕು, ಇಲ್ಲವಾದಲ್ಲಿ ಏಜೆನ್ಸಿ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವದಾಗಿ ಆದೇಶಿಸಿದರು. ಈ ಮೇರೆಗೆ ರೈತರು ಪ್ರತಿಭಟನೆ ಹಿಂಪಡೆದರು.

**ಹೊನ್ನಾಳಿ ತಾಲೂಕಿನಲ್ಲಿ ಏತ ನೀರಾವರಿಯನ್ನು ಜಾರಿಗೆ ತರುವಂತೆ ಹಾಗೂ ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ ರೈತ ಪ್ರತಿಭಟನೆ:- ೨೮/೦೩/೨೦೧೬**

ಹೊನ್ನಾಳಿಯಲ್ಲಿ ಅಖಂಡ ಕರ್ನಾಟಕ ರಾಜ್ಯ ರೈತ ಸಂಘಹಾಗೂ ಹಸಿರು ಸೇನೆ, ಹೊನ್ನಾಳಿ ತಾಲೂಕು ಘಟಕದ ವತಿಯಿಂದ, ಅಧ್ಯಕ್ಷರಾದ ಶ್ರೀ ಹೆಚ್. ನಾಗರಾಜಪ್ಪ ದೊಡ್ಡೇರೆಹಳ್ಳಿ ನೇತೃತ್ವದಲ್ಲಿ ಸುಮಾರು ೭೦ಕ್ಕೂ ಹೆಚ್ಚು ರೈತರು, ಏತ ನೀರಾವರಿಯನ್ನು ಜಾರಿಗೆ ತರುವಂತೆ ಹಾಗೂ ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ ತಹಶೀಲ್ದಾರ್ ಕಚೇರಿಯ ಮುಂದೆ ಪ್ರತಿಭಟನೆ ಮಾಡಿದರು.

ಹೊನ್ನಾಳಿ ತಾಲೂಕಿನಲ್ಲಿ ಏತ ನೀರಾವರಿ ಮೂಲಕ ಕೆರೆಗಳಿಗೆ ಶೀಘ್ರವೇ ನೀರು ಉಣಿಸುವ ಕಾರ್ಯ ನಡೆಯಬೇಕು. ಕಂದಾಯ ಇಲಾಖೆಯಲ್ಲಿ ನಡೆಯುತ್ತಿರುವ ಲೋಪದೋಷಗಳನ್ನು ಸರಿಪಡಿಸಬೇಕು. ಹೊನ್ನಾಳಿ ತಾಲೂಕು ಭೂಮಾಪನ ಇಲಾಖೆಯಿಂದ ರೈತರ ಜಮೀನುಗಳನ್ನು ಅಳತೆ ಮಾಡುವುದು ಮುಂತಾದ ಬೇಡಿಕೆಗಳನ್ನು ಈಡೇರಿಸಬೇಕೆಂದು ಒತ್ತಾಯಿಸಿ ಹಿರೇಕಲ್ಮಠ ಸರ್ಕಲ್‌ನಿಂದ ಪ್ರತಿಭಟನಾ ಮೆರವಣಿಗೆ ಹೊರಟು, ತಾಲೂಕು ಕಚೇರಿಗೆ ಬಂದು ಆವರಣದಲ್ಲಿ ಪ್ರತಿಭಟನೆ ಮಾಡಿ ತಹಶೀಲ್ದಾರರಿಗೆ ಮನವಿ ನೀಡಿದರು.

**ಅಸಮರ್ಪಕ ವಿದ್ಯುತ್ ಪೂರೈಕೆಯನ್ನು ಖಂಡಿಸಿ ದಾವಣಗೆರೆ ರೈತರ ಪ್ರತಿಭಟನೆ:- ೩೦/೦೩/೨೦೧೬**

ದಾವಣಗೆರೆ ನಗರದ ಅಂಬೇಡ್ಕರ್ ವೃತ್ತದ ಬಳಿ ಇರುವ ಬೆಸ್ಕಾಂ ಸೂಪರಿಂಡೆಂಟ್ ಇಂಜಿನಿಯರ್ ಕಛೇರಿಯ ಮುಂಭಾಗ, ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ(ಪುಟ್ಟಣ್ಣಯ್ಯ ಬಣ) ವತಿಯಿಂದ ಜಿಲ್ಲಾಧ್ಯಕ್ಷರಾದ ಚಿಕ್ಕನಹಳ್ಳಿ ರೇವಣಸಿದ್ದಪ್ಪ, ರೈತ ಮುಖಂಡರಾದ ಬಲ್ಲೂರು ರವಿಕುಮಾರ್, ವಾಸನದ ಓಂಕಾರಪ್ಪ, ಅರುಣ್‌ಕುಮಾರ್ ಕುರುಡಿ ಹಾಗು ಮಹೇಶ್ವರಸ್ವಾಮಿಯವರ ನೇತೃತ್ವದಲ್ಲಿ ಸುಮಾರು ೮೦ ರಿಂದ ೯೦ ರೈತರು ಅಸಮರ್ಪಕ ವಿದ್ಯೂತ್ ಪೂರೈಕೆ ಮಾಡುತ್ತಿರುವುದನ್ನು ವಿರೋಧಿಸಿ ೩೦ ಮಾರ್ಚ್ ೨೦೧೬ರಂದು ಮಧ್ಯಾಹ್ನ ೧೨:೦೦ಗಂಟೆಯಿಂದ ೨:೦೦ ಗಂಟೆಯವರೆಗೆ ಪ್ರತಿಭಟನೆ ಮಾಡಿದರು.

ಜಮೀನುಗಳಿಗೆ ಅಸಮರ್ಪಕ ವಿದ್ಯುತ್ ಪೂರೈಕೆ ಮಾಡುತ್ತಿರುವದನ್ನು ಖಂಡಿಸಿ ಮತ್ತು ಹಗಲು ವೇಳೆಯಲ್ಲಿ ನಿರಂತರ ೧೨ ತಾಸು ತ್ರೀಪೇಸ್ ವಿದ್ಯುತ್ ಪೂರೈಕೆ ಮಾಡುವಂತೆ ಆಗ್ರಹಿಸಿದರು. ನಗರದ ಬೀರಲಿಂಗೇಶ್ವರ ದೇವಸ್ಥಾನದಿಂದ ಪ್ರತಿಭಟನಾ ಮೆರವಣಿಗೆ ಹೊರಟು, ಪಿ.ಬಿ. ರಸ್ತೆಯ ಮೂಲಕ ಜಯದೇವ ವೃತ್ತ, ಅಂಬೇಡ್ಕರ್ ವೃತ್ತದ ಮೂಲಕ ಬೆಸ್ಕಾಂನ ಸೂಪರಿಂಡೆಂಟ್ ಇಂಜಿನಿಯರ್ ಕಚೇರಿಗೆ ಬಂದು ಪ್ರತಿಭಟನೆಯನ್ನು ನಡೆಸಿದರು.

ಈ ಸಂದರ್ಭದಲ್ಲಿ ಮಾತನಾಡಿದ ರೈತ ಮುಖಂಡರು, ರಾಜ್ಯದಲ್ಲಿ ವಿದ್ಯುತ್ ಸಮಸ್ಯೆ ಉಂಟಾಗಿದ್ದು, ರೈತರು ಕೃಷಿ ಕೆಲಸಗಳಲ್ಲಿ ತೊಡಗಿಸಿಕೊಳ್ಳಲು ಬೋರ್‌ವೆಲ್‌ಗಳಿಂದ ನೀರಾವರಿ ಮಾಡಲು ವಿದ್ಯುತ್‌ನ ಅವಶ್ಯಕತೆಯಿದೆ. ನಿರಂತರ ಬರಗಾಲ ಹಾಗೂ ಅಸಮರ್ಪಕ ಮಳೆಗಾಲದಿಂದ ರೈತರು ತತ್ತರಿಸಿದ್ದಾರೆ. ಆದರೂ ರೈತರ ಬೆಳೆಗಳಿಗೆ ರಾತ್ರಿ ವೇಳೆ ೩ ಗಂಟೆ, ಹಗಲು ವೇಳೆ ೨ ಗಂಟೆ ವಿದ್ಯುತ್ ನೀಡಲಾಗುತ್ತಿದೆ. ಈಗಾಗಲೇ ರೈತರು ಹಲವಾರು ಬಾರಿ ಮನವಿ ಸಲ್ಲಿಸಿದರೂ ಯಾವುದೇ ಪ್ರಯೋಜನವಾಗಿಲ್ಲ. ರೈತರು ಬ್ಯಾಂಕ್ ಸಾಲ ಖಾಸಗಿ ಸಾಲ ಮಾಡಿ ತಮ್ಮ ಬೆಳೆಗಳನ್ನು ಉಳಿಸಿಕೊಳ್ಳಲು ಹೋರಾಟ ಮಾಡುತ್ತಿದ್ದಾರೆ. ಆದ್ದರಿಂದ ಸರ್ಕಾರ ಈ ಕೂಡಲೇ ಹಗಲು ವೇಳೆಕನಿಷ್ಠ ೧೨ ತಾಸು ವಿದ್ಯುತ್ ಸರಬರಾಜು ಮಾಡಬೇಕು. ಟಿ.ಸಿ. ಪೆಟ್ಟಿಗೆಗಳನ್ನು ಸರಬರಾಜು ಮಾಡಬೇಕು. ವಿದ್ಯುತ್ ಲೈನ್‌ಗಳನ್ನು ತಕ್ಷಣ ದುರಸ್ತಿಗೊಳಿಸಬೇಕು. ರಾತ್ರಿ ವೇಳೆಯಲ್ಲಿ ರೈತರು ಬೆಳೆಗಳಿಗೆ ನೀರು ಹಾಯಿಸಲು ಹೋದಾಗ ಅಪಘಾತಕ್ಕೆ ಒಳಗಾದರೆ ಪರಿಹಾರವನ್ನು ಸರ್ಕಾರ ಮತ್ತು ಬೆಸ್ಕಾಂ ನೀಡಬೇಕು. ವಿದ್ಯುತ್ ವೈಪಲ್ಯದಿಂದ ಬೆಳೆ ಹಾನಿಯಾದಲ್ಲಿ ಬೆಸ್ಕಾಂ ಹೊಣೆಯಾಗಬೇಕು ಎಂದು ಪ್ರತಿಭಟಿಸಿದರು.[೮೯]

ಸ್ಥಳಕ್ಕೆ ಆಗಮಿಸಿದ ಬೆಸ್ಕಾಂನ ಸೂಪರಿಂಡೆಂಟ್ ಇಂಜಿನಿಯರ್ ಎಂ.ಎಂ. ಪವರ್ ಪ್ರತಿಭಟನಾನಿರತ ರೈತರ ಜೊತೆ ಚರ್ಚಿಸಿ ಮನವಿ ಸ್ವೀಕರಿಸಿದರು. ನಂತರ ಮಾತನಾಡಿ ರಾಜ್ಯ ಸರ್ಕಾರದನ್ವಯ ವಿದ್ಯುತ್ ಸರಬರಾಜು ಮಾಡಲಾಗುತ್ತಿದ್ದು, ಹೆಚ್ಚಿನ ವಿದ್ಯುತ್ ಪೂರೈಕೆ ಸಲುವಾಗಿ ಬೆಸ್ಕಾಂ ಎಂ.ಡಿ.ಯವರಿಗೆ ತಿಳಿಸಿ,ನಿಮ್ಮೊಂದಿಗೆ ಸಭೆ ನಡೆಸಿ ತೀರ್ಮಾನ ಕೈಗೊಳ್ಳಲಾಗುವುದೆಂದು ಹೇಳಿದ ಮೇರೆಗೆ ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ಲೋಕಾಯುಕ್ತವನ್ನು ಬಲಪಡಿಸುವಂತೆ ಆಗ್ರಹಿಸಿ ದಾವಣಗೆರೆ ರೈತರ ಪ್ರತಿಭಟನೆ:-**

**೨೦/೦೪/೨೦೧೬**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರುಸೇನೆಯ (ಕೋಡಿಹಳ್ಳಿ ಚಂದ್ರಶೇಖರ್ ಬಣ) ವತಿಯಿಂದ ಜಿಲ್ಲಾ ಕಾರ್ಯದರ್ಶಿ ಚಿನ್ನಸಮುದ್ರ ಶೇಖರ್‌ನಾಯ್ಕ್ ಹಾಗೂ ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪನವರ ನೇತೃತ್ವದಲ್ಲಿ ಸುಮಾರು ೪೦ ರಿಂದ ೫೦ ರೈತರು, ೨೦ ಏಪ್ರಿಲ್ ೨೦೧೬ರಂದು ಲೋಕಯುಕ್ತವನ್ನು ಬಲಪಡಿಸುವಂತೆ ಒತ್ತಾಯಿಸಿ ಪ್ರತಿಭಟನೆ ಮಾಡಿದರು.

ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದಿಂದ ಪ್ರತಿಭಟನಾ ಮೆರವಣಿಗೆಯನ್ನು ಹಮ್ಮಿಕೊಂಡರು. ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ಕಳೆದ ೫ ವರ್ಷದಿಂದ

ಸತತವಾಗಿ ಜನಸಾಮಾನ್ಯರು ಲೋಕಯುಕ್ತವನ್ನು ಬಲಪಡಿಸಲು ಹಾಗೂ ಲೋಕಯುಕ್ತ ಸ್ಥಾನಕ್ಕೆ ಪ್ರಾಮಾಣಿಕರನ್ನು ನೇಮಿಸಲು ಹೋರಾಟವನ್ನು ಮಾಡುತ್ತಿದ್ದಾರೆ. ಆದರೆ ರಾಜ್ಯ ಸರ್ಕಾರ ಅದನ್ನು ಮುಚ್ಚಿ ಹಾಕಲು ಯತ್ನಿಸುತ್ತಿದೆ. ಅಲ್ಲದೆ ಅದಕ್ಕೆ ಬದಲಾಗಿ ಭ್ರಷ್ಟಾಚಾರ ನಿಗ್ರಹ ದಳವನ್ನು ರಚಿಸಲು ಮುಂದಾಗಿದೆ. ಆದುದ್ದರಿಂದ ಎ.ಸಿ.ಬಿ.ಯನ್ನು ರದ್ದುಗೊಳಿಸಿ ಲೋಕಯುಕ್ತ ಬಲಪಡಿಸಿ ಪ್ರಾಮಾಣಿಕರನ್ನು ನೇಮಿಸಬೇಕೆಂದು ಒತ್ತಾಯಿಸಿ ಎಸಿ ಕಛೇರಿಗೆ ಬಂದು ಮನವಿ ಸಲ್ಲಿಸಿದರು. ಜಿಲ್ಲಾ ಪಂಚಾಯ್ತಿ ಕಛೇರಿಗೆ ಬಂದು ಕಚೇರಿಯ ಮುಂಭಾಗದಲ್ಲಿ ಕುಳಿತು ಎಂ.ಎಲ್.ಸಿ.ಯಾಗಿದ್ದ ಶ್ರೀ ಉಗ್ರಪ್ಪನವರನ್ನು ಕರೆಯಿಸಬೇಕೆಂದು ಘೋಷಣೆ ಕೂಗಿದರು. ಆ ಸಮಯದಲ್ಲಿ ಸಭೆ ನಡೆಯುತ್ತಿದ್ದರಿಂದ ಸಭೆ ಮುಗಿದ ನಂತರ ಭೇಟಿಯಾಗುತ್ತೇನೆಂದು ಹೇಳಿ ಕಳುಹಿಸಿದ್ದರಿಂದ ಎಲ್ಲರೂ ಸಹಕರಿಸಿದರು. ಆದರೆ ಬಹಳ ಸಮಯ ಕಾಯುತ್ತಿದ್ದರೂ ಸಹಾ ಮಾನ್ಯ ಉಗ್ರಪ್ಪನವರು ಹತ್ತಿರ ಬರಲಿಲ್ಲವೆಂದು ಜಿಲ್ಲಾ ಪಂಚಾಯ್ತಿ ಕಛೇರಿ ಮುಂಭಾಗದಲ್ಲಿರುವ ಎನ್.ಹೆಚ್.೪ ರಸ್ತೆಗೆ ಬಂದು ಹತ್ತು ನಿಮಿಷದವರೆಗೆ ರಸ್ತೆ ತಡೆ ನಡೆಸಿದರು.[೯೦] ಅಲ್ಲಿಗೆ ಬಂದ ಪೊಲೀಸ್ ಅಧಿಕಾರಿಗಳು ರೈತರನ್ನು ಸಮಾಧಾನಪಡಿಸಿ ಪ್ರತಿಭಟನೆ ಹಿಂಪಡೆಯುವಂತೆ ಮಾಡಿದರು.

**೬೦ ಕೆರೆಗಳಿಗೆ ನೀರು ತುಂಬಿಸುವುದು ಮತ್ತು ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಮಾಡಬೇಕೆಂದು ಒತ್ತಾಯಿಸಿ ರೈತ ಸಂಘದ ಪ್ರತಿಭಟನೆ:- ೩೦/೦೪/೨೦೧೬**

ಹರಪನಹಳ್ಳಿಯಲ್ಲಿ ರಾಜ್ಯ ರೈತ ಸಂಘ ಹಾಗೂ ಸೇನೆಯ ಮುಖಂಡರಾದ ಮಹೇಶ್ವರ ಸ್ವಾಮಿಯವರ ನೇತೃತ್ವದಲ್ಲಿ ಸುಮಾರು ೬೦ ರೈತರು ಬೆಳಿಗ್ಗೆ ೧೧:೦೦ ಗಂಟೆಯಿಂದ ೪:೦೦ ಗಂಟೆಯವರೆಗೆ ಪ್ರತಿಭಟನೆ ಮಾಡಿದರು.

ಪುಟ್ಟಣ್ಣಯ್ಯ ಬಣದ ವತಿಯಿಂದ ಶ್ರೀ ಮಹೇಶ್ವರ ಸ್ವಾಮಿ ನೇತೃತ್ವದಲ್ಲಿ ೬೦ ರೈತರು ಗರ್ಭಗುಡಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣವನ್ನು ಪೂರೈಸಬೇಕು ಹಾಗೂ ಹರಪನಹಳ್ಳಿ ತಾಲೂಕಿನ ೬೦ ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ ಕೈಗೆತ್ತಿಕೊಳ್ಳಬೇಕೆಂದು ಆಗ್ರಹಿಸಿದರು. ಗರ್ಭಗುಡಿಯಿಂದ ೩೦ ಬೈಕ್‌ಗಳಲ್ಲಿ ರ್‍ಯಾಲಿ ಹೊರಟು, ಹಲವಾಗಲು, ತಾವರಗೊಂದಿ, ನಿಟ್ಟೂರು, ಬಸಾಪುರ, ನಂದ್ಯಾಲ, ಕಡತಿ, ವಟ್ಲಳ್ಳಿ ಮೂಲಕ ದುಗ್ಗಾವತಿಯ ಬಸ್ ನಿಲ್ದಾಣಕ್ಕೆ ಬಂದು ಸಭೆ ನಡೆಸಿದರು. ಅಲ್ಲಿಂದ ಹರಪನಹಳ್ಳಿ ತಾಲೂಕು ಕಚೇರಿಗೆ ಬಂದು ಪ್ರತಿಭಟನೆ ನಡೆಸಿದ ರೈತರು ತಹಶೀಲ್ದಾರರಿಗೆ ಬೇಡಿಕೆಯ ಮನವಿ ಸಲ್ಲಿಸಿದರು. ರೈತರನ್ನು ಉದ್ದೇಶಿಸಿ ಮಾತನಾಡಿದ ತಹಶೀಲ್ದಾರರು, ಜಿಲ್ಲಾಧಿಕಾರಿಗಳು ಹಾಗೂ ಸರ್ಕಾರದ ಜೊತೆ ಚರ್ಚಿಸಿ ಬೇಡಿಕೆ ಈಡೇರಿಸುವದಾಗಿ ಭರವಸೆ ನೀಡಿದರು.

**ಕರ್ನಾಟಕ ಬ್ಯಾಂಕ್‌ನ ವಿರುದ್ಧ ರೈತ ಪ್ರತಿಭಟನೆ:- ೧೩/೦೫/೨೦೧೬**

ದಾವಣಗೆರೆ ತಾಲೂಕು ಅಣಜಿ ಗ್ರಾಮದಲ್ಲಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣಯ್ಯ ಬಣ) ವತಿಯಿಂದ, ಮುಖಂಡರಾದ ಮಹೇಶ್ವರಸ್ವಾಮಿ ಹಾಗೂ

ಮಲ್ಲಾಪುರ ದೇವರಾಜ್‌ರವರ ನೇತೃತ್ವದಲ್ಲಿ ಸುಮಾರು ೮೦ ಕ್ಕೂ ಹೆಚ್ಚು ರೈತರು ಅಣಜಿಯಲ್ಲಿರುವ ಕರ್ನಾಟಕ ಬ್ಯಾಂಕ್‌ನ ಮುಂದೆ ೧೩ ಮೇ ೨೦೧೬ರಂದು ಪ್ರತಿಭಟನೆ ಮಾಡಿದರು.

ಅಣಜಿ ಗ್ರಾಮದ ಕರ್ನಾಟಕ ಬ್ಯಾಂಕ್‌ನಲ್ಲಿ ಕಳೆದ ಒಂದು ವರ್ಷದಿಂದ ರೈತರಿಗೆ ಯಾವುದೇ ಸಾಲ ನೀಡುತ್ತಿಲ್ಲ ಮತ್ತು ಬೆಳೆ ಪರಿಹಾರ ನೀಡುವಲ್ಲಿ ತಾರತಮ್ಯ ನೀತಿ ಅನುಸರಿಸುತ್ತಿದ್ದಾರೆ ಎಂದು ಆರೋಪಿಸಿದರು. ರೈತರಿಗೆ ಸಾಲ ನೀಡದ ಬ್ಯಾಂಕ್ ಅಧಿಕಾರಿಗಳ ವಿರುದ್ಧ ಕ್ರಮಕೈಗೊಳ್ಳಬೇಕೆಂದು ಸರ್ಕಾರಕ್ಕೆ ಆಗ್ರಹಿಸಿ, ಕರ್ನಾಟಕ ಬ್ಯಾಂಕ್‌ನ ಮುಂದೆ ಧರಣಿ ಕುಳಿತರು. ಈ ಸಂಬಂಧ ಸ್ಥಳಕ್ಕೆ ಆಗಮಿಸಿದ ನಾಬರ್ಡ್ ಬ್ಯಾಂಕ್‌ನ ವ್ಯವಸ್ಥಾಪಕರಾದ ಯರ್ರಿಸ್ವಾಮಿಯವರು ರೈತರ ಜೊತೆ ಚರ್ಚಿಸಿ, ಅವರಿಂದ ಮನವಿ ಸ್ವೀಕರಿಸಿದರು. ನಂತರ ಮಾತನಾಡಿದ ಯರ್ರಿಸ್ವಾಮಿಯವರು ಬ್ಯಾಂಕ್‌ಗಳ ಮೇಲೆ ಸೂಕ್ತ ಕ್ರಮ ಕೈಗೊಂಡು ಸಮಸ್ಯೆ ಬಗೆಹರಿಸುವದಾಗಿ ಆಶ್ವಾಸನೆ ನೀಡಿದರು.[೧] ಇದರಿಂದ ರೈತರು ೪:೩೦ಕ್ಕೆ ಪ್ರತಿಭಟನೆಯನ್ನು ಹಿಂಪಡೆದರು.

**ಬಿತ್ತನೆ ಬೀಜ ವಿತರಣೆ ವಿಳಂಬ ನೀತಿ ವಿರೋಧಿಸಿ ರೈತ ಪ್ರತಿಭಟನೆ:– ೩೦/೦೫/೨೦೧೬**

ಜಗಳೂರು ತಾಲೂಕಿನಲ್ಲಿ ಬಿತ್ತನೆ ಬೀಜ ವಿತರಿಸಲು ಕೃಷಿ ಇಲಾಖೆ ವಿಳಂಬ ಧೋರಣೆ ಅನುಸರಿಸುತ್ತಿದೆ ಎಂದು ಆರೋಪಿಸಿ, ತಾಲೂಕು ರೈತ ಸಂಘ ಹಾಗೂ ಹಸಿರು ಸೇನೆಯ ಪದಾಧಿಕಾರಿಗಳು ಹಾಗೂ ರೈತರು ಕೃಷಿ ಇಲಾಖೆಯ ಎದುರು ಮಂಗಳವಾರ ಪ್ರತಿಭಟನೆ ಮಾಡಿದರು.

ರೈತ ಸಂಘದ ತಾಲೂಕು ಅಧ್ಯಕ್ಷ ಕಾನನಕಟ್ಟೆ ತಿಪ್ಪೇಸ್ವಾಮಿ ಮಾತನಾಡಿ, ಇತ್ತೀಚೆಗೆ ಬಿದ್ದ ಮಳೆಗೆ ರೈತರು ಜಮೀನನ್ನು ಬಿತ್ತನೆಗೆ ಹದ ಮಾಡಿಕೊಳ್ಳುತ್ತಿದ್ದಾರೆ. ಆದರೆ ಕೃಷಿ ಇಲಾಖೆ ಬಿತ್ತನೆ ಬೀಜ ವಿತರಿಸುವಲ್ಲಿ ವಿಳಂಬ ಮಾಡುತ್ತಿರುವುದು ಸರಿಯಲ್ಲ. ಬಿತ್ತನೆ ಬೀಜಗಳ ಬಗ್ಗೆ ಮಾಹಿತಿ ಕೇಳಿದರೆ, ಕೃಷಿ ಸಹಾಯಕ ನಿರ್ದೇಶಕರು ರೈತರಿಗೆ ಸಮರ್ಪಕ ಮಾಹಿತಿ ನೀಡದೆ, ಬೇಜವಾಬ್ದಾರಿತನ ಪ್ರದರ್ಶಿಸುತ್ತಿದ್ದಾರೆ. ಬೇರೆ ತಾಲೂಕುಗಳಲ್ಲಿ ಈಗಾಗಲೇ ಶೇಂಗಾ, ಮೆಕ್ಕೆಜೋಳ ಸೇರಿದಂತೆ ವಿವಿಧ ಬಿತ್ತನೆ ಬೀಜ ವಿತರಿಸಲಾಗುತ್ತಿದೆ. ತಾಲೂಕಿನಲ್ಲಿ ಇದುವರೆಗೂ ಶೇಂಗಾ ಬೀಜ ವಿತರಿಸಿಲ್ಲ. ಹಸಿರೆಲೆ ಗೊಬ್ಬರ ಸೇರಿದಂತೆ ಇತರೆ ಗೊಬ್ಬರದ ಬಗ್ಗೆ ರೈತರಿಗೆ ಮಾಹಿತಿ ನೀಡುತ್ತಿಲ್ಲ ಎಂದು ದೂರಿದರು. ರೈತರು ಬೆಳಿಗ್ಗೆಯಿಂದ ಕಛೇರಿಯ ಮುಂಭಾಗದಲ್ಲಿ ಪ್ರತಿಭಟನೆ ಮಾಡಿದರೂ ಸಮಸ್ಯೆಯನ್ನು ಕೇಳಲು ಯಾವ ಅಧಿಕಾರಿಗಳು ಬರುತ್ತಿಲ್ಲವೆಂದು ಅಸಮಧಾನ ವ್ಯಕ್ತಪಡಿಸಿದರು.[೨]

ಸಂಜೆಯ ಸಮಯದಲ್ಲಿ ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದ ಸಹಾಯಕ ಕೃಷಿ ನಿರ್ದೇಶಕ ಕೆ.ಟಿ.ಬಸಣ್ಣ ಪ್ರತಿಭಟನಾನಿರತರನ್ನು ಮನವೊಲಿಕೆಗೆ ಯತ್ನಿಸಿದರೂ, ರೈತರು ಜಗ್ಗದೆ ಪ್ರತಿಭಟನೆ

ಮುಂದುವರೆಸಿದರು. ನಂತರ ಆಗಮಿಸಿದ ಹರಪನಹಳ್ಳಿ ವಿಭಾಗದ ಉಪನಿರ್ದೇಶಕ ಧನಂಜಯ್ ಆಗಮಿಸಿ, ಬಿತ್ತನೆ ಬೀಜಗಳು ಈಗಾಗಲೇ ತಾಲೂಕು ಕೇಂದ್ರಗಳಿಗೆ ಬಂದಿದ್ದು, ಒಂದೆರಡು ದಿನಗಳಲ್ಲಿ ರೈತ ಸಂಪರ್ಕ ಕೇಂದ್ರಗಳ ಮೂಲಕ ವಿತರಿಸಲಾಗುವುದೆಂದು ಭರವಸೆ ನೀಡಿದರು. ಅದರೂ ರೈತರು ಪ್ರತಿಭಟನೆ ಮುಂದುವರೆಸಿದಾಗ ಸ್ಥಳಕ್ಕೆ ಆಗಮಿಸಿದ ಶಾಸಕ ಎಚ್.ಸಿ. ರಾಜೇಶ್, ರೈತರೊಂದಿಗೆ ಚರ್ಚಿಸಿ ಶೀಘ್ರ ಭಿತ್ತನೆ ಬೀಜ ವಿತರಿಸಲು ಕ್ರಮ ಕೈಗೊಳ್ಳಲಾಗುವುದೆಂದು ಭರವಸೆ ನೀಡಿದ ಬಳಿಕ ಪ್ರತಿಭಟನೆಯನ್ನು ಹಿಂಪಡೆಯಲಾಯಿತು.

**ದಾವಣಗೆರೆ ಕೆ.ಪಿ.ಟಿ.ಸಿ.ಎಲ್‌ನ ವಿರುದ್ಧ ರೈತ ಪ್ರತಿಭಟನೆ:- ೦೩/೦೬/೨೦೧೬**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ, ಹರಿಹರ ತಾಲೂಕು ಸಮಿತಿಯ ಅಧ್ಯಕ್ಷರಾದ ಓಂಕಾರಪ್ಪರವರ ನೇತೃತ್ವದಲ್ಲಿ ನೂರಾರು ರೈತರು ಕೆ.ಪಿ.ಟಿ.ಸಿ.ಎಲ್.ನ ವಿರುದ್ಧ ಪ್ರತಿಭಟನೆ ಮಾಡಿದರು.

ಹರಿಹರ ತಾಲೂಕಿನ ದೇವರೆಬೆಳಕೆರೆ ಗ್ರಾಮದ ರೇವಣಸಿದ್ದಪ್ಪ ರೈತನ ರಿ.ಸರ್ವೆ ನಂ. ೭೬ರಲ್ಲಿ, ೩ ಎಕರೆ ಭತ್ತದ ಬೆಳೆಯನ್ನು ನಾಟಿ ಮಾಡಿದ್ದು, ಸದರಿ ಜಮೀನಿನಲ್ಲಿ ಕೆ.ಪಿ.ಟಿ.ಸಿ.ಎಲ್.ನವರು ವಿದ್ಯುತ್ ಟವರ್ ಕಂಬಗಳನ್ನು ಹಾಕುವಾಗ ಸುಮಾರು ೦೩ ಎಕರೆ ಭತ್ತ ಬೆಳೆ ನಾಶವಾಗಿದೆ. ಇದಕ್ಕೆ ಪರಿಹಾರವನ್ನು ಬೆಸ್ಕಾಂ ಅಧಿಕಾರಿಗಳ ಹತ್ತಿರ ಕೇಳಿದಾಗ ಕೊಡುತ್ತೇವೆಂದು ನಂಬಿಸಿದರು. ಕಾಮಗಾರಿ ಮುಗಿದ ನಂತರ ಪರಿಹಾರ ಕೇಳಲು ಬೆಸ್ಕಾಂಗೆ ಹೋದಾಗ ಪರಿಹಾರ ನೀಡಲು ಕಾನೂನು ತೊಡಕು ಉಂಟಾಗಿದೆ ಮುಂದೆ ನೋಡೋಣ ಎಂದು ಜಮೀನಿನ ರೈತನನ್ನು ಸತಾಯಿಸಿದರು. ಇದರಿಂದ ಸಂಕಷ್ಟಕ್ಕೆ ಒಳಗಾದ ರೈತನ ನೆರವಿಗೆ ನಿಂತ ರೈತ ಸಂಘಟನೆ ಹಾಗೂ ನೂರಾರು ರೈತರು, ಜೂನ್ ೦೩ ೨೦೧೬ರಂದು ಬೆಳಗ್ಗೆ ೧೧:೩೦ ರಿಂದ ೧:೩೦ ರವರೆಗೆ ದಾವಣಗೆರೆ ನಗರದ ಹದಡಿ ರಸ್ತೆಯ ಕೆ.ಟಿ.ಜೆ. ನಗರದ ೧೮ನೇ ಕ್ರಾಸ್ ಬಳಿಯಿರುವ ಬೆಸ್ಕಾಂ ಕಚೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆ ನಡೆಸಿದರು.

ಪ್ರತಿಭಟನೆ ತೀವ್ರ ಸ್ವರೂಪ ಪಡೆದಾಗ ಸ್ಥಳಕ್ಕೆ ಬೆಸ್ಕಾಂ ಇಂಜಿನಿಯರ್‌ರವರು ಬಂದು ರೈತರನ್ನು ಸಮಾಧಾನಪಡಿಸಿ ಪರಿಹಾರದ ಚೆಕ್‌ನ್ನು ರೈತನಿಗೆ ನೀಡಿದರು. ಇದರಿಂದ ಪ್ರತಿಭಟನೆಯನ್ನು ಮುಕ್ತಾಯ ಮಾಡಿ ನಿರ್ಗಮಿಸಿದರು.

**ಹುಚ್ಚವನಹಳ್ಳಿಯಲ್ಲಿ ಪ್ರತ್ಯೇಕ ಬಿತ್ತನೇ ಬೀಜ ವಿತರಣಾ ಕೇಂದ್ರ ತೆರೆಯಬೇಕೆಂದು ಆಗ್ರಹಿಸಿ ರೈತ ಪ್ರತಿಭಟನೆ:- ೦೮/೦೬/೨೦೧೬**

ಜಗಳೂರು ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್) ಬಣದ ವತಿಯಿಂದ ತಾಲೂಕು ಅಧ್ಯಕ್ಷರಾದ ಶ್ರೀ ಕಾನಕಟ್ಟೆ ತಿಪ್ಪೆಸ್ವಾಮಿಯವರ ನೇತೃತ್ವದಲ್ಲಿ ಸುಮಾರು ೫೦ಕ್ಕೂ ಹೆಚ್ಚು ರೈತರು, ಜೂನ್ ೦೮ ೨೦೧೬ರ ಬೆಳಗ್ಗೆ ೧೦:೦೦ ಗಂಟೆಯಿಂದ ಕೃಷಿ ಇಲಾಖೆಯ ಮುಂಭಾಗ ಪ್ರತಿಭಟನೆ ಮಾಡಿದರು.

ಪ್ರತಿಭಟನಾನಿರತ ರೈತರು ಜಗಳೂರಿನಾದ್ಯಂತ ಮೆರವಣಿಗೆಯನ್ನು ನಡೆಸಿ ಕೃಷಿ ಇಲಾಖೆಯ ಮುಂದೆ ಬಂದು, ಹುಚವನಹಳ್ಳಿಯಲ್ಲಿ ಪ್ರತ್ಯೇಕ ಬೀಜ ವಿತರಣಾ ಕೇಂದ್ರ ತೆರೆಯಬೇಕೆಂದು ಒತ್ತಾಯಿಸಿ, ಸಂಜೆ ೫:೦೦ ಗಂಟೆಯವರೆಗೆ ಪ್ರತಿಭಟನೆ ಮಾಡಿ ನಾಳೆ ಪುನಃ ಮುಂದುವರೆಸುವದಾಗಿ ಹೇಳಿ ತೆರಳಿದರು.

ಎರಡನೆಯ ದಿನ ಜೂನ್ ೦೯ ೨೦೧೬ರಂದು ಪ್ರತಿಭಟನೆ ಮುಂದುವರೆದಿದ್ದು, ರಾಜ್ಯಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್ ಆಗಮಿಸಿ ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದರು. ತಾಲೂಕು ಕೇಂದ್ರಕ್ಕೆ ರೈತರು ಬಂದು ಬೀಜ ಖರೀದಿ ಮಾಡುವುದು ರೈತರಿಗೆ ನುಂಗಲಾರದ ತುತ್ತಾಗಿದೆ. ಹುಚ್ವವನಹಳ್ಳಿಯಲ್ಲಿ ಬೀಜ ವಿತರಣಾ ಕೇಂದ್ರ ತೆರೆದರೆ ಅಣಬೂರು, ಮುಸ್ಟೂರು, ಹಿರೇಮಲ್ಲನಹೊಳೆ ಹಾಗು ದೊಣ್ಣೆಹಳ್ಳಿ ಪಂಚಾಯ್ತಿ ವ್ಯಾಪ್ತಿಯ ಎಲ್ಲಾ ಹಳ್ಳಿಯ ರೈತರಿಗೂ ಅನುಕೂಲವಾಗಲಿದೆ. ಆದ್ದರಿಂದ ಸದರಿ ಗ್ರಾಮಕ್ಕೆ ಬೀಜ ವಿತರಣಾ ಕೇಂದ್ರ ತೆರೆಯಲೇಬೇಕೆಂದು ಒತ್ತಾಯಿಸಿ ಕೃಷಿ ನಿರ್ದೇಶಕರಿಗೆ ಮನವಿ ಸಲ್ಲಿಸಿದರು.

ಈ ಸಂದರ್ಭದಲ್ಲಿ ಉಪಸ್ಥಿತರಿದ್ದ ಸಹಾಯಕ ಕೃಷಿ ನಿರ್ದೇಶಕ ಜಗಳೂರಯ್ಯರವರು ಮಾತನಾಡಿ, ಈಗಾಗಲೇ ೯ ಬೀಜ ವಿತರಣಾ ಕೇಂದ್ರ ತೆರೆಯಲಾಗಿದ್ದು, ಹೆಚ್ಚುವರಿ ಬೀಜ ವಿತರಣಾ ಕೇಂದ್ರ ತೆರೆಯಲು ಮೇಲಾಧಿಕಾರಿಗಳೊಂದಿಗೆ ಚರ್ಚಿಸಿ ಅನುಮತಿ ಪಡೆದು ಕ್ರಮಕೈಗೊಳ್ಳಲಾಗುವುದೆಂದು ತಿಳಿಸಿದರು. ಇದಕ್ಕೆ ಪ್ರತಿಕ್ರಿಯಿಸಿದ ಪ್ರತಿಭಟನಾಕಾರರು ಜೂನ್ ೧೦ ೨೦೧೬ರ ಒಳಗೆ ಬೀಜ ವಿತರಣಾ ಕೇಂದ್ರ ತೆರೆಯದಿದ್ದಲ್ಲಿ ಪುನಃ ಪ್ರತಿಭಟನೆ ನಡೆಸುವದಾಗಿ ಹೇಳಿ ಸಂಜೆ ೫:೩೦ಕ್ಕೆ ನಿರ್ಗಮಿಸಿದರು.

**ರೈತ ಸಂಪರ್ಕ ಕೇಂದ್ರ ಆರಂಭಕ್ಕೆ ಒತ್ತಾಯಿಸಿ ರೈತ ಪ್ರತಿಭಟನೆ:– ೦೮/೦೬/೨೦೧೬**

ಜಗಳೂರು ತಾಲೂಕಿನ ತೊರೆಸಾಲು ಭಾಗದ ಹುಚ್ಚವನಹಳ್ಳಿಯಲ್ಲಿ ರೈತ ಸಂಪರ್ಕ ಕೇಂದ್ರ ಆರಂಭಿಸಿ, ಆ ಭಾಗದ ರೈತರಿಗೆ ಬಿತ್ತನೆ ಬೀಜ, ಗೊಬ್ಬರ ವಿತರಿಸುವಂತೆ ಒತ್ತಾಯಿಸಿ ರೈತರು ಮತ್ತು ರೈತ ಮಹಿಳೆಯರು ಪಟ್ಟಣದ ಕೃಷಿ ಇಲಾಖೆಯ ಎದುರು ಒಲೆಯನ್ನು ಹಚ್ಚಿ ಅಡುಗೆ ಮಾಡುವ ಮೂಲಕ ಪ್ರತಿಭಟನೆ ಮಾಡಿದರು.

ಪ್ರತಿಭಟನಾ ನಿರತ ರೈತರು, ಸಂಬಂಧಿಸಿದ ಕೃಷಿ ಜಂಟಿ ನಿರ್ದೇಶಕರು ಸ್ಥಳಕ್ಕೆ ಧಾವಿಸಿ, ತಮ್ಮ ಸಮಸ್ಯೆಗೆ ಸ್ಪಂದಿಸುವುದರ ಜೊತೆಗೆ, ಬೇಡಿಕೆ ಈಡೇರಿಸುವವರೆಗೂ ಕದಲುವದಿಲ್ಲವೆಂದು ಪಟ್ಟು ಹಿಡಿದರು. ಹಸಿರು ಸೇನೆ ತಾಲೂಕು ಅಧ್ಯಕ್ಷರಾದ ಕಾನನಕಟ್ಟೆ ತಿಪ್ಪೇಸ್ವಾಮಿ ಮಾತನಾಡಿ, ಕಳೆದೆರಡು ವರ್ಷಗಳಿಂದ ಇಲ್ಲಿ ರೈತ ಸಂಪರ್ಕ ಕೇಂದ್ರ ಆರಂಭಿಸುವಂತೆ ಕೃಷಿ ಇಲಾಖೆಯ ಅಧಿಕಾರಿಗಳಿಗೆ ಮನವಿ ಸಲ್ಲಿಸಿದರೂ ಪ್ರಯೋಜನವಾಗಿಲ್ಲ. ಗ್ರಾಮದಲ್ಲಿ ಸೊಸೈಟಿ ಹಾಗು ಗೋಧಾಮು ಸಹಾ ಇದೆ. ಹೀಗಾಗಿ ಇಲ್ಲಿ ರೈತ ಸಂಪರ್ಕ ಕೇಂದ್ರ ಆರಂಭಿಸಿದರೆ ರೈತರು ಸಹ ಸಕಾಲದಲ್ಲಿ ಬಿತ್ತನೆ ಬೀಜ ಖರೀದಿಸಿ ಬಿತ್ತನೆ ಮಾಡಲು ಸಹಕಾರಿಯಾಗಲಿದೆ ಎಂದರು.

ತಾಲೂಕಿನ ಬಿಳಿಚೋಡು, ಸೊಕ್ಕೆ, ಜಗಳೂರು ಮೂರು ಕಡೆ ಮಾತ್ರ ರೈತ ಸಂಪರ್ಕ ಕೇಂದ್ರ ಸ್ಥಾಪನೆ ಮಾಡಲಾಗಿದ್ದು, ತೊರೆಸಾಲು ಭಾಗವನ್ನು ನಿರ್ಲಕ್ಷಿಸಲಾಗಿದೆ. ಇಲ್ಲಿನ ರೈತರು ಬಿತ್ತನೆ ಬೀಜಕ್ಕಾಗಿ ಪ್ರತೀ ವರ್ಷ ಅಲೆದಾಡುವಂತಾಗಿದೆ. ಕೂಡಲೇ ಸಂಬಂಧಪಟ್ಟ ಕೃಷಿ ಇಲಾಖೆಯವರು ಈ ಭಾಗದಲ್ಲಿ ಬಿತ್ತನೆ ಬೀಜ ವಿತರಣಾ ಕೇಂದ್ರ ತೆರೆಯುವಂತೆ ಆಗ್ರಹಿಸಿದರು.[೯]

ಸ್ಥಳಕ್ಕೆ ಭೇಟಿ ನೀಡಿದ ಕೃಷಿ ಸಹಾಯಕ ನಿರ್ದೇಶಕ ಕೆ.ಟಿ.ಬಸಣ್ಣ ಮಾತನಾಡಿ ಇಲಾಖೆಯಲ್ಲಿ ಸಿಬ್ಬಂದಿಯ ಕೊರತೆಯಿದ್ದು, ಈಗಾಗಲೇ ತಾಲೂಕಿನ ಮೂರು ಹೋಬಳಿ ಕೇಂದ್ರಗಳಲ್ಲಿ ರೈತರಿಗೆ ಬಿತ್ತನೆ ಬೀಜ ವಿತರಿಸಲಾಗುತ್ತಿದೆ. ತೊರೆಸಾಲು ಭಾಗಕ್ಕೆ ಹೆಚ್ಚುವರಿ ಬೀಜ ವಿತರಣಾ ಕೇಂದ್ರ ತೆರೆಯಲು ವ್ಯವಸಾಯ ಸೇವಾ ಸಹಕಾರ ಸಂಘದವರು ಇಲಾಖೆಯ ನಿಯಮ ಪಾಲಿಸಿ ಮಾರಾಟ ಮಾಡಲು ಮುಂದೆ ಬಂದರೆ ಕೇಂದ್ರ ಆರಂಭಿಸಲಾಗುವುದೆಂದು ತಿಳಿಸಿದರು. ಅದರೂ ರೈತರು ಪ್ರತಿಭಟನೆ ಮುಂದುವರೆಸಿದರು.

ರೈತರ ಪ್ರತಿಭಟನೆಯು ಎರಡನೆಯ ದಿನಕ್ಕೆ ಕಾಲಿಟಿದ್ದು, ಕಾನನಕಟ್ಟೆ ತಿಪ್ಪೇಸ್ವಾಮಿ ಮಾತನಾಡಿ ಮೂರು ರೈತ ಸಂಪರ್ಕ ಕೇಂದ್ರಗಳಿದ್ದರೂ ತೊಗರಿ ಸೇರಿದಂತೆ ಇತರೆ ಎಲ್ಲಾ ಬಿತ್ತನೆ ಬೀಜಗಳು ಖಾಲಿಯಾಗಿವೆ ಎಂದು ಅಧಿಕಾರಿಗಳು ರೈತರನ್ನು ವಾಪಸ್ಸು ಕಳುಹಿಸುತ್ತಿದ್ದಾರೆ. ತಾಲೂಕಿನಾದ್ಯಂತ ನಾಲ್ಕು ಸಾವಿರ ಪ್ಯಾಕೇಟ್ ಶೇಂಗಾ ಬಿತ್ತನೆ ಬೀಜದ ಬೇಡಿಕೆಯಿದ್ದು, ಇಲಾಖೆ ೧೦೦ ರಿಂದ ೨೦೦ ಚೀಲವನ್ನು ತೋರಿಸಿ, ರೈತರೇ ಕಿತ್ತಾಡುವ ಪರಿಸ್ಥಿತಿ ನಿರ್ಮಿಸುತ್ತಿದ್ದಾರೆ. ತೊರೆಸಾಲು ಭಾಗದಲ್ಲಿ ರೈತ ಸಂಪರ್ಕ ಕೇಂದ್ರ ತೆರೆಯುವವರೆಗೂ ಪ್ರತಿಭಟನೆ ಹಿಂಪಡೆಯುವುದಿಲ್ಲವೆಂದು ಎಚ್ಚರಿಸಿದರು. ದಾವಣಗೆರೆ ಜಿಲ್ಲೆಯ ಕೃಷಿ ನಿರ್ದೇಶಕರು ಪ್ರತಿಭಟನಾ ಸ್ಥಳಕ್ಕೆ ಆಗಮಿಸಿ ರೈತರೊಂದಿಗೆ ಚರ್ಚಿಸಿದರು. ನಂತರ ಮಾತನಾಡಿ ಈ ಭಾಗದಲ್ಲಿ ರೈತ ಸಂಪರ್ಕ ಕೇಂದ್ರ ತೆರೆಯುವ ಭರವಸೆಯನ್ನು ನೀಡಿದರು.

ಪ್ರತಿಭಟನೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗು ಹಸಿರುಸೇನೆಯ, ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್, ಕಾನನಕಟ್ಟೆ ತಿಪ್ಪೇಸ್ವಾಮಿ, ಲಿಂಗರಾಜು ಹಾಗು ಚಂದ್ರಪ್ಪ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಸಹಕಾರ ಸಂಘಕ್ಕೆ ಬೀಗ ಜಡಿದು ರೈತರ ಪ್ರತಿಭಟನೆ:- ೧೦/೦೬/೨೦೧೬**

ರೈತರಿಗೆ ಸಮಯಕ್ಕೆ ಸರಿಯಾಗಿ ಗೊಬ್ಬರ ನೀಡದಿದ್ದನ್ನು ಖಂಡಿಸಿ, ತಾಲೂಕಿನ ಸೊಕ್ಕೆ ಗ್ರಾಮದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಕ್ಕೆ ಬೀಗ ಜಡಿದು, ಜೂನ್ ೧೦ ೨೦೧೬ರಂದು ನೂರಾರು ರೈತರು ಪ್ರತಿಭಟನೆ ನಡೆಸಿದರು.

ರೈತ ಮುಖಂಡರು ಮಾತನಾಡಿ ಸಂಘದಿಂದ ಪ್ರತಿ ವರ್ಷ ರೈತರಿಗೆ ಗೊಬ್ಬರ ವಿತರಿಸುತ್ತಾ ಬಂದಿದೆ.ಈ ಬಾರಿ ರೈತರು ಬಿತ್ತನೆ ಮಾಡಲು ಭೂಮಿ ಹದಗೊಳಿಸಿಕೊಂಡಿದ್ದರೂ ಸಹ, ಗೊಬ್ಬರ ವಿತರಿಸದೆ ನಿರ್ಲಕ್ಷವಹಿಸುತ್ತಿರುವುದು ಕೃಷಿ ಚಟವಟಿಕೆಗೆ ಹಿನ್ನಡೆಯಾಗಿದೆ. ಸಂಘದ

ಕಾರ್ಯನಿರ್ವಾಹಣಾಧಿಕಾರಿ ಕಲ್ಲೇಶಪ್ಪರಿಗೆ ಈ ಕುರಿತು ಹಲವು ಬಾರಿ ಸಂಘದ ಪದಾಧಿಕಾರಿಗಳೆಲ್ಲರೂ ಗೊಬ್ಬರದ ವಿಚಾರವಾಗಿ ಮನವರಿಕೆ ಮಾಡಿದರೂ ಪ್ರಯೋಜನ ಇಲ್ಲದಂತಾಗಿದೆ ಎಂದು ಅಸಮಧಾನ ವ್ಯಕ್ತಪಡಿಸಿದರು. ಸಂಬಂಧಪಟ್ಟ ಮೇಲಾಧಿಕಾರಿಗಳು ಕೂಡಲೇ ಈ ಕುರಿತು ಕ್ರಮಕೈಗೊಳ್ಳಬೇಕು. ಅಲ್ಲದೆ ಕಾರ್ಯನಿರ್ವಾಹಣಾಧಿಕಾರಿ ಪ್ರತಿದಿನ ಸಂಘದ ಕಛೇರಿಗೆ ಬಂದು ರೈತರ ಸಂಕಷ್ಟ ಆಲಿಸಿ ಶೀಘ್ರದಲ್ಲಿ ಗೊಬ್ಬರ ವಿತರಣೆ ಮಾಡುವ ಮೂಲಕ ನಿಗದಿತ ಸಮಯದಲ್ಲಿ ಬಿತ್ತನೆಗೆ ಅನುವು ಮಾಡಿಕೊಡುವಂತೆ ರೈತರು ಒತ್ತಾಯಿಸಿದ್ದಾರೆ.

**ವಿದೇಶಿ ಅಡಿಕೆ ಆಮದನ್ನು ವಿರೋಧಿಸಿ ಹಾಗೂ ಸ್ಥಿರ ಬೆಲೆ ನೀಡುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:–**

**೨೭/೦೬/೨೦೧೬**

ದಾವಣಗೆರೆ ನಗರದ ಪ್ರೆಸ್ ಕ್ಲಬ್‌ನಲ್ಲಿ ಹೊನ್ನೂರು ಮುನಿಯಪ್ಪ (ರಾಜ್ಯ ಕಾರ್ಯದರ್ಶಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ)ರವರು ಪತ್ರಿಕಾಗೋಷ್ಠಿ ನಡೆಸಿ ಮಾತನಾಡಿ, ಕಳೆದ ವರ್ಷ ಅಡಿಕೆ ಬೆಲೆ ಕ್ವಿಂಟಾಲ್‌ಗೆ ೬೦ ಸಾವಿರರೂಗೆ ಮಾರಾಟವಾಗುತ್ತಿತ್ತು. ಆದರೆ ಪ್ರಸ್ತುತ ದಿನದಲ್ಲಿ ೨೨ ಸಾವಿರ ರೂಗೆ ಕುಸಿದಿರುವುದು ವಿಷಾಧಕರ ಸಂಗತಿ ಎಂದರು.

ಸಾರ್ಕ್ ಒಪ್ಪಂದದ ಅನ್ವಯ ನಮ್ಮ ದೇಶದಲ್ಲಿ ನೆರೆ ರಾಷ್ಟ್ರಗಳಿಂದ ಸುಂಕವಿಲ್ಲದೆ ಯಾವುದೇ ಪದಾರ್ಥವನ್ನು ತಂದು ಮಾರಾಟ ಮಾಡಬಹುದಾಗಿದೆ. ಇದರಿಂದಾಗಿ ಅಡಿಕೆ ಪುಡಿ ಮಾಡುವ ಕಂಪನಿಗಳು ಇಂಡೋನೇಷ್ಯಾ, ಥೈಲ್ಯಾಂಡ್, ಮಲೇಷಿಯಾ ದೇಶಗಳಲ್ಲಿ ಬೆಳೆಯುವ ಕಳಪೆ ಗುಣಮಟ್ಟದ ಅಡಕೆಯನ್ನು ತಂದು ನಮ್ಮ ದೇಶದಲ್ಲಿ ಮಾರಾಟ ಮಾಡಿ, ಒಂದು ಕ್ವಿಂಟಾಲ್ ಅಡಿಕೆ ಪುಡಿಗೆ ಕನಿಷ್ಟ ೨ ಲಕ್ಷ ರೂ ಲಾಭ ಪಡೆಯುತ್ತಿದ್ದಾರೆ. ಆದ್ದರಿಂದ ಕೇಂದ್ರ ಸರ್ಕಾರ ನೆರೆ ರಾಷ್ಟ್ರಗಳ ಜೊತೆಗಿನ ಒಪ್ಪಂದ ಪರಿಷ್ಕರಿಸಿ, ಅಡಿಕೆ ಆಮದನ್ನು ಸಂಪೂರ್ಣ ನಿರ್ಬಂಧಿಸಬೇಕೆಂದು ಆಗ್ರಹಿಸಿದರು.

ಅಡಿಕೆ ಕ್ವಿಂಟಾಲ್ ಒಂದಕ್ಕೆ ೩೫ ಸಾವಿರ ರೂ. ಕೇಂದ್ರ ಸರ್ಕಾರ ಬೆಲೆ ನಿಗದಿ ಮಾಡಿ ಖರೀದಿಸಬೇಕು. ಈ ವರ್ಷ ಒಣಗಿದ ಅಡಿಕೆ ಮರಗಳಿಗೆ ಮತ್ತು ಹೆಚ್ಚಿನ ಉಷ್ಣಾಂಶದಿಂದ ಇಳುವರಿ ಕಡಿಮೆಯಾಗಿರುವ ಅಡಿಕೆಗೆ ಪರಿಹಾರ ಕೊಡಬೇಕು. ಮೆಕ್ಕೆಜೋಳ ರಾಗಿ, ಅಡಿಕೆ, ತೆಂಗು ಮತ್ತು ಭತ್ತ ಇತರೆ ಎಲ್ಲಾ ಬೆಳೆಗಳ ರೈತರ ಸಂಪೂರ್ಣ ಸಾಲ ಮನ್ನಾ ಮಾಡಬೇಕು. ತೆಂಗಿನಕಾಯಿ ಒಂದಕ್ಕೆ ೩೦ ರಿಂದ ೪೦ ರೂ ಬೆಲೆ ನಿಗದಿ ಮಾಡಿ ಸರ್ಕಾರ ಖರೀದಿಸಬೇಕು. ದಾವಣಗೆರೆಯನ್ನು ಬರಗಾಲ ಪೀಡಿತ ಪ್ರದೇಶವೆಂದು ಘೋಷಿಸಿ ತಕ್ಷಣ ಪರಿಹಾರ ಕೊಡಬೇಕೆಂದು ಆಗ್ರಹಿಸಿ, ವಿವಿಧ ಪ್ರಗತಿಪರ ಸಂಘಟನೆಗಳು ಜೂನ್ ೨೭ ೨೦೧೬ರಂದು ದಾವಣಗೆರೆ ಬಂದ್‌ಗೆ ಕರೆನೀಡಿದರು.

ಪತ್ರಿಕಾಗೋಷ್ಠಿಯಲ್ಲಿ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ಯಲ್ಲಪ್ಪ, ರಾಮೇಗೌಡ ಮುಂತಾದ ಪ್ರಮುಖ ರೈತ ಮುಖಂಡರು ಉಪಸ್ಥಿತರಿದ್ದರು.

ಜೂನ್ ೨೬ ೨೦೧೬ರಂದು ಬೆಳಗ್ಗೆ ೧೧:೩೦ ರಿಂದ ೧:೦೦ ಗಂಟೆಯವರೆಗೆ, ದಾವಣಗೆರೆ ನಗರದಲ್ಲಿ ರೈತ ಸಂಘದ ವತಿಯಿಂದ ರಾಜ್ಯ ಕಾರ್ಯದರ್ಶಿ ಹೊನ್ನೂರು ಮುನಿಯಪ್ಪ ಹಾಗೂ ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಹಾಗೂ ವಿವಿಧ ಸಂಘಟನೆಗಳ ಮುಖಂಡರು ಮತ್ತು ನೂರಾರು ರೈತರು ಜೂನ್ ೨೭ ೨೦೧೬ ದಾವಣಗೆರೆ ಬಂದ್‌ಗೆ ಮನವಿ ಮಾಡುವ ಸಲುವಾಗಿ ಮತ್ತು ಜಾಗೃತಿ ಮೂಡಿಸುವ ಸಲುವಾಗಿ ಬೈಕ್ ರ‍್ಯಾಲಿ ನಡೆಸಿದರು.

ಜೂನ್ ೨೭ ೨೦೧೬ರಂದು ಬಂದ್‌ಗೆ ಬೆಂಬಲಿಸಿ ಕರ್ನಾಟಕ ರಾಜ್ಯ ರೈತ ಸಂಘದ ರೈತ ಮುಖಂಡರುಗಳಾದ ಹೊನ್ನೂರು ಮುನಿಯಪ್ಪ, ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ಶೇಖರ್‌ನಾಯ್ಕ್ ವಿವಿಧ ಪ್ರಗತಿಪರ ಸಂಘಟನೆಗಳು ಮತ್ತು ಐದುನೂರಕ್ಕು ಹೆಚ್ಚು ರೈತರು ಭಾಗವಹಿಸಿದ್ದರು. ಬಂದ್ ಸಂಬಂಧವಾಗಿ ರೈತರು ಮತ್ತು ವಿವಿಧ ಸಂಘಟನೆಗಳ ಪ್ರತಿಭಟನಾಕಾರರು ಬೆಳಗ್ಗೆ ೬:೩೦ ರಿಂದ ೮ ರಿಂದ ೧೦ ತಂಡಗಳಾಗಿ ಬೈಕ್‌ಗಳಲ್ಲಿ ನಗರದ ವಿವಿಧ ಬಡಾವಣೆಗಳಿಗೆ ಸಂಚರಿಸಿ, ಸ್ವಯಂ ಪ್ರೇರಿತ ಬಂದ್‌ಗೆ ಮನವಿ ಮಾಡಿದರು.

ಬಂದ್ ಪ್ರಯುಕ್ತ ನಗರದಲ್ಲಿ ಬಸ್ ಸಂಚಾರ ಸ್ಥಗಿತಗೊಂಡಿತು. ನಗರದ ಪ್ರಮುಖ ವೃತ್ತ ಮತ್ತು ರಸ್ತೆಗಳಾದ ಪಿ.ಬಿ. ರಸ್ತೆ, ಹದಡಿ ರಸ್ತೆ, ಮಂಡಿಪೇಟೆ, ಎ.ವಿ.ಕೆ. ರಸ್ತೆ, ಗಾಂಧಿ ವೃತ್ತ, ಜಯದೇವ ವೃತ್ತ, ಕೆ.ಇ.ಬಿ. ವೃತ್ತ, ಹಳೇ ಬಸ್ ನಿಲ್ದಾಣ, ಕೆ.ಎಸ್.ಆರ್.ಟಿ.ಸಿ. ಭಾಗಗಳಲ್ಲಿ ಅಂಗಡಿ ಮುಗ್ಗಟ್ಟುಗಳು ಸ್ವಯಂ ಪ್ರೇರಿತವಾಗಿ ಬಂದ್ ಮಾಡಿದ್ದವು. ಖಾಸಗಿ ಶಾಲಾ ಕಾಲೇಜುಗಳು ಸ್ವಯಂ ಪ್ರೇರಿತವಾಗಿ ರಜೆ ನೀಡಿ ಬಂದ್‌ಗೆ ಬೆಂಬಲ ನೀಡಿದವು. ಮಧ್ಯಾಹ್ನ ೧:೦೦ ಗಂಟೆಯವರೆಗೆ ದಾವಣಗೆರೆಯ ಪ್ರಮುಖ ರಸ್ತೆಗಳಲ್ಲಿ ೫೦೦ ರೈತರು ಪ್ರತಿಭಟನಾ ಮೆರವಣಿಗೆಯನ್ನು ಮಾಡಿ, ಗಾಂಧಿ ವೃತ್ತಕ್ಕೆ ಬಂದು ಪ್ರತಿಭಟನಾ ಸಭೆ ನಡೆಸಿ ಈ ಕೆಳಕಂಡ ಬೇಡಿಕೆಗಳ ಈಡೇರಿಕೆಗಾಗಿ ಆಗ್ರಹಿಸಿದರು.[೯] ಅವುಗಳೆಂದರೆ

ಕೇಂದ್ರ ಸರ್ಕಾರ ನೆರೆ ರಾಷ್ಟ್ರಗಳ ಜೊತೆಗಿನ ಒಪ್ಪಂದವನ್ನು ಪರಿಷ್ಕರಿಸಿ ಅಡಿಕೆ ಅಮದನ್ನು ಸಂಪೂರ್ಣ ನಿರ್ಬಂಧಿಸಿ ಅಡಿಕೆ ರಫ್ತಿಗೆ ಉತ್ತೇಜನ ನೀಡಬೇಕು.

ಅಡಿಕೆ ಕ್ವಿಂಟಾಲ್ ಒಂದಕ್ಕೆ ೩೫ ಸಾವಿರ ರೂ ಕೇಂದ್ರ ಸರ್ಕಾರ ಬೆಲೆ ನಿಗದಿ ಮಾಡಿ ಖರೀದಿಸಬೇಕು.

ಈ ವರ್ಷ ಒಣಗಿದ ಹಾಗೂ ಉಷ್ಣಾಂಶದಿಂದ ಇಳುವರಿ ಕಡಿಮೆಯಾಗಿರುವ ಅಡಿಕೆಗೆ ಪರಿಹಾರ ನೀಡಬೇಕು.

ರೈತರ ಸಂಪೂರ್ಣ ಸಾಲ ಮನ್ನಾ ಮಾಡಬೇಕು.

ಕೀಟಬಾಧೆಯಿಂದ ನಾಶವಾದ ತೆಂಗಿನ ಮರಕ್ಕೆ ರೂ. ೩೦ ಸಾವಿರ ಪರಿಹಾರ ನೀಡಬೇಕು ಮುಂತಾದುವು.

ಪ್ರತಿಭಟನಾ ರೈತರು ಎ.ಸಿ.ರವರು ಆಗಮಿಸುವಂತೆ ಒತ್ತಾಯಿಸಿದಾಗ, ಕುಮಾರಸ್ವಾಮಿ

ದಾವಣಗೆರೆ ಉಪವಿಭಾಗಾಧಿಕಾರಿಗಳು ಸ್ಥಳಕ್ಕೆ ಆಗಮಿಸಿ ರೈತರಿಂದ ಮನವಿ ಪತ್ರ ಸ್ವೀಕರಿಸಿ ಮಾತನಾಡಿ, ನಿಮ್ಮ ಬೇಡಿಕೆಗಳನ್ನು ಸರ್ಕಾರದ ಗಮನಕ್ಕೆ ತರಲಾಗುದುವುದೆಂದು ತಿಳಿಸಿದ ಮೇರೆಗೆ ೩:೦೦ ಗಂಟೆಗೆ ಪ್ರತಿಭಟನಾಕಾರರು ಬಂದ್ ಮುಕ್ತಾಯಗೊಳಿಸಿ ಶಾಂತರೀತಿಯಿಂದ ತೆರಳಿದರು.

**ಅಡಕೆ ಅಮದು ನೀತಿ ವಿರೋಧಿಸಿ ರೈತರ ಪ್ರತಿಭಟನೆ:– ೨೭/೦೬/೨೦೧೬**

ವಿದೇಶಿ ಅಡಕೆ ಅಮದು ನೀತಿ ವಿರೋಧಿಸಿ ದಾವಣಗೆರೆ ಬಂದ್ ಕರೆ ನೀಡಿದ ರಾಜ್ಯ ರೈತ ಸಂಘ, ಹಸಿರು ಸೇನೆ, ಅಡಕೆ ಬೆಳೆಗಾರರ ಒಕ್ಕೂಟ ಹಾಗೂ ವಿವಿಧ ಸಂಘಟನೆಗಳು ಸಾವಿರಾರು ಕಾರ್ಯಕರ್ತರು, ರೈತರು ನಗರದಲ್ಲಿ ಪ್ರತಿಭಟನಾ ಮೆರವಣಿಗೆ ನಡೆಸಿದರು.

ಜೂನ್ ೨೭ ೨೦೧೬ರ ಸೋಮವಾರದಂದು ಬೆಳಗ್ಗೆಯಿಂದಲೇ ಜಿಲ್ಲಾದಾದ್ಯಂತ ಬೈಕ್, ಕಾರು, ಟ್ರ್ಯಾಕ್ಟರ್‌ಗಳ ಮೂಲಕ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಬಳಿ ಜಮಾಯಿಸಿದ ರೈತರು ಕೇಂದ್ರ ಹಾಗೂ ರಾಜ್ಯ ಸರ್ಕಾರದ ರೈತ ವಿರೋಧ ನೀತಿ ಖಂಡಿಸಿ ಘೋಷಣೆ ಕೂಗಿದರು. ಮೆರವಣಿಗೆಯ ಮೂಲಕ ಹೊರಟ ರೈತರು ಗಾಂಧಿ ಸರ್ಕಲ್ ತಲುಪಿ ಬಹಿರಂಗ ಸಭೆ ನಡೆಸಿದರು. ಈ ವೇಳೆ ರೈತ ಮುಖಂಡ ತೇಜಸ್ವಿ ಪಟೇಲ್ ಮಾತನಾಡಿ ರೈತರು ಶ್ರೀಮಂತರಾದರೆ ರಾಜಕೀಯ ನಾಯಕರ ಆಟ ನಡೆಯುವದಿಲ್ಲವೆಂಬ ಕಾರಣಕ್ಕೆ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನೀಡುತ್ತಿಲ್ಲವೂ ಎಂಬುದನ್ನು ಸರಕಾರಗಳು ಸ್ಪಷ್ಟಪಡಿಸಬೇಕೆಂದರು. ವಿದೇಶಿ ಕಳಪೆ ಅಡಕೆ ಆಮದಿನಿಂದ ಬೆಲೆ ಕುಸಿದಿದೆ. ಪ್ರಧಾನಿ ಮೋದಿ ದಾವಣಗೆರೆಗೆ ಆಗಮಿಸಿದ ವೇಳೆ ರೈತರ ಆದಾಯ ಹೆಚ್ಚು ಮಾಡುತ್ತೇವೆ ಎಂದಿದ್ದರು. ಆದಾಯ ದ್ವಿಗುಣ ಮಾಡುವುದು ಬೇಡ, ನಿಮ್ಮಿಂದ ಅದು ಸಾಧ್ಯವಿಲ್ಲ. ಅಡಕೆ, ತೆಂಗು ಸೇರಿ ಎಲ್ಲಾ ಬೆಳೆಗಳಿಗೂ ವೈಜ್ಞಾನಿಕ ಬೆಲೆ ನೀಡಿ ಎಂದು ಆಗ್ರಹಿಸಿದರು. ಬೆಂಗಳೂರಿನ ಗಾರ್ಮೆಂಟ್ಸ್ ಮಹಿಳೆಯರಂತೆ ಎಲ್ಲಾ ರೈತರು ತಮ್ಮ ಹಕ್ಕುಗಳಿಗೆ ಪ್ರತಿಭಟನೆಗೆ ಇಳಿಯಬೇಕಾಗಿದೆ. ದೇಶದಲ್ಲಿ ಉತ್ಪಾದನೆಯಾಗುವ ಯಾವುದೇ ಕೃಷಿ ಉತ್ಪನ್ನ ವಿದೇಶದಿಂದ ತರಸಿಕೊಳ್ಳಬಾರದು. ಕೂಡಲೇ ಅಡಕೆ ಅಮದು ನಿಲ್ಲಿಸಬೇಕು. ತೆಂಗು ಬೆಲೆ ಸ್ಥಿರತೆ ತರಬೇಕು. ಇಲ್ಲವಾದರೆ ಮುಂದಿನ ದಿನಗಳಲ್ಲಿ ಅಸಹಕಾರ ಚಳವಳಿ ಕೈಗೊಳ್ಳಬೇಕಾಗುತ್ತದೆ ಎಂದು ಎಚ್ಚರಿಸಿ ಎ.ಸಿ ಕುಮಾರಸ್ವಾಮಿಗೆ ಮನವಿ ಸಲ್ಲಿಸಲಾಯಿತು.[೫೫]

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾಧ್ಯಕ್ಷ ಮಲಶೆಟ್ಟಿಹಳ್ಳಿ ಚನ್ನಬಸಪ್ಪ, ಚಿನ್ನಸಮುದ್ರ, ಶೇಖರನಾಯ್ಕ್, ರಮೇಶ್, ಅಜ್ಜಯ್ಯ, ಕನ್ನಡಪರ ಸಂಘಟನೆ ಮುಖಂಡರಾದ ರಾಮೇಗೌಡ, ಯಲ್ಲಪ್ಪ ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ಹಕ್ಕು ಪತ್ರ ವಿತರಿಸುವಂತೆ ಒತ್ತಾಯಿಸಿ ರೈತ ಸಂಘದ ಪ್ರತಿಭಟನೆ:– ೧೮/೦೭/೨೦೧೬**

ದಾವಣಗೆರೆ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಅಕ್ರಮವಾಗಿ ನಿರ್ಮಿಸಿಕೊಂಡ ಮನೆ, ಕಣಗಳನ್ನು ಸಕ್ರಮಗೊಳಿಸಿ ಹಕ್ಕು ಪತ್ರ ವಿತರಿಸುವಂತೆ ಒತ್ತಾಯಿಸಿ, ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕಾರ್ಯಕರ್ತರು ಸೋಮವಾರ ನಗರದಲ್ಲಿ ಪ್ರತಿಭಟನೆ ಮಾಡಿದರು.

ಜಯದೇವ ಸರ್ಕಲ್ ಬಳಿ ಸೇರಿದ ಪ್ರತಿಭಟನಾಕಾರರು, ಪಿ.ಬಿ. ರಸ್ತೆ, ಗಾಂಧಿ ಸರ್ಕಲ್

ಮೂಲಕ ತಾಲೂಕು ಕಛೇರಿಗೆ ತೆರಳಿ ತಹಶೀಲ್ದಾರರಿಗೆ ಮನವಿ ಸಲ್ಲಿಸಿದರು. ಹುಚ್ಚವನಹಳ್ಳಿ ಮಂಜುನಾಥ್ ಮಾತನಾಡಿ, ಕಳೆದ ವರ್ಷ ರಾಜ್ಯ ಸರಕಾರ ಜಾರಿಗೊಳಿಸಿರುವ ೯೪-ಸಿ ಕಾಯ್ದೆಯಡಿ ಸರಕಾರಿ ಜಾಗದಲ್ಲಿ ಆಕ್ರಮವಾಗಿ ನಿರ್ಮಿಸಿಕೊಂಡ ಮನೆ, ಕಣ, ಸಕ್ರಮಕ್ಕೆ ಅವಕಾಶವಿದೆ. ಈ ಕುರಿತು ರೈತರು ಸುಮಾರು ದಿನಗಳ ಹಿಂದೆ ಅರ್ಜಿ ಸಲ್ಲಿಸಿದ್ದರೂ ತಾಲೂಕು ಆಡಳಿತ ಈವರೆಗೂ ಅರ್ಜಿ ವಿಲೇವಾರಿ ಮಾಡುತ್ತಿಲ್ಲವೆಂದು ಆರೋಪಿಸಿದರು. ಅರಣ್ಯ ಜಮೀನು ಸಾಗುವಳಿದಾರರ ಸಾವಿರಕ್ಕೂ ಹೆಚ್ಚು ಅರ್ಜಿಗಳು ಬಾಕಿ ಉಳಿದಿವೆ. ಆದರೆ ಸಮಾಜ ಕಲ್ಯಾಣ ಇಲಾಖೆ ಅಧಿಕಾರಿಗಳು ಮಾತ್ರ ಅರ್ಜಿ ಪರಿಶೀಲಿಸುತ್ತಿಲ್ಲ. ನೆಮ್ಮದಿ ಕೇಂದ್ರಗಳು ಸಕ್ರಮ ಕುರಿತು ಯಾವುದೇ ಅರ್ಜಿ ಸ್ವೀಕರಿಸುತ್ತಿಲ್ಲ. ಕೂಡಲೇ ಮನೆ, ಕಣ, ಅರಣ್ಯ ಸಾಗುವಳಿದಾರರ ಅರ್ಜಿ ವಿಲೇವಾರಿ ಮಾಡಿ ಹಕ್ಕುಪತ್ರ ನೀಡಬೇಕು. ಇಲ್ಲದಿದ್ದರೆ ತಾಲೂಕು ಕಛೇರಿ ಮುಂಭಾಗ ಧರಣಿ ನಡೆಸಬೇಕಾಗುತ್ತದೆ ಎಂದು ಪ್ರತಿಭಟನಾಕಾರರು ಎಚ್ಚರಿಸಿದರು.

ಪ್ರತಿಭಟನೆಯಲ್ಲಿ ರಾಜ್ಯಾಧ್ಯಕ್ಷ ಹುಚ್ಚವನಹಳ್ಳಿ ಮಂಜುನಾಥ್, ಪೂಜರ್ ಪರಮೇಶ್ವರಪ್ಪ, ರುದ್ರಪ್ಪ ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ಪಂಪ್‌ಸೆಟ್‌ಗಳಿಗೆ ೮ ಗಂಟೆ ವಿದ್ಯುತ್ ನೀಡಲು ಆಗ್ರಹಿಸಿ ರೈತ ಪ್ರತಿಭಟನೆ:-**

**೨೭/೦೭/೨೦೧೬**

ನೀರಾವರಿ ಪಂಪ್‌ಸೆಟ್‌ಗಳಿಗೆ ಪ್ರತಿ ದಿನ ೮ ಗಂಟೆ ವಿದ್ಯುತ್ ಸರಬರಾಜು ಮಾಡಬೇಕೆಂದು ಆಗ್ರಹಿಸಿ ಬುಧುವಾರ ರೈತ ಸಂಘದ ನೂರಾರು ಕಾರ್ಯಕರ್ತರು ಹರಿಹರದ ಬೆಸ್ಕಾಂ ಉಪವಿಭಾಗ ಕಛೇರಿಯ ಎದುರು ಪ್ರತಿಭಟನೆ ನಡೆಸಿದರು.

ರೈತ ಸಂಘದ ತಾಲೂಕು ಅಧ್ಯಕ್ಷ ಬಸವರಾಜಪ್ಪ ಹೊಳೆಸಿರಿಗೆರೆ ಮಾತನಾಡಿ ಬೆಸ್ಕಾಂ ಎರಡು ದಿನಗಳಿಗೊಮ್ಮೆ ೧೦ ಗಂಟೆ ವಿದ್ಯುತ್‌ನ್ನು ನಿರಂತರವಾಗಿ ಸರಬರಾಜು ಮಾಡುತ್ತಿದೆ. ಇದರಿಂದ ಬಿತ್ತಿದ ಬೆಳೆಗೆ ಸಮರ್ಪಕ ನೀರು ಸಿಗುತ್ತಿಲ್ಲ. ಪ್ರತಿ ದಿನ ಎಂಟು ಗಂಟೆ ಸರಬರಾಜು ಮಾಡಿದರೆ ಬೆಳೆಗೂ ನಿತ್ಯ ನೀರು ಲಭಿಸುತ್ತದೆ. ಇಲಾಖೆಯ ಅಧಿಕಾರಿಗಳು ತಕ್ಷಣ ಪರಿಶೀಲಿಸಿ, ಪಂಪ್‌ಸೆಟ್‌ಗಳಿಗೆ ನಿರಂತರ ವಿದ್ಯುತ್ ಪೂರೈಸಬೇಕೆಂದರು. ನೀರು ಸಮರ್ಪಕವಾಗಿ ಸಿಗದಿದ್ದರಿಂದ ಹಿಂದಿನ ಬೇಸಿಗೆ ಬೆಳೆ ಕೈತಪ್ಪಿದೆ. ಮಳೆಗಾಲದಲ್ಲಾದರೂ ಲಭ್ಯವಿರುವ ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳದಿದ್ದರೆ ಈ ಬಾರಿಯು ಬೆಳೆ ಪಡೆಯಲು ಸಾಧ್ಯವಿಲ್ಲ. ಹರಿಯುವ ನೀರನ್ನು ಸದ್ಬಳಕೆ ಮಾಡಿಕೊಳ್ಳಲು ಅನುಕೂಲವಾಗುವಂತೆ ವಿದ್ಯುತ್ ಸರಬರಾಜು ಮಾಡಬೇಕೆಂದು ಹೇಳಿ ಮನವಿ ನೀಡಿದರು.

ಮನವಿ ಸ್ವೀಕರಿಸಿದ ಎ.ಇ.ಇ. ರಾಮಚಂದ್ರಪ್ಪ ಮಾತನಾಡಿ, ಕೊನೆ ಭಾಗದ ರೈತರ ಜಮೀನುಗಳಿಗೆ ನೀರು ಹರಿಸಲು ಅನುಕೂಲವಾಗಲೆಂದೇ ಬೆಸ್ಕಾಂ ಎರಡು ದಿನಗಳಿಗೊಮ್ಮೆ ನಿರಂತರ ೧೦ ಗಂಟೆ ವಿದ್ಯುತ್ ಸರಬರಾಜು ಮಾಡುವ ನೀತಿ ಜಾರಿ ಮಾಡಿತ್ತು. ಇದರಿಂದ ತೊಂದರೆ ಇದೆ ಎಂದರೆ, ಈ ಕುರಿತು ಹಿರಿಯ ಅಧಿಕಾರಿಗಳ ಗಮನ ಸೆಳೆದು ಸೂಕ್ತ ಕ್ರಮ

ಕೈಗೊಳ್ಳಲಾಗುವುದೆಂದು ಹೇಳಿದರು. ಪ್ರತಿಭಟನೆಯಲ್ಲಿ ಕಡ್ಲೆಗೊಂದಿ, ಬನ್ನಿಕೊಡು, ಬೇವಿನಹಳ್ಳಿ, ಸಲಗನಹಳ್ಳಿ, ಕುಣಬೆಳಕೆರೆ ಗ್ರಾಮದ ನೂರಾರು ರೈತರು ಭಾಗವಹಿಸಿದ್ದರು.

**ಮಹದಾಯಿ ವಿವಾದದ ಮಧ್ಯಂತರ ತೀರ್ಪನ್ನು ತೀರ್ಪು ವಿರೋಧಿಸಿ ದಾವಣಗೆರೆ ಜಿಲ್ಲೆ ರೈತ ಪ್ರತಿಭಟನೆ:- ೨೮/೦೭/೨೦೧೬**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ)ಯ ಜಿಲ್ಲಾಧ್ಯಕ್ಷರಾದ ಶ್ರೀ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಮತ್ತು ರಾಜ್ಯ ಕಾರ್ಯದರ್ಶಿ ಶ್ರೀ ಹೊನ್ನೂರು ಮುನಿಯಪ್ಪರವರ ನೇತೃತ್ವದಲ್ಲಿ ಸುಮಾರು ೫೦ಕ್ಕೂ ಹೆಚ್ಚು ರೈತರು, ಮಹಾದಾಯಿ ವಿವಾದದ ಮಧ್ಯಂತರ ತೀರ್ಪನ್ನು ವಿರೋಧಿಸಿ ಜುಲೈ ೨೮ ೨೦೧೬ರಂದು ಪ್ರತಿಭಟನೆ ಮಾಡಿದರು.

ರಾಜ್ಯ ಸರ್ಕಾರ ಕಳೆದ ಡಿಸೆಂಬರ್‌ನಲ್ಲಿ ಮಹದಾಯಿ ವಿವಾದ ಕುರಿತಂತೆ ಸಲ್ಲಿಸಿದ್ದ ಮಧ್ಯಂತರ ಅರ್ಜಿ ವಿಚಾರಣೆ ನಡೆಸಿದ್ದು, ಮುಖ್ಯ ನ್ಯಾಯಮೂರ್ತಿ ಶ್ರೀ ಜೆ.ಎಂ. ಪಾಂಚಾಲಾರವರ ನೇತೃತ್ವದಲ್ಲಿ ಸಹ ನ್ಯಾಯ ಮೂರ್ತಿಗಳಾದ ಶ್ರೀ ವಿನಯ್‌ಮಿತ್ತಲ್, ಎಸ್.ಪಿ. ನಾರಾಯಣ್‌ರವರನ್ನು ಒಳಗೊಂಡಂತೆ, ತ್ರಿಸದಸ್ಯ ಪೀಠವು ದಿನಾಂಕ ೨೭-೦೭-೨೦೧೬ರಂದು ಮಧ್ಯಾಹ್ನ ಕರ್ನಾಟಕ ರಾಜ್ಯದ ವಿರುದ್ಧವಾಗಿ ತೀರ್ಪು ಪ್ರಕಟಿಸಿತು. ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಿದ ನ್ಯಾಯಾಲಯ, ಕರ್ನಾಟಕ ಮಹದಾಯಿ ನೀರು ಬಳಸಿಕೊಳ್ಳಲು ಸಾಧ್ಯವಿಲ್ಲವೆಂದು ತೀರ್ಪು ನೀಡಿತು. ಈ ತೀರ್ಪನ್ನು ವಿರೋಧಿಸಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕಾರ್ಯಕರ್ತರು ಪ್ರತಿಭಟನೆ ಮಾಡಿದರು.

ಜುಲೈ ೨೮ ೨೦೧೬ರಂದು ಬೆಳಗ್ಗೆ ೭:೦೦ ಗಂಟೆಗೆ ದಾವಣಗೆರೆ ನಗರದ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಬಳಿ, ಪಿ.ಬಿ. ರಸ್ತೆಗೆ ಬಂದು ರಸ್ತೆಯಲ್ಲಿ ಟಯರ್‌ಗೆ ಬೆಂಕಿ ಹಚ್ಚುವ ಮೂಲಕ ರಾಜ್ಯ ಮತ್ತು ಕೇಂದ್ರ ಸರ್ಕಾರದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದರು. ಅಲ್ಲಿಂದ ಬೈಕ್‌ಗಳ ಮುಖಾಂತರ ನಗರದಾದ್ಯಂತ ಪ್ರತಿಭಟನಾ ಮೆರವಣಿಗೆ ಮಾಡಿ ೧೨:೧೫ಕ್ಕೆ ದಾವಣಗೆರೆ ತಾಲೂಕು ಹೆಚ್. ಕಲ್ಪನಹಳ್ಳಿ ಬಳಿ ಎನ್.ಹೆಚ್.-೦೪ ರಾಷ್ಟ್ರೀಯ ಹೆದ್ದಾರಿಗೆ ಬಂದು ರಸ್ತೆ ತಡೆ ನಡೆಸಲು ಪ್ರಯತ್ನಸಿದರು. ಆದರೆ ಸ್ಥಳಕ್ಕೆ ಆಗಮಿಸಿದ ಪೊಲೀಸ್ ಅಧಿಕಾರಿಗಳು ಮುಂಜಾಗ್ರತೆಯಾಗಿ ಜಿಲ್ಲಾಧ್ಯಕ್ಷರಾದ ಶ್ರೀ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಮತ್ತು ರಾಜ್ಯ ಕಾರ್ಯದರ್ಶಿ ಶ್ರೀ ಹೊನ್ನೂರು ಮುನಿಯಪ್ಪರವರನ್ನು ಹಾಗೂ ಉಳಿದ ಕಾರ್ಯಕರ್ತರನ್ನು ಕಲಂ ೭೧ ಕೆ.ಪಿ. ಕಾಯ್ದೆಯ ಪ್ರಕಾರ ವಶಕ್ಕೆ ಪಡೆದು, ಸಾಯಂಕಾಲ ಬಿಡುಗಡೆ ಮಾಡಿದರು.[೯]

**ಮಹದಾಯಿ ತೀರ್ಪು ವಿರೋಧಿಸಿ ವಿವಿಧ ರೈತ ಸಂಘಟನೆಗಳ ಪ್ರತಿಭಟನೆ:- ೨೮/೦೭/೨೦೧೬**

ಹರಪನಹಳ್ಳಿಯಲ್ಲಿ ಮಹದಾಯಿ ನ್ಯಾಯಾಧೀಕರಣದಲ್ಲಿ ರಾಜ್ಯದ ವಿರುದ್ಧ ಬಂದಿರುವ ತೀರ್ಪು ಖಂಡಿಸಿ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಪದಾಧಿಕಾರಿಗಳು ಗುರುವಾರ ಪಟ್ಟಣದಲ್ಲಿ ರಸ್ತೆ ತಡೆದು ಪ್ರತಿಭಟನೆ ನಡೆಸಿ, ತಹಶೀಲ್ದಾರರಿಗೆ ಮನವಿ ಸಲ್ಲಿಸಿದರು.

ಪಟ್ಟಣದ ಪ್ರಮುಖ ರಸ್ತೆಯಲ್ಲಿ ಮೆರವಣಿಗೆ ನಡೆಸಿ ಪ್ರವಾಸಿ ಮಂದಿರಕ್ಕೆ ಆಗಮಿಸಿ ರಸ್ತೆ ತಡೆ ನಡೆಸಿದರು. ಮಹದಾಯಿ ನದಿಯಿಂದ ೭.೫ ಟಿ.ಎಂ.ಸಿ. ನೀರನ್ನು ಹರಿಸಬೇಕೆಂಬ ಬಹುದಿನದ ಬೇಡಿಕೆಯನ್ನು, ನ್ಯಾಯಾಧೀಕರಣ ಅರ್ಜಿ ವಜಾ ಮಾಡುವ ಮೂಲಕ, ರಾಜ್ಯಕ್ಕೆ ಮತ್ತು ಉತ್ತರ ಕರ್ನಾಟಕಕ್ಕೆ ಅನ್ಯಾಯ ಮಾಡಲಾಗಿದೆ. ಈ ತೀರ್ಪು ಪುನಃ ಪರಿಷ್ಕರಿಸಬೇಕು. ಇಲ್ಲದಿದ್ದರೆ ನರಗುಂದ, ನವಲಗುಂದದ ಮಾದರಿಯಲ್ಲಿ ರೈತರು ಉಗ್ರ ಹೋರಾಟ ಮಾಡಬೇಕಾಗುತ್ತದೆ ಎಂದು ಪ್ರತಿಭಟನಾಕಾರರು ಎಚ್ಚರಿಸಿದರು. ಪ್ರತಿಭಟನೆಯಲ್ಲಿ ತಾಲೂಕು ಅಧ್ಯಕ್ಷ ಸುರೇಶ್, ಹನುಮಂತಪ್ಪ, ಲಕ್ಷಣನಾಯ್ಕ್ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಅಖಂಡ ಕರ್ನಾಟಕ ಬಂದ್‌ಗೆ ಬೆಂಬಲಿಸಿ, ದಾವಣಗೆರೆ ಬಂದ್ ಮಾಡಿ ರೈತ ಪ್ರತಿಭಟನೆ:- ೩೦/೦೭/೨೦೧೬**

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಹುಚ್ಚವನಹಳ್ಳಿ ಮಂಜುನಾಥ್ ಬಣ, ಪುಟ್ಟಣ್ಣಯ್ಯ ಬಣ, ಕೋಡಿಹಳ್ಳಿ ಚಂದ್ರಶೇಖರ್ ಬಣ ಹಾಗೂ ಮುಂತಾದ ವಿವಿಧ ಸಂಘಟನೆಗಳು ಮಹದಾಯಿ ನದಿ ನೀರಿನ ನ್ಯಾಯಾಧೀಕರಣದಲ್ಲಿ ಕರ್ನಾಟಕಕ್ಕೆ ಹಿನ್ನಡೆಯಾದ ಕಾರಣ, ಅಖಂಡ ಕರ್ನಾಟಕ ಬಂದ್‌ಗೆ ಬೆಂಬಲಿಸಿ ದಾವಣಗೆರೆ ಬಂದ್‌ಗೆ ಜುಲೈ ೩೦೨೦೧೬ರಂದು ಕರೆ ನೀಡಿ ಪ್ರತಿಭಟನೆ ಮಾಡಿದರು.

ದಾವಣಗೆರೆ ನಗರ ಬಂದ್ ಕರೆ ನೀಡಿದ್ದರ ಅಂಗವಾಗಿ, ರೈತರು ಬೆಳಗ್ಗೆ ೬:೦೦ ಗಂಟೆಗೆ ಜಯದೇವ ವೃತ್ತಕ್ಕೆ ಬಂದು ಅಲ್ಲಿಂದ ಬೈಕ್‌ಗಳ ಮುಖಾಂತರ ನಗರದಾದ್ಯಂತ ಪ್ರತಿಭಟನಾ ಮೆರವಣಿಗೆ ಮಾಡಿ, ಬಂದ್‌ಗೆ ಬೆಂಬಲಿಸಲು ರೈತರು ಮನವಿ ಮಾಡಿದರು. ರಾಜ್ಯ ರೈತ ಸಂಘ ಪುಟ್ಟಣ್ಣಯ್ಯ ಬಣದ ವತಿಯಿಂದ ಮಲ್ಲಾಪುರದ ದೇವರಾಜ್‌ರವರ ನೇತೃತ್ವದಲ್ಲಿ ನೂರಕ್ಕೂ ಹೆಚ್ಚು ರೈತರು ಜಯದೇವ ಸರ್ಕಲ್‌ಗೆ ಬಂದು ಬಂದ್‌ನಲ್ಲಿ ಭಾಗವಹಿಸಿ ಪ್ರತಿಭಟನೆ ಮಾಡಿದರು.

ಕೋಡಿಹಳ್ಳಿ ಚಂದ್ರಶೇಖರ್ ಬಣದ ವತಿಯಿಂದ ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ಹೊನ್ನೂರು ಮುನಿಯಪ್ಪ, ಬಲ್ಲೂರು ರವಿಕುಮಾರ್‌ರವರ ನೇತೃತ್ವದಲ್ಲಿ ಗಾಂಧಿ ವೃತ್ತದಲ್ಲಿ ೬೦ಕ್ಕೂ ಹೆಚ್ಚು ರೈತರು ಬಂದ್‌ನಲ್ಲಿ ಭಾಗವಹಿಸಿ ಪ್ರತಿಭಟಿಸಿದರು.

ಹುಚ್ಚವನಹಳ್ಳಿ ಮಂಜುನಾಥ್ ಬಣದ ವತಿಯಿಂದ, ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ಸುಮಾರು ನೂರಕ್ಕು ಹೆಚ್ಚು ರೈತರು, ದಾವಣಗೆರೆ ಹೊರವಲಯದ ಜಿಲ್ಲಾ ಪಂಚಾಯ್ತಿ ಕಚೇರಿ ಬಳಿ ಬಂದು ಎನ್.ಹೆಚ್.-೦೪ ರಾಷ್ಟ್ರೀಯ ಹೆದ್ದಾರಿಯನ್ನು ತಡೆದು ಪ್ರತಿಭಟನೆ ಮಾಡಲಾಯಿತು.

ಮೇಲ್ಕಂಡ ಸಂಘಟನೆಗಳ ಎಲ್ಲಾ ರೈತ ಮುಖಂಡರು ಹಾಗೂ ಸುಮಾರು ೬೦೦ ರಿಂದ ೭೦೦ ರೈತರು ಮಧ್ಯಾಹ್ನ ೨:೦೦ ಗಂಟೆಗೆ ಜಯದೇವ ವೃತ್ತಕ್ಕೆ ಬಂದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ವಿರುದ್ಧ ಘೋಷಣೆಗಳನ್ನು ಕೂಗಿದರು. ಕೂಡಲೇ ಮಹದಾಯಿ ಕುಡಿಯುವ ನೀರಿನ ಯೋಜನೆಗೆ ಕೇಂದ್ರ ಸರ್ಕಾರ ಅನುಮತಿ ನೀಡಬೇಕೆಂದು ಆಗ್ರಹಿಸಿದರು. ನಂತರ ರೈತ ಸಂಘದ ಹೊನ್ನೂರು ಮುನಿಯಪ್ಪರವರ ನೇತೃತ್ವದಲ್ಲಿ, ಗೋವಾ ರಾಜ್ಯದ ಮುಖ್ಯಮಂತ್ರಿಗಳಾದ ಲಕ್ಷ್ಮೀಕಾಂತ್ ಪಾರ್ಸೇಕರ್‌ರವರ ಭಾವಚಿತ್ರದೊಂದಿಗೆ ಅಣಕು ಶವಯಾತ್ರೆಯನ್ನು ಕೈಗೊಂಡರು. ನಗರದ ಅಂಬೇಡ್ಕರ್ ವೃತ್ತದಿಂದ, ಜಯದೇವ ವೃತ್ತ, ಗಾಂಧಿ ವೃತ್ತದ ಮೂಲಕ ಮತ್ತೆ ಜಯದೇವ ವೃತ್ತಕ್ಕೆ ಬಂದು ಭಾವಚಿತ್ರವನ್ನು ದಹನ ಮಾಡಿದರು. ಬಂದ್‌ಗೆ ಬೆಂಬಲ ನೀಡಿ ಶಾಲಾ ಕಾಲೇಜುಗಳು, ಅಂಗಡಿ ಮುಂಗಟ್ಟುಗಳು ಮುಚ್ಚಿದ್ದವು. ಕೆ.ಎಸ್.ಆರ್.ಟಿ.ಸಿ. ಬಸ್ಸುಗಳು, ಆಟೋಗಳು ಹಾಗೂ ಇತರೆ ಬಾರಿ ವಾಹನಗಳ ಸಂಚಾರ ಸಂಪೂರ್ಣ ಸ್ಥಗಿತಗೊಂಡಿತ್ತು. ಬ್ಯಾಂಕ್‌ಗಳು ಸಾರ್ವಜನಿಕ ವ್ಯವಹಾರವನ್ನು ಸ್ಥಗಿತಗೊಳಿಸಿ ಬಂದ್‌ಗೆ ಬೆಂಬಲ ನೀಡಿದ್ದರಿಂದ ಯಶಸ್ವಿಯಾಯಿತು.

ಜುಲೈ೩೦ ೨೦೧೬ರಂದು ಕರ್ನಾಟಕ ಬಂದ್‌ಗೆ ಬೆಂಬಲಿಸಿ ಹರಿಹರದಲ್ಲಿ ರೈತ ಸಂಘ ಹಾಗೂ ಹಸಿರು ಸೇನೆಯ ರಾಜ್ಯ ಉಪಧ್ಯಕ್ಷರಾದ ಹೆಚ್. ಓಂಕಾರಪ್ಪರವರ ಮುಂದಾಳತ್ವದಲ್ಲಿ ನೂರಾರು ರೈತರು ಪ್ರತಿಭಟನೆ ಮಾಡಿ ಬಂದ್‌ಗೆ ಬೆಂಬಲ ನೀಡಿದರು. ಇದರ ಅಂಗವಾಗಿ ಬೆಳಿಗ್ಗೆ ೬:೩೦ ರಿಂದ ಹರಿಹರದ ಪ್ರಮುಖ ಬೀದಿಗಳಲ್ಲಿ ಸಂಚರಿಸಿ ಸಾರ್ವಜನಿಕರಿಗೆ ಬಂದ್‌ಗೆ ಸಹಕರಿಸುವಂತೆ ಕೋರಿ, ನಂತರ ೧೧:೦೦ ಗಂಟೆಗೆ ಪ್ರತಿಭಟನಾ ಮೆರವಣಿಗೆ ಆರಂಭಿಸಿದರು. ನೂರಾರು ರೈತರು ಪಕ್ಕೀರಸ್ವಾಮಿ ಮಠದಿಂದ ಮೆರವಣಿಗೆ ಆರಂಭಿಸಿ, ಬೊಂಗಾಳೆ ವೃತ್ತ, ಗಾಂಧಿ ವೃತ್ತದ ಮೂಲಕ ತಾಲೂಕು ಕಛೇರಿಗೆ ಬಂದು ತಹಶೀಲ್ದಾರರಿಗೆ ಮನವಿ ಸಲ್ಲಿಸಿದರು.

**ನಿರಂತರ ವಿದ್ಯುತ್‌ಗೆ ಆಗ್ರಹಿಸಿ ಹರಪನಹಳ್ಳಿಯಲ್ಲಿ ರೈತರ ಪ್ರತಿಭಟನೆ:- ೧೯/೦೮/೨೦೧೬**

ನಿರಂತರ ವಿದ್ಯುತ್ ಸೌಲಭ್ಯ ನೀಡುವಂತೆ ಆಗ್ರಹಿಸಿ ತಾಲೂಕಿನ ಮತ್ತೂರು ಗ್ರಾಮಸ್ಥರು ರೈತ ಸಂಘದ ನೇತೃತ್ವದಲ್ಲಿ, ಶುಕ್ರವಾರ ಸಂಜೆ ನಗರದ ಬೆಸ್ಕಾಂ ಇಲಾಖೆಗೆ ಬೀಗ ಜಡಿದು ಪ್ರತಿಭಟನೆ ನಡೆಸಿದರು.

ಹೆಚ್ಚು ಲೋಡ್‌ನಿಂದಾಗಿ ಸುಟ್ಟು ಹೋಗಿರುವ ೧೦೦ ಕೆ.ವಿ. ಸಾಮರ್ಥ್ಯದ ಟಿ.ಸಿ. ಸಮೇತ ಟ್ರ್ಯಾಕ್ಟರ್‌ನಲ್ಲಿ ಆಗಮಿಸಿದ ರೈತರು ಪಂಪ್‌ಸೆಟ್‌ಗಳಿಗೆ ತಕ್ಕಂತೆ ೨೦೦ ಕೆ.ವಿ. ಸಾಮರ್ಥ್ಯದ

ಟಿ.ಸಿ.ಅಳವಡಿಸಬೇಕೆಂದು ಆಗ್ರಹಿಸಿ ಪ್ರತಿಭಟನೆ ಮಾಡಿದರು.ಗೇಟ್ ಬಂದ್ ಮಾಡಿದ ಪರಿಣಾಮ ಒಳಗಡೆ ಮತ್ತು ಹೊರಗಡೆ ಇದ್ದ ಸಿಬ್ಬಂದಿಗಳು ಬೀಗ ತೆರವುಗೊಳಿಸುವವರೆಗೂ ಪರದಾಡಿದರು. ರೈತ ಮುಖಂಡರು ಮಾತನಾಡಿ ಹಲುವಾಗಲು ಸಬ್‌ಸ್ಟೇಷನ್ ವ್ಯಾಪ್ತಿಗೆ ಬರುವ ಗ್ರಾಮಕ್ಕೆ ಹೆಚ್ಚುವರಿ ಟಿ.ಸಿ. ಒದಗಿಸುವಂತೆ ನಾಲ್ಕು ವರ್ಷದಿಂದ ಮನವಿ ಮಾಡುತ್ತಿದ್ದು ಯಾವುದೇ ಕ್ರಮಕೈಗೊಂಡಿಲ್ಲ. ಅಧಿಕಾರಿಗಳ ಬೇಜವಾಬ್ದಾರಿ, ನಿರ್ಲಕ್ಷ್ಯತನದಿಂದ ವಿದ್ಯುತ್ ಸಮರ್ಪಕವಾಗಿ ಪೂರೈಕೆ ಆಗುತ್ತಿಲ್ಲ. ಕಳೆದ ವಾರದಿಂದ ಮಳೆ ಇಲ್ಲದೇ ಬೆಳೆಗಳು ಒಣಗಲು ಆರಂಭಿಸಿವೆ ಎಂದು ದೂರಿದರು. ಗ್ರಾಮಕ್ಕೆ ಸಂಬಂಧಪಟ್ಟಂತೆ ೨೪ ಪಂಪ್‌ಸೆಟ್‌ಗಳು ಹಾಗೂ ೬ ಆಕ್ರಮ-ಸಕ್ರಮ ಪಂಪ್‌ಸೆಟ್‌ಗಳಿವೆ. ಇವುಗಳಿಗೆ ಕೇವಲ ೧೦೦ ಕೆ.ವಿ. ಸಾಮರ್ಥ್ಯದ ಟ್ರಾನ್ಸ್‌ಫಾರ್ಮರ್ ಅಳವಡಿಸಿದ್ದಾರೆ. ಇದರಿಂದ ಹೆಚ್ಚು ಲೋಡ್ ಆಗಿ ಟಿ.ಸಿ.ಗಳು ಸೂಡುತ್ತಿವೆ. ಈಗ ಸುಟ್ಟು ನಾಲ್ಕು ದಿನ ಕಳೆದರೂ ಅಧಿಕಾರಿಗಳು ರೈತರ ಮನವಿ ಆಲಿಸುತ್ತಿಲ್ಲವೆಂದು ಪ್ರತಿಭಟನಾಕಾರರು ಆರೋಪಿಸಿ ಟಿ.ಸಿ. ಕಲ್ಪಿಸುವವರೆಗೂ ಪ್ರತಿಭಟನೆ ಹಿಂಪಡೆಯುವುದಿಲ್ಲವೆಂದು ಪಟ್ಟು ಹಿಡಿದರು.

**ವಿದ್ಯುತ್‌ಗಾಗಿ ಹರಿಹರದಲ್ಲಿ ರೈತ ಸಂಘದ ಪ್ರತಿಭಟನೆ:- ೨೨/೦೮/೨೦೧೬**

ಹರಿಹರದಲ್ಲಿ ವಿದ್ಯುತ್ ಪೂರೈಕೆಯ ತಾರತಮ್ಯ ನೀತಿಯನ್ನು ವಿರೋಧಿಸಿ ಕರ್ನಾಟಕ ರಾಜ್ಯ ರೈತ ಸಂಘದ ನೂರಾರು ಕಾರ್ಯಕರ್ತರು, ನಗರದ ಬೆಸ್ಕಾಂ ಕಛೇರಿಯ ಮುಂದೆ ಆಗಸ್ಟ್೨೨ ೨೦೧೬ರ ಸೋಮವಾರದಂದು ಪ್ರತಿಭಟನೆ ನಡೆಸಿದರು.

ರೈತ ಸಂಘದ ಮುಖಂಡ ಬೇವಿನಹಳ್ಳಿ ಮಹೇಶ್ ಮಾತನಾಡಿ, ತಾಲೂಕಿನ ರೈತರಿಗೆ ವಿದ್ಯುತ್ ಕೊಡುವಲ್ಲಿ ಬೆಸ್ಕಾಂ ಅಧಿಕಾರಿಗಳು ತಾರತಮ್ಯ ಮಾಡುತ್ತಿದ್ದಾರೆ. ಪಂಪ್‌ಸೆಟ್‌ಗಳಿಗೆ ೬ ಗಂಟೆ ತ್ರೀಪೇಸ್, ೬ ಗಂಟೆ ಟುಫೇಸ್ ನೀಡುತ್ತಿದ್ದು, ಇದಕ್ಕೆ ಬದಲಾಗಿ ೮ ಗಂಟೆ ತ್ರೀಫೇಸ್, ೮ ಗಂಟೆ ಟುಫೇಸ್ ವಿದ್ಯುತ್‌ನ್ನು ನೀಡಬೇಕೆಂದರು. ಸೀಮಿತ ತ್ರೀಫೇಸ್ ಹಾಗೂ ಡೆಲ್ಟಾ ವಿತರಣೆಯಿಂದ ಜನರಿಗೆ ತುಂಬಾ ತೊಂದರೆಯಾಗಿದೆ. ತಾಲೂಕಿನ ೩೯ ಗ್ರಾಮಗಳಲ್ಲಿ ನಿರಂತರ ಜ್ಯೋತಿ ಯೋಜನೆ ಜಾರಿಗೊಳಿಸಿದ್ದು, ಟೂಫೇಸ್ ವಿದ್ಯುತ್ ನಿಲ್ಲಿಸಲಾಗಿದೆ. ಆದರೆ ದಾವಣಗೆರೆ ತಾಲೂಕಿನಲ್ಲಿ ನಿರಂತರ ಜ್ಯೋತಿ ಯೋಜನೆ ಇದ್ದಾಗ್ಯೂ ಟೂಫೇಸ್ ನೀಡಲಾಗುತ್ತಿದೆ. ಅದರಂತೆ ತಾಲೂಕಿನ ೭೮ ಹಳ್ಳಿಗಳಿಗೂ ಟೂಫೇಸ್ ನೀಡಬೇಕೆಂದು ಬೆಸ್ಕಾಂ ಅಧಿಕಾರಿಗಳಿಗೆ ಮನವಿಪತ್ರ ನೀಡಿದರು. ಅಧಿಕಾರಿಗಳು ಮನವಿ ಪತ್ರ ಸ್ವೀಕರಿಸಿ ಮೇಲಿನ ಅಧಿಕಾರಿಗಳ ಜೊತೆ ಚರ್ಚಿಸಿ ಸಮಸ್ಯೆ ಬಗೆಹರಿಸುವದಾಗಿ ಭರವಸೆ ನೀಡಿದರು.

**ಕಾವೇರಿ ನದಿಯ ತೀರ್ಪನ್ನು ವಿರೋಧಿಸಿ ದಾವಣಗೆರೆ ಜಿಲ್ಲೆ ರೈತರ ಪ್ರತಿಭಟನೆ:- ೦೬/೦೯/೨೦೧೬**

ಸರ್ವೋಚ್ಚ ನ್ಯಾಯಾಲಯವು ಕಾವೇರಿ ನದಿಯ ನೀರಿನ ಹಂಚಿಕೆಗೆ ಸಂಬಂಧಪಟ್ಟಂತೆ ನೀಡಿದ ತೀರ್ಪಿನ ವಿರುದ್ಧ, ದಾವಣಗೆರೆ ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ರೈತರು ಪ್ರತಿಭಟನೆ ಮಾಡಿದರು.

೦೬ ಸೆಪ್ಟೆಂಬರ್ ೨೦೧೬ರಂದು ೧೧:೦೦ ಗಂಟೆಯಿಂದ ೨:೦೦ ಗಂಟೆಯವರೆಗೆ ಚನ್ನಗಿರಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ) ವತಿಯಿಂದ, ತಾಲೂಕು ಅಧ್ಯಕ್ಷರಾದ ತಿಪ್ಪೇಶಪ್ಪನವರ ನೇತೃತ್ವದಲ್ಲಿ, ಸುಮಾರು ೫೦ಕ್ಕೂ ಹೆಚ್ಚು ರೈತರು ಮಾನ್ಯ ಸರ್ವೋಚ್ಚ ನ್ಯಾಯಾಲದ ಕಾವೇರಿ ನದಿ ನೀರು ಹಂಚಿಕೆ ತೀರ್ಪಿನ ವಿರುದ್ಧ ಪ್ರತಿಭಟನೆ ಮಾಡಿದರು.

ನ್ಯಾಯಾಲಯದ ತೀರ್ಪಿನ ಪ್ರಕಾರ, ಕರ್ನಾಟಕ ರಾಜ್ಯ ಸರ್ಕಾರ ಕೆ.ಆರ್.ಎಸ್. ಡ್ಯಾಂನಿಂದ ತಮಿಳುನಾಡಿಗೆ ೧೦ ದಿನಗಳಲ್ಲಿ ೧೩.೭ ಟಿ.ಎಂ.ಸಿ. ನೀರನ್ನು, ಅಂದರೆ ಪ್ರತಿ ದಿನ ೧೫ ಸಾವಿರ ಕ್ಯೂಸೆಕ್ಸ್ ನೀರನ್ನು ಬಿಡಬೇಕೆಂದು ತೀರ್ಪು ನೀಡಿರುವುದನ್ನು ರೈತರು ವಿರೋಧಿಸಿದರು. ಈ ಆದೇಶ ರಾಜ್ಯದ ರೈತರಿಗೆ ಮಾರಕವಾಗಿದೆ ಎಂದು ಆರೋಪಿಸಿ, ಪಟ್ಟಣದ ಬಸ್ ನಿಲ್ದಾಣದಿಂದ ಪ್ರತಿಭಟನಾ ಮೆರವಣಿಗೆ ಹೊರಟು, ಗಾಂಧಿ ವೃತ್ತದ ಮೂಲಕ ತಾಲೂಕು ಕಛೇರಿಗೆ ಬಂದು ಶಿರಸ್ತೇದಾರರಿಗೆ ಮನವಿ ಪತ್ರ ಸಲ್ಲಿಸಿದರು.

ಸೆಪ್ಟೆಂಬರ್ ೦೯ ೨೦೧೬ರಂದು ದಾವಣಗೆರೆ ಬಂದ್‌ಗೆ ಬೆಂಬಲಿಸಿ, ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ)ಯ ಜಿಲ್ಲಾಧ್ಯಕ್ಷರಾದ ಶ್ರೀ ಮಲ್ಲಶೆಟ್ಟಿ ಚನ್ನಬಸಪ್ಪ ಮತ್ತು ಕಾರ್ಯದರ್ಶಿ ಹೊನ್ನೂರು ಮುನಿಯಪ್ಪ ಇವರ ನೇತೃತ್ವದಲ್ಲಿ ಸುಮಾರು ೬೦ಕ್ಕೂ ಹೆಚ್ಚು ರೈತರು ನಗರದಲ್ಲಿ ಬೈಕ್ ರ್‍ಯಾಲಿ ನಡೆಸಿದರು. ಈ ತೀರ್ಮಾನ ಮಲತಾಯಿ ಧೋರಣೆಯಂತಿದೆ. ಕರ್ನಾಟಕದ ರೈತರಿಗೆ ಇದರಿಂದ ಸಂಕಷ್ಟ ಒದಗುತ್ತದೆ ಎಂದು ಪ್ರತಿಭಟಿಸಿ, ೨:೦೦ ಗಂಟೆಯ ವೇಳೆಗೆ ನಗರದ ಜಿಲ್ಲಾ ಪಂಚಾಯ್ತಿ ಕಾರ್ಯಾಲಯದ ಮುಂಭಾಗ, ರಾಷ್ಟ್ರೀಯ ಹೆದ್ದಾರಿಯಲ್ಲಿ ವಾಹನಗಳನ್ನು ತಡೆದು ಪ್ರತಿಭಟನೆ ಮಾಡಿದರು.

**ಬೆಳೆ ಪರಿಹಾರಕ್ಕಾಗಿ ಹಾಗೂ ಸಾಲಮನ್ನಕಾಗಿ ರೈತ ಪ್ರತಿಭಟನೆ:– ೦೮/೦೯/೨೦೧೬**

ಹರಪನಹಳ್ಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ) ವತಿಯಿಂದ, ತಾಲೂಕು ಅಧ್ಯಕ್ಷರಾದ ಗೌರಿಹಳ್ಳಿ ಹನುಮಂತಪ್ಪರವರ ನೇತೃತ್ವದಲ್ಲಿ ಸುಮಾರು ೫೦ಕ್ಕೂ ಹೆಚ್ಚು ರೈತರು, ಬೆಳೆ ಪರಿಹಾರ ಮತ್ತು ಸಾಲ ಮನ್ನಾ ಸೇರಿದಂತೆ ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ, ಸೆಪ್ಟೆಂಬರ್ ೦೮ ೨೦೧೬ರಂದು ಬೆಳಗ್ಗೆ ೧೧:೩೦ಕ್ಕೆ ಸರಿಯಾಗಿ ತಮಟೆ ಪ್ರತಿಭಟನೆ ಮಾಡಿದರು.

ಪಟ್ಟಣದ ಹರಿಹರ ವೃತ್ತದಿಂದ ಆರಂಭವಾದ ಮೆರವಣಿಗೆಯಲ್ಲಿ ರೈತರು, ಒಣಗಿದ ಬೆಳೆಯನ್ನು ಹಿಡಿದುಕೊಂಡು ಪ್ರಮುಖ ರಸ್ತೆಯ ಮೂಲಕ ಬಸ್ ನಿಲ್ದಾಣ, ಐ.ಬಿ ಸರ್ಕಲ್, ಮುಖಾಂತರ ತಾಲೂಕು ಕಚೇರಿಗೆ ತೆರಳಿ ತಹಶೀಲ್ದಾರರವಿಗೆ ಮನವಿ ಸಲ್ಲಿಸಿದರು.

ಪ್ರಗತಿಪರ ಚಿಂತಕ ಎ.ಎಂ. ವಿಶ್ವನಾಥ ಮಾತನಾಡಿ, ದೇಶದ ದೊಡ್ಡ ಉತ್ಪದನಾ ಕ್ಷೇತ್ರವಾದ ಕೃಷಿ ಅಸಂಘಟಿತವಾಗಿದೆ. ರೈತ ಹೆಸರಿಗೆ ಮಾತ್ರ ಅನ್ನದಾತ ಎಂಬಂತಾಗಿದೆ. ಸರಕಾರಗಳ ಶೋಷಣೆ, ದ್ವಿಮುಖ ನೀತಿ, ದ್ವಂದ್ವ ನಿಲುವುಗಳಿಂದ ರೈತರದು ಅಘೋಷಿತ ಸಾಲಗಾರನ

ಬದುಕಾಗಿದೆ ಎಂದರು. ಮುಂಗಾರು ಮಳೆ ಸರಿಯಾಗಿ ಬಾರದೆ ರೈತರು ಬರದಿಂದ ಬಸವಳಿದಿದ್ದಾರೆ. ಕುಟುಂಬ ನಿರ್ವಹಣೆ, ಸಾಕು ಪ್ರಾಣಿ ಹಾಗೂ ಜಾನುವಾರುಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗಿಲ್ಲ. ಮಡಿಗಾಸಿಗಾಗಿ ಸಾಕುಪ್ರಾಣಿ ಹಾಗೂ ಜಾನುವಾರುಗಳನ್ನು ಕಸಾಯಿ ಖಾನೆಗಳಿಗೆ ಮಾರಾಟ ಮಾಡುತ್ತಿದ್ದಾರೆ. ಇದರಿಂದ ಸರ್ಕಾರ ರೈತರ ನೆರವಿಗೆ ಬಂದು ಬೆಳೆಗಳಿಗೆ ಬೆಂಬಲ ಬೆಲೆ ಘೋಷಿಸಬೇಕು. ಬೆಳೆ ಪರಿಹಾರ ನೀಡಬೇಕೆಂದು ಒತ್ತಾಯಿಸಿದರು. ರಾಷ್ಟ್ರೀಕೃತ, ಸಹಕಾರಿ ಬ್ಯಾಂಕ್ ಸಾಲ ಮನ್ನಾ ಮಾಡಬೇಕು. ಸಾಲ ವಸೂಲಾತಿ ನಿಲ್ಲಿಸಬೇಕು. ಹೋಬಳಿ ಮಟ್ಟದಲ್ಲಿ ಗೋಶಾಲೆಯನ್ನು ತೆರೆಯಬೇಕು. ಪ್ರತಿ ಹೆಕ್ಟೇರ್‌ಗೆ ೨೫ ಸಾವಿರ ರೂ. ಪರಿಹಾರ ವಿತರಿಸಬೇಕು. ಬಗರ್ ಹುಕಂ ರೈತರಿಗೆ ತಕ್ಷಣ ಪಟ್ಟಾ ವಿತರಿಸಬೇಕು. ಗರ್ಭಗುಡಿ ಬ್ರಿಡ್ಜ್ ಕಂ ಬ್ಯಾರೇಜ್ ಕಾಮಗಾರಿ ಶೀಘ್ರ ಆರಂಭಿಸಬೇಕು. ಪ್ರಮುಖ ಕೆರೆಗಳಿಗೆ ನೀರು ತುಂಬಿಸುವುದು, ಹಾಗೂ ಸೋಲಾರ್ ಪಾರ್ಕ್‌ನ್ನು ಸ್ಥಾಪಿಸಬೇಕೆಂದು ಒತ್ತಾಯಿಸಿ ತಹಶೀಲ್ದಾರ್‌ರವರಿಗೆ ಮನವಿ ಸಲ್ಲಿಸಿದರು.[೬೨] ಮನವಿ ಸ್ವೀಕರಿಸದ ತಹಶೀಲ್ದಾರರು, ಜಿಲ್ಲಾಧಿಕಾರಿಗಳು ಹಾಗು ಸರ್ಕಾರದೊಂದಿಗೆ ಚರ್ಚಿಸಿ ಬೇಡಿಕೆಗಳನ್ನು ಈಡೇರಿಸುವದಾಗಿ ಭರವಸೆ ನೀಡಿದರು.

**ಜಗಳೂರನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:- ೦೯/೦೯/೨೦೧೬**

ಜಗಳೂರು ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ(ಹುಚ್ಚವನಹಳ್ಳಿ ಮಂಜುನಾಥ್ ಬಣ)ಯ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್ ಮತ್ತು ತಾಲೂಕು ಅಧ್ಯಕ್ಷರಾದ ಕಾನನಕಟ್ಟೆ ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ, ಸುಮಾರು ೧೫೦ಕ್ಕೂ ಹೆಚ್ಚು ರೈತರು ಸೆಪ್ಟೆಂಬರ್ ೦೯ ೨೦೧೬ ರಂದು ೧೨:೩೦ ರಿಂದ ೨:೦೦ ಗಂಟೆಯವರೆಗೆ ಪ್ರತಿಭಟನೆಯನ್ನು ನಡೆಸಿದರು.

ನಗರದಾದ್ಯಂತ ಪ್ರತಿಭಟನಾ ಮೆರವಣಿಗೆ ಹಮ್ಮಿಕೊಂಡ ರೈತರು, ಪ್ರವಾಸಿ ಮಂದಿರದಿಂದ ಹೊರಟು, ಕೆ.ಇ.ಬಿ. ವೃತ್ತದ ಮೂಲಕ ತಾಲೂಕು ಕಚೇರಿಗೆ ಬಂದು ಆವರಣದಲ್ಲಿ ಆಗ್ರಹಪಡಿಸಿದರು. ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್ ಮಾತನಾಡಿ, ಜಗಳೂರು ತಾಲೂಕಿನಲ್ಲಿ ಕಳೆದ ಒಂದು ತಿಂಗಳಿನಿಂದ ಮಳೆ ಸಂಪೂರ್ಣವಾಗಿ ಕೈ ಬಿಟ್ಟಿರುವುದರಿಂದ ಬರದ ಪರಿಸ್ಥಿತಿ ಎದುರಾಗಿದೆ. ಪ್ರಯುಕ್ತ ಜಗಳೂರು ತಾಲೂಕನ್ನು ಬರಪೀಡಿತ ಪ್ರದೇಶವೆಂದು ಘೋಷಿಸಬೇಕು. ರೈತರಿಗೆ ಬೆಳೆ ನಷ್ಟ ಪರಿಹಾರ ನೀಡಬೇಕು. ಗೋಶಾಲೆಗಳನ್ನು ಆರಂಭಿಸಬೇಕು. ರೈತರ ಸಾಲವನ್ನು ಮನ್ನ ಮಾಡಿ ಹೊಸ ಸಾಲವನ್ನು ಮಂಜೂರು ಮಾಡಬೇಕೆಂದು ಆಗ್ರಹಪಡಿಸಿ ಬೇಡಿಕೆಗಳುಳ್ಳ ಮನವಿ ಪತ್ರವನ್ನು ತಹಶೀಲ್ದಾರ್‌ರವರಿಗೆ ಸಲ್ಲಿಸಿದರು. ಮನವಿ ಸ್ವೀಕರಿಸಿದ ತಹಶೀಲ್ದಾರರು ಜಿಲ್ಲಾಧಿಕಾರಿಗಳ ಜೊತೆ ಸಮಾಲೋಚನೆ ಮಾಡಿ ಬೇಡಿಕೆಗಳನ್ನು ಈಡೇರಿಸಲು ಸಮ್ಮತಿಸಿದರು. ಇದರಿಂದಾಗಿ ರೈತರು ತಮ್ಮ ಪ್ರತಿಭಟನೆಯನ್ನು ಹಿಂಪಡೆದರು.

**ತಮಿಳುನಾಡಿನಲ್ಲಿ ಕನ್ನಡಿಗರ ಮೇಲಿನ ಹಲ್ಲೆಯನ್ನು ಖಂಡಿಸಿ ರೈತ ಪ್ರತಿಭಟನೆ:- ೧೪/೦೯/೨೦೧೬**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ(ಕೋಡಿಹಳ್ಳಿ ಚಂದ್ರಶೇಖರ್ ಬಣ)ಯ ವತಿಯಿಂದ, ರಾಜ್ಯ ಕಾರ್ಯದರ್ಶಿ ಹೊನ್ನೂರು ಮುನಿಯಪ್ಪ ಹಾಗೂ ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪರವರ ನೇತೃತ್ವದಲ್ಲಿ, ಸುಮಾರು ೪೦ಕ್ಕೂ ಹೆಚ್ಚು ರೈತರು ಸೆಪ್ಟೆಂಬರ್ ೧೪ ೨೦೧೬ರಂದು ಮಧ್ಯಾಹ್ನ ೧:೦೦ ಗಂಟೆಯಿಂದ ಪ್ರತಿಭಟನೆಯನ್ನು ಆರಂಭಿಸಿದರು.

ರೈತ ಮುಖಂಡರ ನೇತೃತ್ವದಲ್ಲಿ ೪೦ಕ್ಕೂ ಹೆಚ್ಚು ರೈತರು ತಮಿಳುನಾಡಿನಲ್ಲಿ ಕನ್ನಡಿಗರ ಮೇಲೆ ನಡೆದ ಹಲ್ಲೆಯನ್ನು ಖಂಡಿಸಿದರು. ಘನ ಸರ್ವೋಚ್ಚ ನ್ಯಾಯಾಲಯ ಪುನಃ ತಮಿಳುನಾಡಿಗೆ ಪ್ರತಿದಿನ ೧೨ ಟಿ.ಎಂ.ಸಿ. ನೀರು ಬಿಡಬೇಕೆಂದು ರಾಜ್ಯ ಸರ್ಕಾರಕ್ಕೆ ಆದೇಶಿಸಿ ತೀರ್ಪು ನೀಡಿರುವುದನ್ನು ವಿರೋಧಿಸಿ, ನಗರದ ಜಯದೇವ ವೃತ್ತದ ಬಳಿ ರಸ್ತೆ ತಡೆ ನಡೆಸಿದರು.[೮೮] ಈ ಸಮಯದಲ್ಲಿ ಸ್ಥಳಿಯ ಪೊಲೀಸ್ ಅಧಿಕಾರಿಗಳು ಮುಂಜಾಗ್ರತೆಯಾಗಿ ಮತ್ತು ಸಾರ್ವಜನಿಕ ಸಂಚಾರ ಹಿತದೃಷ್ಟಿಯಿಂದ ಮಧ್ಯಾಹ್ನ ೨:೪೫ಕ್ಕೆ ರಾಜ್ಯ ಕಾರ್ಯದರ್ಶಿ ಹೊನ್ನೂರು ಮುನಿಯಪ್ಪ ಹಾಗೂ ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಮತ್ತು ಸುಮಾರು ೧೮ ರೈತರನ್ನು ಕಲಂ ೭೧ ಕೆ.ಪಿ. ಆಕ್ಟ್ ಪ್ರಕಾರ ವಶಕ್ಕೆ ಪಡೆದು, ನಂತರ ಮಧ್ಯಾಹ್ನ ೩:೦೦ ಗಂಟೆಗೆ ಬಿಡುಗಡೆಗೊಳಿಸಲಾಯಿತು.

**ಹರಿಹರವನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವಂತೆ ಆಗ್ರಹಿಸಿ ರೈತ ಪ್ರತಿಭಟನೆ:- ೦೭/೧೦/೨೦೧೬**

ಹರಿಹರದ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ) ವತಿಯಿಂದ, ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ, ರಾಜ್ಯ ಪ್ರಧಾನ ಕಾರ್ಯದರ್ಶಿ ಹೊನ್ನೂರು ಮುನಿಯಪ್ಪ ಮತ್ತು ಮುಖಂಡರಾದ ಕೆ.ವಿ. ರುದ್ರಮನಿ, ಆಲೂರು ನಾಗರಾಜ್‌ರವರ ನೇತೃತ್ವದಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ರೈತರು ಹರಿಹರವನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವಂತೆ ಅಕ್ಟೋಬರ್ ೦೭೨೦೧೬ರಂದು ಮಧ್ಯಾಹ್ನ ೧:೦೦ ಗಂಟೆಯಿಂದ ೩:೦೦ ಗಂಟೆಯವರೆಗೆ ಪ್ರತಿಭಟನೆ ಮಾಡಿದರು.

ರೈತರು ಹರಿಹರ ನಗರದ ಪಕ್ಕೀರಸ್ವಾಮಿ ಮಠದಿಂದ ಪ್ರತಿಭಟನಾ ಮೆರವಣಿಗೆ ಹೊರಟು, ತಾಲೂಕು ಕಛೇರಿಯ ಮುಂದೆ ಬಂದು ಪ್ರತಿಭಟನೆಯನ್ನು ಮುಂದುವರೆಸಿದರು. ರೈತ ಮುಖಂಡರಾದ ಹೊನ್ನೂರು ಮುನಿಯಪ್ಪ ಮಾತನಾಡಿ, ಹರಿಹರ ತಾಲೂಕಿನಲ್ಲಿ ಸಕಾಲಕ್ಕೆ ಮಳೆ ಬಾರದೆ ಬೆಳೆ ಹಾನಿಯಿಂದ ರೈತರು ಕಂಗಾಲಾಗಿದ್ದಾರೆ. ಆದರೆ ರಾಜ್ಯ ಸರ್ಕಾರ ಹರಿಹರ ತಾಲೂಕನ್ನು ಬರಗಾಲ ಪೀಡಿತ ಪ್ರದೇಶದ ಪಟ್ಟಿಯಿಂದ ಕೈ ಬಿಟ್ಟಿರುವುದು ಸರಿಯಲ್ಲ. ಈ ಕೂಡಲೇ ಹರಿಹರ ತಾಲೂಕನ್ನು ಬರಪೀಡಿತ ಪಟ್ಟಿಗೆ ಸೇರ್ಪಡೆಗೊಳಿಸಿ ಬರಪರಿಹಾರ ನೀಡಬೇಕೆಂದು ಆಗ್ರಹಿಸಿ, ಬೇಡಿಕೆಗಳ ಮನವಿ ಪತ್ರವನ್ನು ತಹಶೀಲ್ದಾರರಿಗೆ ಸಲ್ಲಿಸಿ ಪ್ರತಿಭಟನೆ ಮಾಡಿದರು.

**H.D.F.C. (Housing Development Finanace Corporation) ಬ್ಯಾಂಕಿನ ವಿರುದ್ಧ ಹರಪನಹಳ್ಳಿ ರೈತರ ಪ್ರತಿಭಟನೆ:- ೨೪/೧೦/೨೦೧೬**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ H.D.F.C.(ದಾವಣಗೆರೆ) ಬ್ಯಾಂಕ್‌ನ ವಿರುದ್ಧ ರಾಜ್ಯಾಧ್ಯಕ್ಷರಾದ ಹೆಚ್.ಎಮ್. ಮಹೇಶ್ವರಸ್ವಾಮಿಯ ನೇತೃತ್ವದಲ್ಲಿ ನೂರಾರು ರೈತರು ಅಕ್ಟೋಬರ್ ೨೪ ೨೦೧೬ರಂದು ಪ್ರತಿಭಟನೆ ಮಾಡಿದರು.

ಪ್ರತಿಭಟನಾನಿರತ ರೈತರು H.D.F.C. ಬ್ಯಾಂಕ್‌ನ ಮುಂದೆ ಧರಣಿ ಕುಳಿತರು. ಈ ಸಮಯದಲ್ಲಿ ಮಾತನಾಡಿದ ಹೆಚ್.ಎಮ್. ಮಹೇಶ್ವರಸ್ವಾಮಿಯವರು ರಾಜ್ಯದಲ್ಲಿ ರೈತರ ಆತ್ಮಹತ್ಯೆಗಳು ನಿರಂತರವಾಗಿ ನಡೆಯುತ್ತಿದ್ದರು, ಇದನ್ನು ಲೆಕ್ಕಿಸದೆ H.D.F.C. ಬ್ಯಾಂಕ್‌ನ ಅಧಿಕಾರಿಗಳು ರೈತರ ಮೇಲೆ ಹಲ್ಲೆ ನಡೆಸಿದ್ದಾರೆ. ಅಷ್ಟೇ ಅಲ್ಲದೆ ಅ ರೈತನಿಂದ ಬಂಗಾರದ ಸರ ಹಾಗೂ ೫೦೦೦ ನಗದು ಮತ್ತು ಸೊನಾಲಿಕ್ ಟ್ರಾಕ್ಟರ್ ಕಿತ್ತುಕೊಂಡು ಬಂದಿರುವುದು ಜಿಲ್ಲಾಡಳಿತ ಮತ್ತು ಸರ್ಕಾರ ತಲೆ ತಗ್ಗಿಸುವಂತಾಗಿದೆ. ಹರಪನಹಳ್ಳಿ ತಾಲೂಕು ಪ್ರತಿ ವರ್ಷ ಬರಗಾಲಕ್ಕೆ ತುತ್ತಾಗಿದ್ದರೂ, ಈ ರೀತಿ ಬ್ಯಾಂಕ್‌ನವರು ದೌರ್ಜನ್ಯವೆಸಗುತ್ತಿರುವುದು, ಪ್ರಜಾಪ್ರಭುತ್ವಕ್ಕೆ ವಿರೋಧಿಯಾಗಿದೆ. ಇದು ಕೂಡಲೇ ನಿಲ್ಲಬೇಕು. ಈಗಾಗಲೇ ಕರ್ನಾಟಕ ಸರ್ಕಾರ ಬ್ಯಾಂಕ್‌ಗಳಿಗೆ ರೈತರ ಸಾಲದ ವಿಚಾರದಲ್ಲಿ ಸಾಲ ವಸೂಲಾತಿಯನ್ನು ಮಾಡದಂತೆ ಕಟ್ಟು ನಿಟ್ಟಾದ ಆದೇಶ ಮಾಡಿದ್ದರು. ಇದನ್ನು ಲೆಕ್ಕಿಸದೆ ಸರ್ಕಾರದ ಆದೇಶಕ್ಕೆ ಕವಡೆ ಕಾಸಿನ ಕಿಮ್ಮತ್ತು ನೀಡದ, ಇಂತಹ ಬ್ಯಾಂಕ್‌ಗಳನ್ನು ಗಡಿಪಾರು ಮಾಡಬೇಕು.

ನಮ್ಮ ದೇಶದ ಘನ ನ್ಯಾಯಾಲಯ ಸಾಲ ವಸೂಲಿ ಮಾಡುತ್ತಿರುವ ಬ್ಯಾಂಕ್ ಮತ್ತು ಪೈನಾಸ್ಸುಗಳಿಗೆ ಕಟ್ಟು ನಿಟ್ಟಿನ ಆದೇಶ ನೀಡಿರುತ್ತದೆ. ಭ್ಯಾಂಕ್ ಮತ್ತು ಫೈನಾನ್ಸ್‌ಗಳು ಸಾಲ ವಸೂಲಾತಿಗಳನ್ನು ಮಾಡುವಾಗ ದೌರ್ಜನ್ಯ ಮತ್ತು ಗುಂಡಾಗಿರಿ ಮಾಡಬಾರದು ಎಂದು ಆದೇಶ ಮಾಡಿ, ಗುಂಡಾಗಿರಿ ಕೇಸು ದಾಖಲು ಮಾಡಿಕೊಳ್ಳುವಂತೆ ಆದೇಶ ನೀಡಿರುತ್ತದೆ. ಹೀಗಿದ್ದರೂ ಇಂದು ಜಿಲ್ಲೆಯಲ್ಲಿ ಬ್ಯಾಂಕ್‌ಗಳು ರಾಜಾರೋಷವಾಗಿ ಘನ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುವ ಇವರ ಮೇಲೆ ಘನ ನ್ಯಾಯಾಲಯ ಆದೇಶದ ಉಲ್ಲಂಘನೆ, ಗುಂಡಾಗಿರಿ ಮತ್ತು ರೌಡಿ ಕೇಸ್ ದಾಖಲು ಮಾಡಿ, ರೈತನಿಗೆ ಟ್ರ್ಯಾಕ್ಟರ್ ವಾಪಾಸ್ಸು ನೀಡಬೇಕು. ಸರ್ಕಾರ ಹರಪನಹಳ್ಳಿಯನ್ನು ಬರ ಪೀಡಿದ ತಾಲೂಕೆಂದು ಘೋಷಣೆ ಮಾಡಿದ್ದರೂ, ಸಾಲ ವಸೂಲಿ ಮಾಡುತ್ತಿರುವ ಇಂತಹ ಬ್ಯಾಂಕ್‌ಗಳಿಗೆ ಜಿಲ್ಲಾಡಳಿತ ಮತ್ತು ಸರ್ಕಾರ ಸೂಕ್ತ ಕ್ರಮಕೈಗೊಳ್ಳಲು ಮುಂದಾಗಬೇಕೆಂದು ಪ್ರತಿಭಟಿಸಿ, H.D.F.C. ಬ್ಯಾಂಕ್‌ನ ವ್ಯವಸ್ಥಾಪಕರಿಗೆ ಮನವಿ ನೀಡಿದರು.[೯೯] ಅಲ್ಲಿಂದ ಜಿಲ್ಲಾಧಿಕಾರಿಗಳ ಕಛೇರಿಗೆ ಬಂದು ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು.

ಈ ಪ್ರತಿಭಟನೆಯಲ್ಲಿ ಹೆಚ್.ಎಮ್. ಮಹೇಶ್ವರಸ್ವಾಮಿ, ದೇವರಾಜ್, ಸಿದ್ದೇಶ್, ಮರುಳಸಿದ್ದಪ್ಪ, ಕುಲುಮಿ ಚಂದ್ರಪ್ಪ, ಬಸವರಾಜ ಮತ್ತಿತರ ನೂರಾರು ರೈತರು ಪಾಲ್ಗೊಂಡಿದ್ದರು.

**ಹೊನ್ನಾಳಿಯನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವಂತೆ ಆಗ್ರಹಿಸಿ ರೈತರ ಪ್ರತಿಭಟನೆ:– ೧೯/೧೦/೨೦೧೬**

ಹೊನ್ನಾಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ) ವತಿಯಿಂದ ತಾಲೂಕು ಅಧ್ಯಕ್ಷರಾದ ಶಿವಾನಂದರವರ ನೇತೃತ್ವದಲ್ಲಿ, ಸುಮಾರು ಹದಿನೈದು ಎತ್ತಿನ ಬಂಡಿಗಳಲ್ಲಿ ೧೮೦ ರಿಂದ ೨೦೦ ರೈತರು ಬಂದು, ಹೊನ್ನಾಳಿಯನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವಂತೆ ಆಗ್ರಹಿಸಿ, ಅಕ್ಟೋಬರ್ ೧೯ ೨೦೧೬ರಂದು ಮಧ್ಯಾಹ್ನ ೧೨:೩೦ರಿಂದ ೩:೩೦ರವರೆಗೆ ಪ್ರತಿಭಟನೆ ಮಾಡಿದರು.

ರೈತರು ಪ್ರತಿಭಟನಾ ಯಾತ್ರೆಯನ್ನು ಗೊಲ್ಲರಹಳ್ಳಿಯಿಂದ ಪ್ರಾರಂಭಿಸಿ, ತುಂಗಾಭದ್ರಾ ಸೇತುವೆ, ಟಿ.ಬಿ. ವೃತ್ತ, ಖಾಸಗಿ ಬಸ್ ನಿಲ್ದಾಣದ ಮೂಲಕ ಸರ್ಕಾರದ ವಿರುದ್ಧ, ಸ್ಥಳೀಯ ಶಾಸಕರ ಆಡಳಿತದ ವೈಪಲ್ಯದ ವಿರುದ್ಧ, ಘೋಷಣೆಗಳನ್ನು ಕೂಗುತ್ತ, ತಾಲೂಕು ಕಚೇರಿಗೆ ಬಂದು ಸಭೆ ನಡೆಸಿರು. ಸಭೆಯಲ್ಲಿ ಮಾತನಾಡಿದ ತಾಲೂಕು ಅಧ್ಯಕ್ಷರಾದ ಶಿವಾನಂದರವರು, ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಬರ ಅವರಿಸಿದೆ. ರೈತ ಬೆಳೆದ ಬೆಳೆ ಕೈ ಸೇರದೆ ಒಣಗುತ್ತಿದೆ. ಇದರಿಂದಾಗಿ ರೈತ ಆತ್ಮಹತ್ಯೆಯ ದಾರಿ ತುಳಿಯುತ್ತಿದ್ದಾನೆ. ಆದರೂ ರಾಜ್ಯ ಸರ್ಕಾರ ರೈತರ ನೆರವಿಗೆ ಆಗಮಿಸುತ್ತಿಲ್ಲವೆಂದು ಆರೋಪಿಸಿದರು. ರಾಜ್ಯ ಸರ್ಕಾರ ಈಗಾಗಲೇ ಎರಡು ಬಾರಿ ಬರ ಪಟ್ಟಿಯನ್ನು ನಿಗದಿ ಮಾಡಿದ್ದು, ಅದರಲ್ಲಿ ಹೊನ್ನಾಳಿ ತಾಲೂಕನ್ನು ಘೋಷಣೆ ಮಾಡದಿರುವುದು ಸ್ಥಳೀಯ ಶಾಸಕಾರ ಆಡಳಿತ ವೈಪಲ್ಯ ಎತ್ತಿ ತೋರಿಸುತ್ತದೆ. ಆದ್ದರಿಂದ ರಾಜ್ಯ ಸರ್ಕಾರ ರೈತ ಬೇಡಿಕೆಗಳನ್ನು ಈಡೇರಿಸಬೇಕೆಂದು, ವಿವಿಧ ಬೇಡಿಕೆಗಳ ಮನವಿ ಪತ್ರವನ್ನು ತಹಶೀಲ್ದಾರ್‌ರವರಿಗೆ ನೀಡಿದರು. ಮನವಿ ಸ್ವೀಕರಿಸಿದ ತಹಶೀಲ್ದಾರರು ಜಿಲ್ಲಾಧಿಕಾರಿಗಳು ಹಾಗೂ ರಾಜ್ಯ ಸರ್ಕಾರದ ಗಮನಕ್ಕೆ ತಂದು ಸಮಸ್ಯೆಗಳನ್ನು ಪರಿಹರಿಸುವ ಪ್ರಯತ್ನ ಮಾಡುತ್ತೇನೆಂದರು ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ವಿಶೇಷ ಅಧಿವೇಶನಕ್ಕೆ ಒತ್ತಾಯಿಸಿ ರೈತ ಸಂಘದ ಪ್ರತಿಭಟನೆ:– ೦೨/೧೧/೨೦೧೬**

ಬರ ಮತ್ತು ಕೃಷಿ ಸಂಕಷ್ಟ ಕುರಿತು ಚರ್ಚೆಗೆ ವಿಶೇಷ ಅಧಿವೇಶನ ಕರೆಯಲು ಒತ್ತಾಯಿಸಿ, ಜನಾಂದೋಲನಗಳ ಮಹಾ ಮೈತ್ರಿಯ ಸಂಘಟನೆಯ ಕಾರ್ಯಕರ್ತರು ನಗರದಲ್ಲಿ ನವೆಂಬರ್ ೨ ೨೦೧೬ರಂದು ಪ್ರತಿಭಟನೆಯನ್ನು ಮಾಡಿ ತೋಟಗಾರಿಕೆ ಸಚಿವರಾದ ಎಸ್.ಎಸ್. ಮಲ್ಲಿಕಾರ್ಜುನ್‌ರವರಿಗೆ ಮನವಿ ಸಲ್ಲಿಸಿದರು.

ರಾಜ್ಯದಲ್ಲಿ ಬರ ಅವರಿಸಿದೆ, ಇದರಿಂದಾಗಿ ರೈತರ ಜೀವ ಹಿಂಡುವಂತಾಗಿದೆ. ರೈತರ ಜೊತೆ ಸಂಪರ್ಕವಿರುವ ತೋಟಗಾರಿಕೆ ಮತ್ತು ಎ.ಪಿ.ಎಂ.ಸಿ. ಸಚಿವರಾಗಿರುವ ತಾವು ಸಿ.ಎಂ.ನ ಮನವೊಲಿಸಿ ಅಧಿವೇಶನ ಕರೆಯಲು ವ್ಯವಸ್ಥೆ ಮಾಡಬೇಕೆಂದರು. ರೈತರು ಸಹಕಾರ ವಾಣಿಜ್ಯ ಬ್ಯಾಂಕ್ ನಿಗಮಗಳಲ್ಲಿ ಪಡೆದಿರುವ ಸಾಲವನ್ನು ಮನ್ನಾ ಮಾಡಬೇಕು. ಈರುಳ್ಳಿ, ಟೊಮೇಟೋ ಬೆಲೆ ಕುಸಿದಿದ್ದು ಪ್ರತೀ ಕೆ.ಜಿ.ಗೆ ೧೫ರೂ ದರ ನಿಗದಿ ಮಾಡಬೇಕು. ಬರದ ಜೊತೆಗೆ ಕೆಲವೆಡೆ ನೆರೆಗೂ ರೈತರ ಬೆಳೆಗಳು ಹಾಳಾಗಿದ್ದು, ರಾಷ್ಟ್ರೀಯ ಬೆಲೆ ಆಯೋಗ ಸೂಚಿಸಿರುವ ಖರ್ಚು, ಅದರ ಮೇಲೆ ಶೇ. ೫೦ ರಷ್ಟು ಲಾಭಾಂಶ ಪರಿಹಾರ ನೀಡಬೇಕು. ಬೆಳೆ ವಿಮೆ ಕಂಪನಿಯವರು ಸಮರ್ಪಕ ವಿಮೆ ನೀಡಲು ಕ್ರಮ ಕೈಗೊಳ್ಳಬೇಕು. ಹಾಲಿಗೆ ಪ್ರೋತ್ಸಾಹ ಧನವನ್ನು ಸಕಾಲಕ್ಕೆ ನೀಡಬೇಕು. ನಗರ ಗ್ರಾಮೀಣ ಪ್ರದೇಶದಲ್ಲಿ ವಸತಿ ಹೀನರಿಗೆ ನಿವೇಶನ ಮತ್ತು ವಸತಿ ಸೌಲಭ್ಯ ನೀಡಬೇಕು. ಗೋಶಾಲೆಗಳನ್ನು ನಿರ್ಮಿಸಿ ಜಾನುವಾರುಗಳಿಗೆ ಮೇವು, ನೀರು ಒದಗಿಸಬೇಕೆಂದು ಸಚಿವರಿಗೆ ಸಲ್ಲಿಸಿದ ಮನವಿಯಲ್ಲಿ ಒತ್ತಾಯಿಸಲಾಗಿತ್ತು.[೧೦೦]

ಮನವಿ ಸ್ವೀಕರಿಸಿ ಮಾತನಾಡಿದ ಸಚಿವರು ಈಗಾಗಲೇ ರಾಜ್ಯದಲ್ಲಿ ಬರಪೀಡಿತ ಜಿಲ್ಲೆಗಳನ್ನು ಸರಕಾರ ಘೋಷಿಸಿದೆ. ರೈತರ ಎಲ್ಲಾ ಸಮಸ್ಯೆಗಳಿಗೆ ಸರ್ಕಾರ ಸ್ಪಂದಿಸಲಿದೆ. ನಿಮ್ಮ ಮನವಿಯ ಬಗ್ಗೆ ಸಿ.ಎಂ.ರವರ ಗಮನ ಸೆಳೆಯುವದಾಗಿ ಭರವಸೆ ನೀಡಿದರು. ಪ್ರತಿಭಟನೆಯಲ್ಲಿ ರೈತ ಮುಖಂಡ ಬಲ್ಲೂರು ರವಿಕುಮಾರ್, ಭೀಮಣ್ಣ, ಹಾಲಪ್ಪ, ಸತೀಶ್, ಅರುಣ್‌ಕುಮಾರ್, ನಾಗರಾಜ್, ಲಕ್ಷ್ಮೀಪತಿ, ಶಿವಣ್ಣ, ಗಂಗಾಧರ್ ಮುಂತಾದವರು ಪಾಲ್ಗೊಂಡಿದ್ದರು.

**ಸಾಲ ಮನ್ನಾ ಮಾಡುವಂತೆ ಆಗ್ರಹಿಸಿ, ರೈತರ ಪ್ರತಿಭಟನೆ:– ೦೩/೧೧/೨೦೧೬**

ಹರಿಹರ ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ನೇತೃತ್ವದಲ್ಲಿ ನೂರಾರು ರೈತರು ಸಂಪೂರ್ಣ ಸಾಲ ಮನ್ನಾ ಹಾಗೂ ಬರ ನೆರೆ ನಿರ್ವಹಣೆಗೆ ಸಮಗ್ರ ಪ್ಯಾಕೇಜ್ ಜಾರಿಗೊಳಿಸಲು ಆಗ್ರಹಿಸಿ ನವೆಂಬರ್ ೩ ೨೦೧೬ರಂದು ಪ್ರತಿಭಟನೆ ನಡೆಸಿದರು.

ಹರಿಹರದಾದ್ಯಂತ ಪ್ರತಿಭಟನಾ ಮೆರವಣಿಗೆ ಮಾಡಿದ ರೈತರು, ಶಾಸಕರಾದ ಎಚ್.ಎಸ್. ಶಿವಶಂಕರ್‌ರವರ ಕಛೇರಿಯ ಎದುರು ಧರಣಿ ಸತ್ಯಾಗ್ರಹ ನಡೆಸಿ ಶಾಸಕರಿಗೆ ಮನವಿ ನೀಡಿದ ನಂತರ ಮಾತನಾಡಿದ ರಾಜ್ಯ ಪ್ರಧಾನ ಕಾರ್ಯದರ್ಶಿ ಎಚ್. ಓಂಕಾರಪ್ಪ, ಸತತ ೨ ವರ್ಷಗಳಿಂದ ಕಾಡುತ್ತಿರುವ ಬರ, ರೈತರು ಮತ್ತು ಗ್ರಾಮೀಣ ಶ್ರಮಿಕರನ್ನು ತೀವ್ರ ಸಂಕಷ್ಟಕ್ಕೆ ದೂಡಿದೆ. ಹೀಗಿರುವಾಗ ಅವರ ನೆರವಿಗೆ ನಿಲ್ಲುವುದು ಸರ್ಕಾರಗಳ ಅದ್ಯ ಕರ್ತವ್ಯವಾಗಿದೆ ಎಂದರು. ರೈತರು ಕೃಷಿ ಕಾರ್ಮಿಕರು, ಸಹಕಾರಿ ಸಂಘ, ಬ್ಯಾಂಕ್ ಮುಂತಾದ ಕಡೆ ಪಡೆದಿರುವ ಎಲ್ಲಾ ಸಾಲ ಮನ್ನಾ, ಬರ ನೆರೆಯಿಂದ ನಷ್ಟಕ್ಕೀಡಾಗಿರುವ ರೈತರಿಗೆ ಕೃಷಿ ಬೆಲೆ ನಿಗದಿ ಆಯೋಗ ಲೆಕ್ಕ ಹಾಕಿರುವ ಖರ್ಚು ಮತ್ತು ಅದರ ಮೇಲೆ ರಾಷ್ಟ್ರೀಯ ರೈತ ಆಯೋಗ ಸೂಚಿಸಿರುವ ಶೇ.೫೦ರ ಲಾಭಾಂಶವಂತೆ ಪರಿಹಾರ ನೀಡಿಕೆ, ಕೇಂದ್ರದ ಬರ ನಿರ್ವಹಣಾ ನೀತಿಯಂತೆ ಸಮಗ್ರ ಪರಿಹಾರ ಪ್ಯಾಕೇಜ್ ನೀಡಬೇಕೆಂದು ಆಗ್ರಹಿಸಿದರು.

ಮನವಿ ಸ್ವೀಕರಿಸಿ ಮಾತನಾಡಿದ ಶಾಸಕ ಎಚ್.ಎಸ್. ಶಿವಶಂಕರ್ ರೈತರ ಎಲ್ಲಾ ಬೇಡಿಕೆಗಳಿಗೆ ತಮ್ಮ ಬೆಂಬಲವಿದೆ. ವಿಧಾನಸಭೆ ವಿಶೇಷ ಅಧಿವೇಶನ ಕರೆಯಲು ನಾನೂ ಸಹ ಕೋರುತ್ತೇನೆ. ಕೊನೆ ಭಾಗವಾಗಿರುವ ತಾಲೂಕಿನ ರೈತರ ಸಂಕಷ್ಟವನ್ನು ಅರ್ಥ ಮಾಡಿಕೊಂಡು ನವೆಂಬರ್ ೨೫ರವರೆಗೆ ಕಾಲುವೆಗೆ ನೀರು ಹರಿಸುವಂತೆ ಅಧಿಕಾರಿಗಳಿಗೆ ಒತ್ತಾಯಿಸುತ್ತೇನೆ ಎಂದರು.

ಪ್ರತಿಭಟನೆಯಲ್ಲಿ ಶಂಭುಲಿಂಗಪ್ಪ, ಬಸವರಾಜಪ್ಪ, ಲಿಂಗರಾಜಪ್ಪ, ದೇವರಾಜ್, ಮಂಜುನಾಥ್ ಕೋಗಳಿ, ಸುರೇಶ್, ಆಂಜಿನಪ್ಪ ಮುಂತಾದ ರೈತರು ಪಾಲ್ಗೊಂಡಿದ್ದರು.

**ಲೋಡ್ ಶೆಡ್ಡಿಂಗ್ ವಿರುದ್ಧ ರೈತರ ಪ್ರತಿಭಟನೆ:– ೨೩/೧೧/೨೦೧೬**

ದಾವಣಗೆರೆ ಜಿಲ್ಲೆಯಲ್ಲಿ ಅಸಮರ್ಪಕ ವಿದ್ಯುತ್ ಪೂರೈಕೆ ಲೋಡ್ ಶೆಡ್ಡಿಂಗ್ ವಿರೋಧಿಸಿ, ರೈತರು ನಗರದಲ್ಲಿ ನವೆಂಬರ್ ೨೩ ೨೦೧೬ರ ಬುಧವಾರದಂದು ಬೆಸ್ಕಾಂ ಕಚೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆ ನಡೆಸಿದರು.

ರೈತ ಸಂಘದ ನೂರಾರು ಕಾರ್ಯಕರ್ತರು ದಾವಣಗೆರೆ ನಗರದ ಹದಡಿ ರಸ್ತೆಯಲ್ಲಿರುವ ಬೆಸ್ಕಾಂ ಕಛೇರಿ ಬಳಿ ಪ್ರತಿಭಟನೆ ನಡೆಸಿ ಗ್ರಾಮೀಣ ಪ್ರದೇಶವನ್ನು ಕಡೆಗಾಣಿಸುತ್ತಿರುವ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದರು. ಸರ್ಕಾರ ಮತ್ತು ಬೆಸ್ಕಾಂ ವಿರುದ್ಧ ಘೋಷಣೆ ಕೂಗಿದರು. ವಿದ್ಯುತ್ ಪೂರೈಕೆಯಲ್ಲಿ ಗ್ರಾಮೀಣ ಪ್ರದೇಶವನ್ನು ಪೂರ್ಣ ಕಡೆಗಣಿಸಲಾಗಿದೆ. ಮೊದಲೇ ಮಳೆಯಿಲ್ಲದೆ ಬೆಳೆಗಳು ಹಾಳಾಗಿವೆ. ಬೋರ್‌ವೆಲ್ ನೀರಿನಿಂದ ಒಂದಿಷ್ಟು ಬೆಳೆ ಬೆಳೆಯುವದರ ಜೊತೆಗೆ ತೋಟಗಳನ್ನು ಉಳಿಸಿಕೊಳ್ಳೋಣವೆಂದರೆ ಲೋಡ್ ಶೆಡ್ಡಿಂಗ್, ಅದಕ್ಕೂ ಬರೆ ಎಳೆದಿದೆ ಎಂದು ಪ್ರತಿಭಟನಾಕಾರರು ಪ್ರತಿಭಟಿಸಿ ಆಕ್ರೋಶ ವ್ಯಕ್ತಪಡಿಸಿದರು. ಕೆಲ ದಿನಗಳಿಂದ ಗ್ರಾಮೀಣ ಪ್ರದೇಶಕ್ಕೆ ತ್ರಿಫೇಸ್ ವಿದ್ಯುತ್ ಸಿಗುತ್ತಿಲ್ಲ. ಸರಕಾರ ರಾತ್ರಿ ಮೂರು ತಾಸು, ಬೆಳಗಿನ ವೇಳೆ ಎರಡು ತಾಸು ವಿದ್ಯುತ್ ಪೂರೈಕೆ ಮಾಡಲಾಗುವುದೆಂದು ಹೇಳಿದೆ. ಆದರೆ ಐದು ಗಂಟೆ ವಿದ್ಯುತ್ ಕೂಡ ಸರಿಯಾಗಿ ಪೂರೈಕೆಯಾಗುತ್ತಿಲ್ಲ. ಮೂರು ತಾಸು ನಿರಂತರ ವಿದ್ಯುತ್ ಪೂರೈಕೆ ಮಾಡುತ್ತಿಲ್ಲ. ಈ ಅವಧಿಯಲ್ಲಿ ಹತ್ತಕ್ಕು ಹೆಚ್ಚು ಬಾರಿ ನಿಲುಗಡೆ ಮಾಡಲಾಗುತ್ತದೆ. ಹೀಗಾದರೆ ನಾವು ಕೃಷಿ ಮಾಡುವುದು ಹೇಗೆ? ಬದುಕುವುದು ಹೇಗೆ? ಎಂದು ರೈತರು ಬೆಸ್ಕಾಂ ವಿರುದ್ಧ ವಾಗ್ದಾಳಿ ನಡೆಸಿದರು.

**ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ದಾವಣಗೆರೆ ರೈತರ ಪ್ರತಿಭಟನೆ:– ೨೪/೧೧/೨೦೧೬**

ದಾವಣಗೆರೆ ತಾಲೂಕು ಎನ್.ಹೆಚ್.–೪ ರಸ್ತೆ, ಹೆಚ್. ಕಲ್ಪನಹಳ್ಳಿ ಬಳಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಕೋಡಿಹಳ್ಳಿ ಚಂದ್ರಶೇಖರ್ ಬಣ) ವತಿಯಿಂದ, ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಹಾಗೂ ರಾಜ್ಯ ಕಾರ್ಯದರ್ಶಿ ಹೊನ್ನೂರು ಮುನಿಯಪ್ಪರವರ ನೇತೃತ್ವದಲ್ಲಿ ೧೫೦ಕ್ಕೂ ಹೆಚ್ಚು ರೈತರು, ವಿವಿಧ ಬೇಡಿಕೆಗಳನ್ನು

ಈಡೇರಿಸುವಂತೆ ಒತ್ತಾಯಿಸಿ ನವೆಂಬರ್ ೨೪ ೨೦೧೬ರಂದು ೧೨:೨೦ ರಿಂದ ೨:೦೦ ಗಂಟೆಯವರೆಗೆ ರಸ್ತೆ ತಡೆದು ಪ್ರತಿಭಟನೆ ಮಾಡಿದರು.

ರೈತ ಮುಖಂಡರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಮಾತನಾಡಿ ಬೆಳಗಾವಿಯಲ್ಲಿ ರೈತರ ಸಮಾವೇಶವನ್ನು ತಡೆಯಲು ಸರ್ಕಾರ ಪೊಲೀಸ್ ಇಲಾಖೆಯನ್ನು ಬಳಸಿಕೊಂಡಿದೆ. ೫೦೦ ಮತ್ತು ೧೦೦೦ ರೂಪಾಯಿಗಳ ನೋಟು ರದ್ದತಿಯಿಂದ ಬೆಳೆದ ಬೆಳೆಗಳು ಹಾಗೂ ಹಣ್ಣು ತರಕಾರಿಗಳ ಬೆಲೆ ಕುಸಿತ ಕಂಡಿದೆ. ರಾಜ್ಯ ಸರ್ಕಾರ ರೈತರ ಸಾಲ ಮನ್ನಾ ಮಾಡಬೇಕು. ಹರಿಯಾಣ ರಾಜ್ಯದಂತೆ ಕಬ್ಬಿಗೆ ೩೫೦೦/- ರೂ ಬೆಂಬಲ ಬೆಲೆ ನೀಡಬೇಕು. ರೈತರ ಪರವಾಗಿ ಸರ್ಕಾರ ಆಡಳಿತ ನಡೆಸದೆ ವೈಪಲ್ಯತೆಯಿಂದ ಕೂಡಿದೆ. ರೈತರನ್ನು ರಸ್ತೆಯಲ್ಲಿಯೇ ಬಂದಿಸುವ ವಾತಾವರಣ ಉಂಟಾಗಿದೆ. ಸರ್ಕಾರ ರೈತರಿಗೆ ಮೋಸ ಮಾಡುತ್ತಿದೆ. ಸಮರ್ಪಕ ವಿದ್ಯುತ್ ಪೂರೈಕೆ ಮಾಡುತ್ತಿಲ್ಲ. ರಾಷ್ಟ್ರೀಯ ಹೆದ್ದಾರಿಗಳನ್ನು ಸಮರ್ಪಕವಾಗಿ ನಿರ್ಮಿಸಿಲ್ಲವೆಂದು ಪ್ರತಿಭಟಿಸಿದರು.

ಈ ಸಂಬಂಧ ಸ್ಥಳಕ್ಕೆ ಆಗಮಿಸಿದ ದಾವಣಗೆರೆ ತಾಲೂಕು ತಹಶೀಲ್ದಾರರು ಮನವಿ ಸ್ವೀಕರಿಸಿ, ಜಿಲ್ಲಾಧಿಕಾರಿಗಳೊಡನೆ ಚರ್ಚಿಸಿ ಹದಿನೈದು ದಿನಗಳೊಳಗೆ ಸಭೆ ಏರ್ಪಡಿಸಿ ನಿಮ್ಮ ಅಹವಾಲುಗಳನ್ನು ಸ್ವೀಕರಿಸಲು ಕ್ರಮ ಕೈಗೊಳ್ಳುವುದಾಗಿ ಹೇಳಿದ ಮೇರೆಗೆ ಪ್ರತಿಭಟನೆ ಹಿಂಪಡೆದು ಶಾಂತ ರೀತಿಯಿಂದ ನಿರ್ಗಮಿಸಿದರು.

**ಭೂರಹಿತರಿಗೆ ಭೂಮಿ ನೀಡಲು ಒತ್ತಾಯಿಸಿ ರೈತರ ಪ್ರತಿಭಟನೆ:- ೦೯/೧೨/೨೦೧೬**

ಹರಪನಹಳ್ಳಿ ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಹಾಗೂ ಅಖಿಲ ಭಾರತ ಕೃಷಿ ಕೂಲಿಕಾರರ ಸಂಘಗಳ ನೇತೃತ್ವದಲ್ಲಿ ಭೂರಹಿತರಿಗೆ ಭೂಮಿ, ನಿವೇಶನ ರಹಿತರಿಗೆ ನಿವೇಶನ ಕಲ್ಪಿಸುವಂತೆ ಆಗ್ರಹಿಸಿ, ನೂರಾರು ರೈತರು, ಸೋಮವಾರ ತಾಲೂಕು ಕಛೇರಿಯ ಎದುರು ಪ್ರತಿಭಟನೆ ಮಾಡಿದರು.

ಪ್ರತಿಭಟನಾಕಾರರು ಪಟ್ಟಣದಾದ್ಯಂತ ಮೆರವಣಿಗೆಯ ಮೂಲಕ, ತಾಲೂಕು ಕಛೇರಿಗೆ ತೆರಳಿ ತಹಶೀಲ್ದಾರ್‌ರವರಿಗೆ ಮನವಿ ಸಲ್ಲಿಸಿದರು. ಈ ಸಂದರ್ಭದಲ್ಲಿ ಕರ್ನಾಟಕ ಪ್ರಾಂತ ಕೃಷಿ ಕೂಲಿಕಾರರ ಸಂಘದ ಅಧ್ಯಕ್ಷ ಎಚ್. ರಹಮತ್ತುಲ್ಲಾ ಮಾತನಾಡಿ ಬರ ಘೋಷಿಸಿದ ನಂತರ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು, ಇಲ್ಲಿಯವರೆಗೆ ಬರ ಕಾಮಗಾರಿಗಳನ್ನು ಕೈಗೆತ್ತಿಕೊಂಡಿಲ್ಲ. ರೈತ ವಿರೋಧಿ ನೀತಿಯನ್ನು ಆಳುವ ಸರ್ಕಾರಗಳು ಮಾಡುತ್ತಿವೆ. ವರ್ಷವಿಡೀ ಮಹಾತ್ಮಗಾಂಧೀ ಉದ್ಯೋಗ ಖಾತ್ರಿಯಡಿ ಕೆಲಸ ದೊರೆಯದ ಕಾರಣ, ಜನರು ಗುಳೆ ಹೋಗುತ್ತಿದ್ದಾರೆ. ಹಾಗಾಗಿ ಕೂಲಿ ಕಾರ್ಮಿಕರಿಗೆ ಉದ್ಯೋಗ ಕಲ್ಪಿಸುವಂತೆ ಆಗ್ರಹಿಸಿದರು.

ರೈತ ಮುಖಂಡರಾದ ಕೆ.ಟಿ. ರಾಜಪ್ಪ ಮಾತನಾಡಿ ಮಾಡಲಗೆರೆ ಮತ್ತು ಕಲ್ಲಹಳ್ಳಿ ಗ್ರಾಮ ಪಂಚಾಯ್ತಿ ಅಧಿಕಾರಿಗಳಿಗೆ ಫಾರಂ ೬ರಲ್ಲಿ ಕೂಲಿ ಕೆಲಸ ಕೊಡುವಂತೆ ಅರ್ಜಿ ಸಲ್ಲಿಸಲಾಗಿದೆ.

ಆದರೆ ಇದುವರೆಗೂ ಕೆಲಸ ನೀಡದೆ ಪಿ.ಡಿ.ಓ.ಗಳು ನಿರ್ಲಕ್ಷ್ಯ ಮಾಡುತ್ತಿದ್ದಾರೆ. ಭೂರಹಿತರಿಗೆ ಕೂಡಲೇ ಭೂಮಿ ಕೊಡಬೇಕು. ನಿವೇಶನ ರಹಿತರಿಗೆ ಪ್ರಧಾನಂತ್ರಿ ವಸತಿ ಯೋಜನೆ, ವಾಜಪೇಯಿ ವಸತಿ ಯೋಜನೆಯಡಿ ವಸತಿ ವ್ಯವಸ್ಥೆ ಕಲ್ಪಿಸಬೇಕೆಂದು ಒತ್ತಾಯಿಸಿದರು.

**ಬಲವಂತದ ಸಾಲ ವಸೂಲಾತಿ ವಿರೋಧಿಸಿ ರೈತರ ಬೃಹತ್ ಪ್ರತಿಭಟನೆ:–**

**೨೧/೧೨/೨೦೧೬**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತಸಂಘ ಮತ್ತು ಹಸಿರು ಸೇನೆಯ (ಹುಚ್ಚವನಹಳ್ಳಿ ಮಂಜುನಾಥ್ ಬಣ) ವತಿಯಿಂದ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ, ಮಹಿಳೆಯರು ಸೇರಿದಂತೆ ೨೦೦ಕ್ಕೂ ಹೆಚ್ಚು ರೈತರು, ಬಲವಂತದ ಸಾಲ ವಸೂಲಾತಿ ವಿರೋಧಿಸಿ ಡಿಸೆಂಬರ್ ೨೧ ೨೦೧೬ರಂದು ಪ್ರತಿಭಟನೆ ನಡೆಸಿದರು.

ನಗರದ ಜಯದೇವ ವೃತ್ತದಲ್ಲಿ ಜಮಾಯಿಸಿದ ಪ್ರತಿಭಟನಾ ನಿರತ ರೈತರು, ರೈತ ಮಹಿಳೆಯರು, ರೈತರಿಗೆ ಕಿರು ಸಾಲ ಕೊಟ್ಟು ಕಿರುಕುಳ ನೀಡುತ್ತಿರುವ ಬ್ಯಾಂಕ್‌ನ ವಿರುದ್ಧ ಆಕ್ರೋಶ ವ್ಯಕ್ತ ಪಡಿಸಿದರು. ಮೆರವಣಿಗೆಯ ಮೂಲಕ ಎ.ಸಿ. ಕಛೇರಿಗೆ ಬಂದು ಮನವಿ ಸಲ್ಲಿಸಿದರು. ಆ ಸಮಯದಲ್ಲಿ ಮಾತನಾಡಿದ ಹುಚ್ಚವನಹಳ್ಳಿ ಮಂಜುನಾಥ್ ನಿರಂತರ ಬರ ಇರುವ ಪ್ರದೇಶಗಳಲ್ಲಿ ಸಾಲ ವಸೂಲಿ ಮಾಡಬಾರದು. ಅಲ್ಪಾವಧಿ ಸಾಲವನ್ನು ದೀರ್ಘಾವಧಿಯ ಸಾಲಗಳಾಗಿ ಹೆಚ್ಚಿಸಬೇಕು. ಸಾಲದ ಬಡ್ಡಿಯನ್ನು ಕಟ್ಟಿಸಿಕೊಳ್ಳಬಾರದು ಎಂಬ ನಿಯಮಗಳನ್ನು ಆರ್.ಬಿ.ಐ. ಬ್ಯಾಂಕ್‌ಗಳಿಗೆ ವಿಧಿಸಿದೆ. ಆದರೆ ಜಿಲ್ಲೆಯ ಯಾವ ಖಾಸಗಿ ಬ್ಯಾಂಕ್ ಇದನ್ನು ಪಾಲಿಸುತ್ತಿಲ್ಲವೆಂದು ದೂರಿದರು. ರಾಜ್ಯ ಸರ್ಕಾರವು ಸಹಕಾರಿ ಮತ್ತು ಖಾಸಗಿ ಬ್ಯಾಂಕ್‌ಗಳಿಗೆ ಬಲವಂತವಾಗಿ ಸಾಲ ವಸೂಲಾತಿ ಮಾಡದಂತೆ ಸೂಚಿಸಿದೆ. ಹೀಗಿದ್ದರೂ ಬ್ಯಾಂಕ್‌ಗಳು ಸಾಲಗಾರರ ಮೇಲೆ ದೌರ್ಜನ್ಯ ಎಸಗುತ್ತಿವೆ. ಮುಂದಿನ ಬೆಳೆ ಬರುವತನಕ ಕಾಲಾವಕಾಶ ನೀಡಬೇಕೆಂದು ಮನವಿ ಮಾಡಿದರು.[೧೧೧]

ಪ್ರತಿಭಟನೆಯಲ್ಲಿ ರಾಜ್ಯಾಧ್ಯಕ್ಷ ಹುಚ್ಚವನಹಳ್ಳಿ ಮಂಜುನಾತ್ ಚಿಕ್ಕಮಲ್ಲಹಳ್ಳಿ ಚಿರಂಜೀವಿ, ಗೌಡಗೊಂಡನಹಳ್ಳಿ ಸತೀಶ್, ಶೀಲಾ ನಾಯ್ಕ್, ಸಿದ್ದಪ್ಪ, ಕುಮಾರ್ ನಾಯ್ಕ್, ವಸಂತಕುಮಾರ್, ರಾಜನಾಯ್ಕ್ ಹಾಗೂ ನೂರಾರು ಮಹಿಳೆಯರು ಭಾಗವಹಿಸಿದರು.

**ಮೈಕ್ರೋಫೈನಾನ್ಸ್ ಸಾಲ ಮನ್ನಾಕ್ಕೆ ಆಗ್ರಹಿಸಿ ಜಗಳೂರು ರೈತರ ಪ್ರತಿಭಟನೆ:–**

**೦೨/೦೧/೨೦೧೭**

ಜಗಳೂರು ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ)ಯ ವತಿಯಿಂದ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್, ತಾಲೂಕು ಅಧ್ಯಕ್ಷರಾದ ಕಾನನಕಟ್ಟೆ ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ

ಮೈಕ್ರೋಫೈನಾನ್ಸ್ ಕಂಪನಿಯಲ್ಲಿ ರೈತ ಮಹಿಳೆಯರು ಪಡೆದಿರುವ ಸಾಲವನ್ನು ಮನ್ನಾ ಮಾಡಬೇಕೆಂದು ಆಗ್ರಹಿಸಿ, ರೈತರು ಮತ್ತು ರೈತ ಮಹಿಳೆಯರು ಸೇರಿ ಜನವರಿ ೨ ೨೦೧೭ರಂದು ಪ್ರತಿಭಟನೆ ಮಾಡಿದರು.

ನೂರಾರು ರೈತ ಮಹಿಳೆಯರು ಸೇರಿದಂತೆ ರೈತ ಸಂಘದ ಕಾರ್ಯಕರ್ತರು ತಾಲೂಕಿನಾದ್ಯಂತ ಪ್ರತಿಭಟನಾ ಮೆರವಣಿಗೆ ಮಾಡಿ, ತಾಲೂಕು ಕಛೇರಿಗೆ ತೆರಳಿ ತಹಶೀಲ್ದಾರ್‌ರವರಿಗೆ ಮನವಿ ಸಲ್ಲಿಸಿದರು. ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಹುಚ್ಚವನಹಳ್ಳಿ ಮಂಜುನಾಥ್ ಸುಮಾರು ೧೩ ಮೈಕ್ರೋಫೈನಾನ್ಸ್ ಕಂಪನಿಗಳು, ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಕಿರು ಸಾಲ ನೀಡಿ ಸಾಲ ಮರುಪಾವತಿಸಲು ಕಿರುಕುಳ ನೀಡುತ್ತಿವೆ. ಈಗಾಗಲೇ ತಾಲೂಕಿನಾದ್ಯಂತ ಬರಗಾಲ ಎದುರಾಗಿದ್ದು, ಮಳೆ ಬೆಳೆ ಇಲ್ಲದೆ ಜನರು ತತ್ತರಿಸಿದ್ದಾರೆ. ಫೈನಾನ್ಸ್ ಕಂನಿಗಳು ಸಾಲ ಪಡೆದವರ ಮನೆಗೆ ತೆರಳಿ ಬಲವಂತಹ ಸಾಲ ವಸೂಲಿ ಮಾಡುತ್ತಿರುವುದು ಸರಿಯಲ್ಲ ಎಂದು ದೂರಿದರು. ಸತತವಾಗಿ ಬರಗಾಲ ಬಂದ ಹಿನ್ನಲೆಯಲ್ಲಿ ಸಾಲ ಪಡೆದವರು ಬಹುತೇಕ ಕೂಲಿಕಾರರಾಗಿದ್ದು, ಪ್ರತೀದಿನ ಕೂಲಿ ಕೆಲಸದ ಲಭ್ಯತೆ ಇಲ್ಲದಿರುವುದು ಸಾಲ ಮರುಪಾವತಿಸಲು ಕಾಲಾವಕಾಶ ನೀಡಬೇಕು. ಇಲ್ಲಿದಿದ್ದರೆ ಉಗ್ರ ಹೋರಾಟ ನಡೆಸಲಾಗುವದೆಂದು ಎಚ್ಚರಿಸಿ ಮನವಿ ನೀಡಿದರು.[೧೦೨] ನಂತರ ಮಾತನಾಡಿದ ತಹಶೀಲ್ದಾರರು ಫೈನಾನ್ಸ್‌ಗಳ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವದಾಗಿ ತಿಳಿಸಿದ್ದರಿಂದ ರೈತರು ಪ್ರತಿಭಟನೆಯನ್ನು ಹಿಂಪಡೆದರು.

ಪ್ರತಿಭಟನೆಯಲ್ಲಿ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್, ಕಾನನಕಟ್ಟೆ ತಿಪ್ಪೇಸ್ವಾಮಿ, ನಿಂಗರಾಜ್, ಗುರುಸಿದ್ದಪ್ಪ, ಮಾರನಾಯಕ, ಡಿ.ಟಿ. ಗೌರಮ್ಮ, ಕಾಂತಮ್ಮ, ಪ್ರಿಯಾಂಕ, ಹನುಮಕ್ಕ, ಬಸಮ್ಮ ಮುಂತಾದ ರೈತ ಮುಖಂಡರು ಮತ್ತು ರೈತಮಹಿಳೆಯರು ಭಾಗವಹಿಸಿದ್ದರು.

**ವಿದ್ಯುತ್ ಪರಿವರ್ತಕಗಳನ್ನು ಶೀಘ್ರ ಬದಲಾಯಿಸುವಂತೆ ಒತ್ತಾಯಿಸಿ ರೈತರ ಪ್ರತಿಭಟನೆ:– ೦೩/೦೧/೨೦೧೭**

ಹರಪನಹಳ್ಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್ ಹಾಗೂ ತಾಲೂಕು ಅಧ್ಯಕ್ಷರಾದ ದ್ಯಾಮಜ್ಜರ ಹನುಮಂತಪ್ಪರವರ ನೇತೃತ್ವದಲ್ಲಿ ೪೦ ರಿಂದ ೫೦ ಬೈಕ್‌ಗಳಲ್ಲಿ, ೧೦೦ ರಿಂದ ೧೨೦ ರೈತರು ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ ಜನವರಿ ೦೩ ೨೦೧೭ರಂದು ಪ್ರತಿಭಟನೆ ಮಾಡಿದರು.

ಪಟ್ಟಣದ ಹರಿಹರ ವೃತ್ತದಿಂದ ಬೈಕ್‌ಗಳ ಮೂಲಕ ಪ್ರತಿಭಟನಾ ಮೆರವಣಿಗೆ ಹೊರಟು, ಹಿಜಾರಿ ಶಿರಸಪ್ಪ ವೃತ್ತ, ಪ್ರವಾಸಿ ಮಂದಿರ ವೃತ್ತದ ಮೂಲಕ ತಾಲೂಕು ಕಛೇರಿಗೆ ಬಂದು ಪ್ರತಿಭಟನಾ ಧರಣಿ ನಡೆಸಿದರು. ಈ ಸಂಬಂಧ ಸ್ಥಳಕ್ಕೆ ಆಗಮಿಸಿದ ಹರಪನಹಳ್ಳಿ ಶಿರಸ್ತೇದಾರರು

ಹಾಗೂ ಭೀಮಪ್ಪ ಎ.ಇ.ಐ. ಬೆಸ್ಕಾಂ ಇವರು ಸ್ಥಳಕ್ಕೆ ಭೇಟಿ ನೀಡಿ ಪ್ರತಿಭಟನಾನಿರತ ರೈತರೊಂದಿಗೆ ಚರ್ಚಿಸಿದರು. ಈ ಸಮಯದಲ್ಲಿ ರೈತ ಮುಖಂಡರು ಮಾತನಾಡಿ ಭಾಗ್ಯಜ್ಯೋತಿಗೆ ವಿದ್ಯುತ್ ಕಡಿತಗೊಳಿಸಬಾರದು, ಕೃಷಿ ಪಂಪ್‌ಸೆಟ್‌ಗಳಲ್ಲಿ ಸುಟ್ಟುಹೋಗಿರುವ ವಿದ್ಯುತ್ ಪರಿಕರಗಳನ್ನು ಶೀಘ್ರ ಬದಲಾಯಿಸಬೇಕೆಂದು ಆಗ್ರಹಿಸಿದರು. ಇದಕ್ಕೆ ಪ್ರತಿಕ್ರಿಯೆ ನೀಡಿದ ಬೆಸ್ಕಾಂ ಇಂಜಿನಯರ್‌ರವರು ಭಾಗ್ಯ ಜ್ಯೋತಿ ವಿದ್ಯುತ್ ಕಡಿತಗೊಳಿಸುವ ವಿಚಾರದಲ್ಲಿ ಪರಿಶೀಲಿಸಿ ಕ್ರಮ ಕೈಗೊಳ್ಳುವುದಾಗಿ ಮತ್ತು ಸುಟ್ಟು ಹೋಗಿರುವ ವಿದ್ಯುತ್ ಪರಿವರ್ತಕಗಳನ್ನು ಶೀಘ್ರ ಬದಲಾಯಿಸುವದಾಗಿ ಹೇಳಿದ ಮೇರೆಗೆ, ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ಸುಜಲಾನ್ ಕಂಪನಿಯ ಪರವಾನಿಗೆ ರದ್ದು ಪಡಿಸುವಂತೆ ಆಗ್ರಹಿಸಿ ರೈತ ಪ್ರತಿಭಟನೆ:- ೦೫/ ೦೧/೨೦೧೭**

ಹರಪನಹಳ್ಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ರಾಜ್ಯಾಧ್ಯಕ್ಷರಾದ, ಮಹೇಶ್ವರಸ್ವಾಮಿ, ವಾಲ್ಮಿಕಿ ಕುರಿ ಸಾಕಾಣಿಕೆ ಮತ್ತು ಉಣ್ಣೆ ಅಭಿವೃದ್ಧಿ ಸಹಕಾರ ಸಂಘದ ಕಾರ್ಯದರ್ಶಿ ಎಸ್. ದುರುಗಪ್ಪರವರ ನೇತೃತ್ವದಲ್ಲಿ, ಸುಜಲಾನ್ ಕಂಪನಿಯ ಪರವಾನಿಗೆ ರದ್ದುಪಡಿಸುವಂತೆ ಆಗ್ರಹಿಸಿ, ಸುಮಾರು ೨೫೦ ರಿಂದ ೩೦೦ ರೈತರು ೫೦೦ ರಿಂದ ೬೦೦ ಕುರಿಗಳೊಂದಿಗೆ ಮತ್ತು ೩೦೦ ರಿಂದ ೪೦೦ ದನಗಳೊಂದಿಗೆ ಜನವರಿ ೦೫ ೨೦೧೭ರಂದು ಪ್ರತಿಭಟನೆ ಮಾಡಿದರು.

ಹರಪನಹಳ್ಳಿಯ ಕಸಾಬ ಹೋಬಳಿಯ ಕಂದಾಯ ಗ್ರಾಮಕ್ಕೆ ಸೇರಿದ ಸರ್ವೇ ನಂ. ೪೯೨/ಬಿಪಿ/೨೩೧೫ ವಿಸ್ತೀರ್ಣದ ಸರ್ಕಾರಿ ಜಾಗದಲ್ಲಿ, ಅಧಿಕೃತ ನೆಪದಲ್ಲಿ ಅನಾಧೀಕೃತವಾಗಿ ಸುಜಲಾನ್ ಕಂಪನಿಯು ಆಕ್ರಮವಾಗಿ ಭೂಮಿ ಪಡೆದುಕೊಳ್ಳಲು ಮುಂದಾಗಿದೆ. ಇದರಿಂದ ಈ ಭಾಗದ ಧನ, ಕುರಿ ಇನ್ನೂ ಮುಂತಾದ ಸಾಕು ಪ್ರಾಣಿಗಳಿಗೆ ವರದಾನವಾಗಿದ್ದ ಗಿಡ ಮರಗಳನ್ನು ಹೊಂದಿರುವ ಪರಿಸರವನ್ನು ಹಾಳು ಮಾಡಿ, ವಿದ್ಯುತ್ ಉತ್ಪಾದನಾ ಕಂಪನಿಗಳು ಕನ್ನಾ ಹಾಕಲು ಅವಣಿಸುತ್ತಿವೆ. ಹಾಗಾಗಿ ನಮ್ಮ ಕುಟುಂಬದ ಆಶ್ರಯಕ್ಕೆ ನಮ್ಮ ಸಾಕು ಪ್ರಾಣಿಗಳಿಗೆ ಬದುಕುವ ರಕ್ಷಣೆಯನ್ನು ನೀಡಿ ಹಾಗೂ ಕೂಡಲೇ ಇದರ ಬಗ್ಗೆ ಕ್ರಮವಹಿಸಬೇಕೆಂದು ಆಗ್ರಹಿಸಿ, ಪಟ್ಟಣದ ಹರಿಹರ ವೃತ್ತದಿಂದ ಪ್ರತಿಭಟನೆ ಪ್ರಾರಂಭವಾಗಿ, ಇಜಾರಿ ಸಿರಸಪ್ಪ ವೃತ್ತದಿಂದ, ಹಳೇ ಬಸ್ ನಿಲ್ದಾಣ, ಐಬಿ ಸರ್ಕಲ್ ಮುಖಾಂತರ ತಾಲೂಕು ಕಚೇರಿಗೆ ತೆರಳಿ ಪ್ರತಿಭಟನೆ ನಡೆಸಿದರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಮಹೇಶ್ವರ ಸ್ವಾಮಿಯವರು, ಸುಜಲಾನ್ ಕಂಪನಿಯ ೪೯೨/ಬಿಪಿ/೨೩೧೫ರಲ್ಲಿ ವಿಸ್ತೀರ್ಣ ೭೮.೦೪ ಎಕರೆ ಗುತ್ತಿಗೆ ಪಡೆದು ಅಕ್ರಮವಾಗಿ ಪರವಾನಿಗೆ ಇಲ್ಲದ ಜಾಗದಲ್ಲಿ ಪ್ಯಾನ್‌ಗಳನ್ನು ಅಳವಡಿಸಿದ್ದರಿಂದ, ಈ ಪ್ರದೇಶದಲ್ಲಿ ಕುರಿ ಹಾಗೂ ದನಗಳಿಗೆ ಮೇವು ಸಿಗದೇ ಕಷ್ಟಕರ ಪರಿಸ್ಥಿತಿ ಉಂಟಾಗಿದೆ. ಇದನ್ನು ಕೇಳಲು ಹೋದ ರೈತರಿಗೆ ಹಾಗೂ ಕುರಿ ಕಾಯುವವರಿಗೆ ಕಂಪನಿಯವರು ಗುಂಡಾಗಳನ್ನು ಬಿಟ್ಟು ದೈಹಿಕ

ಹಲ್ಲೆ ನಡೆಸುತ್ತಿದ್ದಾರೆ. ತಾಲೂಕು ಆಡಳಿತವು ಈ ಕಂಪನಿಗಳಿಗೆ ಷರತ್ತು ಬದ್ಧವಾಗಿ ಕಂಬಗಳನ್ನು ನಿರ್ಮಿಸಲು ಅನುಮತಿಯನ್ನು ನೀಡಿರುತ್ತದೆ. ಆದರೆ ಕಂಪನಿಗಳು ಕಾನೂನಿಗೆ ವಿರುದ್ಧವಾಗಿ ತಮ್ಮ ಪ್ಯಾನ್ ಕಂಬಗಳನ್ನು ನಿರ್ಮಿಸಿ ಪರಿಸರ ನಾಶ ಮಾಡಿದ್ದಾರೆಂದು ಆರೋಪಿಸಿದರು. ಕೂಡಲೇ ಎಲ್ಲಾ ರೈತರು ಮತ್ತು ಕುರಿಗಾಯಿಗಳು ಕೂಡಲೇ ಸುಜಲಾನ್ ಕಂಪನಿಯ ಪರವಾನಿಗೆಯನ್ನು ರದ್ದುಪಡಿಸಿ ಕೆಲಸವನ್ನು ಸ್ಥಗಿತಗೊಳಿಸಬೇಕೆಂದು ಆಗ್ರಹಿಸಿದರು.[೧೦೩]

ಈ ಸಂಬಂಧ ಸ್ಥಳದಲ್ಲಿದ್ದ ಉಪವಿಭಾಗಧಿಕಾರಿಗಳು ಮತ್ತು ತಹಶೀಲ್ದಾರ್‌ರವರು, ಕಂಪನಿಯನ್ನು ಕರೆಯಿಸಿ ದಾಖಲೆಗಳನ್ನು ಪಡೆದು ಪರಿಶೀಲಿಸಿ ನಂತರ ಕ್ರಮಕೈಗೊಳ್ಳುವದಾಗಿ ತಿಳಿಸಿದರು. ಅದರೂ ರೈತರು ತಮ್ಮ ಪ್ರತಿಭಟನೆಯನ್ನು ಮುಂದುವರೆಸಿದ್ದರಿಂದ ತಹಶೀಲ್ದಾರ್‌ರವರು ನೋಟೀಸ್ ಮೂಲಕ ಕಂಪನಿಯ ಎಲ್ಲಾ ಕೆಲಸ ಕಾರ್ಯಗಳನ್ನು ಸ್ಥಗಿತಗೊಳಿಸಲು ತಿಳಿಸಿದರು. ಇದರಿಂದಾಗಿ ಪ್ರತಿಭಟನಾಕಾರರು ಪ್ರತಿಭಟನೆಯನ್ನು ಹಿಂಪಡೆದರು.

ದಾವಣಗೆರೆ ನಗರದಲ್ಲಿ ದಿನಾಂಕ ಫೆಬ್ರವರಿ ೦೧ ೨೦೧೭ರಂದು ಎರಡನೇ ಬಾರಿಗೆ ರೈತ ಸಂಘದ ನೇತೃತ್ವದಲ್ಲಿ ೨೦೦ಕ್ಕೂ ಹೆಚ್ಚು ರೈತರು ಹರಪನಹಳ್ಳಿ ತಾಲೂಕಿನಲ್ಲಿ ಸುಜಲಾನ್ ಕಂಪನಿಯು ಆಕ್ರಮವಾಗಿ ಭೂಮಿ ಪಡೆದುಕೊಳ್ಳಲು ಮುಂದಾಗಿರುವುದನ್ನು ವಿರೋಧಿಸಿ ಪ್ರತಿಭಟನೆ ಮಾಡಿದರು.

ಪ್ರಾಣಿಗಳಿಗೆ ವರದಾನವಾಗಿದ್ದ ಗಿಡ ಮರಗಳನ್ನು ಹೊಂದಿರುವ ಪರಿಸರವನ್ನು ಹಾಳು ಮಾಡಿ, ವಿದ್ಯುತ್ ಉತ್ಪಾದನಾ ಕಂಪನಿಗಳು ಕನ್ನಾ ಹಾಕಲು ಅವಣಿಸುತ್ತಿವೆ. ಹಾಗಾಗಿ ನಮ್ಮ ಕುಟುಂಬದ ಆಶ್ರಯಕ್ಕೆ ಹಾಗೂ ನಮ್ಮ ಸಾಕು ಪ್ರಾಣಿಗಳಿಗೆ ಬದುಕುವ ರಕ್ಷಣೆ ನೀಡಬೇಕು, ಅಮೂಲ್ಯವಾದ ಸಸ್ಯಗಳು ಮರಗಳನ್ನು ಉಳಿಸಬೇಕೆಂದು ಹರಪನಹಳ್ಳಿಯಲ್ಲಿ ಆಗ್ರಹಿಸಿ, ಬಸ್‌ಗಳ ಮೂಲಕ ಹರಪನಹಳ್ಳಿಯಿಂದ ದಾವಣಗೆರೆಗೆ ಬಂದು, ನಗರದ ಜಯದೇವ ವೃತ್ತದಿಂದ, ಪ್ರತಿಭಟನಾ ಮೆರವಣಿಗೆ ಹೊರಟು ಪಿ.ಬಿ ರಸ್ತೆಯ ಮೂಲಕ ಜಿಲ್ಲಾಧಿಕಾರಿಗಳ ಕಚೇರಿಗೆ ಬಂದು, ಸಾಂಕೇತಿಕವಾಗಿ ಪಿ.ಬಿ. ರಸ್ತೆ ತಡೆ ನಡೆಸುವ ಮೂಲಕ ಪ್ರತಿಭಟನೆ ಮಾಡಿದರು.

ಈ ಸಂಬಂಧವಾಗಿ ಸ್ಥಳಕ್ಕೆ ಜಿಲ್ಲಾಧಿಕಾರಿಗಳು ಆಗಮಿಸಿ, ಈಗಾಗಲೇ ಆಗ್ನೇಯ ಶಿಕ್ಷಕರ ಕ್ಷೇತ್ರದ ಚುನಾವಣೆಗೆ ನೀತಿ ಸಂಹಿತೆಯು ೦೬/೦೨/೨೦೧೭ರವರೆಗೆ ಇರುವುದರಿಂದ ಮುಂದಿನ ದಿನಗಳಲ್ಲಿ ಹರಪನಹಳ್ಳಿಗೆ ಭೇಟಿ ನೀಡಿ ಸ್ಥಳ ಪರಿಶೀಲಿಸಿ, ಸಭೆ ಕರೆದು ಕ್ರಮ ಕೈಗೊಳ್ಳುವದಾಗಿ ಹೇಳಿದ ಮೇರೆಗೆ, ೩:೦೦ ಗಂಟೆಗೆ ಪ್ರತಿಭಟನೆಯನ್ನು ಹಿಂಪಡೆದರು.

**ಸಾಲ ಮರು ಪಾವತಿಗಾಗಿ ೧೦ ತಿಂಗಳ ಕಾಲಾವಕಾಶಕ್ಕಾಗಿ ಒತ್ತಾಯಿಸಿ ರೈತ ಪ್ರತಿಭಟನೆ:- ೧೬/೦೧/೨೦೧೭.**

ಹರಪನಹಳ್ಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ, ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ರೈತರು, ಮೈಕ್ರೋ ಫೈನಾನ್ಸ್ ಸೇರಿದಂತೆ ವಿವಿಧ ಖಾಸಗಿ ಬ್ಯಾಂಕ್ ಸಹಕಾರ

ಸಂಘಗಳ ಸಾಲ ಮರುಪಾವತಿಸಲು ೧೦ ತಿಂಗಳ ಕಾಲಾವಕಾಶ ನೀಡಬೇಕೆಂದು ಒತ್ತಾಯಿಸಿ, ಜನವರಿ೧೬ ೨೦೧೭ರಂದು ಪ್ರತಿಭಟನೆ ಮಾಡಿದರು.

ಪಟ್ಟಣದ ಹರಿಹರ ವೃತ್ತದಿಂದ ಆರಂಭವಾದ ಪ್ರತಿಭಟನಾ ಮೆರವಣಿಗೆಯು ಹಿಜಾರಿ ಸಿರಸಪ್ಪ ವೃತ್ತ, ಹಳೇ ಬಸ್ ನಿಲ್ದಾಣದ ಮೂಲಕ ತಾಲೂಕು ಕಚೇರಿಗೆ ಬಂದು ತಹಶೀಲ್ದಾರ್‌ರವರಿಗೆ ಮನವಿ ಪತ್ರ ಸಲ್ಲಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಹುಚ್ಚವನಹಳ್ಳಿ ಮಂಜುನಾಥ್, ಗ್ರಾಮೀಣ ಪ್ರದೇಶದಲ್ಲಿ ಕೂಲಿ ಕಾರ್ಮಿಕರಿಗೂ ಸಹ ಕೆಲಸವಿಲ್ಲದೇ ಜೀವನ ನಡೆಸುವುದು ಕಷ್ಟವಾಗಿದೆ. ಹಲವು ವರ್ಷಗಳಿಂದ ರೈತರು, ಮಹಿಳೆಯರು ಮೈಕ್ರೋಫೈನಾನ್ಸ್‌ಗಳಲ್ಲಿ ಸಾಲ ಪಡೆದು, ಕಾಲ ಕಾಲಕ್ಕೆ ಅಸಲು, ಬಡ್ಡಿಯ ಹಣವನ್ನು ಮರುಪಾವತಿಸುತ್ತಿದ್ದಾರೆ. ಈ ವರ್ಷ ಬರಗಾಲ ಅವರಿಸಿರುವದರಿಂದ, ಹಣ ಮರು ಪಾವತಿಸಲು ಸಾಧ್ಯವಾಗುತ್ತಿಲ್ಲ. ಇದರಿಂದ ಖಾಸಗಿ ಬ್ಯಾಂಕ್ ಸಿಬ್ಬಂದಿ ಹಣ ಕಟ್ಟುವಂತೆ ಒತ್ತಾಯ ಮಾಡುತ್ತಿರುವುದು ಗಾಯದ ಮೇಲೆ ಬರೆ ಎಳೆದಾಂತಾಗಿದ್ದು, ಮಾನಸಿಕವಾಗಿ ಕಿರುಕುಳ ನೀಡುತ್ತಿದ್ದಾರೆ ಎಂದು ದೂರಿದರು. ಸತತವಾಗಿ ೨ ವರ್ಷಗಳ ಕಾಲ ಬರಗಾಲ ಬಂದರೆ ಸಾಲದ ಮೇಲಿನ ಬಡ್ಡಿ ಹಾಗೂ ನಿರಂತರವಾಗಿ ೩ ವರ್ಷ ಬರಗಾಲ ಅವರಿಸಿದ್ದಲ್ಲಿ ಸಂಪೂರ್ಣ ಸಾಲ ಮನ್ನಾ ಮಾಡಬೇಕೆಂಬ ನಿಯಮವಿದೆ. ದೌರ್ಜನ್ಯದಿಂದ ಸಾಲ ವಸೂಲಿ ಮಾಡುವಂತಿಲ್ಲ ಎಂಬ ನ್ಯಾಯಾಲಯದ ಆದೇಶವನ್ನು ಬ್ಯಾಂಕ್‌ಗಳು ಉಲ್ಲಂಘಿಸಿವೆ. ಮುಂದಿನ ವರ್ಷ ಮಳೆ ಬೆಳೆ ಬಂದು ಮಾರುಕಟ್ಟೆಯಲ್ಲಿ ಬೆಳೆಗಳಿಗೆ ಉತ್ತಮ ಬೆಲೆ ಸಿಕ್ಕಲ್ಲಿ ರೈತರು ಸಾಲ ಮರುಪಾವತಿ ಮಾಡುತ್ತಾರೆ. ಆದುದ್ದರಿಂದ ೧೦ ತಿಂಗಳು ಕಾಲಾವಕಾಶ ನೀಡಬೇಕೆಂದು ಒತ್ತಾಯಿಸಿದರು.

ಪ್ರತಿಭಟನೆಯಲ್ಲಿ ರೈತ ಮುಖಂಡರಾದ ದ್ಯಾಮಜ್ಜಿ ಹನುಮಂತಪ್ಪ, ಅರಸನಾಳು ಸಿದ್ದಪ್ಪ, ಶಿಲ್ಯಾನಾಯ್ಕ್, ಬೇವಿನಹಳ್ಳಿ ರವಿ, ಅರಸಾಪುರ ಕಾಳಪ್ಪ, ಆಲೂರು ಶ್ರೀನಿವಾಸ್ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಬಗರ್ ಹುಕ್ಕುಂ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡಬೇಕೆಂದು ಆಗ್ರಹಿಸಿ ರೈತರ ಪ್ರತಿಭಟನೆ:– ೦೧/೦೩/೨೦೧೭**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ರಾಜ್ಯಾಧ್ಯಕ್ಷರಾದ ಹುಚ್ವನಹಳ್ಳಿ ಮಂಜುನಾಥ್ ಮತ್ತು ರೈತ ಮುಖಂಡರಾದ ಪಣಿಯಾಪುರದ ಬಸವರಾಜ್‌ರವರ ನೇತೃತ್ವದಲ್ಲಿ ಸುಮಾರು ನೂರಕ್ಕೂ ಹೆಚ್ಚು ರೈತರು, ೧೦೭ ದಿನಗಳ ಕಾಲ ಬಗರ್ ಹುಕುಂ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡುವಂತೆ ಆಗ್ರಹಿಸಿ ಪ್ರತಿಭಟನೆ ಮಾಡಿದರು.

ನಗರದಲ್ಲಿ ಮಾರ್ಚ್ ೧ ೨೦೧೭ರಂದು ನೂರಾರು ರೈತರು ಜಯದೇವ ವೃತ್ತದಿಂದ ಪ್ರತಿಭಟನಾ ಮೆರವಣಿಗೆ ಹಮ್ಮಿಕೊಂಡು, ಉಪವಿಭಾಗಧಿಕಾರಿಗಳ ಕಚೇರಿಗೆ ಬಂದು ತಮ್ಮ ಪ್ರತಿಭಟನೆಯನ್ನು ಮುಂದುವರೆಸಿದರು. ಈ ಸಮಯದಲ್ಲಿ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ

ಮಂಜುನಾಥ್ ಮಾತನಾಡಿ ೧೯೯೨ ರಿಂದ ೧೯೯೮ನೇ ಸಾಲಿನಲ್ಲಿ ಅರ್ಜಿ ಹಾಕಿದ ಬುಗರ್ ಹುಕುಂ ಸಾಗುವಳಿದಾರರ ಅರ್ಜಿ ವಿಲೇವಾರಿ ಮಾಡಿ ಹಕ್ಕು ಪತ್ರಗಳನ್ನು ವಿತರಿಸಬೇಕು. ಕಂದಾಯ ಸಚಿವರು ಡಿಸೆಂಬರ್ ಅಂತ್ಯಕ್ಕೆ ಹಕ್ಕುಪತ್ರಗಳನ್ನು ನೀಡಬೇಕೆಂದು ತಹಶೀಲ್ದಾರ್‌ರವರಿಗೆ ತಿಳಿಸಿದ್ದರೂ ಸಹ ಇದುವರೆಗೂ ಯಾವುದೇ ಕ್ರಮಕೈಗೊಂಡಿಲ್ಲ. ಅರಣ್ಯ ಇಲಾಖೆ ಅಧಿಕಾರಿಗಳು ಸಹ ಹಕ್ಕು ಪತ್ರ ನೀಡಲು ಕಾರಣ ಹೇಳುತ್ತಿರುವದನ್ನು ಖಂಡಿಸಿದರು. ಸಾಗುವಳಿದಾರರಿಗೆ ಹಕ್ಕು ಪತ್ರ ನೀಡುವವರಿಗೆ ಈ ಪ್ರತಿಭಟನೆ ಮುಂದುವರಿಸಲಾಗುವುದೆಂದು ಹೇಳಿ, ಎ.ಸಿ ಕಚೇರಿಯ ಮುಂಭಾಗ ಶಾಮಿಯಾನ ಹಾಕಿ ಧರಣಿ ಆರಂಭಿದ್ದು, ಧರಣಿಯು ಸೂಕ್ತ ಪೋಲೀಸ್ ಬಂದೋ ಬಸ್ತ್‌ನಲ್ಲಿ ಮುಂದುವರೆಯಿತು.

ಧರಣಿಯು ಆರನೇಯ (೦೬/೦೩/೨೦೧೭) ದಿನಕ್ಕೆ ಕಾಲಿಟ್ಟಾಗ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ಸುಮಾರು ೧೫೦ ಬಗರ್ ಹುಕುಂ ಸಾಗುವಳಿದಾರರು ಸೇರಿ, ನಗರದ ಜಿಲ್ಲಾ ಪಂಚಾಯ್ತಿ ಕಚೇರಿಯ ಮುಂಭಾಗದಲ್ಲಿ ರಾಷ್ಟ್ರೀಯ ಹೆದ್ದಾರಿ–೪ ರಸ್ತೆ ನಡೆಸಿದರು. ಈ ಸಂಬಂಧ ಸ್ಥಳಕ್ಕೆ ಆಗಮಿಸಿದ ದಾವಣಗೆರೆ ಉಪವಿಭಾಗಾಧಿಕಾರಿಗಳಾದ ಕುಮಾರಸ್ವಾಮಿ ಮತ್ತು ಜಿಲ್ಲಾ ಅರಣ್ಯ ಅಧಿಕಾರಿಗಳಾದ ರಾಜಶೇಖರನ್ ಭೇಟಿ ನೀಡಿ ಪ್ರತಿಭಟನಾಕಾರರೊಂದಿಗೆ ಚರ್ಚೆ ನಡೆಸಿರು. ನಂತರ ಮಾತನಾಡಿದ ಅಧಿಕಾರಿಗಳು, ಹಕ್ಕು ಪತ್ರ ನೀಡುವ ಕುರಿತು ಈ ದಿನ ಸಂಜೆ ೪:೩೦ ಗಂಟೆಗೆ ಜಿಲ್ಲಾಧಿಕಾರಿಗಳು ಸಭೆ ಕರೆದಿದ್ದು, ನಿಮ್ಮ ಬೇಡಿಕೆಗಳ ಕುರಿತು ಸಭೆಯಲ್ಲಿ ಪ್ರಸ್ತಾಪಿಸುವದಾಗಿ ಹೇಳಿದ ಮೇರೆಗೆ ರಸ್ತೆತಡೆ ಕೈ ಬಿಟ್ಟು, ಶಾಂತರೀತಿಯಿಂದ ಉಪವಿಭಾಗಾಧಿಕಾರಿಗಳ ಕಚೇರಿಯ ಮುಂದೆ ಪ್ರತಿಭಟನೆ ಮುಂದುವರೆಸಿದರು.

ಈ ಪ್ರತಿಭಟನೆ ೧೯ನೇ ದಿನಕ್ಕೆ ಕಾಲಿಟ್ಟಿದ್ದು ೨೧/೦೩/೨೦೧೭ರಂದು ಮಧ್ಯಾಹ್ನ ೧೨ ಗಂಟೆಯಿಂದ ೧:೩೦ರವರೆಗೆ ಪ್ರತಿಭಟನಾ ಸ್ಥಳದಿಂದ, ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ೮೦ ರಿಂದ ೯೦ ರೈತರು ಪ್ರತಿಭಟನಾ ಮೆರವಣಿಗೆಯ ಮೂಲಕ ತಾಲೂಕು ಕಛೇರಿಗೆ ಆಗಮಿಸಿ ಪ್ರತಿಭಟನೆ ನಡೆಸಿದರು. ಈ ಸಮಯದಲ್ಲಿ ತಹಶೀಲ್ದಾರ್‌ರವರು ಪ್ರತಿಭಟನಾ ಸ್ಥಳಕ್ಕೆ ಆಗಮಿಸಿ, ನಿಮ್ಮ ಬೇಡಿಕೆಯಂತೆ ಯಾವ ಯಾವ ರೈತರಿಗೆ ಸಾಗುವಳಿ ಪತ್ರ ವಿತರಿಸಬೇಕು ಎಂಬುದರ ಬಗ್ಗೆ ಮಾಹಿತಿ ಪಡೆಯಲು ಆರ್.ಎಫ್.ಓ.ರವರು ಪ್ರತಿಭಟನಾ ಸ್ಥಳಕ್ಕೆ ಮಧ್ಯಾಹ್ನ ೨:೩೦ಕ್ಕೆ ಭೇಟಿ ನೀಡಿ ನಿಮ್ಮೊಂದಿಗೆ ಚರ್ಚಿಸಲಿದ್ದಾರೆಂದು ತಿಳಿಸಿದರು. ಇದರಿಂದ ಪ್ರತಿಭಟನಾ ರೈತರು ವಾಪಸ್ಸು ಪ್ರತಿಭಟನಾ ಸ್ಥಳಕ್ಕೆ ಆಗಮಿಸಿ ಪ್ರತಿಭಟನೆ ಮುಂದುವರೆಸಿದರು. ಮಧ್ಯಾಹ್ನ ೩:೦೦ ಗಂಟೆಗೆ ಆರ್.ಎಫ್.ಓ.ರವರು ಆಗಮಿಸಿ ನಾಳೆಯಿಂದಲೇ ಅರಣ್ಯ ಇಲಾಖೆ ಮತ್ತು ರೆವಿನ್ಯೂ ಇಲಾಖೆ ವತಿಯಿಂದ ಜಂಟಿ ಸರ್ವೇ ಕಾರ್ಯ ಪ್ರಾರಂಭಿಸಿದರು. ನಂತರ ದಾಖಲಾತಿಗಳನ್ನು ಪರಿಶೀಲಿಸಿ ಆದ್ಯತೆ ಮೇರೆಗೆ ಸಾಗುವಳಿ ಪತ್ರಗಳನ್ನು ವಿತರಿಸಲು ಆದಷ್ಟು ಬೇಗನೆ ಕ್ರಮ ಕೈಗೊಳ್ಳಲಾಗುವದೆಂದು ಭರವಸೆ ನೀಡಿದರು. ಆದರೂ ಸಹ ಪ್ರತಿಭಟನಾಕಾರರು

ಸಾಗುವಳಿ ಪತ್ರ ವಿತರಿಸುವವರೆಗೂ ಪ್ರತಿಭಟನೆ ಮುಂದುವರೆಸುವುದಾಗಿ ತಿಳಿಸಿ ಪ್ರತಿಭಟನೆ ಮುಂದುವರೆಸಿದರು.

ಪ್ರತಿಭಟನೆಯು ೧೦೭ನೇ ದಿನಕ್ಕೆ ಕಾಲಿಟ್ಟಿದ್ದು ದಿನಾಂಕ ೧೫-ಜೂನ್-೨೦೧೭ರಂದು ಪ್ರತಿಭಟನೆ ತೀವ್ರ ಸ್ವರೂಪ ಪಡೆದುಕೊಂಡು ನೂರಾರು ರೈತರು ಪಾಲ್ಗೊಂಡಿದ್ದರು. ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ಬೃಹತ್ ಪ್ರತಿಭಟನಾ ಮೆರವಣಿಗೆ ಹಮ್ಮಿಕೊಂಡು ಜಿಲ್ಲಾಧಿಕಾರಿಗಳ ಕಚೇರಿಗೆ ಬಂದರು. ಮಧ್ಯಾಹ್ನ ೧:೦೦ ಗಂಟೆಗೆ ದಾವಣಗೆರೆ ಜಿಲ್ಲಾಧಿಕಾರಿಗಳ ಕಚೇರಿಯ ಸಭಾಂಗಣದಲ್ಲಿ ಜಿಲ್ಲಾಧಿಕಾರಿಗಳು ಹುಚ್ಚವನಹಳ್ಳಿ ಮಂಜುನಾಥ್‌ರವರೊಂದಿಗೆ ಸಭೆ ನಡೆಸಿ, ಕೂಡಲೇ ಹಕ್ಕು ಪತ್ರ ನೀಡುವ ಕುರಿತು ಕ್ರಮ ಕೈಗೊಳ್ಳುವದಾಗಿ ಹೇಳಿದ ಮೇರೆಗೆ, ಇದಕ್ಕೆ ಸಮ್ಮತಿಸಿ ಪ್ರತಿಭಟನೆಯನ್ನು ಮುಕ್ತಾಯ ಮಾಡಿ ಶಾಂತಿಯುತವಾಗಿ ನಿರ್ಗಮಿಸಿದರು.

**ಸಾಲ ಮನ್ನಾ ಹಾಗೂ ಬರ ಪರಿಹಾರ ನೀಡುವಂತೆ ಒತ್ತಾಯಿಸಿ ರೈತರ ಪ್ರತಿಭಟನೆ:- ೧೭/೦೪/೨೦೧೭**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ, ಜಿಲ್ಲಾಧ್ಯಕ್ಷರಾದ ಮಲ್ಲಶೆಟ್ಟಿಹಳ್ಳಿ ಚನ್ನಬಸಪ್ಪ ಹಾಗೂ ರಾಜ್ಯ ಕಾರ್ಯದರ್ಶಿ ಹೊನ್ನೂರು ಮುನಿಯಪ್ಪರವರ ನೇತೃತ್ವದಲ್ಲಿ, ಸುಮಾರು ೪೦ ರಿಂದ ೫೦ ರೈತರು ಸೇರಿ, ಸಾಲಮನ್ನಾ ಹಾಗೂ ಬರ ಪರಿಹಾರ ನೀಡುವಂತೆ ಒತ್ತಾಯಿಸಿ ಏಪ್ರಿಲ್ ೧೭ ೨೦೧೭ರಂದು ಬೆಳಿಗ್ಗೆ ೧೧:೦೦ ಗಂಟೆಯಿಂದ ೧:೦೦ ಗಂಟೆಯವರೆಗೆ ಪ್ರತಿಭಟನೆ ಮಾಡಿದರು.

ನಗರದ ಜಯದೇವ ವೃತ್ತದಿಂದ ಆರಂಭವಾದ ಪ್ರತಿಭಟನಾ ಮೆರವಣಿಗೆಯು, ತಾಲೂಕು ಕಛೇರಿಗೆ ಬಂದು, ಕಛೇರಿಯ ಮುಂಭಾಗ ಪ್ರತಿಭಟನಾ ಧರಣಿ ನಡೆಸಿ ತಹಶೀಲ್ದಾರ್‌ರವರಿಗೆ ಮನವಿ ಪತ್ರ ಸಲ್ಲಿಸಿದರು. ರಾಜ್ಯದಲ್ಲಿ ಭೀಕರ ಬರಗಾಲ ಅವರಿಸಿದೆ ಇದರಿಂದ ರೈತರು ತತ್ತರಿಸಿದ್ದು, ಭೂಮಿಗೆ ಹಾಕಿದ ಬೀಜ, ಗೊಬ್ಬರ, ಮಳೆ ಇಲ್ಲದೇ ಮಣ್ಣುಪಾಲಾಗಿದೆ. ಜಾನುವಾರುಗಳು ನೀರು, ಮೇವಿಲ್ಲದೆ ಕಸಾಯಿಖಾನೆ ಸೇರುತ್ತಿವೆ ಇದರಿಂದಾಗಿ ರೈತ ಸಾಲಗಾರನಾಗುತ್ತಿದ್ದಾನೆ. ಆದ್ದರಿಂದ ಈ ಕೂಡಲೇ ಸಾಲ ಮನ್ನಾ ಮಾಡಬೇಕು. ಬರಗಾಲ ಪ್ರದೇಶದ ರೈತರಿಗೆ ಒಂದು ಎಕರೆಗೆ ಕನಿಷ್ಟ ೨೦ ಸಾವಿರ ರೂ. ಪರಿಹಾರ ನೀಡಬೇಕು, ಬಗರ್‌ಹುಕಂ ಮತ್ತು ಅರಣ್ಯ ಭೂಮಿ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡಬೇಕು, ಉಚಿತ ಪಡಿತರ ಚೀಟಿ ಸರಬರಾಜು ಮಾಡಬೇಕು, ರೈತರ ಪಂಪ್‌ಸೆಟ್‌ಗಳಿಗೆ ಪ್ರತಿ ದಿನ ೧೨ ಗಂಟೆ ನಿರಂತರ ವಿದ್ಯುತ್ ಸರಬರಾಜು ಮಾಡಬೇಕು, ಬರಗಾಲದ ಬೆಳೆ ಪರಿಹಾರ ನೀಡಬೇಕೆಂದು ಆಗ್ರಹಿಸಿದರು. ಮನವಿ ಸ್ವೀಕರಿಸಿದ ತಹಶೀಲ್ದಾರರು ಜಿಲ್ಲಾಧಿಕಾರಿಗಳ ಜೊತೆ ಚರ್ಚಿಸಿ ಬೇಡಿಕೆಗಳನ್ನು ಈಡೇರಿಸುವದಾಗಿ ಭರವಸೆ ನೀಡಿದರು.

**ಅಕ್ರಮ ಮರಳು ಮಾಫಿಯಾದ ವಿರುದ್ಧ ರೈತ ಪ್ರತಿಭಟನೆ:- ೨೯/೦೫/೨೦೧೭**

ಹರಪನಹಳ್ಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ, ಹರಪನಹಳ್ಳಿ ತಾಲೂಕು ಸಮಿತಿಯಿಂದ, ಮುಖಂಡರಾದ ಮಹೇಶ್ವರಸ್ವಾಮಿಯವರ ನೇತೃತ್ವದಲ್ಲಿ

ನೂರಕ್ಕಿಂತ ಹೆಚ್ಚು ರೈತರು ಮೇ ೨೯ ೨೦೧೭ರಂದು ಅಕ್ರಮ ಮರಳು ಮಾಫಿಯಾದ ವಿರುದ್ಧ ಪ್ರತಿಭಟನೆ ಮಾಡಿದರು.

ಪಟ್ಟಣದ ಹಿರೇಕೆರೆ ವೃತ್ತದಿಂದ ಪ್ರತಿಭಟನಾ ಮೆರವಣಿಗೆ ಹೊರಟು, ಪ್ರವಾಸಿ ಮಂದಿರದ ವೃತ್ತಕ್ಕೆ ಬಂದು ಪ್ರತಿಭಟನೆ ಆರಂಭಿಸಿದರು. ರೈತರನ್ನು ಉದ್ದೇಶಿಸಿ ಮಾತನಾಡಿದ ಮಹೇಶ್ವರಸ್ವಾಮಿಯವರು, ಪ್ರಸ್ತುತ ದಿನದಲ್ಲಿ ಸರ್ಕಾರಗಳು ಜನ ಸಾಮಾನ್ಯರಿಗೆ ಕೈಗೆಟುಕುವ ದರದಲ್ಲಿ ಮನೆ ಕಟ್ಟಿಕೊಳ್ಳಲು ಮರಳು ಸಿಗುವಂತೆ ಕಾನೂನು ರೂಪಿಸಿದ್ದಾರೆ. ಇಂದು ಜಿಲ್ಲಾ ಮತ್ತು ತಾಲೂಕು ಆಡಳಿತ ಮರಳು ಮಾಫಿಯದವರ ಜೊತೆ ಶಾಮೀಲಾಗಿ ನೈಸರ್ಗಿಕವಾಗಿ ಸಂಪತ್ತಿನ ಲೂಟಿ ಮಾಡುವುದರ ಜೊತೆಗೆ ಸರ್ಕಾರದ ಬೊಕ್ಕಸಕ್ಕೆ ಕೊಳ್ಳಿ ಇಡುತ್ತಿದ್ದಾರೆಂದು ಆರೋಪಿಸಿದರು. ನದಿ ಭಾಗದಲ್ಲಿ ವಾಸಿಸುವ ಜನರು ಸರ್ಕಾರಕ್ಕೆ ಹಿಡಿ ಶಾಪ ಹಾಕುತ್ತಿದ್ದಾರೆ. ಮರಳು ಮಾಫಿಯದ ದಂಧೆಕೋರರಿಗೆ ಕಡಿವಾಣ ಹಾಕದೇ ಹಣಕ್ಕೆ ಬಲಿಯಾಗಿದ್ದಾರೆ. ಕೆಲವು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಅಧಿಕಾರಿಗಳು, ಅಕ್ರಮ ಮರಳು ಮಾಫಿಯಾದಲ್ಲಿ ಹೊಂದಾಣಿಕೆ ಮಾಡಿಕೊಂಡು ಕುಮ್ಮಕ್ಕು ನೀಡುತ್ತಿದ್ದಾರೆಂದು ಆರೋಪಿಸಿದರು. ಗುತ್ತಿಗೆದಾರರು ೧.೫೦೦ ರಿಂದ ೧೦.೫೦೦ರವರೆಗೆ ಟೆಂಡರ್ ಬಿಡ್ ಮಾಡಿಕೊಂಡು, ತಮಗೆ ಮನ ಬಂದಂತೆ ದರ ನಿಗದಿ ಮಾಡಿ ನದಿಯಲ್ಲಿ ೨೫.೦೦೦ ದಿಂದ ೩೫.೦೦೦ದವರೆಗೆ ಅಕ್ರಮ ದರ ಫಿಕ್ಸ್ ಮಾಡಿದ್ದಾರೆ. ಇಂತಹ ಗುತ್ತಿಗೆದಾರರನ್ನು ಕಪ್ಪು ಪಟ್ಟಿಗೆ ಸೇರಿಸಿ ಗುತ್ತಿಗೆಯನ್ನು ರದ್ದುಪಡಿಸಬೇಕೆಂದು ಆಗ್ರಹಿಸಿದರು.[೧೦೪]

ಈ ಸಂದರ್ಭದಲ್ಲಿ ಸ್ಥಳಕ್ಕೆ ಆಗಮಿಸಿದ ಹರಪನಹಳ್ಳಿ ತಹಶೀಲ್ದಾರ್‌ರವರ ಮುಖಾಂತರ ರಾಜ್ಯಪಾಲರಿಗೆ (ಕರ್ನಾಟಕ ಸರ್ಕಾರ) ಪ್ರತಿಭಟನಾಕಾರರು ಮನವಿ ಸಲ್ಲಿಸಿ ಪ್ರತಿಭಟನೆ ಹಿಂಪಡೆದರು.

**ಸಾಲ ಮನ್ನಾ ಹಾಗೂ ಹೊಸ ಸಾಲ ನೀಡುವಂತೆ ಆಗ್ರಹಿಸಿ ರೈತ ಪ್ರತಿಭಟನೆ:– ೩೦/೦೬/೨೦೧೭**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ, ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ, ದಾವಣಗೆರೆ ಜಿಲ್ಲೆಯ ಎಲ್ಲಾ ತಾಲೂಕುಗಳಿಂದ ೮೦ ಬೈಕ್‌ಗಳಲ್ಲಿ ೧೫೦ಕ್ಕೂ ಹೆಚ್ಚು ಕಾರ್ಯಕರ್ತರು ಹಾಗೂ ರೈತರು ಸೇರಿ ಜೂನ್ ೩೦ ೨೦೧೭ರಂದು ಪ್ರತಿಭಟನೆ ನಡೆಸಿದರು.

ನಗರದ ಜಯದೇವ ಸರ್ಕಲ್‌ನಿಂದ ಬೈಕ್ ರ್‍ಯಾಲಿ ಆರಂಭವಾಗಿ, ಪಿ.ಬಿ. ರಸ್ತೆ, ಅರುಣ ವೃತ್ತದ ಮೂಲಕ ಜಿಲ್ಲಾಧಿಕಾರಿಗಳ ಕಚೇರಿಗೆ ಬಂದು ಪ್ರತಿಭಟನೆ ನಡೆಸಿದರು. ಈ ಸಮಯದಲ್ಲಿ ಮಾತನಾಡಿದ ರೈತ ಮುಖಂಡರು ರಾಜ್ಯ ಸರ್ಕಾರ ಯಾವುದೇ ಷರತ್ತುಗಳನ್ನು ವಿಧಿಸದೇ ರೈತರ ಸಂಪೂರ್ಣ ಸಾಲ ಮನ್ನಾ ಮಾಡಬೇಕು. ಮುಖ್ಯಮಂತ್ರಿಗಳು ಡಿಸೆಂಬರ್‌ವರೆಗೂ

ಯಾವುದೇ ಸಾಲ ನೀಡಿವುದಿಲ್ಲ ಎಂದು ಹೇಳಿರುವುದು ಸರಿಯಲ್ಲ. ಕೂಡಲೇ ಹೊಸ ಸಾಲ ನೀಡಬೇಕು. ಮಹೇಂದ್ರ ಫೈನಾನ್ಸ್, ಮೈಕ್ರೋ ಫೈನಾನ್ಸ್‌ಗಳು ಬಲವಂತವಾಗಿ ರೈತರಿಂದ ಸಾಲ ವಸೂಲಾತಿ ಮಾಡುತ್ತಿದ್ದು, ಇದನ್ನು ಕೂಡಲೇ ನಿಲ್ಲಿಸಬೇಕು. ಬಗರ್ ಹುಕುಂ ಸಾಗುವಳಿದಾರರಿಗೆ ಸಾಗುವಳಿ ಪತ್ರ ನೀಡಬೇಕು, ಮಳೆ ಇಲ್ಲದೇ ರೈತರ ಕೃಷಿ ಚಟುವಟಿಕೆ ನಡೆಸಲು ಅಸಾಧ್ಯವಾಗಿದ್ದು, ರೈತರ ನೆರವಿಗೆ ಸರ್ಕಾರ ಧಾವಿಸಬೇಕು. ಖಾಸಗಿ ಬ್ಯಾಂಕ್‌ಗಳಲ್ಲಿ ರೈತರು ಟ್ರ್ಯಾಕ್ಟರ್‌ಗಾಗಿ ಪಡೆದ ಸಾಲವನ್ನು ಬಲವಂತವಾಗಿ ವಸೂಲಿ ಮಾಡಿ ರೈತರನ್ನು ಶೋಷಣೆ ಮಾಡಲಾಗುತ್ತಿದೆ. ಈ ಬಗ್ಗೆ ಅಧಿಕಾರಿಗಳಿಗೆ ಮನವಿ ಮಾಡಿದರೂ ಸಹ ಯಾವುದೇ ಪ್ರಯೋಜನವಾಗಿಲ್ಲವೆಂದು ಆರೋಪಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು. ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು ಬ್ಯಾಂಕ್ ಮತ್ತ ಫೈನಾನ್ಸ್‌ಗಳ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವದಾಗಿ ಭರವಸೆ ನೀಡಿದರು.

**ಸಾಲ ಮನ್ನಾ ಮಾಡುವಂತೆ ಆಗ್ರಹಿಸಿ ವಿವಿಧ ತಾಲೂಕುಗಳಲ್ಲಿ ರೈತ ಸಂಘದ ಪ್ರತಿಭಟನೆ:- ೦೩/೦೭/೨೦೧೭**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಪುಟ್ಟಣ್ಣಯ್ಯ ಬಣ) ವತಿಯಿಂದ, ಮುಖಂಡರಾದ ಬಲ್ಲೂರು ರವಿಕುಮಾರ್‌ರವರ ನೇತೃತ್ವದಲ್ಲಿ ನೂರಾರು ರೈತರು ಪ್ರತಿಭಟನೆ ಮಾಡಿದರು.

ಪ್ರತಿಭಟನಾ ಮೆರವಣಿಗೆಯು ನಗರದ ಜಯದೇವ ವೃತ್ತದಿಂದ ಆರಂಭವಾಗಿ, ಗಾಂಧಿ ವೃತ್ತಕ್ಕೆ ಬಂದು ಕೇಂದ್ರ ಸರ್ಕಾರದ ಪ್ರತಿಕೃತಿಯನ್ನು ಸುಟ್ಟು ಹಾಕಿದರು. ನಂತರ ಮಾತನಾಡಿದ ರೈತ ಮುಖಂಡರು ಸತತ ಬರಗಾಲದಿಂದ ಜಿಲ್ಲೆಯ ರೈತರು ಕಷ್ಟಕ್ಕೆ ಒಳಗಾಗಿದ್ದಾರೆ, ಸಹಕಾರ ಸಂಘಗಳಲ್ಲಿ ಕೇವಲ ೫೦ ಸಾವಿರ ಸಾಲ ಮನ್ನಾ ಮಾತ್ರ ಮಾಡಲಾಗಿದೆ ಎಂದರು. ರಾಷ್ಟ್ರೀಕೃತ ಬ್ಯಾಂಕ್‌ಗಳ ಸಾಲ ಮನ್ನಾ, ಪ್ರತಿ ಎಕರೆಗೆ ೫೦ ಸಾವಿರ ಬೆಳೆ ಹಾನಿ ಪರಿಹಾರ ನೀಡುವಂತೆ ಸರ್ಕಾರಕ್ಕೆ ಒತ್ತಾಯಿಸಿ ಪ್ರತಿಭಟಿಸಿದರು. ನಂತರ ಉಪವಿಭಾಗಾಧಿಕಾರಿಗಳ ಕಛೇರಿಗೆ ಬಂದು ಎ.ಸಿ. ರವರಿಗೆ ಮನವಿ ಪತ್ರ ಸಲ್ಲಿಸಿದರು.

ಅದೇ ದಿನದಂದು ಬೆಳಿಗ್ಗೆ ೧೧:೦೦ ಗಂಟೆಯಿಂದ ೩:೦೦ ಗಂಟೆಯವರೆಗೆ ಹರಿಹರ ನಗರದ ತಾಲ್ಲೂಕು ಕಚೇರಿಯ ಮುಂಭಾಗದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಪುಟ್ಟಣ್ಣಯ್ಯ ಬಣ) ತಾಲೂಕು ಸಮಿತಿಯಿಂದ, ರಾಜ್ಯ ಉಪಾಧ್ಯಕ್ಷರಾದ ಓಂಕಾರಪ್ಪರವರ ನೇತೃತ್ವದಲ್ಲಿ ಸುಮಾರು ೫೦ಕ್ಕಿಂತ ಹೆಚ್ಚು ರೈತರು, ಸಹಕಾರ ಸಂಘ ಹಾಗೂ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಮಾಡಿರುವ ಸಾಲವನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಸಂಪೂರ್ಣವಾಗಿ ಮನ್ನಾ ಮಾಡಬೇಕೆಂದು ಆಗ್ರಹಿಸಿ ತಹಶೀಲ್ದಾರರಿಗೆ ಮನವಿ ಸಲ್ಲಿಸಿದರು.

ಅದೇ ದಿನದಂದು ಮಧ್ಯಾಹ್ನ ೧೨:೦೦ ರಿಂದ ೨:೦೦ ಗಂಟೆಯವರೆಗೆ ಹರಪನಹಳ್ಳಿ ಪಟ್ಟಣದಲ್ಲಿ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ) ತಾಲೂಕು ಸಮಿತಿ

ವತಿಯಿಂದ, ಅಧ್ಯಕ್ಷರಾದ ಚೌಡಪ್ಪ ಕರಡಿದುರ್ಗರವರ ನೇತೃತ್ವದಲ್ಲಿ ಸುಮಾರು ೫೦ ರೈತರು, ಸಹಕಾರ ಸಂಘ ಹಾಗೂ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಪಡೆದಿರುವ ಸಾಲವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಂಪೂರ್ಣ ಮನ್ನಾ ಮಾಡಬೇಕೆಂದು ಒತ್ತಾಯಿಸಿ, ಪಟ್ಟಣದ ಹರಿಹರ ವೃತ್ತದಿಂದ ಪ್ರತಿಭಟನಾ ಮೆರವಣಿಗೆ ಹೊರಟು ಹಳೇ ಬಸ್ ನಿಲ್ದಾಣ, ಪ್ರವಾಸಿ ಮಂದಿರ ವೃತ್ತದ ಮೂಲಕ ತಾಲೂಕು ಕಚೇರಿಗೆ ಬಂದು ಶಿರಸ್ತೇದಾರರಿಗೆ ಮನವಿ ಪತ್ರ ಸಲ್ಲಿಸಿ, ಬೇಡಿಕೆಗಳ ಈಡೇರಿಕೆಗಾಗಿ ಆಗ್ರಹಿಸಿದರು.

**ಜಗಳೂರು ತಾಲೂಕಿನಲ್ಲಿ ಗೋಶಾಲೆ ತೆರೆಯುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:– ೩೧/೦೭/೨೦೧೭**

ಜಗಳೂರು ತಾಲೂಕು ಕಲ್ಲೇದೇವರಪುರ ಗ್ರಾಮದ ಬಳಿ ಇರುವ ಎನ್.ಹೆಚ್.–೧೩ರಸ್ತೆಯಲ್ಲಿ, ಕರ್ನಾಟಕ ರಾಜ್ಯ ರಸ್ತೆ ಸಂಘ ಹಾಗೂ ಹಸಿರು ಸೇನೆಯ (ಹುಚ್ಚವನಹಳ್ಳಿ ಮಂಜುನಾಥ ಬಣ) ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್, ತಾಲೂಕು ಅಧ್ಯಕ್ಷರಾದ ಕಾನನಕಟ್ಟೆ ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ ಸುಮಾರು ೫೦ ರಿಂದ ೬೦ ರೈತರು ಪ್ರತಿಭಟನೆ ಮಾಡಿದರು.

ಜಗಳೂರು ತಾಲೂಕಿನಲ್ಲಿ ಗೋಶಾಲೆ ತೆರೆಯುವಂತೆ ಈಗಾಗಲೇ ಹಲವು ಬಾರಿ ಮನವಿ ಸಲ್ಲಿಸಿದರೂ ಸಹ ಗೋಶಾಲೆ ತೆರೆದಿರುವದಿಲ್ಲ, ಚಳ್ಳಕೆರೆ ತಾಲೂಕಿನಲ್ಲಿ ಈಗಾಗಲೇ ಐದು ಗೋಶಾಲೆಗಳನ್ನು ತೆರೆದಿದ್ದು, ಜಗಳೂರು ತಾಲೂಕಿನಲ್ಲಿ ಇದುವರೆಗೂ ಒಂದು ಗೋಶಾಲೆಯನ್ನು ತೆರೆದಿರುವುದಿಲ್ಲ. ಕೂಡಲೇ ತೆರೆಯಬೇಕೆಂದು ಒತ್ತಾಯಿಸಿ, ಎನ್.ಎಚ್.–೧೩ ರಸ್ತೆಯನ್ನು ತಡೆದು ಪ್ರತಿಭಟನೆ ನಡೆಸಿದರು.

ಸ್ಥಳಕ್ಕೆ ತಹಶೀಲ್ದಾರ್‌ರವರಾದ ಶ್ರೀಧರ ಮೂರ್ತಿರವರು ಆಗಮಿಸಿ ರೈತರ ಬೇಡಿಕೆ ತಿಳಿದು, ಜಿಲ್ಲಾಧಿಕಾರಿಯವರೊಂದಿಗೆ ದೂರವಾಣಿಯ ಮುಖಾಂತರ ಮಾತನಾಡಿ ಕುಡಿಯುವ ನೀರಿನ ಸಮಸ್ಯೆ ಇರುವುದರಿಂದ ಗೋಶಾಲೆ ತೆರೆಯುವುದು ಕಷ್ಟವಿದೆ ಎಂದು ಹೇಳಿದರು. ಅದಕ್ಕೆ ಪ್ರತಿಭಟನಾನಿರತ ರೈತರು ಕುಡಿಯುವ ನೀರಿನ ವ್ಯವಸ್ಥೆಯನ್ನು ನಾವೇ ಮಾಡಿಕೊಳ್ಳುತ್ತೇವೆ. ಗೋಶಾಲೆಯನ್ನು ನೀವು ತೆರೆಯಬೇಕೆಂದು ಒತ್ತಾಯಿಸಿದರು. ಇದಕ್ಕೆ ಒಪ್ಪಿಗೆ ನೀಡಿದ ತಹಶೀಲ್ದಾರರು ಇನ್ನೆರಡು ದಿನಗಳಲ್ಲಿ ಗೋಶಾಲೆ ತೆರೆಯಲಾಗುವದೆಂದು ತಿಳಿಸಿದ ಮೇರೆಗೆ ಪ್ರತಿಭಟನಾಕಾರರು ಶಾಂತ ರೀತಿಯಿಂದ ತೆರಳಿದರು.

**ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಹೊನ್ನಾಳಿ ರೈತರ ಪ್ರತಿಭಟನೆ:– ೦೨/೦೮/೨೦೧೭**

ಹೊನ್ನಾಳಿ ಪಟ್ಟಣದಲ್ಲಿ ಅಖಂಡ ಕರ್ನಾಟಕ ರಾಜ್ಯ ರೈತ ಸಂಘದ ವತಿಯಿಂದ ಜಿಲ್ಲಾಧ್ಯಕ್ಷರಾದ ನಾಗರಾಜಪ್ಪ, ತಾಲೂಕು ಅಧ್ಯಕ್ಷರಾದ ಅರಬಗಟ್ಟೆ ಕೆ.ಸಿ. ಬಸಪ್ಪರವರ, ನೇತೃತ್ವದಲ್ಲಿ ಸುಮಾರು ನೂರಕ್ಕು ಹೆಚ್ಚು ರೈತರು, ಸರ್ಕಾರದ ರೈತ ವಿರೋಧಿ ನೀತಿಯನ್ನು

ವಿರೋಧಿಸಿ ಆಗಸ್ಟ್ ೦೨ ೨೦೧೭ರಂದು ೧೨:೦೦ ಗಂಟೆಯಿಂದ ಪ್ರತಿಭಟನೆಯನ್ನು ಆರಂಭಿಸಿದರು.

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನೀತಿಯನ್ನು ವಿರೋಧಿಸಿ ರೈತರು, ಪಟ್ಟಣದ ಹಿರೇಕಲ್ಮಠ ಸರ್ಕಲ್‌ನಿಂದ ಪ್ರತಿಭಟನಾ ಮೆರವಣಿಗೆ ಹೊರಟು, ಖಾಸಗಿ ಬಸ್ ನಿಲ್ದಾಣದ ಮೂಲಕ ತಾಲೂಕು ಕಛೇರಿಯ ಮುಂಭಾಗ ಬಂದು ಪ್ರತಿಭಟನೆ ನಡೆಸಿದರು. ರೈತರನ್ನು ಉದ್ದೇಶಿಸಿ ಮಾತನಾಡಿದ ರೈತ ಮುಖಂಡರು ಬಗರ್ ಹುಕ್ಕುಂ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡಬೇಕು. ನಾಲ್ಕು ವರ್ಷದಿಂದ ರಾಜ್ಯದಲ್ಲಿ ಬೀಕರ ಅವರಿಸಿದ್ದು ಸಾಲ ಮನ್ನಾ ಮಾಡಬೇಕು. ಬೆಳೆದ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಸಿಗದೆ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದು, ಬೆಂಬಲ ಬೆಲೆ ನೀಡಬೇಕು. ರೈತರ ಕಷ್ಟಗಳಿಗೆ ಸರ್ಕಾರ ಸ್ಪಂದಿಸುತ್ತಿಲ್ಲವೆಂದು ಪ್ರತಿಭಟಿಸಿ, ತಹಶೀಲ್ದಾರರಿಗೆ ವಿವಿಧಬೇಡಿಕೆಗಳ ಮನವಿಯನ್ನು ಸಲ್ಲಿಸಿದರು.

**ಬಗರ್ ಹುಕುಂ ಸಾಗುವಳಿ ಪತ್ರಕ್ಕಾಗಿ ಚನ್ನಗಿರಿ ರೈತರ ಪ್ರತಿಭಟನೆ:– ೧೧/೦೯/೨೦೧೭**

ಚನ್ನಗಿರಿ ತಾಲೂಕಿನ ಸಿದ್ದೇಶ್ವರ ದೇವಸ್ಥಾನದಲ್ಲಿ, ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ವತಿಯಿಂದ, ಮುಖಂಡರಾದ ಯಲೋದಹಳ್ಳಿ ರವಿ, ಪೀರ್ಯಾನಾಯ್ಕ್‌ರವರ ನೇತೃತ್ವದಲ್ಲಿ, ಸಾಸುವೆಹಳ್ಳಿ ಏತ ನೀರಾವರಿ ಕಾಮಗಾರಿಗೆ ಸರ್ಕಾರದಿಂದ ಹಣ ಮಂಜೂರಾಗಿದ್ದರೂ ಇದುವರೆಗೂ ಕಾಮಗಾರಿಯನ್ನು ಆರಂಭಿಸದೇ ಇರುವುದನ್ನು ಖಂಡಿಸಿ ಮತ್ತು ಬಗರ್ ಹುಕುಂ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡುವ ಸಂಬಂಧ ಮುಂದಿನ ಹೋರಾಟ ಮಾಡುವ ಬಗ್ಗೆ ಪೂರ್ವಭಾವಿ ಸಭೆಯನ್ನು ಆಗಸ್ಟ್ ೩೧ ೨೦೧೭ರಂದು ಹಮ್ಮಿಕೊಂಡಿದ್ದರು. ಈ ಸಭೆಗೆ ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್ ಹಾಗೂ ಸುಮಾರು ೧೫೦ಕ್ಕೂ ಹೆಚ್ಚು ರೈತರು ಭಾಗವಹಿಸಿದ್ದರು.

ಈ ಸಭೆಯಲ್ಲಿ ಹುಚ್ಚವನಹಳ್ಳಿ ಮಂಜುನಾಥ್ ಮಾತನಾಡಿ, ಚನ್ನಗಿರಿ ತಾಲೂಕಿನಲ್ಲಿ ರೈತರಿಗೆ ಬಗರ್ ಹುಕುಂ ಸಾಗುವಳಿ ಪತ್ರವನ್ನು ಕೊಡಿಸುವ ಸಲುವಾಗಿ ಹೋರಾಟವನ್ನು ಮಾಡಬೇಕು. ತುಂಗಾಭದ್ರ ನದಿಯಿಂದ ಸಾಸ್ವೇಹಳ್ಳಿ ಏತ ನೀರಾವರಿಗೆ ಸರ್ಕಾರದಿಂದ ೪೬೦ ಕೋಟಿ ರೂ. ಬಿಡುಗಡೆಯಾಗಿದ್ದರೂ, ಕಾಮಗಾರಿಯನ್ನು ಆರಂಭಿಸದೇ ತಡಮಾಡಿದ್ದು ರೈತರಿಗೆ ತೊಂದರೆಯಾಗಿದೆ. ಬಗರ್ ಹುಕುಂ ಸಾಗುವಳಿದಾರರಿಗೆ ಆದಷ್ಟು ಬೇಗ ಸಾಗುವಳಿ ಪತ್ರ ನೀಡಬೇಕು, ಈ ಕುರಿತು ಸೆಪ್ಟೆಂಬರ್ ೧೧ ೨೦೧೭ರಂದು ಚನ್ನಗಿರಿಯಲ್ಲಿ ಪ್ರತಿಭಟನೆ ಮಾಡಲು ಕರೆಕೊಟ್ಟರು.

ಸೆಪ್ಟೆಂಬರ್ ೧೧ ೨೦೧೭ರಂದು ಮಧ್ಯಾಹ್ನ ೧:೦೦ ಗಂಟೆಯಿಂದ ಚನ್ನಗಿರಿ ಪಟ್ಟಣದಲ್ಲಿ ರೈತ ಸಂಘ ಮತ್ತು ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣದ)ವತಿಯಿಂದ ಅಧ್ಯಕ್ಷರಾದ ಮಧುರಾನಾಯಕನಹಳ್ಳಿ, ಈರಾನಾಯ್ಕ್ ಮುಂತಾದ ರೈತ ಮುಖಂಡರ ನೇತೃತ್ವದಲ್ಲಿ ಸುಮಾರು ೧೦೦ ಕ್ಕೂ ಹೆಚ್ಚು ರೈತರು ಪ್ರತಿಭಟನೆಯನ್ನು ಆರಂಭಿಸಿದರು.

ರೈತರು ಪ್ರತಿಭಟನಾ ಮೆರವಣಿಗೆಯನ್ನು ಚನ್ನಗಿರಿ ಪಟ್ಟಣದ ತುಮಕೋಸ್ ಆವರಣದಿಂದ ಪ್ರಾರಂಭಿಸಿ ಎನ್.ಹೆಚ್-೧೩ ರಸ್ತೆಯ ಮೂಲಕ ಮಾರುತಿ ವೃತ್ತ, ಸಂತೆ ಕ್ರಾಸ್, ಬಸ್ ನಿಲ್ದಾಣ, ಕಗತೂರ್ ಕ್ರಾಸ್, ನಂತರ ತಾಲೂಕ್ ಕಛೇರಿಗೆ ಬಂದು ಮುತ್ತಿಗೆ ಹಾಕಿ ಪ್ರತಿಭಟನೆ ನಡೆಸಿದರು. ನಂತರ ರೈತ ಮುಖಂಡರು ಮಾತನಾಡಿ ಏತನೀರಾವರಿ ಯೋಜನೆ ಕಾಮಗಾರಿ ಪ್ರಾರಂಭಿಸುದು, ಚನ್ನಗಿರಿ ತಾಲೂಕಿನ ಅರಣ್ಯ ಭೂಮಿ, ಬಗರ್ ಹುಕುಂ ಸಾಗುವಳಿ ಹಕ್ಕು ಪತ್ರಕ್ಕಾಗಿ, ಅರಣ್ಯಾಧಿಕಾರಿಗಳು ರೈತರ ಮೇಲೆ ಮಾಡಿರುವ ದೌರ್ಜನ್ಯ, ಭಾಗ್ಯಜ್ಯೋತಿ ಫಲಾನುಭವಿಗಳಿಂದ ಬೆಸ್ಕಾಂ ಅಧಿಕಾರಿಗಳು ಬಲವಂತವಾಗಿ ಹಣ ವಸೂಲಿ ಮಾಡುತ್ತಿರುವುದು ಮುಂತಾದ ಅಂಶಗಳನ್ನಿಟ್ಟುಕೊಂಡು ತಹಶೀಲ್ದಾರ್‌ರವರಿಗೆ ಮನವಿ ನೀಡುವುದರ ಮೂಲಕ ಒತ್ತಾಯಪಡಿಸಿದರು.

**ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ದಾವಣಗೆರೆ ರೈತರ ಪ್ರತಿಭಟನೆ:- ೨೫/೦೯/೨೦೧೭**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ) ವತಿಯಿಂದ ಸುಮಾರು ೫೦೦ಕ್ಕೂ ಹೆಚ್ಚು ರೈತರು, ಸೆಪ್ಟಂಬರ್ ೨೫ ೨೦೧೭ರಂದು ೧೧:೩೦ ಗಂಟೆಯಿಂದ ಮಧ್ಯಾಹ್ನ ೩:೦೦ ಗಂಟೆವರೆಗೆ ಜಿಲ್ಲಾಧಿಕಾರಿ ಕಚೇರಿಯ ಮುಂದೆ ಪ್ರತಿಭಟನೆ ನಡೆಸಿದರು.

ರಾಜ್ಯಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ಸುಮಾರು ೫೦೦ ರೈತರು ಸೇರಿ ಸತತವಾಗಿ ೫ ವರ್ಷಗಳಿಂದ ಬರಗಾಲವಿದ್ದು ದಾವಣಗೆರೆಯನ್ನು ಬರಪೀಡಿತ ಪ್ರದೇಶವೆಂದು ಘೋಷಿಸಬೇಕು. ೧೫ ವರ್ಷಗಳಿಂದ ರೈತರ ಬೆಳೆಗಳಿಗೆ ಬೆಲೆ ಕುಸಿತವಾಗಿದೆ, ಇದರಿಂದಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೈತರ ಎಲ್ಲಾ ಬ್ಯಾಂಕ್‌ಗಳಲ್ಲಿನ ಕೃಷಿ ಸಾಲ ಮನ್ನಾ ಮಾಡಬೇಕು. ೦% ಬಡ್ಡಿಯ ದರದಲ್ಲಿ ರೈತರಿಗೆ ಹೊಸ ಸಾಲ ನೀಡಬೇಕು ಹಾಗೂ ಇನ್ನಿತರ ಬೇಡಿಕೆಗಳನ್ನು ಒತ್ತಾಯಿಸಿ ನಗರದ ಜಯದೇವ ವೃತ್ತದಿಂದ ಮೆರವಣಿಗೆ ಹೊರಟು ನಗರದಾದ್ಯಂತ ಪ್ರತಿಭಟನೆ ಮಾಡಿ ಜಿಲ್ಲಾಧಿಕಾರಿ ಕಚೇರಿಗೆ ಬಂದು ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಪಡಿಸಿ, ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು.

**ಹರಪನಹಳ್ಳಿಯನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವಂತೆ ಆಗ್ರಹಿಸಿ ರೈತರ ಪ್ರತಿಭಟನೆ:-೦೩/೧೦/೨೦೧೭**

ಹರಪನಹಳ್ಳಿ ತಾಲೂಕು ಕಂಭತ್ತಹಳ್ಳಿ ಕ್ರಾಸ್‌ನ ಬಳಿ ಅರಸೀಕೆರೆ-ಉಚ್ಚಂಗಿದುರ್ಗ ರಸ್ತೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ತಾಲೂಕು ಸಮಿತಿ ವತಿಯಿಂದ, ರಾಜ್ಯಾಧ್ಯಕ್ಷರಾದ ಮಹೇಶ್ವರಸ್ವಾಮಿಯವರ ನೇತೃತ್ವದಲ್ಲಿ ೧೨೦ಕ್ಕೂ ಹೆಚ್ಚು ರೈತರು ಅಕ್ಟೋಬರ್ ೦೩ ೨೦೧೭ರಂದು ಪ್ರತಿಭಟನೆ ಮಾಡಿದರು.

ಹರಪನಹಳ್ಳಿ ತಾಲೂಕಿನಾದ್ಯಂತ ಮೆಕ್ಕೆಜೋಳ ಬೆಳೆಯನ್ನು ಸಂಪೂರ್ಣವಾಗಿ ಕ್ರಿಮಿಕೀಟಗಳು ತಿಂದು ಹಾಕಿದ್ದು, ಕೈಗೆ ಬಂದ ತುತ್ತು ಬಾಯಿಗೆ ಸಿಗದಂತಾಗಿದೆ. ಇದರಿಂದ ರೈತರಿಗೆ ಸಂಪೂರ್ಣ ನಷ್ಟವಾಗಿದ್ದು, ರಾಜ್ಯ ಸರ್ಕಾರ ಕೂಡಲೇ ಬೆಳೆ ನಷ್ಟ ಪರಿಹಾರ ನೀಡಬೇಕು ಮತ್ತು ಹರಪನಹಳ್ಳಿ ತಾಲೂಕನ್ನು ಬರಪೀಡಿತ ಪ್ರದೇಶವೆಂದು ಘೋಷಿಸಬೇಕು. ರೈತರ ರಾಷ್ಟ್ರೀಕೃತ ಬ್ಯಾಂಕ್‌ಗಳಿರುವ ಸಾಲವನ್ನು ಮನ್ನಾ ಮಾಡಬೇಕೆಂದು ರೈತ ಮುಖಂಡರು ಒತ್ತಾಯಿಸಿದರು.

ಆ ಸಮಯದಲ್ಲಿ ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರ್ ಮತ್ತು ಸಹಾಯಕ ಕೃಷಿ ನಿರ್ದೇಶಕರು ಬಂದು ಜಮೀನುಗಳಿಗೆ ಭೇಟಿ ನೀಡಿ ಪರಿಶೀಲಿಸಿದರು. ಈ ವರದಿಯನ್ನು ಸರ್ಕಾರಕ್ಕೆ ಕಳುಹಿಸಿ ಪರಿಹಾರ ದೊರಕಿಸಲು ಕ್ರಮಕೈಗೊಳ್ಳುವದಾಗಿ ಹೇಳಿದ ಮೇರೆಗೆ, ಪ್ರತಿಭಟನೆ ಮುಕ್ತಾಯ ಮಾಡಿ ನಿರ್ಗಮಿಸಿದರು.

**ಮೆಕ್ಕೆಜೋಳಕ್ಕೆ ೫೦೦ ರೂ. ಪ್ರೋತ್ಸಾಹ ಧನಕ್ಕೆ ಒತ್ತಾಯಿಸಿ ರೈತ ಪ್ರತಿಭಟನೆ:- ೦೧/೧೨/೨೦೧೭**

ದಾವಣಗೆರೆ ಜಿಲ್ಲೆಯ ಮಾಯಕೊಂಡದ ನಾಡ ಕಚೇರಿಯ ಮುಂದೆ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ನೂರಾರು ರೈತರು ಮೆಕ್ಕೆಜೋಳಕ್ಕೆ ೫೦೦ ರೂ. ಪ್ರೋತ್ಸಾಹ ಧನ ನೀಡಬೇಕೆಂದು ಒತ್ತಾಯಿಸಿ ಡಿಸೆಂಬರ್ ೦೧ ೨೦೧೭ರಂದು ಪ್ರತಿಭಟನೆ ಮಾಡಿದರು.

ಮೆಕ್ಕೆಜೋಳಕ್ಕೆ ಕೇಂದ್ರ ಸರ್ಕಾರ ಈಗಾಗಲೇ ಪ್ರತೀ ಕ್ವಿಂಟಾಲ್‌ಗೆ ೧.೪೨೫/- ರೂ. ಕನಿಷ್ಠ ಬೆಂಬಲ ಬೆಲೆ ನಿಗದಿಗೊಳಿಸಿದ್ದು, ರಾಜ್ಯ ಸರ್ಕಾರ ೫೦೦/- ರೂ. ಪ್ರೋತ್ಸಾಹ ಧನ ಸೇರಿಸಿ ೧.೯೨೫/- ರೂ.ಗೆ ಖರೀದಿಸಬೇಕೆಂದು ಆಗ್ರಹಿಸಿ ಉಪತಹಶೀಲ್ದಾರ್‌ರಾದ ರಾಮಸ್ವಾಮಿಗೆ ಮನವಿ ಸಲ್ಲಿಸಿದರು. ಆ ಸಮಯದಲ್ಲಿ ಮಾತನಾಡಿದ ರೈತ ಮುಖಂಡರಾದ ಪ್ರಕಾಶ್‌ರವರು, ದಾವಣಗೆರೆ ತಾಲೂಕಿನ ಮಾಯಕೊಂಡ ಹೋಬಳಿಯು ಪ್ರಸಕ್ತ ವರ್ಷ ತೀವ್ರ ಬರಗಾಲ ಎದುರಿಸಿದ್ದು, ಮೆಕ್ಕೆಜೋಳ ಬೆಳೆ ಸಂಪೂರ್ಣ ಕುಂಠಿತಗೊಂಡಿದೆ. ಅದಕ್ಕೆ ಕಾರಣ ಸೈನಿಕ ಹುಳು. ಈ ಹುಳುವಿನಿಂದ ಶೇ. ೬೦ರಷ್ಟು ಬೆಳೆ ಹಾಳಾಗಿದೆ ಎಂದು ಆಳಲು ತೋಡಿಕೊಂಡರು. ಅಳಿದುಳಿದ ಮೆಕ್ಕೆಜೋಳಕ್ಕೆ ಕೇಂದ್ರ ಸರ್ಕಾರ ೧,೪೨೫/- ರೂ. ಕನಿಷ್ಠ ಬೆಂಬಲ ಬೆಲೆ ನಿಗದಿಗೊಳಿಸಿದೆ. ಇದರ ಜೊತೆಗೆ ರಾಜ್ಯ ಸರ್ಕಾರ ೫೦೦/- ರೂ ಪ್ರೋತ್ಸಾಹ ಧನ ನೀಡಬೇಕಂದು ಆಗ್ರಹಿಸಿದರು. ಮೆಕ್ಕೆಜೋಳವನ್ನು ನಗರ ಪ್ರದೇಶಗಳ ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಖಾಸಗಿ ವರ್ತಕರಿಗೆ ರೈತರು ತಿಳಿದಷ್ಟು ಬೆಲೆಗೆ ಮಾರಾಟ ಮಾಡುತ್ತಿದ್ದಾರೆ ಎಂದು ಆರೋಪಿಸಿದರು. ಆದ್ದರಿಂದ ಸರ್ಕಾರ ನಿಗದಿತ ಬೆಲೆಗಿಂತ ಕಡಿಮೆ ಬೆಲೆಗೆ ಖರೀದಿಸಿದರೆ ಅಂತಹ ವರ್ತಕರ ಲೈಸೆನ್ಸ್ ರದ್ದುಗೊಳಿಸಬೇಕೆಂದು ಮನವಿ ಮಾಡಿದರು. ಉಪತಹಶೀಲ್ದಾರರು ಮನವಿ ಸ್ವೀಕರಿಸಿ ಜಿಲ್ಲಾದಿಕಾರಿಗಳ ಗಮನಕ್ಕೆ ತಂದು ಸಮಸ್ಯೆ ಬಗೆಹರಿಸುವದಾಗಿ ಭರವಸೆ ನೀಡಿದರು.

**ಕೃಷಿ ಕಚೇರಿಗೆ ಬೀಗ ಜಡಿದು ರೈತ ಪ್ರತಿಭಟನೆ:- ೨೮/೧೨/೨೦೧೭**

ಚನ್ನಗಿರಿ ಪಟ್ಟಣದಲ್ಲಿ ಕನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ, ನೂರಾರು ರೈತರು ಕೃಷಿ ಇಲಾಖೆಯಿಂದ ರೈತರಿಗೆ ದೊರೆಯಬೇಕಾದ ಸೌಲಭ್ಯಗಳನ್ನು ಪೂರೈಸುವಂತೆ ಆಗ್ರಹಿಸಿ, ಡಿಸೆಂಬರ್ ೨೮ ೨೦೧೭ರ ಗುರುವಾರದಂದು ಕೃಷಿ ಇಲಾಖೆಗೆ ಬೀಗ ಜಡಿದು ಪ್ರತಿಭಟನೆ ನಡೆಸಿದರು.

ರೈತ ಸಂಘದ ತಾಲೂಕು ಅಧ್ಯಕ್ಷರಾದ ಪೀರಾನಾಯ್ಕ್‌ರವರು ಮಾತನಾಡಿ, ಸರ್ಕಾರ ರೈತರಿಗಾಗಿ ಸಾಕಷ್ಟು ಯೋಜನೆಗಳನ್ನು ಅನುಷ್ಠಾನ ಮಾಡಿದ್ದರೂ ಅಂತಹ ಯೋಜನೆಗಳನ್ನು ರೈತರಿಗೆ ತಲುಪಿಸುವಲ್ಲಿ ಕೃಷಿ ಇಲಾಖೆ ನಿರ್ಲಕ್ಷ್ಯ ವಹಿಸುತ್ತಿದೆ. ರೈತರ ಕೆಲಸಗಳನ್ನು ತಕ್ಷಣವೇ ಮಾಡಿಕೊಡಬೇಕೆಂದು ಮನವಿ ಮಾಡಿದರು. ಸಮಾಜ ಕಲ್ಯಾಣ ಸಚಿವರ ಹೇಳಿಕೆ ನೀಡಿರುವಂತೆ, ಟ್ರ್ಯಾಕ್ಟರ್‌ಗೆ ಸಹಾಯ ಧನವನ್ನು ೨ ರಿಂದ ೩ ಲಕ್ಷಕ್ಕೆ ಏರಿಸಿದ್ದರೂ ೨ ಲಕ್ಷವೇ ಎಂದು ಹೇಳುತ್ತಿದ್ದಾರೆ. ರೈತರು ಇಂತಹ ಸಮಸ್ಯೆಗಳನ್ನು ತಕ್ಷಣವೇ ಬಗೆಹರಿಸಬೇಕೆಂದು ಆಗ್ರಹಿಸಿದರು.[೧೦೫]

ಪ್ರತಿಭಟನೆಯಲ್ಲಿ ರೈತ ಸಂಘದ ಜಿಲ್ಲಾ ಪ್ರಧಾನ ಕಾರ್ಯದರ್ಶಿ ರವಿಕುಮಾರ್, ಪ್ರಭಾಕರ್ ರೈತ ಸಂಘ ಗೌರವಾಧ್ಯಕ್ಷ ಮಲ್ಲಿಗೆರೆ ಪ್ರಕಾಶ್, ಮಲ್ಲಿಗೇನಹಳ್ಳಿ ಹನುಮಂತಪ್ಪ, ಲೋಕೇಶ್‌ನಾಯ್ಕ್ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ದಲ್ಲಾಲಿಗಳ ವಿರುದ್ಧ ಹೂವು ಬೆಳೆಗಾರರ ಪ್ರತಿಭಟನೆ:- ೨೮/೧೨/೨೦೧೭**

ದಾವಣಗೆರೆ ನಗರದಲ್ಲಿ ಕನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ನೂರಾರು ಹೂವು ಬೆಳೆಗಾರರು, ದಲ್ಲಾಳಿಗಳು ನಗರದ ಮೂರು ಕಡೆ ಹೂವಿನ ಮಾರುಕಟ್ಟೆ ಸೃಷ್ಟಿಸಿರುವ ಕಾರಣ ರೈತರಿಗೆ ಸೂಕ್ತ ದರ ದೊರೆಯುತ್ತಿಲ್ಲವೆಂದು ಆರೋಪಿಸಿ ಡಿಸೆಂಬರ್ ೦೧ ೨೦೧೭ರಂದು ಎ.ಪಿ.ಎಂ.ಸಿ. ಕಚೇರಿಯ ಎದುರು ಪ್ರತಿಭಟನೆ ಮಾಡಿದರು.

ಈಗಾಗಲೇ ಹೊಸ ಬಸ್ ನಿಲ್ದಾಣದ ಎದುರು ಎ.ಪಿ.ಎಂ.ಸಿ. ಪುಷ್ಪ ಹರಾಜು ಕೇಂದ್ರ ನಿರ್ಮಾಣ ಮಾಡಿದ್ದು, ಹೂವಿನ ವ್ಯಾಪಾರಕ್ಕೆ ಸೂಕ್ತ ಜಾಗವಾಗಿದೆ. ವರ್ತಕರು ನಗರದ ಹಳೆ ಬಸ್ಟಾಂಡ್, ಹೊಸ ಬಸ್ ನಿಲ್ದಾಣ, ಭರತ್ ಕಾಲೋನಿಯಲ್ಲಿರುವ ಪುಷ್ಪ ಹರಾಜು ಕೇಂದ್ರದಲ್ಲಿ ಹೂವಿನ ಮಾರಾಟ ಮಾಡುತ್ತಿದ್ದಾರೆ. ಕೆಲ ಕಡೆ ಕಡಿಮೆ ದರವಿದ್ದರೆ ಇನ್ನು ಕೆಲ ಕಡೆ ಹೆಚ್ಚಿನ ದರವಿದೆ. ಇದರಿಂದ ಹೂವುಗಳನ್ನು ಬೆಳೆದ ರೈತರಿಗೆ ನಷ್ಟವಾಗುತ್ತದೆ ಎಂದು ತಮ್ಮ ಅಳಲು ತೋಡಿಕೊಂಡು ಆಗ್ರಹಿಸಿದರು.

ಎ.ಪಿ.ಎಂ.ಸಿ.ಯಲ್ಲಿಯೇ ಹೂವುಗಳನ್ನು ಮಾರಾಟ ಮಾಡಬೇಕು. ಇಲ್ಲಿ ಎಲ್ಲಾ ಸೌಲಭ್ಯಗಳಿದ್ದು, ಒಟ್ಟು ೫೨ ಮಳಿಗೆಗಳಿವೆ. ವರ್ತಕರಿಗೆ ಇನ್ನೂ ಮಳಿಗೆಗಳು ಬೇಕಾದರೆ ಕಟ್ಟಿಕೊಡಿ. ಎ.ಪಿ.ಎಂ.ಸಿ. ಅಧ್ಯಕ್ಷರು ಈ ಬಗ್ಗೆ ಸೂಚನೆ ನೀಡಿ ಮೂಲ ಸೌಲಭ್ಯ ಒದಗಿಸಬೇಕು. ಹೆಣ್ಣು ಮಕ್ಕಳು ಸಂಜೆಯ ವೇಳೆಯಲ್ಲಿ ಹೂವು ಖರೀದಿಸಲು ಇಲ್ಲಿಗೆ ಬರಲು ಹೆದರುತ್ತಿದ್ದಾರೆ ಹಾಗಾಗಿ ಅವರಿಗೆ ಸೂಕ್ತ ರಕ್ಷಣೆ ನೀಡಬೇಕೆಂದು ಪ್ರತಿಭಟಿಸಿದರು. ತೋಟಗಾರಿಕೆ ಇಲಾಖೆಯಿಂದ

ನಾಲ್ಕು ಕೋಟಿ ವೆಚ್ಚದಲ್ಲಿ ಮಳಿಗೆಗಳನ್ನು ಕಟ್ಟಲಾಗಿದೆ. ಇಲ್ಲಿ ಹೂವು ಮಾರಾಟ ಮಾಡಿದರೆ ರೈತರಿಗೆ ನಷ್ಟವಾಗುವದಿಲ್ಲ. ತರಕಾರಿ ವ್ಯಾಪಾರಿಗಳು ಸೇರಿದಂತೆ ಇತರರು, ಎ.ಪಿ.ಎಂ.ಸಿ. ಮಾರುಕಟ್ಟೆಗೆ ಬರುತ್ತಿದ್ದು, ಇವರ ಜೊತೆ ಹೂವಿನ ವ್ಯಾಪಾರಿಗಳು ಬರುತ್ತಾರೆ. ಜೊತೆಗೆ ಗ್ರಾಹಕರು ಬರುತ್ತಾರೆ. ಮುಂದಿನ ದಿನಗಳಲ್ಲಿ ಎ.ಪಿ.ಎಂ.ಸಿ. ಅಧ್ಯಕ್ಷರು ಸೂಕ್ತ ಕ್ರಮ ತೆಗೆದುಕೊಳ್ಳದಿದ್ದರೆ ಉಗ್ರ ಪ್ರತಿಭಟನೆ ಮಾಡವುದಾಗಿ ರೈತರು ಎಚ್ಚರಿಕೆ ನೀಡಿದರು.

ಪ್ರತಿಭಟನೆಯಲ್ಲಿ ರೈತರಾದ ವೀರಣ್ಣ, ಕಂಬತ್ತಹಳ್ಳಿ ರೇವಣಸಿದ್ದಪ್ಪ, ಕುಮಾರಪ್ಪ, ವೀರಣ್ಣ, ಮಂಜುನಾಥ್ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ದಾವಣಗೆರೆ ನಗರದಲ್ಲಿ ಟೊಮಟೋ ನೆಲಕ್ಕೆ ಸುರಿದು ರೈತರ ಪ್ರತಿಭಟನೆ:–**

**೧೮/೦೧/೨೦೧೮**

ದಾವಣಗೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ರಾಜಾಧ್ಯಕ್ಷರಾದ ಹುಚ್ಚವನಹಳ್ಳಿ ಮಂಜುನಾಥ್‌ರವರ ನೇತೃತ್ವದಲ್ಲಿ ನೂರಾರು ಟೊಮಟೋ ಬೆಳೆಗಾರರು, ಬೆಲೆ ಕುಸಿತದಿಂದ ಬೇಸೆತ್ತು ಟೊಮಟೋವನ್ನು ನೆಲಕ್ಕೆ ಸುರಿದು ಜನವರಿ ೧೮ ೨೦೧೮ರ ಗುರುವಾರದಂದು ಸರ್ಕಾರದ ವಿರುದ್ಧ ಪ್ರತಿಭಟನೆ ಮಾಡಿದರು.

ಎರಡು ತಿಂಗಳ ಹಿಂದೆ ಕೆ.ಜಿ. ಟೊಮಟೋ ಹಣ್ಣಿನ ಬೆಲೆ ೨೦ ರಿಂದ ೨೫ ರೂ. ಗಳಷ್ಟಿತ್ತು ಈಗ ಕೇವಲ ೨ ರಿಂದ ೩ರೂಗಳಿಗೆ ಕುಸಿದಿದೆ. ಈ ಬೆಳೆಯಿಂದ ನಾಲ್ಕು ಕಾಸು ಕಾಣಲು ಶ್ರಮಪಟ್ಟಿದ್ದ ರೈತರಿಗೆ ನಿರಾಸೆಯಾಗಿದೆ. ಕೊಳ್ಳುವ ಗ್ರಾಹಕರಿಗೆ ಖುಷಿಯಾಗಿದೆ. ೨೦ ದಿನಗಳ ಹಿಂದೆ ೨೫ ಕೆ.ಜಿ.ಯ ಬಾಕ್ಸ್ ಒಂದಕ್ಕೆ ೫೦೦ ರಿಂದ ೬೫೦ ರೂವಿತ್ತು. ಮುಂದೆ ಒಳ್ಳೆಯ ಬೆಲೆ ಸಿಗಬಹುದೆಂದು ಹೆಚ್ಚಿನ ರೈತರು ಬೆಳೆದಿದ್ದಾರೆ. ಇಳುವರಿಯೂ ಕೂಡ ಉತ್ತಮವಾಗಿದೆ. ಆದರೆ ಸೂಕ್ತ ಬೆಲೆ ಇಲ್ಲದೇ ಕಂಗಾಲಾಗಿದ್ದಾರೆ. ನ್ಯಾಮತಿ ಭಾಗದಲ್ಲಿ ೧೯೩೧ ಎಕರೆ ಪ್ರದೇಶದಲ್ಲಿ ಬೆಳೆ ಬೆಳೆಯಲಾಗಿದೆ. ಈ ಭಾಗದಿಂದ ಪ್ರತಿದಿನ ೩೦ ರಿಂದ ೩೫ ಟನ್ ಬೆಳೆ ಬರುತ್ತಿದ್ದು, ಬಾಕ್ಸ್ ಒಂದಕ್ಕೆ ಕೇವಲ ೫೦೦ ರೂ ಇದೆ. ಅಂತರ್ಜಲ ಕುಸಿತ, ನೀರಿನ ಸಮಸ್ಯೆ, ವಿದ್ಯುತ್ ಸಮಸ್ಯೆ, ಆಗಾಗ ಕಾಡುವ ರೋಗದ ಸಮಸ್ಯೆಗಳ ನಡುವೆಯೇ ಬೆಳೆ ಬೆಳೆಯಲು ಮುಂದಾದರೆ, ಈಗ ಬೆಲೆ ಕುಸಿತದಿಂದಾಗಿ ಗಾಯದ ಮೇಲೆ ಬರೆ ಎಳೆದಂತಾಗಿದೆ. ಕೆಲ ರೈತರು ಕಡಿಮೆ ಬೆಲೆಗೆ ಮಾರಾಟ ಮಾಡಿದ್ದಾರೆ. ಕೆಲವರು ಹಾಕಿದ ಬಂಡವಾಳ ಬರದಿದ್ದಕ್ಕೆ ಬೇಸರಗೊಂಡು ರಸ್ತೆಯ ಬದಿಗೆ ಸುರಿಯುತ್ತಿದ್ದು, ಅಧಿಕ ನಷ್ಟವಾಗಿದೆ.

ಸರ್ಕಾರ ಮಧ್ಯ ಪ್ರವೇಶಿಸಿ ರೈತರಿಗೆ ಬೆಲೆ ಸಿಗುವಂತೆ ಮಾಡಬೇಕೆಂದು ಒತ್ತಾಯಿಸಿ ಎ.ಪಿ.ಎಂ.ಸಿ. ಕಛೇರಿಯ ಬಳಿ ಟೊಮಟೋ ಸುರಿದು ಪ್ರತಿಭಟನೆ ಮಾಡಿದರು. ಬೆಲೆ ಕುಸಿದಿರುವದರಿಂದ ರೈತರು ನಷ್ಟಕ್ಕೆ ಸಿಲುಕಿದ್ದಾರೆ. ಹಾಕಿದ ಬಂಡವಾಳ ಕೂಡ ವಾಪಸ್ಸು ಬರುತ್ತಿಲ್ಲ. ಹಣ್ಣು ಬಿಡಿಸುವ ಕೂಲಿ, ಮಾರುಕಟ್ಟೆಗೆ ತರುವ ಖರ್ಚಾದರೂ ಉಳಿಯಲಿ ಎಂದು ಅನೇಕ ರೈತರು ಬೆಳೆಯನ್ನು ಹೊಲದಲ್ಲಿಯೇ ಬಿಟ್ಟಿದ್ದಾರೆ. ಸರಕಾರ ಕೂಡಲೇ ಖರೀದಿ ಕೇಂದ್ರ

ಆರಂಭಿಸಿ ಬೆಂಬಲ ಬೆಲೆ ನೀಡಬೇಕು. ಸರ್ಕಾರ ಈ ಬಜೆಟ್‌ನಲ್ಲಿ ದಾವಣಗೆರೆಯಲ್ಲಿ ಒಂದು ಶೀತಲೀಕರಣ ಘಟಕ ಸ್ಥಾಪಿಸಲು ಅನುದಾನ ಮೀಸಲಿಡಬೇಕು. ಬೆಲೆ ಕುಸಿತವಾದಾಗ ರೈತರ ಟೊಮಟೋ ಬೆಳೆಯನ್ನು ಶೀತಲೀಕರಣದಲ್ಲಿ ದಾಸ್ತಾನು ಮಾಡಿ, ಬೆಲೆ ಬಂದಾಗ ಮಾರಾಟ ಮಾಡಲು ಅನುಕೂಲ ಮಾಡಿಕೊಡಬೇಕೆಂದು ಆಗ್ರಹಿಸಿದರು.[೧೦೬]

ಪ್ರತಿಭಟನೆಯಲ್ಲಿ ಹುಚ್ಚವನಹಳ್ಳಿ ಮಂಜುನಾಥ್, ರೈತ ಮುಖಂಡರಾದ ಬಸವರಾಜ್, ಪರಶುರಾಮ್, ಪ್ರಕಾಶ್, ರವಿ, ಬಸಣ್ಣ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ನಿರಂತರ ವಿದ್ಯುತ್‌ಗಾಗಿ ರೈತರ ಪ್ರತಿಭಟನೆ:– ೧೯/೦೧/೨೦೧೮.**

ಹರಪನಹಳ್ಳಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಯ ವತಿಯಿಂದ ನೂರಾರು ರೈತರ ನೇತೃತ್ವದಲ್ಲಿ ಪಂಪ್‌ಸೆಟ್‌ಗಳಿಗೆ ನಿರಂತರವಾಗಿ ಗುಣಮಟ್ಟದ ವಿದ್ಯುತ್‌ಗಾಗಿ ಆಗ್ರಹಿಸಿ ಬೆಸ್ಕಾಂ ಕಚೇರಿಯ ಎದುರು ಜನವರಿ ೧೯ ೨೦೧೮ರಂದು ಪ್ರತಿಭಟನೆ ಮಾಡಿದರು.

ಹಳ್ಳಿಕೇರಿ ಗ್ರಾಮದಲ್ಲಿ ಅತೀ ಹೆಚ್ಚು ಬೋರ್‌ವೆಲ್‌ಗಳಿವೆ, ಸಮರ್ಪಕವಾಗಿ ಗುಣಮಟ್ಟದ ವಿದ್ಯುತ್ ದೊರೆಯದೆ ರೈತರು ತಮ್ಮ ಜಮೀನುಗಳಲ್ಲಿ ಹಾಕಿದ ಬೆಳೆ ಹಾಳಾಗಿದ್ದು ಸಂಕಷ್ಟಕ್ಕೆ ಈಡಾಗಿದ್ದಾರೆ. ವಿದ್ಯುತ್ ವ್ಯತ್ಯಾಸದಿಂದಾಗಿ ಪಂಪ್‌ಸೆಟ್‌ಗಳು ಸುಟ್ಟು ಹೋಗಿವೆ, ಈ ಬಗ್ಗೆ ಇಲಾಖೆಯ ಅಧಿಕಾರಿಗಳಿಗೆ ಮನವಿ ಸಲ್ಲಿಸಿದರೂ ಸಮರ್ಪಕವಾಗಿ ವಿದ್ಯುತ್ ನೀಡುತ್ತಿಲ್ಲವೆಂದು ದೂರಿದರು.

ರೈತ ಮುಖಂಡರಾದ ರಾಜಪ್ಪ ಮಾತನಾಡಿ, ಈಗ ೧೬೦ ರಿಂದ ೨೦೦ ವ್ಯಾಟ್‌ನೊಳಗೆ ವಿದ್ಯುತ್ ಸಿಗುತ್ತಿದ್ದು, ಇದು ರೈತರ ಪಂಪ್‌ಸೆಟ್‌ಗಳಿಗೆ ಸಾಕಾಗುವುದಿಲ್ಲ. ಬದಲಿಗೆ ೪೦೦ ವ್ಯಾಟ್ ವಿದ್ಯುತ್ ಸರಬರಾಜು ಮಾಡಬೇಕು. ಕೂಡಲೇ ಎರಡು ದಿನದಲ್ಲಿ ಗ್ರಾಮದ ರೈತರಿಗೆ ದಿನದ ೬ ತಾಸು ವಿದ್ಯುತ್ ಸರಬರಾಜು ಮಾಡುವಂತೆ ಒತ್ತಾಯಿಸಿ ಅಧಿಕಾರಿಗಳಿಗೆ ಮನವಿ ಸಲ್ಲಿಸಿದರು. ಮನವಿ ಸ್ವೀಕರಿಸಿದ ಬೆಸ್ಕಾಂ ಎ.ಇ.ಇ. ಭೀಮಪ್ಪ ಮಾತನಾಡಿ ಈ ಭಾಗದಲ್ಲಿ ಓವರ್‌ಲೋಡ್ ಆಗಿ ಲೈನ್ ಕಟ್ಟಾಗಿದೆ ಆದರೂ ಸಮರ್ಪಕವಾಗಿ ವಿದ್ಯುತ್ ನೀಡಲಾಗುತ್ತಿದೆ. ಎರಡು ದಿನದಲ್ಲಿ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಿ ಸರಿಪಡಿಸುವುದಾಗಿ ತಿಳಿಸಿದರು.[೧೦೭]

ಪ್ರತಿಭಟನೆಯಲ್ಲಿ ರೈತ ಮುಖಂಡರಾದ ಶೇಖರಪ್ಪ, ಎಲ್.ರವಿ, ನಾಗರಾಜಪ್ಪ, ಪರಸಪ್ಪ, ಮಂಜಪ್ಪ, ಮಲ್ಲಿಕಾರ್ಜುನ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಬಗರ್‌ಹುಕುಂ ಮತ್ತು ಅರಣ್ಯ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡುವಂತೆ ಒತ್ತಾಯಿಸ ರೈತ ಪ್ರತಿಭಟನೆ:–೨೪/೦೧/೨೦೧೮**

ಚನ್ನಗಿರಿ ಪಟ್ಟಣದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರುಸೇನೆಯ ವತಿಯಿಂದ ನೂರಾರು ರೈತರು, ಬಗರ್ ಹುಕುಂ ಮತ್ತು ಅರಣ್ಯ ಭೂಮಿ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡುವಂತೆ ಒತ್ತಾಯಿಸಿ, ಜನವರಿ ೨೪ ೨೦೧೮ರಂದು ಪ್ರತಿಭಟನೆ ಮಾಡಿದರು.

ಪಟ್ಟಣಾದಾದ್ಯಂತ ಪ್ರತಿಭಟನಾ ಮೆರವಣಿಗೆ ಕೈಗೊಂಡು ತಾಲೂಕು ಕಚೇರಿಗೆ ತೆರಳಿ ಪ್ರತಿಭಟನೆಯನ್ನು ಮುಂದುವರೆಸಿದರು. ಆ ಸಮಯದಲ್ಲಿ ತಾಲೂಕು ಘಟಕದ ಅಧ್ಯಕ್ಷ ಪೀರಾನಾಯ್ಕ್ ಮಾತನಾಡಿ, ಸರಕಾರ ಬಗರ್ ಹುಕುಂ, ಅರಣ್ಯ ಭೂಮಿ ಸಾಗುವಳಿದಾರರಿಗೆ ಹಕ್ಕು ಪತ್ರ ನೀಡುವಂತೆ ಅಧಿಕಾರಿಗಳಿಗೆ ಸೂಚನೆಯನ್ನು ನೀಡಿದ್ದರೂ ನಿರ್ಲಕ್ಷ ತೋರುತ್ತಿದ್ದಾರೆ. ತಾಲೂಕಿನ ಅತಿ ದೊಡ್ಡ ಹೋಬಳಿ ಬಸವಪಟ್ಟಣವಾಗಿದ್ದು ಹೆಚ್ಚು ಸಾಗುವಳಿದಾರರಿದ್ದಾರೆ. ತಾಲೂಕು ಬಗರ್ ಹುಕುಂ ಸಮಿತಿಯಲ್ಲಿ ೫೦ ಅರ್ಜಿಗಳನ್ನು ಸರ್ವೇ ಮಾಡಲಾಗಿದೆ. ಉಳಿದ ಅರ್ಜಿಗಳ ಸರ್ವೇ ಮಾಡಿಸಿ ಹಕ್ಕು ಪತ್ರ ವಿತರಣೆ ಮಾಡಬೇಕು. ಬಸವಪಟ್ಟಣದ ಹೋಬಳಿಯಲ್ಲಿ ಪ್ರಾರಂಭ ಮಾಡಲಿರುವ ಪವನ ವಿದ್ಯುತ್ ಯೋಜನೆ ಸ್ಥಗಿತಗೊಳಿಸಬೇಕೆಂದು ಒತ್ತಾಯಿಸಿ ತಹಶೀಲ್ದಾರ್‌ರವರಿಗೆ ಮನವಿ ಸಲ್ಲಿಸಿದರು.

ಪ್ರತಿಭಟನೆಯಲ್ಲಿ ತಾಲೂಕು ರೈತ ಸಂಘದ ಗೌರವಾಧ್ಯಕ್ಷ ಮಲ್ಲಿಗೆರೆ ಪ್ರಕಾಶ್, ರವಿಕುಮಾರ್, ಉಮ್ಮೇಶ್, ಶರಣಪ್ಪ ಮೂಡಲಗಿರಿಯಪ್ಪ, ನಾಗರಾಜ್, ವೆಂಕಟೇಶ್‌ನಾಯ್ಕ ಮುಂತಾದ ರೈತರು ಪಾಲ್ಗೊಂಡಿದ್ದರು.

**೬.೩ ಬಳ್ಳಾರಿ ಜಿಲ್ಲೆಯ ರೈತ ಪ್ರತಿಭಟನೆಗಳು**

**ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಆಗ್ರಹಿಸಿ ರೈತ ಪ್ರತಿಭಟನೆ:– ೦೨/೦೫/೨೦೧೫**

ಬಳ್ಳಾರಿ ಜಿಲ್ಲಾ ಪಂಚಾಯಿತಿ ನಜೀರ್ ಸಭಾಂಗಣದಲ್ಲಿ ಸೋಮವಾರ ಏರ್ಪಡಿಸಿದ್ದ ಬರ ನಿರ್ವಹಣೆ ಪ್ರಗತಿ ಪರಿಶೀಲನೆ ಸಭೆಗೆ ಹಾಜರಾಗಲು ಮುಖ್ಯಮಂತ್ರಿ ಸಿದ್ದರಾಮಯ್ಯರವರು ಬಂದಿದ್ದರು. ಈ ಸಮಯದಲ್ಲಿ ರೈತ ಸಂಘ ಸೇರಿದಂತೆ ವಿವಿಧ ಸಂಘಟನೆಗಳು ಪ್ರತಿಭಟನೆ ಮಾಡಿ ಮನವಿ ಸಲ್ಲಿಸಿದರು.

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಜಿಲ್ಲಾ ಘಟಕದ ಕಾರ್ಯಾಧ್ಯಕ್ಷ ಪುರುಷೋತ್ತಮಗೌಡ ನೇತೃತ್ವದಲ್ಲಿ ನೂರಾರು ರೈತರು ತುಂಗಾಭದ್ರಾ ಜಲಾಶಯದ ಹೂಳೆತ್ತಲು ಸೂಕ್ತ ಕ್ರಮಕೈಗೊಳ್ಳಬೇಕೆಂದು ಒತ್ತಾಯಿಸಿದರು. ಪ್ರತಿವರ್ಷ ಈ ಜಲಾಶಯದಲ್ಲಿ ೦.೫ ಟಿ.ಎಂ.ಸಿ.ಅಡಿಯಷ್ಟು ಹೂಳು ಸಂಗ್ರಹಣೆಯಾಗುತ್ತಿದೆ. ಈಗಾಗಲೇ ೩೩ ಟಿ.ಎಂ.ಸಿ.ಅಡಿ ಹೂಳು ತುಂಬಿದೆ. ಇದರಿಂದಾಗಿ ಜಲಾಶಯದ ನೀರಿನ ಸಂಗ್ರಹಣೆ ಕಡಿಮೆಯಾಗುತ್ತಿದೆ. ಕರ್ನಾಟಕ, ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳ ಹನ್ನೊಂದು ಲಕ್ಷ ಹೆಕ್ಟೇರ್ ಪ್ರದೇಶಗಳಿಗೆ ನೀರುಣಿಸುವ ಹಾಗೂ ಆರು ಜಿಲ್ಲೆಗಳಿಗೆ ಕುಡಿಯುವ ನೀರು ಪೂರೈಕೆ ಮಾಡುವ ಅತೀ ದೊಡ್ಡ ಜಲಾಶಯ ಇದಾಗಿದೆ, ಎಂದು ವಿವರಿಸಿದರು. ಮೂರು ರಾಜ್ಯದ ಮುಖ್ಯಮಂತ್ರಿಗಳು ಒಗ್ಗೂಡಿ ಸಭೆಯನ್ನು ಕರೆಯಬೇಕು. ತಜ್ಞರ ಸಮಿತಿಯನ್ನು ರಚನೆ ಮಾಡಬೇಕು. ಜಲಾಶಯದಲ್ಲಿ ಹೂಳೆತ್ತುವ ಕಾರ್ಯ ಸೇರಿದಂತೆ ಸಮಾನಾಂತರ ಜಲಾಶಯ ನಿರ್ಮಾಣ ಕುರಿತು ಸುದೀರ್ಘವಾಗಿ ಚರ್ಚಿಸಬೇಕೆಂದು ಮುಖ್ಯಮಂತ್ರಿಯಲ್ಲಿ ಕೋರಿದರು.

ತಾಲೂಕಿನ ಹಗರಿ ಗ್ರಾಮದ ಬಳಿ ಕೃಷಿ ಪದವಿ ಕಾಲೇಜು ಸ್ಥಾಪನೆ ಮಾಡಬೇಕೆಂದು ಆಗ್ರಹಿಸಿದರು. ಬರ ನಿರ್ವಹಣೆಯಲ್ಲಿ ಕೃಷಿ ಕಾಲೇಜು ಪ್ರಮುಖ ಪಾತ್ರವಹಿಸಲಿದೆ, ಕಡಿಮೆ ಮಳೆಯಾಗುವ ಪ್ರದೇಶದಲ್ಲಿ ಕೃಷಿ ಚಟುವಟಿಕೆ ಬಗ್ಗೆ ಸಂಶೋಧನೆ ನಡೆಸಲು ಮುಂದಾಗಿರುವ ಹಗರಿ ಸಂಶೋಧನಾ ಕೇಂದ್ರದ ಕಾರ್ಯ ಶ್ಲಾಘನೀಯವಾದುದು. ಇದರಿಂದ ಒಣ ಬೇಸಾಯ ಪದ್ಧತಿಗೂ ಸಹಕಾರಿಯಾಗಲಿದೆ ಎಂದು ವಿವರಿಸಿದರು. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಕೃಷಿ ಕಾಲೇಜು ಸ್ಥಾಪಿಸಬೇಕು. ಇದು ಕೃಷಿ ಚಟುವಟಿಕೆಯುತ್ತ ಯುವಕರ ಗಮನ ಸೆಳೆಯಲು ಸಹಕಾರಿಯಾಗಲಿದೆ. ಆದ್ದರಿಂದ ಕೃಷಿ ಕಾಲೇಜು ಸ್ಥಾಪನೆಗೆ ರಾಜ್ಯ ಸರ್ಕಾರ ಸೂಕ್ತ ಕ್ರಮ ಜರುಗಿಸಬೇಕೆಂದು ಆಗ್ರಹಿಸಿದರು.[೧೦೮]

ಪ್ರತಿಭಟನೆಯಲ್ಲಿ ಚಂದ್ರಶೇಖರಗೌಡ, ಜಾಲಿಹಾಳ್ ಶ್ರೀಧರ್‌ಗೌಡ, ಗಂಗಾವತಿ ವಿರೇಶ್, ಶರಣನಗೌಡ, ಗೌರಿಶಂಕರ, ಮುದ್ದನಗೌಡ, ಜಾಲಿಹಾಳ್ ಬಸವರಾಜಗೌಡ ಮುಂತಾದ ನೂರಾರುರೈತರು ಭಾಗವಹಿಸಿದ್ದರು.

**ಬಾಳೆ ಬೆಳೆ ನಷ್ಟ ಪರಿಹಾರಕ್ಕೆ ಆಗ್ರಹಿಸಿ ರೈತರ ಪ್ರತಿಭಟನೆ:- ೦೭/೦೫/೨೦೧೬**

ಹೊಸಪೇಟೆ ತಾಲೂಕಿನ ಕಂಪ್ಲಿ ಹೋಬಳಿ ಸೇರಿದಂತೆ ಸುತ್ತಲಿನ ಕೆಲ ಹಳ್ಳಿಗಳಲ್ಲಿ ಮೇ ೫ರ ರಾತ್ರಿ ಬಿರುಗಾಳಿ ಮತ್ತು ಮಳೆಗೆ ಬಾಳೆ ಬೆಳೆ ಸಂಪೂರ್ಣ ಹಾಳಾಗಿದೆ. ಸರ್ಕಾರ ಸಮೀಕ್ಷೆ ನಡೆಸಿ ರೈತರಿಗೆ ಕೂಡಲೇ ನಷ್ಟ ಪರಿಹಾರ ವಿತರಿಸುವಂತೆ ಆಗ್ರಹಿಸಿ, ಉತ್ತರ ಕರ್ನಾಟಕ ಪ್ರದೇಶ ರೈತ ಸಂಘದ ಪದಾಧಿಕಾರಿಗಳು ಮುಖ್ಯಮಂತ್ರಿಗಳಿಗೆ ಬರೆದ ಮನವಿ ಪತ್ರವನ್ನು ಶನಿವಾರ ಉಪತಹಶೀಲ್ದಾರ್ ಅವರಿಗೆ ಸಲ್ಲಿಸಿದರು.

ರೈತ ಸಂಘದ ರಾಜ್ಯ ಘಟಕದ ಉಪಾಧ್ಯಕ್ಷ ಕಣವಿ ತಿಮ್ಮಲಾಪುರದ ಜಿ. ತಿಮ್ಮನಗೌಡ ಮಾತನಾಡಿ ಕಂಪ್ಲಿಕೋಟೆ, ಮಾಗಾಣಿ, ರಾಮಸಾಗರ, ಸಣಾಪುರ, ಬೆಳಗೋಡುಹಾಳು ಮತ್ತು ಮುದ್ದಾಪುರ ಗ್ರಾಮ ಸೇರಿದಂತೆ, ಇತರೆಡೆ ಸುಮಾರು ೧೦೦ ಎಕರೆ ಪ್ರದೇಶದಲ್ಲಿ ಬೆಳೆದ ಬಾಳೆ ಬೆಳೆ ಬಿರುಗಾಳಿ, ಮಳೆಗೆ ಸಂಪೂರ್ಣವಾಗಿ ಹಾಳಾಗಿದೆ. ರೈತರಿಗೆ ಪ್ರತಿ ಎಕರೆಗೆ ಒಂದು ಲಕ್ಷ ನಷ್ಟ ಉಂಟಾಗಿದ್ದು, ಕೂಡಲೇ ಸಮೀಕ್ಷೆ ನಡೆಸಿ ಪರಿಹಾರ ವಿತರಣೆಗೆ ಕ್ರಮ ತೆಗೆದುಕೊಳ್ಳುವಂತೆ ಒತ್ತಾಯಿಸಿದರು. ಒಂದು ವೇಳೆ ಉದಾಸೀನ ತೋರಿದಲ್ಲಿ ಜಿಲ್ಲಾಧಿಕಾರಿಗಳ ಕಛೇರಿಗೆ ಮುತ್ತಿಗೆ ಹಾಕಲಾಗುವುದೆಂದು ಎಚ್ಚರಿಸಿದರು.

ಮುಖ್ಯಮಂತ್ರಿ ಸಿದ್ದರಾಮಯ್ಯರವರಿಗೆ ಬರೆದ ಪತ್ರವನ್ನು ಉಪತಹಶೀಲ್ದಾರ್ ಬಿ.ರವೀಂದ್ರಕುಮಾರ್ ಅವರಿಗೆ ಸಲ್ಲಿಸಿದರು. ಪ್ರತಿಭಟನೆಯಲ್ಲಿ ಬಸವಲಿಂಗಪ್ಪ, ಕೃಷ್ಣಪ್ಪ, ರಾಜ್ಯರೈತ ಸಂಘ ಮತ್ತು ಹಸಿರು ಸೇನೆ ಘಟಕ ಅಧ್ಯಕ್ಷ ವಿ.ಟಿ. ನಾಗರಾಜು, ಬಸವರಾಜು ಇತರರು ಹಾಜರಿದ್ದರು.

**ಜಮೀನನ್ನು ಹಿಂದಿರುಗಿಸುವಂತೆ ಆಗ್ರಹಿಸಿ ರೈತ ಸಂಘದ ಪ್ರತಿಭಟನೆ: ೧೫/೦೫/೨೦೧೬**

ಬಳ್ಳಾರಿ ಜಿಲ್ಲೆಯಲ್ಲಿ ಉದ್ದೇಶಿತ ಉಕ್ಕು ಕಾರ್ಖಾನೆ ಸ್ಥಾಪಿಸಿದ ಆರ್ಸೆಲರ್ ಮಿತ್ತಲ್, ಬ್ರಹ್ಮಿಣಿ ಸ್ಟೀಲ್ಸ್ ಕಂಪನಿಗಳು ವಶಪಡಿಸಿಕೊಂಡಿರುವ, ಸಾವಿರಾರು ಎಕರೆ ಭೂಮಿಯನ್ನು ರಾಜ್ಯ ಸರ್ಕಾರ ಹಿಂಪಡೆಯಬೇಕೆಂದು ಭೂಸಂತ್ರಸ್ತರ ಹೋರಾಟ ಸಮಿತಿ ಆಗ್ರಹಿಸಿದೆ.

ಭೂಸಂತ್ರಸ್ತರ ಸಮಿತಿಯ ಸಂಚಾಲಕರಾದ ಯು.ಬಸವರಾಜ್ ಪ್ರತಿಭಟನೆ ಉದ್ದೇಶಿಸಿ ಮಾತನಾಡಿ, ತಾಲೂಕಿನ ಕುಡಿತಿನಿ, ಹರಗಿನಡೋಣಿ, ವೇಣಿ ವೀರಾಪುರ ಮತ್ತು ಕೊಳಗಲ್ಲು ಗ್ರಾಮಗಳ ಸುತ್ತ ಅಂದಾಜು ೧೦,೫೦೦ ಎಕರೆ ಭೂಮಿಯನ್ನು ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಳಿ ಮೂಲಕ ವಶಪಡಿಸಿಕೊಳ್ಳಲಾಗಿದೆ. ಆದರೆ ಆರು ವರ್ಷವಾದರೂ ಕಾರ್ಖನೆ ಸ್ಥಾಪಿಸಿಲ್ಲ. ೨೦೧೩ರ ಭೂಸ್ವಾಧೀನ ಕಾಯ್ದೆಯ ಪ್ರಕಾರ ಆ ಭೂಮಿಯನ್ನು ಹಿಂಪಡೆಯುವ ಹಕ್ಕು ರಾಜ್ಯ ಸರ್ಕಾರಕ್ಕಿದೆ ಎಂದರು. ಈ ಕಂಪನಿಗಳ ಮಾಲೀಕರು ರಾಜಕೀಯ ಪ್ರಭಾವ ಬಳಸಿಕೊಂಡು ಅತ್ಯಂತ ಕಡಿಮೆ ಹಣ ನೀಡಿ ಬಲವಂತವಾಗಿ ರೈತರಿಂದ ಜಮೀನನ್ನು ವಶಪಡಿಸಿಕೊಂಡಿದ್ದಾರೆ. ಇದರಿಂದ ೪,೫೦೦ ರೂ.ಕೋಟಿಯಷ್ಟು ಅಧಿಕಾರಿ ವರ್ಗ ಸೇರಿದಂತೆ ಇತರರು ವಂಚನೆ ಮಾಡಿದ್ದಾರೆ. ಈ ಸಂಬಂಧ ನ್ಯಾಯಾಂಗ ತನಿಖೆ ನಡೆಸಬೇಕೆಂದು ಪ್ರತಿಭಟನೆ ನಡೆಸಿದರು.

ಭೂಸ್ವಾಧೀನ ಕಾಯ್ದೆಯ ಪ್ರಕಾರ ಐದು ವರ್ಷದ ಒಳಗೆ ಉದ್ದೇಶಿತ ಕಾರ್ಖನೆ ಸ್ಥಾಪನೆ ಮಾಡಬೇಕು ಎಂಬ ನಿಯಮವಿದೆಯಾದರೂ, ೬ ವರ್ಷಗಳಾದರೂ ಕಾರ್ಖನೆ ಸ್ಥಾಪಿಸಲು ಅ ಕಂಪನಿಗಳು ಮುಂದಾಗಿಲ್ಲ. ರೈತ ಕುಟುಂಬದ ಬಡ ಸದಸ್ಯರೊಬ್ಬರಿಗೆ ಉದ್ಯೋಗ ಅವಕಾಶ ನೀಡುವ ಭರವಸೆಯೂ ಈಡೇರಿಲ್ಲ. ಹೀಗಾಗಿ ಆ ಕುಟುಂಬಗಳ ಜೀವನ ನಿರ್ವಹಣೆಗೆ ಮಾಸಿಕ ತಲಾ ರೂ. ೨೦,೦೦೦/– ನಿರುದ್ಯೋಗ ಭತ್ಯೆ ನೀಡಬೇಕೆಂದು ಒತ್ತಾಯಿಸಿದರು. ಕಾರ್ಖನೆ ಸ್ಥಾಪನೆಗೆ ಜಮೀನು ನೀಡಿದ ೨,೫೦೦ಕ್ಕೂ ಹೆಚ್ಚಿನ ರೈತ ಕುಟುಂಬಗಳು, ಭೂಮಿಯ ದರ ನಿಗದಿಯಲ್ಲಿ ಮೋಸ ಹೋಗಿದ್ದಾರೆ. ಅಧಿಕಾರಿಗಳು ಕೆ.ಐ.ಎ.ಡಿ.ಯ ಉಕ್ಕು ಕಾರ್ಖನೆ ಮಾಲೀಕರೊಂದಿಗೆ ಶಾಮೀಲಾಗಿ ಬಲವಂತದಿಂದ ಭೂಸ್ವಾಧೀನ ಪ್ರಕ್ರಿಯೆ ನಡೆಸಿ, ಎಕರೆಗೆ ತಲಾ ೫ರೂ. ರಿಂದ ೧೬ರೂ. ಲಕ್ಷ ನಿಗದಿ ಮಾಡಿ ಲಕ್ಷಾಂತರ ಕೋಟಿ ವಂಚನೆ ಮಾಡಲಾಗಿದೆ ಎಂದು ಆರೋಪಿಸಿದರು. ಈ ವಿಷಯವಾಗಿ ನ್ಯಾಯ ಕೋರಿ ಬಳ್ಳಾರಿ ಜಿಲ್ಲಾ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿತ್ತು. ಪ್ರತಿ ಎಕರೆಗೆ ರೂ.೫೦ ಲಕ್ಷಕ್ಕೂ ಹೆಚ್ಚಿನ ದರ ನಿಗದಿಮಾಡಬೇಕೆಂದು ನ್ಯಾಯಲಯ ಇತ್ತೀಚೆಗೆ ಆದೇಶ ನೀಡಿದೆ. ಉಕ್ಕು ಕಾರ್ಖನೆ ಸ್ಥಾಪನೆಯ ಬದಲಿಗೆ ಸೋಲಾರ್ ಕಾರ್ಖನೆ ಸ್ಥಾಪಿಸುವುದಾಗಿ ಮಿತ್ತಲ್ ಸ್ಟೀಲ್ಸ್ ಕಂಪನಿಯು ಸರ್ಕಾರಕ್ಕೆ ಪ್ರಸ್ತಾವ ಸಲ್ಲಿಸಿದೆ. ಈ ಕಾರ್ಖನೆ ಸ್ಥಾಪನೆಯಿಂದ ಉದ್ಯೋಗ ಅವಕಾಶ ಸೃಷ್ಟಿಗೆ ಅಡೆತಡೆ ಉಂಟಾಗಲಿದೆ. ಇದರಿಂದಾಗಿ ಸರ್ಕಾರ ಅನುಮೋದನೆ ನಿಡಬಾರದೆಂದು ಆಗ್ರಹಿಸಿದರು.[೧೯೯] ಸೋಲಾರ್

ಕಾರ್ಖನೆ ಸ್ಥಾಪನೆ ಪ್ರಶ್ನಿಸಿ ಭೂಸಂತ್ರಸ್ತರು ಹೈಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಶೀಘ್ರದಲ್ಲೇ ಸಲ್ಲಿಸಲು ನಿರ್ಧಾರಿಸಿದ್ದಾರೆ, ಎಂದು ಎಚ್ಚರಿಸಿದರು.

ಪ್ರತಿಭಟನೆಯಲ್ಲಿ ಪೋಲಪ್ಪ, ದೊಡ್ಡಬಸಪ್ಪ, ವೀರೇಶಗೌಡ, ವೆಂಕಟರಮಣ, ನಾಗರಾಜ, ಅಯ್ಯಪ್ಪ, ಬಸವರಾಜು ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ಹಕ್ಕು ಪತ್ರ ವಿತರಿಸಲು ರೈತ ಸಂಘದ ಪ್ರತಿಭಟನೆ:– ೧೯/೦೫/೨೦೧೬**

ಹಲವು ದಶಕಗಳಿಂದ ಬಳ್ಳಾರಿ ಜಿಲ್ಲೆಯ ಯಮ್ಮಿಗನೂರು ಗ್ರಾಮದ ಸರ್ಕಾರಿ ಭೂಮಿಯಲ್ಲಿ ಸಾಗುವಳಿ ಮಾಡುತ್ತಿರುವ ಬಡ ರೈತರಿಗೆ ಹಕ್ಕು ಪತ್ರ ವಿತರಿಸಬೇಕೆಂದು, ಕರ್ನಾಟಕ ಪ್ರಾಂತ ರೈತ ಸಂಘದ ಜಿಲ್ಲಾ ಘಟಕ, ಜಿಲ್ಲಾಧಿಕಾರಿ ಕಛೇರಿಗಳ ಮುಂದೆ ಪ್ರತಿಭಟನೆ ನಡೆಸಿ ಜಿಲ್ಲಾಧಿಕಾರಿಗೆ ಮನವಿ ಪತ್ರ ಸಲ್ಲಿಸಿದರು.

ಸೋಮಲಾಪುರ ಗ್ರಾಮದ ನೂರಾರು ರೈತರು ಹಲವು ವರ್ಷಗಳಿಂದ ಯಮ್ಮಿಗನೂರು ಗ್ರಾಮದ ಸರ್ಕಾರಿ ಭೂಮಿಯಲ್ಲಿ ಸಾಗುವಳಿ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಸಾವಿರಾರು ಕುಟುಂಬಗಳು ಈ ಭೂಮಿಯನ್ನೇ ನೆಚ್ಚಿಕೊಂಡಿದ್ದಾರೆ. ಕೂಡಲೇ ಅ ರೈತರಿಗೆ ಹಕ್ಕು ಪತ್ರ ವಿತರಿಸಬೇಕೆಂದು ಆಗ್ರಹಿಸಿದರು. ೧೯೯೮ ರಲ್ಲಿಯೇ ಬಳ್ಳಾರಿ ತಾಲೂಕಿನ ತಹಶೀಲ್ದಾರ್‌ರವರಿಗೆ ಹಕ್ಕು ಪತ್ರ ವಿತರಿಸುವಂತೆ ಕೋರಿ ೫೩೮ ಅರ್ಜಿಯ ನಮೂನೆಯನ್ನು ಸಲ್ಲಿಸಲಾಗಿದೆ. ಈವರೆಗೂ ಹಕ್ಕು ಪತ್ರ ವಿತರಣೆಗೆ ಅವರು ಕ್ರಮ ಕೈಗೊಂಡಿಲ್ಲ. ಬಡ ರೈತರು ಸಾಗುವಳಿ ಮಾಡುತ್ತಿದ್ದ ಭೂಮಿಯನ್ನು ಕೆಲವರು ಕಸಿದುಕೊಳ್ಳಲು ಮುಂದಾಗಿದ್ದಾರೆ. ಜಿಲ್ಲಾಡಳಿತ ಅದನ್ನು ತಡೆಯಬೇಕು ಹಾಗೂ ಶೀಘ್ರವೇ ಹಕ್ಕು ಪತ್ರ ನೀಡಬೇಕೆಂದು ಒತ್ತಾಯಿಸಿದರು.[೧೧೦] ಪ್ರತಿಭಟನೆಯಲ್ಲಿ ರೈತ ಸಂಘದ ಅಧ್ಯಕ್ಷ ವಿ.ಎಸ್. ಶಿವಶಂಕರ್ ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ಬೆಳೆ ಪರಿಹಾರ ವಿತರಣೆ ತಾರತಮ್ಯ : ರೈತರ ಪ್ರತಿಭಟನೆ:– ೨೬/೦೫/೨೦೧೬**

ಬೆಳೆ ಪರಿಹಾರ ವಿತರಣೆಯಲ್ಲಿ ತಾರತಮ್ಯ ಮಾಡಲಾಗಿದೆ ಎಂದು ಆರೋಪಿಸಿ ರೈತ ಸಂಘದ ನೂರಾರು ಸದಸ್ಯರು ಮೇ ೦೬ ೨೦೧೬ರ ಗುರುವಾರದಂದು ಹೂವಿನಹಡಗಲಿ ತಹಶೀಲ್ದಾರ್ ಕಛೇರಿಯ ಮುಂದೆ ಹೂವಿನಹಡಗಲಿಯಲ್ಲಿ ಪ್ರತಿಭಟನೆ ಮಾಡಿದರು.

ತಾಲೂಕಿನಲ್ಲಿ ಸರ್ಕಾರದ ಮಾರ್ಗಸೂಚಿ ಪ್ರಕಾರ ಬೆಳೆ ಪರಿಹಾರ ಹಂಚಿಕೆ ಮಾಡದೇ ಇರುವದರಿಂದ ರೈತರು ಸಂಕಷ್ಟಕ್ಕೆ ಸಿಲುಕಿದ್ದಾರೆ. ಸರ್ಕಾರದಿಂದ ಕೋಟ್ಯಾಂತರ ಹಣ ಬಿಡುಗಡೆಯಾಗಿದ್ದರೂ, ಸಮರ್ಪಕವಾಗಿ ವಿತರಣೆಯಾಗಿಲ್ಲವೆಂದು ರೈತರು ದೂರಿದರು. ರೈತ ಸಂಘದ ಜಿಲ್ಲಾ ಘಟಕದ ಉಪಾಧ್ಯಕ್ಷ ವಿ.ಬಿ. ಸೋಮಶೇಖರಪ್ಪನವರು ಪ್ರತಿಭಟನಾನಿರತ ರೈತರನ್ನು ಉದ್ದೇಶಿಸಿ ಮಾತನಾಡಿದರು, ಮುಂಗಾರು ವೈಫಲ್ಯದಿಂದಾಗಿ ಹಾಳಾಗಿರುವ ಬೆಳೆಗಳಿಗೆ ಸರ್ಕಾರ ಹೆಕ್ಟೇರ್‌ಗೆ ೬,೮೦೦/–ರೂ.ನಿಗದಿಪಡಿಸಿದೆ. ರೈತರ ಖಾತೆಗಳಿಗೆ ೧೦೦/– ರಿಂದ ೯,೦೦೦/–ರೂ. ರವರೆಗೆ ಪಾವತಿಸಿ, ರೈತರಲ್ಲೇ ತಾರತಮ್ಯ ಮಾಡಲಾಗಿದೆ ಎಂದು

ಆರೋಪಿಸಿದರು. ಕಂದಾಯ ಇಲಾಖೆ, ಕೃಷಿ ಇಲಾಖೆ, ತೋಟಗಾರಿಕೆ ಇಲಾಖೆಯಿಂದ ಜಂಟಿ ಸಮೀಕ್ಷೆ ಕಾರ್ಯವೂ ಸರಿಯಾಗಿ ನಡೆದಿಲ್ಲ. ದಾಖಲಾತಿಯ ನೆಪ ಹೇಳಿ ತಾಲೂಕಿನ ಅನೇಕ ರೈತರಿಗೆ ಇನ್ನೂ ಕೂಡ ಪರಿಹಾರ ನೀಡುತ್ತಿಲ್ಲ. ಕೂಡಲೇ ಎಲ್ಲಾ ಲೋಪದೋಷಗಳನ್ನು ಸರಿಪಡಿಸಿಕೊಂಡು ಸಮರ್ಪಕ ರೀತಿಯಲ್ಲಿ ಬೆಳೆ ಪರಿಹಾರ ನೀಡಬೇಕು. ಇಲ್ಲದಿದ್ದರೆ ಉಗ್ರ ಸ್ವರೂಪದ ಪ್ರತಿಭಟನೆ ನಡೆಸುವದಾಗಿ ಎಚ್ಚರಿಕೆ ನೀಡಿದರು.

ಹಸಿರು ಸೇನೆಯ ಯುವ ಘಟಕದ ಅಧ್ಯಕ್ಷ ಅನ್ವರ್ ಭಾಷಾ ಮಾತನಾಡಿ, ತಾಲೂಕು ಕಚೇರಿಯ ಪಹಣಿ ಕೇಂದ್ರಕ್ಕೆ ಜನರೇಟರ್ ವ್ಯವಸ್ಥೆಯೇ ಇಲ್ಲ. ಪದೇ ಪದೇ ವಿದ್ಯುತ್ ಕೈ ಕೊಡುವುದರಿಂದ ರೈತರು ಪಹಣಿಗಾಗಿ ಇಡೀ ದಿನ ಸರದಿ ಸಾಲಿನಲ್ಲಿ ನಿಲ್ಲುವಂತಾಗಿದೆ. ಬೆಳೆ ಪರಿಹಾರ ವಿತರಣೆಯಲ್ಲಿ ತಾರತಮ್ಯವಾಗಿದ್ದು ಸರಿಪಡಿಸುವಂತೆ ಒತ್ತಾಯಿಸಿ ಮನವಿ ಸಲ್ಲಿಸಿದರು. ಮನವಿ ಸ್ವೀಕರಿಸಿದ ತಹಶೀಲ್ದಾರ್ ಹೆಚ್. ವಿಶ್ವನಾಥ್ ಪ್ರತಿಕ್ರಿಯಿಸಿ ತಾಲೂಕಿನ ೩೧,೦೦೦ ರೈತರ ಬ್ಯಾಂಕ್ ಖಾತೆಗಳಿಗೆ ಈಗಾಗಲೇ ಹಣ ಜಮೆ ಮಾಡಲಾಗಿದೆ ಎಂದು ಹೇಳಿದರು.[೧೧೧]

ಪ್ರತಿಭಟನೆಯಲ್ಲಿ ತಾಲೂಕು ರೈತ ಸಂಘದ ಅಧ್ಯಕ್ಷ ಎಂ. ಗಂಗಾಧರ, ರೈತ ಮುಖಂಡರಾದ ಹರವಿಯ ಕೆ.ವಿ. ಸೊಪ್ಪಿನ, ಹರವಿ ಪಕ್ಕೀರಪ್ಪ, ರಹಿಮಾನ್, ಮಂಜುನಾಥ್, ಶಿವನಗೌಡ, ಅಂಕ್ಲಿಸಿದ್ದಪ್ಪ, ವೆಂಕಟೇಶಪ್ಪ ಮುಂತಾದ ನೂರಾರು ರೈತರು ಭಾಗವಹಿಸಿದ್ದರು.

**ಬೆಳೆ ಪರಿಹಾರಕ್ಕೆ ಆಗ್ರಹಿಸಿ ಕೂಡ್ಲಿಗಿ ರೈತರ ಪ್ರತಿಭಟನೆ:– ೩೦/೦೫/೨೦೧೬**

ಬೆಳೆ ನಷ್ಟ ಪರಿಹಾರದ ಹಣವನ್ನು ರೈತರಿಗೆ ಪಾವತಿಸಲು ಕಂದಾಯ ಇಲಾಖೆಯ ಅಧಿಕಾರಿಗಳು ಮತ್ತು ಸಂಬಂಧಿಸಿದ ಬ್ಯಾಂಕ್ ಸಿಬ್ಬಂದಿ ನಿರ್ಲಕ್ಷವಹಿಸಿದ್ದಾರೆ, ತಕ್ಷಣವೇ ಬೆಳೆನಷ್ಟ ಪರಿಹಾರದ ಮೊತ್ತವನ್ನು ರೈತರ ಖಾತೆಗಳಿಗೆ ಜಮಾ ಮಾಡಬೇಕೆಂದು ಒತ್ತಾಯಿಸಿ, ಮಂಗಳವಾರ ಕಾನಹೊಸಹಳ್ಳಿ ಹೋಬಳಿಯ ನೂರಾರು ರೈತರು ನಾಡ ಕಛೇರಿ ಮುಂದೆ ಧರಣಿ ನಡೆಸಿದರು.

ರೈತ ಮುಖಂಡರಾದ ಮಲ್ಲಿಕಾರ್ಜುನ ಮಾತನಾಡಿ, ಕಳೆದ ಮುಂಗಾರು ಹಂಗಾಮಿನಲ್ಲಿ ಮಳೆಬಾರದೆ ರೈತರು ಬೆಳೆದಿದ್ದ ಬೆಳೆಯಲ್ಲ ಹಾಳಾಗಿ ರೈತರು ಸಂಕಷ್ಟಕ್ಕೀಡಾಗಿದ್ದರು. ಇದನ್ನರಿತ ಕೇಂದ್ರ ಹಾಗೂ ರಾಜ್ಯ ಸರ್ಕಾರ ಎಕರೆವಾರು ಬೆಳೆ ಪರಿಹಾರ ನಿಗದಿಪಡಿಸಿ ಹಣ ಬಿಡುಗಡೆ ಮಾಡಿದ್ದರು. ಈ ಪರಿಹಾರದ ಹಣವನ್ನು ಪಡೆಯಲು ರೈತರು ದಿನಗಟ್ಟಲೆ ನಾಡ ಕಛೇರಿಯ ಮುಂದೆ ನಿಂತು ಪಹಣೆ ಪಡೆದು, ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ನೂರಾರು ರೂಪಾಯಿ ಖರ್ಚು ಮಾಡಿ ಖಾತೆ ತೆರೆದಿದ್ದಾರೆ. ಆದರೆ ಕಂದಾಯ ಇಲಾಖೆ ಅಧಿಕಾರಿಗಳು ಇದುವರೆಗೂ ಹಣವನ್ನು ರೈತರ ಖಾತೆಗೆ ಜಮಾ ಮಾಡಿಲ್ಲ. ಈ ಬಗ್ಗೆ ಕೇಳಿದರೆ ನಾವು ಈಗಾಗಲೇ ಬ್ಯಾಂಕ್‌ಗೆ ಡಿ.ಡಿ. ನೀಡಿದ್ದು, ಬ್ಯಾಂಕ್ ಅಧಿಕಾರಿಗಳು ವಿಳಂಬ ಮಾಡುತ್ತಿದ್ದಾರೆಂದು ಹೇಳುತ್ತಿದ್ದಾರೆ. ಆದ್ದರಿಂದ ಕಂದಾಯ ಮತ್ತು ಬ್ಯಾಂಕ್ ಅಧಿಕಾರಿಗಳು ಸ್ಥಳಕ್ಕೆ ಬಂದು ಸ್ಪಷ್ಟನೆ ನೀಡಬೇಕೆಂದು

ಒತ್ತಾಯಿಸಿದರು. ಇದುವರೆಗೂ ಕೇವಲ ಶೇ.೨೫ರಷ್ಟು ರೈತರಿಗೆ ಪರಿಹಾರದ ಹಣ ಜಮಾವಾಗಿದ್ದು, ಅದರಲ್ಲಿ ಕೆಲವರಿಗೆ ಹೆಚ್ಚು ಪರಿಹಾರ ಬಂದಿದ್ದು, ಮತ್ತೆ ಕೆಲವರಿಗೆ ಕನಿಷ್ಟ ಮೊತ್ತ ಪಾವತಿಯಾಗಿದೆ. ಇದಕ್ಕೆಲ್ಲ ಕಂದಾಯ ಇಲಾಖೆಯ ಕೆಳ ಹಂತದ ಅಧಿಕಾರಿಗಳೇ ಕಾರಣ. ಆದ್ದರಿಂದ ಅವರ ವಿರುದ್ಧ ಸೂಕ್ತ ಕ್ರಮ ಕೈಗೊಂಡು ಇನ್ನೊಂದು ವಾರದೊಳಗೆ ಎಲ್ಲ ರೈತರಿಗೆ ಪರಿಹಾರದ ಹಣ ಪಾವತಿಯಾಗಬೇಕೆಂದು ಒತ್ತಾಯಿಸಿದರು.[೧೧೨]

ತಹಶೀಲ್ದಾರ್ ಎಲ್. ಕೃಷ್ಣಮೂರ್ತಿ ಧರಣಿ ನಿರತ ಸ್ಥಳಕ್ಕೆ ಬಂದು ಸಂಬಂಧಿಸಿದ ಬ್ಯಾಂಕಿನ ಹಿರಿಯ ಅಧಿಕಾರಿಗಳನ್ನು ಸಂಪರ್ಕಿಸಿ ಅದಷ್ಟು ಬೇಗ ರೈತರ ಖಾತೆಗೆ ಜಮಾ ಮಾಡಲು ಕ್ರಮ ಕೈಗೊಳ್ಳಬೇಕೆಂದರು.

ಪ್ರತಿಭಟನೆಯಲ್ಲಿ ಶರಣಪ್ಪ, ತಿಪ್ಪೇಸ್ವಾಮಿ, ಉಮ್ಮೇಶ್, ಮಂಜುನಾಥ್, ಸಂತೋಷ್, ಶರಣಪ್ಪ, ಬಸವರಾಜ್ ಮುಂತಾದ ನೂರಾರು ರೈತರು ಪಾಲ್ಗೊಂಡಿದ್ದರು.

**ಭೂಸುಧಾರಣಾ ಕಾಯ್ದೆಯ ರದ್ದತಿಗಾಗಿ ರೈತರ ಪ್ರತಿಭಟನೆ:- ೦೧/೦೬/೨೦೧೬**

ರೈತರ ಸಾವಿರಾರು ಎಕರೆ ಭೂಮಿಯನ್ನು ವಶಕ್ಕೆ ಪಡೆಯುವ ಉದ್ದೇಶದೊಂದಿಗೆ ೧೯೬೧ರ ಭೂಸುಧಾರಣಾ ಕಾಯ್ದೆಗೆ, ತರಾತುರಿಯಲ್ಲಿ ಮಾಡಿರುವ ತಿದ್ದುಪಡಿಯನ್ನು ರಾಜ್ಯ ಸರ್ಕಾರ ರದ್ದು ಪಡಿಸಬೇಕೆಂದು, ಕರ್ನಾಟಕ ಪ್ರಾಂತ ರೈತ ಸಂಘ ಜಿಲ್ಲಾ ಘಟಕದ ನೂರಾರು ರೈತರು ಬಳ್ಳಾರಿಯಲ್ಲಿ ಪ್ರತಿಭಟನೆ ನಡೆಸಿರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ರೈತ ಸಂಘದ, ರಾಜ್ಯ ಘಟಕದ ಪ್ರಧಾನ ಕಾರ್ಯದರ್ಶಿ ಯು.ಬಸವರಾಜು, ಸಾಲ ಭಾದಿತ ರೈತರ ಸಾಲಮನ್ನಾ ಮಾಡುವ ಬದಲಿಗೆ, ಅವರ ಜಮೀನು ವಶಪಡಿಸಿಕೊಳ್ಳುವ ಹುನ್ನಾರಕ್ಕೆ ರಾಜ್ಯ ಸರ್ಕಾರ ಕೈಹಾಕಿದೆ. ಆ ಕಾರಣಕ್ಕಾಗಿಯೇ ಕಳೆದ ವಿಧಾನಸಭೆ ಅಧಿವೇಶನದಲ್ಲಿ ಕಾಯ್ದೆಗೆ ತಿದ್ದುಪಡಿ ತರಲಾಗಿದೆ. ರೂ. ೨ ಲಕ್ಷ ಕಂದಾಯ ಮಿತಿವುಳ್ಳವರು ಭೂಮಿಯನ್ನು ಖರೀದಿಸಬಹುದಾಗಿತ್ತು. ಅದನ್ನು ರೂ.೨೫ ಲಕ್ಷಕ್ಕೆ ಹೆಚ್ಚಿಸಿ, ಬೇನಾಮಿ ಹೆಸರಿನ ಭೂಮಾಲೀಕರಿಗೆ ಮುಖ್ಯಮಂತ್ರಿಯವರು ಮಣಿ ಹಾಕಿದ್ದಾರೆಂದು ದೂರಿದರು. ಅರಣ್ಯ ಮತ್ತು ಸರ್ಕಾರಿ ಭೂಮಿಯಲ್ಲಿ ಸಾಗುವಳಿ ಮಾಡುತ್ತಿರುವವರಿಗೆ ತಹಶೀಲ್ದಾರ್ ಮತ್ತು ಪೊಲೀಸ್ ಅಧಿಕಾರಿಗಳ ಮೂಲಕ ನಿರಂತರವಾಗಿ ತೆರವು ಕಾರ್ಯಚರಣೆ ನೆಪದಲ್ಲಿ ಕಿರುಕುಳ ನೀಡಲಾಗುತ್ತಿದೆ. ಬಗರ್ ಹುಕುಂ ಹಾಗೂ ಅರಣ್ಯಭೂಮಿಗೆ ಹಕ್ಕು ಪತ್ರ ನೀಡಬೇಕು. ಮನೆ, ನಿವೇಶನ ಹಾಗೂ ಉದ್ಯೋಗ ಖಾತ್ರಿ ಸೌಲಭ್ಯ ನೀಡಬೇಕು. ರೈತರ ಹಾಗೂ ಕೂಲಿಕಾರರ ಸಾಲ ಮನ್ನಾ ಮಾಡಬೇಕೆಂದು ಆಗ್ರಹಿಸಿದರು.[೧೧೩] ಪ್ರತಿಭಟನೆಯಲ್ಲಿ ನೂರಾರು ರೈತರು ಪಾಲ್ಗೊಂಡಿದ್ದರು.

**ಸಾರಿಗೆ ನೌಕರರ ಮುಷ್ಕರಕ್ಕೆ ಬೆಂಬಲಿಸಿ ರೈತ ಸಂಘದ ಪ್ರತಿಭಟನೆ:- ೨೧/೦೬/೨೦೧೬**

ಸಾರಿಗೆ ಸಂಸ್ಥೆ ನೌಕರರು ನಡೆಸುತ್ತಿರುವ ಮುಷ್ಕರಕ್ಕೆ ಶೀಘ್ರ ಪರಿಹಾರ ಕಂಡುಕೊಳ್ಳಲು ಸರ್ಕಾರ ಕ್ರಮ ಜರುಗಿಸಬೇಕೆಂದು ಆಗ್ರಹಿಸಿ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ

ನೂರಾರು ಕಾರ್ಯಕರ್ತರು ನಗರದ ತಹಶೀಲ್ದಾರ್ ಕಛೇರಿಯ ಎದುರು ಪ್ರತಿಭಟನೆ ನಡೆಸಿ ಮುಖ್ಯಮಂತ್ರಿಯವರಿಗೆ ಬರೆದ ಮನವಿ ಪತ್ರವನ್ನು ತಹಶೀಲ್ದಾರ್‌ರವರಿಗೆ ಸಲ್ಲಿಸಲಾಯಿತು.

ಮೂರು ದಿನಗಳಿಂದ ಸಾರಿಗೆ ಸಂಸ್ಥೆಯ ನೌಕರರು ನಡೆಸುತ್ತಿರುವ ಮುಷ್ಕರದಿಂದ ಬಸ್‌ಗಳು ಸಂಚರಿಸುತ್ತಿಲ್ಲ. ಇದರಿಂದಾಗಿ ರೈತರು ಹಾಗೂ ಗ್ರಾಮೀಣ ಪ್ರದೇಶದ ಶಾಲಾ, ಕಾಲೇಜಿನ ಮಕ್ಕಳಿಗೆ ತೊಂದರೆಯಾಗುತ್ತಿದೆ. ಆಸ್ಪತ್ರೆಗೆ ಹೋಗುವವರು ಹೆಣಗಾಟ ನೋಡಬೇಕಾಗಿದೆ. ಸಾರ್ವಜನಿಕರ ಹಿತದೃಷ್ಟಿಯಿಂದ ಕೂಡಲೇ ಮುಷ್ಕರ ಕೊನೆಗಾಣಿಸಲು ಸರ್ಕಾರ ಕ್ರಮ ಕೈಗೊಳ್ಳಬೇಕೆಂದು ಮನವಿಯಲ್ಲಿ ಒತ್ತಾಯಿಸಲಾಗಿತ್ತು.[೧೧೪]

ಪ್ರತಿಭಟನೆಯಲ್ಲಿ ಜಹಿರುದ್ದೀನ್, ಪ್ರಧಾನ ಕಾರ್ಯದರ್ಶಿ ಕಾರ್ತಿಕ್, ನಗರ ಘಟಕದ ಅಧ್ಯಕ್ಷ ವೆಂಕಟೇಶ್, ವಿರೂಪಾಕ್ಷ ರಾಜಾಹುಸೇನ್ ಮುಂತಾದವರು ಭಾಗವಹಿಸಿದ್ದರು.

**ಮಹದಾಯಿ ನ್ಯಾಯ ಮಂಡಳಿಯ ಅರ್ಜಿ ವಜಾ ವಿರೋಧಿಸಿ ರೈತ ಸಂಘದ ಪ್ರತಿಭಟನೆ:- ೨೮/೦೭/೨೦೧೬**

ಕರ್ನಾಟಕದ ಮಧ್ಯಾಂತರ ಅರ್ಜಿಯನ್ನು ಮಹದಾಯಿ ನ್ಯಾಯ ಮಂಡಳಿಯು ವಜಾಗೊಳಿಸಿದ್ದನ್ನು ವಿರೋಧಿಸಿ ವಿವಿಧ ಕನ್ನಡಪರ ಸಂಘಟನೆಗಳ ಕಾರ್ಯಕರ್ತರು ಹಾಗೂ ನೂರಾರು ರೈತರು ನಗರದಲ್ಲಿ ಗುರುವಾರ ಪ್ರತಿಭಟನೆ ನಡೆಸಿ ಟೈರ್‌ಗಳನ್ನು ಸುಟ್ಟು ಆಕ್ರೋಶ ವ್ಯಕ್ತಪಡಿಸಿದರು. ಕೇಂದ್ರ ಹಾಗೂ ರಾಜ್ಯ ಸರ್ಕಾರದ ವಿರುದ್ಧ ಘೋಷಣೆ ಕೂಗಿ ಮೆರವಣಿಗೆ ನಡೆಸಿದರು. ನಗರದ ಚೆನ್ನಪ್ಪ ವೃತ್ತದಲ್ಲಿ ರೈತ ಸಂಘದ ಕಾರ್ಯಕರ್ತರು ಬೆಂಕಿ ಹಚ್ಚಿ ಆಕ್ರೋಶ ವ್ಯಕ್ತಪಡಿಸಿದರು.

ಜಿಲ್ಲಾಧಿಕಾರಿಯ ಕಛೇರಿಯ ಮುಂದೆ ಧರಣಿ ನಡೆಸಿದ ನೂರಾರು ರೈತರನ್ನು ಉದ್ದೇಶಿಸಿ ಮಾತನಾಡಿದ ಹಡಗಲಿಯ ಹಾಲೇಶ್ವರ ಸ್ವಾಮೀಜಿ ಹಾಗೂ ಕಮ್ಮರಚೇಡಿನ ಕಲ್ಯಾಣ ಸ್ವಾಮೀಜಿ ಮುಂಬೈ ಕರ್ನಾಟಕದ ನಾಲ್ಕು ಜಿಲ್ಲೆಗಳ ಜನರ ಕುಡಿಯುವ ನೀರಿನ ಬವಣೆ ಹೆಚ್ಚಾಗಿದೆ. ಈ ನಿಟ್ಟಿನಲ್ಲಿ ೭ ಟಿ.ಎಂ.ಸಿ. ಅಡಿ ನೀರಿನ ಬಳಕೆಗೆ ಅವಕಾಶ ಕೋರಿ ಕರ್ನಾಟಕ ಸಲ್ಲಿಸಿದ ಮಧ್ಯಾಂತರ ಅರ್ಜಿಯನ್ನು ಮಹದಾಯಿ ನ್ಯಾಯ ಸಮಿತಿ ತಿರಸ್ಕರಿಸಿರುವ ಕ್ರಮ ಖಂಡನೀಯ ಎಂದರು.

**ರೈತರ ಸಾಲ ಮನ್ನಾ ಮಾಡಲು ಆಗ್ರಹ:- ೦೭/೧೧/೨೦೧೭**

ಸತತ ಬರದಿಂದ ತತ್ತರಿಸುವ ರಾಜ್ಯದ ರೈತರ ಸಾಲ ಮನ್ನಾ ಮಾಡುವಂತೆ ಉತ್ತರ ಕರ್ನಾಟಕ ರೈತ ಸಂಘ ರಾಜ್ಯ ಘಟಕದ ಉಪಾಧ್ಯಕ್ಷ ತಿಮ್ಮನಗೌಡ ಕಣವಿ ತಿಮ್ಮಲಾಪುರರವರು ರಾಜ್ಯ ಸರ್ಕಾರಕ್ಕೆ ಆಗ್ರಹಿಸಿದರು. ಉತ್ತರ ಕರ್ನಾಟಕ ಪ್ರದೇಶ ರೈತ ಸಂಘದ ಅನ್ನದಾತರ ಅಂದೋಲನ ರಥಯಾತ್ರೆ ಕಂಪ್ಲಿಗೆ ಬಂದಾಗ, ಅಂಬೇಡ್ಕರ್ ವೃತ್ತದಲ್ಲಿ ಸ್ವಾಗತಿಸಿದರು. ನಂತರ ಮಾತನಾಡಿದ ತಿಮ್ಮನಗೌಡ ಕಣವಿ ರಸಗೊಬ್ಬರ, ಕೀಟನಾಶಕಗಳ ಬೆಲೆ ಗಗನಕ್ಕೆ ಏರುತ್ತಿದೆ. ಕೃಷಿ ಕೂಲಿ ಅಧಿಕವಾಗಿದೆ. ರೈತರು ಬೆಳೆದ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ವೈಜ್ಞಾನಿಕ ಬೆಲೆ

ದೊರೆಯುತ್ತಿಲ್ಲ. ಸರ್ಕಾರ ಕನಿಷ್ಠ ಬೆಂಬಲ ಬೆಲೆ ಘೋಷಿಸಿ ಖರೀದಿ ಕೇಂದ್ರ ಆರಂಭಿಸುವ ನಿಟ್ಟಿನಲ್ಲಿ ಚಿಂತನೆ ನಡೆಸುತ್ತಿಲ್ಲವೆಂದು ದೂರಿದರು. ರೈತರ ಸಂಕಷ್ಟ ಅರಿತು ಸಹಕಾರಿ ಮತ್ತು ರಾಷ್ಟ್ರೀಕೃತ ಬ್ಯಾಂಕ್‌ಗಳ ಸಾಲಮನ್ನಾ ಮಾಡದಿದ್ದಲ್ಲಿ ಹೋರಾಟ ತೀವ್ರಗೊಳ್ಳಲಿದೆ ಎಂದು ಎಚ್ಚರಿಸಿದರು.

ಉತ್ತರ ಕರ್ನಾಟಕ ರೈತ ಸಂಘದ ರಾಜ್ಯ ಅಧ್ಯಕ್ಷ ಡಾ. ವಿಜಯನಂದ ಸ್ವಾಮಿ ಮಾತನಾಡಿ, ಪ್ರಧಾನಮಂತ್ರಿ ನರೇಂದ್ರ ಮೋದಿಯವರು ವ್ಯಾಪಾರಿಗಳ, ಕೈಗಾರಿಕೋದ್ಯಮಿ, ಕಾರ್ಪೋರೇಟ್ ವಲಯಕ್ಕೆ ಹೆಚ್ಚಿನ ಆದ್ಯತೆ ನೀಡುವ ಮೂಲಕ ರೈತರನ್ನು ಮರೆತಿದ್ದಾರೆ. ಗರಿಷ್ಠ ಮುಖ ಬೆಲೆಯ ನೋಟು ರದ್ದತಿ ರೈತರಿಗೆ ಮುಳುವಾಗಿದೆ ಎಂದು ಆರೋಪಿಸಿದರು. ಅನ್ನದಾತರ ಅಂದೋಲನ ಜನವರಿ ೧೯ರಂದು ರೈತರ ನೇತೃತ್ವದಲ್ಲಿ ಬೆಂಗಳೂರಿನಲ್ಲಿ ನಡೆಯಲಿದ್ದು, ಆ ಸಮಯದಲ್ಲಿ ಮಾನ್ಯ ಮುಖ್ಯಮಂತ್ರಿಗಳಿಗೆ ಮನವಿ ಸಲ್ಲಿಸಿ ರೈತರ ಬೇಡಿಕೆ ಈಡೇರಿಸುವಂತೆ ಒತ್ತಾಯಿಸಲಾಗುವುದೆಂದು ತಿಳಿಸಿದರು. ಇದೇ ಸಂದರ್ಭದಲ್ಲಿ ರೈತರ ಅಹವಾಲುಗಳನ್ನು ಸ್ವೀಕರಿಸಿ ರೈತರಿಗೆ ಪರಿಹಾರ ನೀಡಲು ಆಗುತ್ತಿಲ್ಲ ಬಿಕ್ಷೆ ಕೊಡಿ ಘೋಷಣೆಯುಳ್ಳ ಪೆಟ್ಟಿಗೆಯನ್ನು ಹಿಡಿದರು. ಈ ಅಂದೋಲನದಲ್ಲಿ ಮುದ್ದಾಪುರದ ಜಿ. ಸೋಮಶೇಖರ್, ಜಿಲ್ಲಾ ಅಧ್ಯಕ್ಷ ಗಿರಿಧರ, ಜಿಲ್ಲಾ ಉಪಾಧ್ಯಕ್ಷ ನಾರಾಯಣಕುಮಾರ್, ತಾಲೂಕು ಅಧ್ಯಕ್ಷ ಲಕ್ಷ್ಮಿಪತಿ, ತಾಲೂಕು ಕಾರ್ಯದರ್ಶಿ ರಾಮಲೆಸ್ವಾಮಿ, ಸಂಗಪ್ಪ ಕಲಬುರ್ಗಿ ಹಾಗೂ ಹೊಸಪೇಟೆ ಸುತ್ತಲಿನ ಗ್ರಾಮಗಳ ನೂರಾರು ರೈತರು ಪಾಲ್ಗೊಂಡಿದ್ದರು.

**ರೈತರ ವಿವಿಧ ಬೇಡಿಕೆಗಳನ್ನು ಆಗ್ರಹಿಸಿ ರೈತ ಸಂಘದ ಪ್ರತಿಭಟನೆ:– ೧೨/೦೧/೨೦೧೭**

ಹೊಳಲು ಸಮೀಪದ ಕತ್ತೆಬೆನ್ನೂರು ಕ್ರಾಸ್ ಬಳಿ ಸೋಮವಾರ ಅಖಂಡ ಕರ್ನಾಟಕ ರಾಜ್ಯ ರೈತ ಸಂಘದ ವತಿಯಿಂದ ಸಾಲಮನ್ನಾ ಸೇರಿ ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ ನೂರಾರು ರೈತರು ಪ್ರತಿಭಟನೆ ನಡೆಸಿದರು.

ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ರೈತ ಸಂಘದ ಜಿಲ್ಲಾ ಘಟಕದ ಉಪಾಧ್ಯಕ್ಷ ವಿ.ಸೋಮಶೇಖರಪ್ಪ, ಹಿರೇಹಡಗಲಿ ಕೆರೆಗೆ ನೀರನ್ನು ಒದಗಿಸಬೇಕು, ಸಮರ್ಪಕ ವಿದ್ಯುತ್ ಪೂರೈಸಬೇಕು, ಸತತ ಮೂರು ವರ್ಷಗಳಿಂದ ಈ ಭಾಗದಲ್ಲಿ ಬರಗಾಲ ಸಂಭವಿಸಿದ ಪರಿಣಾಮ ಕೃಷಿಗಾಗಿ ಮಾಡಿದ ಸಾಲ ತೀರಿಸಲಾಗದೆ ಎಷ್ಟೋ ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ ಕೆಲವರು ಗುಳೇ ಹೋಗಿದ್ದಾರೆ, ಉಳಿದವರು ಸಂಕಷ್ಟದಲ್ಲಿದ್ದಾರೆ, ಆದ್ದರಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರೈತರ ಸಾಲಗಳನ್ನು ಸಂಪೂರ್ಣ ಮನ್ನಾ ಮಾಡಬೇಕೆಂದು ಆಗ್ರಹಿಸಿದರು. ಕುಡಗಲ್ ಮಟ್ಟಿ ನೀರಾವರಿ ಯೋಜನೆ ಸಂಪೂರ್ಣಗೊಂಡು ಹಲವು ವರ್ಷಗಳೇ ಕಳೆದಿವೆ. ಆದರೆ ಇದಕ್ಕೆ ನೀರು ತುಂಬಿಸುವ ಕೆಲಸ ಮಾತ್ರ ನೆನೆಗುದ್ದಿಗೆ ಬಿದ್ದಿದೆ. ಕೂಡಲೇ ಇದನ್ನು ಜಾರಿಗೊಳಿಸಿ ನೀರು ತುಂಬಿಸುವ ಕಾರ್ಯ ನಡೆಯಬೇಕೆಂದರು.

ರೈತರ ಬೇಡಿಕೆಯನ್ನು ಈಡೇರಿಸದಿದ್ದರೆ ಮುಂದೆ ಸಂಬಂಧಪಟ್ಟ ಇಲಾಖೆ ಕಛೇರಿ ಮುಂದೆ ಧರಣಿ ಕೂರಲಾಗುವುದೆಂದು ಎಚ್ಚರಿಸಿದರು.

ಆ ಸಂದರ್ಭದಲ್ಲಿ ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರ್ ರಾಘವೇಂದ್ರರು, ರೈತರ ಬೇಡಿಕೆಗಳ ಮನವಿಯನ್ನು ಸ್ವೀಕರಿಸಿ ಮಾತನಾಡಿ, ಮಳೆ ಇಲ್ಲದ ಕಾರಣ ವಿದ್ಯುತ್ ಪೂರೈಕೆಗಾಗಿ ಸಮಸ್ಯೆ ಉಂಟಾಗಿದೆ. ಇಟಗಿ ಗ್ರಾಮದಲ್ಲಿ ಸೌರ ವಿದ್ಯುತ್ ಉತ್ಪಾದನ ಘಟಕ ಪ್ರಾರಂಭವಾಗುತ್ತಿದ್ದು ಒಂದು ತಿಂಗಳ ಅವಧಿಯಲ್ಲಿ ಪೂರ್ಣಗೊಳ್ಳಲಿದೆ. ಇದರಿಂದ ಸುಮಾರು ೫೦ ಮೆಗಾವ್ಯಾಟ್ ವಿದ್ಯುತ್ ಸಿಗಲಿದೆ. ಇದರಿಂದ ಸಮಸ್ಯೆಗೆ ಪರಿಹಾರ ದೊರೆಯಲಿದೆ. ಹಿರೇಹಡಗಲಿ ಹಾಗೂ ಕುಡಗಲ್ ನೀರಾವರಿ ಯೋಜನೆಗಳ ಬಗ್ಗೆ ಸರ್ಕಾರದ ಗಮನಕ್ಕೆ ತಂದು, ಕೂಡಲೇ ಸಮಸ್ಯೆಗಳನ್ನು ಬಗೆಹರಿಸಲಾಗುವುದೆಂದು ಭರವಸೆ ನೀಡಿದರು.

ಪ್ರತಿಭಟನೆಯಲ್ಲಿ ರೈತ ಸಂಘದ ತಾಲೂಕು ಸಂಚಾಲಕ ರುದ್ರಪ್ಪ, ಬಸಪ್ಪ, ಕಾರ್ಯದರ್ಶಿ ಕೃಷ್ಣಪ್ಪ ಸೊಪ್ಪಿನ ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ತೊಗರಿ ಬೆಳೆಯ ಬೆಂಬಲ ಬೆಲೆಗಾಗಿ ರೈತ ಪ್ರತಿಭಟನೆ:– ೦೬/೦೨/೨೦೧೭**

ತೊಗರಿ ಬೆಳೆಗೆ ಬೆಂಬಲ ಬೆಲೆ ನಿಗದಿಪಡಿಸಬೇಕೆಂದು ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾ ಘಟಕವು, ಬಳ್ಳಾರಿಯಲ್ಲಿ ರಾಜ್ಯ ಸರ್ಕಾರವನ್ನು ಆಗ್ರಹಿಸಿ ಪ್ರತಿಭಟನೆ ಮಾಡಿದರು.

ಜಿಲ್ಲೆಯ ನೂರಾರು ರೈತರು ಬೆಂಬಲ ಬೆಲೆಗಾಗಿ ಜಿಲ್ಲೆಯಾದ್ಯಂತ ಪ್ರತಿಭಟನಾ ಮೆರವಣಿಗೆಯನ್ನು ಮಾಡಿದರು. ರೈತ ಸಂಘದ ಅಧ್ಯಕ್ಷರಾದ ಪುರುಷೋತ್ತಮಗೌಡರ ನೇತೃತ್ವದಲ್ಲಿ, ಜಿಲ್ಲಾಧಿಕಾರಿಯ ಕಛೇರಿಗೆ ಗುರುವಾರ ತೆರಳಿ ಜಿಲ್ಲಾಧಿಕಾರಿ ವಿ.ರಾಮಪ್ರಸಾದ್ ಮನೋಹರ್ ಅವರಿಗೆ ಮನವಿ ಸಲ್ಲಿಸಿದರು. ಪ್ರತಿಭಟನೆಯನ್ನು ಉದ್ದೇಶಿಸಿ ಮಾತನಾಡಿದ ಪುರುಷೋತ್ತಮಗೌಡರು, ಜಿಲ್ಲೆಯ ಬಹುತೇಕ ರೈತರು ತೊಗರಿ ಬೆಳೆಯನ್ನು ಬೆಳೆದಿದ್ದಾರೆ. ಪ್ರಸ್ತುತ ದಿನದಲ್ಲಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ತೊಗರಿ ಬೆಳೆ ಗಣನೀಯ ಪ್ರಮಾಣದಲ್ಲಿ ದರ ಕುಸಿತ ಕಂಡಿದ್ದರಿಂದ ರೈತರಲ್ಲಿ ಆತಂಕ ಮೂಡಿದೆ. ಅದನ್ನು ಈ ಸರ್ಕಾರ ಗಂಭೀರವಾಗಿ ಪರಿಗಣಿಸಿ ಅಗತ್ಯ ಬೆಂಬಲ ಬೆಲೆಯನ್ನು ನಿಗದಿಪಡಿಸಬೇಕೆಂದು ಆಗ್ರಹಿಸಿದರು. ಪ್ರತಿಭಟನೆಯಲ್ಲಿ ನೂರಾರು ರೈತರು ಭಾಗವಹಿಸಿದ್ದರು.

**ವಿಮಾ ಕಂಪನಿಯಿಂದ ರೈತರಿಗೆ ವಂಚನೆ ಆರೋಪಿಸಿ ರೈತ ಸಂಘದ ಪ್ರತಿಭಟನೆ:– ೨೪/೦೨/೨೦೧೭**

ಪ್ರಧಾನಮಂತ್ರಿ ಫಸಲ್ ಬೀಮಾ ಯೋಜನೆಯಡಿ ಮೆಣಸಿನಕಾಯಿ ಬೆಳೆ ನಷ್ಟಕ್ಕೆ ಪರಿಹಾರ ನೀಡಲು ಅವಕಾಶ ಇಲ್ಲದಿದ್ದರೂ, ವಿಮೆ ಕಂತನ್ನು ಪಾವತಿಸಿಕೊಂಡು ವಿಮಾ ಸಂಸ್ಥೆ ಮತ್ತು ಬ್ಯಾಂಕ್‌ಗಳು ರೈತರನ್ನು ವಂಚಿಸಿವೆ, ಎಂದು ಆರೋಪಿಸಿ ಬಳ್ಳಾರಿ ಜಿಲ್ಲೆಯಾದ್ಯಂತ ಕರ್ನಾಟಕ ರಾಜ್ಯ ರೈತ ಸಂಘದ ಜಿಲ್ಲಾ ಘಟಕದ ನೂರಾರು ಕಾರ್ಯಕರ್ತರು ಪ್ರತಿಭಟನೆ ಮಾಡಿದರು.

ಪ್ರತಿಭಟನೆಯನ್ನು ಉದ್ದೇಶಿ ಮಾತನಾಡಿದ ರೈತ ಸಂಘದ ರಾಜ್ಯ ಘಟಕದ ಕಾರ್ಯಧ್ಯಕ್ಷ ವೀರಸಂಗಯ್ಯರವರು, ಹಣವನ್ನು ರೈತರಿಂದ ಪಡೆಯುವ ಸಂದರ್ಭದಲ್ಲೇ ಇದನ್ನು ಬ್ಯಾಂಕ್ ಅಥವಾ ಯುನಿವರ್ಸಲ್ ಸ್ಯಾಂಪೋ ಜನರಲ್ ಇನ್ಸೂರೆನ್ಸ್ ಕಂಪನಿ ಸ್ಪಷ್ಟಪಡಿಸಿಲ್ಲ. ಬೆಳೆ ನಷ್ಟದ ಬಳಿಕ ಪರಿಹಾರ ಕೇಳಲು ಹೋದ ಸಂದರ್ಭದಲ್ಲಿ ರೈತರಿಗೆ ನಷ್ಟವಾಗುವುದನ್ನು ತಪ್ಪಿಸಬಹುದಾಗಿತ್ತೆಂದು ಹೇಳಿದರು. ಜಿಲ್ಲೆಯ ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೪೬೪ ರೈತರು, ಯೋಜನೆಯಡಿ ವಿಮೆ ಕಂತು ಪಾವತಿಸಿದ್ದಾರೆ. ಈಗ ಅವರಿಗೆ ನಷ್ಟ ಪರಿಹಾರ ಇಲ್ಲದಂತಾಗಿದ್ದು ಬೇಡಿಕೆ ಈಡೇರದಿದ್ದರೆ ತೀವ್ರ ಸ್ವರೂಪದ ಪ್ರತಿಭಟನೆ ನಡೆಸಲಾಗುವದೆಂದು ಜಿಲ್ಲಾಡಳಿತಕ್ಕೆ ಎಚ್ಚರಿಸಿದರು. ಬೆಳೆಗಳಿಗೆ ಸೂಕ್ತ ಬೆಲೆ ಇಲ್ಲದ ಕಾರಣ ರೈತರು ಸಂಕಷ್ಟಕ್ಕೆ ಸಿಲುಕುತ್ತಿದ್ದಾರೆ. ಕಳೆದ ವರ್ಷ ಪ್ರತಿ ಕ್ವಿಂಟಾಲ್‌ಗೆ ೧೩ ಸಾವಿರವಿದ್ದ ಮೆಣಸಿನಕಾಯಿಯ ಬೆಲೆ, ಈ ಬಾರಿ ಆರು ಸಾವಿರಕ್ಕೆ ಕುಸಿದಿದ್ದು ಇದಕ್ಕೆ ಮೂಲ ಕಾರಣ ಮಾರುಕಟ್ಟೆಯ ದಲ್ಲಾಳಿಗಳೆಂದು ದೂರಿದರು. ರಾಜ್ಯ ಸರ್ಕಾರ ತಿಂಗಳು ಮಂಡಿಸಲಿರುವ ೨೦೧೭-೧೮ ಆಯವ್ಯಯ ಮುಂಗಡ ಪತ್ರದಲ್ಲಿಯಾದರು, ರೈತರ ಬೆಳೆ ಸಾಲ ಮನ್ನಾ ಮಾಡಲು ಕ್ರಮ ಕೈಗೊಳ್ಳಬೇಕು. ಬಿಹಾರ, ಕೇರಳ ಮಾದರಿಯಲ್ಲಿಯೇ ರಾಜ್ಯದಲ್ಲಿ ಮದ್ಯಪಾನ ನಿಷೇಧ ಮಾಡಬೇಕೆಂದು ಒತ್ತಾಯಿಸಿದರು.

ಪ್ರತಿಭಟನೆಯಲ್ಲಿ ರೈತ ಮುಖಂಡರಾದ ದರೂರು ಪುರುಷೋತ್ತಮಗೌಡ, ಗೋಣಿ ಬಸಪ್ಪ, ವೀರೇಶ್, ಶಿವಯ್ಯ, ರಾಜಶೇಖರ್, ಗಂಗಾಧಾರವಾಡಕರ್ ಹಾಗೂ ನೂರಾರು ರೈತರು ಭಾಗವಹಿಸಿದ್ದರು.

**೬.೪ ಬಯಲು ಸೀಮೆಯ ಶೇಂಗಾ ಮತ್ತು ಈರುಳ್ಳಿ ಬೆಳೆಗಳಿಗೆ ಬೆಂಬಲ ಬೆಲೆಗಾಗಿ ನಡೆದ ರೈತ ಪ್ರತಿಭಟನೆಗಳು:**

**ಶೇಂಗಾ ಬೆಳೆಗೆ ಪರಿಹಾರಕ್ಕಾಗಿ ರೈತರ ಧರಣಿ:- ೨೪/೦೯/೨೦೦೪**

ಜಗಳೂರು ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ನೇತೃತ್ವದಲ್ಲಿ ನೂರಾರು ರೈತರು, ಶೇಂಗಾ ಬೆಳೆಗೆ ಪರಿಹಾರಕ್ಕಾಗಿ ಒತ್ತಾಯಿಸಿ, ಸೆಪ್ಟಂಬರ್ ೨೪ ೨೦೦೪ರಂದು ತಹಶೀಲ್ದಾರ್ ರವರ ಕಚೇರಿಯ ಮುಂದೆ ಪ್ರತಿಭಟನೆ ಮಾಡಿದರು. ನಂತರ ದಾವಣಗೆರೆ ಜಿಲ್ಲೆಗೆ ಆಗಮಿಸಿದ ಪ್ರತಿಭಟನಾನಿರತ ರೈತರು ಜಿಲ್ಲಾಧಿಕಾರಿಗಳ ಕಚೇರಿಗೆ ಮುತ್ತಿಗೆ ಹಾಕಿ ಜಿಲ್ಲಾಧಿಕಾರಿಗಳಿಗೆ ಮನವಿ ಪತ್ರ ನೀಡಿದರು.

ಜಗಳೂರು ತಾಲೂಕಿನ ಗಡಿಮಾಕುಂಟೆ, ಚಿಕ್ಕಉಜ್ಜಿನಿ, ಹೊಸಕೆರೆ, ಗೋಪಾಲಪುರ, ಸೊಕ್ಕೆ ಸೇರಿದಂತೆ ೨೦ಕ್ಕೂ ಹೆಚ್ಚು ಗ್ರಾಮಗಳಲ್ಲಿ, ಮೂರು ವರ್ಷಗಳ ಬರದ ನಂತರ ಉತ್ತಮ ಮಳೆಯಾಗಿದ್ದು, ಸಾವಿರಾರು ರೈತರು ಶೇಂಗಾ ಬೆಳೆ ಬಿತ್ತನೆ ಮಾಡಿದ್ದಾರೆ. ಕಾಯಿಕಟ್ಟುವ ಹಂತದಲ್ಲಿ ಸಂಪೂರ್ಣವಾಗಿ ಬೇರು ಸಮೇತ ಕೊಳೆತು ಹೋಗುವ ಕೊಳೆ ರೋಗ (ಬುಡೂಸುರೋಗ) ಸಾವಿರಾರು ಎಕರೆ ಫಸಲನ್ನು ನಾಶ ಮಾಡಿದೆ. ಈ ರೋಗದ ಬಗ್ಗೆ

ಕೃಷಿ ಇಲಾಖೆ ಅಧಿಕಾರಿಗಳ ಗಮನಕ್ಕೆ ತಂದಾಗ "ಟೈಕೊ ಡೈಮ್" ಔಷಧಿ ಸಿಂಪರಣೆ ಮಾಡಲು ತಿಳಿಸಿದರು. ಅದನ್ನು ಸಿಂಪಡಣೆ ಮಾಡಿದರೂ ಪ್ರಯೋಜನವಾಗದೆ ಕಾಯಿ ಸಮೇತ ಕೊಳೆತು ಹೋಗಿದೆ. ರೈತರ ಸಂಕಷ್ಟಕ್ಕೆ ಬೆಳೆ ವಿಮೆ ಪರಿಹಾರ ನೀಡಬೇಕೆಂದು ಆಗ್ರಹಿಸಿ ಜಗಳೂರು ತಾಲೂಕಿನಲ್ಲಿ ರೈತರು ಪ್ರತಿಭಟನೆ ಮಾಡಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು.[೧೧೫]

ಮನವಿ ಸ್ವೀಕರಿಸಿದ ಜಿಲ್ಲಾಧಿಕಾರಿಗಳು ಮಾತನಾಡಿ ಬೆಳೆ ಹಾಳಾಗಿರುವ ಭೂಮಿಗಳನ್ನು ಸರ್ವೆ ಮಾಡಿ, ಸರ್ಕಾರದ ಶಿಫಾರಸ್ಸು ಮಾಡುವ ಮೂಲಕ ಬೆಳೆ ಪರಿಹಾರ ಬಿಡುಗಡೆ ಮಾಡುವದಾಗಿ ಭರವಸೆ ನೀಡಿದರು. ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ಬೆಂಬಲ ಬೆಲೆ ಮತ್ತು ಬೆಳೆ ವಿಮೆಗಾಗಿ ರೈತ ಸಂಘಟನೆಯಿಂದ ಪ್ರತಿಭಟನೆ:–**

**೨೯/೦೯/೨೦೦೪**

ಈರುಳ್ಳಿ ಹಾಗೂ ಮೆಕ್ಕೆಜೋಳಕ್ಕೆ ಬೆಂಬಲ ಬೆಲೆ ಘೋಷಣೆ, ಕೂಡಲೇ ಖರೀದಿ ಕೇಂದ್ರಗಳ ಆರಂಭ ಹಾಗೂ ರೈತರಿಗೆ ತಕ್ಷಣ ಬೆಳೆ ವಿಮೆ ಬಿಡುಗಡೆ ಸೇರಿದಂತೆ, ಹಲವಾರು ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ನಗರದಲ್ಲಿ ಪ್ರತಿಭಟನಾ ಮೆರವಣಿಗೆ ನಡೆಸಿದರು.

ಮಧ್ಯಾಹ್ನ ಬೀರಲಿಂಗೇಶ್ವರ ದೇವಸ್ಥಾನದಿಂದ ಹೊರಟ ರೈತ ಸಂಘದ ಕಾರ್ಯಕರ್ತರು ಜಿಲ್ಲಾಧಿಕಾರಿಗಳ ಕಚೇರಿಗೆ ತೆರಳಿ, ಒಂದು ಗಂಟೆಗಳ ಕಾಲ ಧರಣಿ ನಡೆಸಿದರು. ತೀವ್ರ ಬೆಲೆ ಕುಸಿತ ಕಂಡಿರುವ ಈರುಳ್ಳಿಗೆ ೭೫೦ ರೂ ಬೆಂಬಲ ಬೆಲೆ ಘೋಷಿಸಬೇಕು, ಕೂಡಲೇ ಖರೀದಿ ಕೇಂದ್ರ ತೆರೆಯಬೇಕು, ಜಗಳೂರು ತಾಲೂಕಿನಲ್ಲಿ ಈರುಳ್ಳಿ ಹಾಗೂ ಮೆಕ್ಕೆಜೋಳ ಬೆಳೆದ ರೈತರಿಗೆ ಬೆಳೆ ವಿಮೆ ನೀಡಬೇಕೆಂದು ಆಗ್ರಹಿಸಿ, ರೈತ ಸಂಘದ ನಾಯಕ ಹೊನ್ನೂರು ಮುನಿಯಪ್ಪರವರು ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು.[೧೧೬] ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು ಅಕ್ಟೋಬರ್ ೨ ರೊಳಗಾಗಿ ಸರ್ಕಾದ ಜೊತೆ ಚರ್ಚಿಸಿ, ಈರುಳ್ಳಿ, ಮೆಕ್ಕೆಜೋಳಕ್ಕೆ ಬೆಂಬಲ ಬೆಲೆ, ಖರೀದಿ ಕೇಂದ್ರಗಳ ಆರಂಭ ಹಾಗೂ ರೈತರಿಗೆ ತಕ್ಷಣ ಬೆಳೆ ವಿಮೆ ಬಿಡುಗಡೆ ಮಾಡುವುದಾಗಿ ಭರವಸೆ ನೀಡಿದರು.

**ಈರುಳ್ಳಿ ಖರೀದಿ ಕೇಂದ್ರಕ್ಕಾಗಿ ಹಾಗೂ ಬೆಂಬಲ ಬೆಲೆಗಾಗಿ ರಸ್ತೆ ತಡೆ ಪ್ರತಿಭಟನೆ:–**

**೦೩/೧೦/೨೦೦೪**

ಜಗಳೂರು ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ನೇತೃತ್ವದಲ್ಲಿ ನೂರಾರು ರೈತರು, ಈರುಳ್ಳಿ ಖರೀದಿ ಕೇಂದ್ರಕ್ಕಾಗಿ ಹಾಗೂ ಬೆಂಬಲ ಬೆಲೆ ಘೋಷಿಸುವಂತೆ ಒತ್ತಾಯಿಸಿ ಅಕ್ಟೋಬರ್ ೩ ೨೦೦೪ರಂದು ತಹಶೀಲ್ದಾರ್ ರವರ ಕಚೇರಿಯ ಮುಂದೆ ಪ್ರತಿಭಟನೆ ಮಾಡಿದರು.

ಪ್ರತಿಭಟನಾನಿರತ ರೈತರು ೭೫೦ ರೂಗಳನ್ನು ಬೆಂಬಲ ಬೆಲೆಯನ್ನಾಗಿ ನಿಗದಿಪಡಿಸಬೇಕೆಂದು ಹಾಗೂ ಈರುಳ್ಳಿ ಖರೀದಿ ಕೇಂದ್ರವನ್ನು ಸ್ಥಾಪಿಸುವಂತೆ ಒತ್ತಾಯಿಸಿ ಮಹಾತ್ಮಗಾಂಧಿ ಬಸ್

ನಿಲ್ದಾಣದಲ್ಲಿ ಪ್ರತಿಭಟನಾ ಮೆರವಣಿಗೆ ಮಾಡಿ ತಹಶೀಲ್ದಾರ್ ಕಚೇರಿಯನ್ನು ಮುತ್ತಿಗೆ ಹಾಕಿದರು. ಈ ಸಂದರ್ಭದಲ್ಲಿ ಮಾತನಾಡಿದ ರೈತ ಸಂಘದ ಮುಖಂಡರಾದ ಹುಚ್ಚವನಹಳ್ಳಿ ಮಂಜುನಾಥ್ ರವರು, ಜಗಳೂರು ತಾಲೂಕಿನಾದ್ಯಾಂತ ರೈತರು ೨೦೦೪ರಲ್ಲಿ ಅತೀ ಹೆಚ್ಚು ಈರುಳ್ಳಿ ಬೆಳೆಯನ್ನು ಬೆಳೆದಿದ್ದಾರೆ. ಈ ಬೆಳೆಗೆ ಈಗಾಗಲೇ ಸರ್ಕಾರ ೩೪೦ ರೂ ಬೆಂಬಲ ಬೆಲೆಯನ್ನು ನಿಗದಿಪಡಿಸಿದೆ. ಇದು ಅವೈಜ್ಞಾನಿಕವಾಗಿದ್ದು, ಪ್ರತೀ ಕ್ವಿಂಟಾಲ್ಗೆ ೪೫೦ ರೂ ಖರ್ಚು ಬರುತ್ತದೆ ಹಾಗಾಗಿ ೭೫೦ ರೂಗಳನ್ನು ಬೆಂಬಲ ಬೆಲೆಯನ್ನಾಗಿ ನಿಗದಿಪಡಿಸಬೇಕು. ಈಗಾಗಲೇ ಸರ್ಕಾರ ನಿಗದಿಪಡಿಸಿದ ಬೆಲೆಯಿಂದಾಗಿ ಜಗಳೂರು ತಾಲೂಕಿನ ರೈತರು ಈರುಳಿಯನ್ನು ಬೆಂಗಳೂರಿಗೆ ತೆಗೆದುಕೊಂಡು ಹೋಗಿದ್ದರು. ರೈತರು ಬೆಂಬಲ ಬೆಲೆ ಸಿಗದೆ ಲಾರೀ ಬಾಡಿಗೆಗೂ ಸಾಕಾಗದೆ ಬೆಂಗಳೂರಿನಿಂದ ವಾಪಸ್ ಬಂದಿದ್ದಾರೆ ಇದೇ ರೀತಿ ಮುಂದುವರೆದರೆ ರೈತ ಆತ್ಮಹತ್ಯೆ ಮಾಡಿಕೊಳ್ಳುವಂತಾಗುತ್ತದೆ ಎಂದರು.[೧೧೭] ನಂತರ ರೈತರೆಲ್ಲರೂ ಸೇರಿ ತಮ್ಮ ಬೇಡಿಕೆಯ ಮನವಿ ಪತ್ರವನ್ನು ತಹಶೀಲ್ದಾರ್‌ರವರಿಗೆ ನೀಡಿದರು. ಇದಕ್ಕೆ ಪ್ರತಿಕ್ರಿಯಿಸಿದ ತಹಶೀಲ್ದಾರ್‌ರವರು ಜಿಲ್ಲಾಧಿಕಾರಿಗಳ ಜೊತೆ ಚರ್ಚಿಸಿ, ಈರುಳ್ಳಿ ಖರೀದಿ ಕೇಂದ್ರ ಹಾಗೂ ಬೆಂಬಲ ಬೆಲೆ ಘೋಷಿಸುವಬೇಡಿಕೆಗಳನ್ನು ಈಡೇರಿಸುವುದಾಗಿ ಭರವಸೆ ನೀಡಿದರು.

ಈ ಪ್ರತಿಭಟನೆಯಲ್ಲಿ ರೈತ ಸಂಘದ ಮುಖಂಡರಾದ ಹುಚ್ಚವನಹಳ್ಳಿ ಮಂಜುನಾಥ್, ತಾಲೂಕು ರೈತ ಸಂಘದ ಅಧ್ಯಕ್ಷ ಕಾನನಕಟ್ಟೆ ತಿಪ್ಪೆಸ್ವಾಮಿ ಹಾಗೂ ನೂರಾರು ರೈತರು ಪಾಲ್ಗೊಂಡಿದ್ದರು.

**ವೈಜ್ಞಾನಿಕ ಬೆಲೆ ಆಗ್ರಹಿಸಿ ರೈತ ಸಂಘ ಹಾಗೂ ಹಸಿರು ಸೇನೆ ನೇತೃತ್ವದಲ್ಲಿ ರೈತ ಪ್ರತಿಭಟನೆ:–** ೧೨/೧೧/೨೦೧೦

ಜಗಳೂರು ತಾಲೂಕಿನಲ್ಲಿ ರೈತರು ಬೆಳೆದ ಶೇಂಗಾ ಮೆಕ್ಕೆಜೋಳ ಹಾಗೂ ಹತ್ತಿ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿಪಡಿಸುವಂತೆ ಒತ್ತಾಯಿಸಿ, ಪ್ರತಿಭಟನೆಯ ಮೂಲಕ ರೈತ ಸಂಘ ಹಾಗೂ ಹಸಿರು ಸೇನಾ ನೇತೃತ್ವದಲ್ಲಿ, ನೂರಾರು ರೈತರು ತಾಲೂಕು ಕಚೇರಿಗೆ ಮುತ್ತಿಗೆ ಹಾಕಿ ತಹಶೀಲ್ದಾರರಿಗೆ ಮನವಿ ಸಲ್ಲಿಸಿದರು.

ಜಗಳೂರು ನಗರದ ಪ್ರವಾಸಿ ಮಂದಿರದಿಂದ ತಾಲೂಕು ಕಚೇರಿಯವರೆಗೂ ಮೆರವಣಿಗೆಯಲ್ಲಿ ಹೊರಟ ಪ್ರತಿಭಟನಾನಿರತ ರೈತರು ಅಗತ್ಯ ಬೆಂಬಲ ಬೆಲೆ ನಿಗಧಿ ಪಡಿಸುವಂತೆ ಸರ್ಕಾರವನ್ನು ಆಗ್ರಹಿಸಿದರು. ರಾಜ್ಯ ರೈತ ಸಂಘದ ಕಾರ್ಯದರ್ಶಿ ಹುಚ್ಚವ್ವನಹಳ್ಳಿ ಮಂಜುನಾಥ ಮಾತನಾಡಿ, ರೈತರು ಬೆಳೆದ ಶೇಂಗಾ, ಮೆಕ್ಕೆಜೋಳ ಮತ್ತು ಹತ್ತಿ ಬೆಳೆಗಳಿಗೆ ೫೦೦೦ ರೂ ಬೆಂಬಲ ಬೆಲೆಯನ್ನು ನಿಗದಿಪಡಿಸುವಂತೆ ಒತ್ತಾಯಿಸಿದರು. ಇಲ್ಲದಿದ್ದರೆ ಮುಂದಿನ ದಿನಗಳಲ್ಲಿ ಹೋರಟವನ್ನು ತೀವ್ರಗೊಳಿಸಲಾಗುವುದೆಂದು ಸರ್ಕಾರಕ್ಕೆ ಹೆಚ್ಚರಿಸಿ, ರೈತ ಸಂಘದ ವತಿಯಿಂದ ತಹಶೀಲ್ದಾರ್ ಶ್ರೀಮತಿ ಬಿ.ಬಿ. ಸರೋಜಾ ಅವರಿಗೆ ಮನವಿ ಪತ್ರ ಸಲ್ಲಿಸಲಾಯಿತು.

ಮನವಿ ಸ್ವೀಕರಿಸಿದ ತಹಶೀಲ್ದಾರರು ಮಾತನಾಡಿ ಶೇಂಗಾ, ಮೆಕ್ಕೆಜೋಳ, ಹಾಗೂ ಹತ್ತಿ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿಪಡಿಸುವಂತೆ ಜಿಲ್ಲಾಧಿಕಾರಿಗಳು ಹಾಗೂ ಸರ್ಕಾರದ ಜೊತೆ ಚರ್ಚಿಸಿ ಸೂಕ್ತ ಕ್ರಮ ಕೈಗೊಳ್ಳುವುದಾಗಿ ಭರವಸೆ ನೀಡಿದರು. ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು.

**ರಸ್ತೆಗೆ ಈರುಳ್ಳಿ ಸುರಿದು ದಾವಣಗೆರೆ ಜಿಲ್ಲೆ ರೈತರ ಪ್ರತಿಭಟನೆ:- ೨೪/೧೨/೨೦೧೪**

ದಾವಣಗೆರೆ ಜಿಲ್ಲೆಯ ಈರುಳ್ಳಿ ಮಾರುಕಟ್ಟೆಯಲ್ಲಿ ಡಿಸೆಂಬರ್ ೨೪ರಂದು ದಿಢೀರನೆ ಈರುಳ್ಳಿ ಬೆಲೆ ಕುಸಿತಗೊಂಡಿದ್ದರಿಂದ, ಆಕ್ರೋಶಗೊಂಡ ರೈತರು ಈರುಳ್ಳಿ ರಾಶಿಯನ್ನು ರಸ್ತೆಗೆ ಸುರಿದು ಪ್ರತಿಭಟನೆ ಮಾಡಿದರು.

ಮಾರುಕಟ್ಟೆಯಲ್ಲಿ ಮಂಗಳವಾರದವರೆಗೆ ೧೮೦೦/- ರೂ, ರವರೆಗೆ ಈರುಳ್ಳಿ ಮಾರಿದ್ದು, ರೈತರು ಅದೇ ಬೆಲೆಯ ಆಸೆಯೊಂದಿಗೆ ಮಾರುಕಟ್ಟೆಗೆ ಈರುಳ್ಳಿಯನ್ನು ತಂದಿದ್ದರು. ಇದ್ದಕ್ಕಿದ್ದಂತೆ ಮಾರುಕಟ್ಟೆಯಲ್ಲಿ ಈರುಳ್ಳಿ ಬೆಲೆ ಕುಸಿತಗೊಂಡು ಈರುಳ್ಳಿಯನ್ನು ಪ್ರತೀ ಕ್ವಿಂಟಾಲ್‌ಗೆ ೬೦೦ ರಿಂದ ೧೦೦೦ ರೂಪಾಯಿಗೆ ಕೇಳಲು ದಲ್ಲಾಳಿಗಳು ಮುಂದಾಗಿದ್ದರು. ಇದರಿಂದ ಆಕ್ರೋಶಗೊಂಡ ರೈತರು ಪ್ರತಿಭಟನೆಯನ್ನು ಆರಂಭಿಸಿದರು. ಇಡೀ ಮಾರುಕಟ್ಟೆಯಲ್ಲಿ ಒಂದು ಅಂಗಡಿಯಲ್ಲಿ ೬೦೦, ಮತ್ತೊಂದು ಅಂಗಡಿಯಲ್ಲಿ ೮೦೦, ಮತ್ತೊಬ್ಬರು ೧೦೦೦, ಹೀಗೆ ಖರೀದಿ ಮಾಡಲು ಮುಂದಾಗಿದ್ದು, ರೈತರ ಆಕ್ರೋಶಕ್ಕೆ ಕಾರಣವಾಯಿತು. ಪ್ರತಿಭಟನಾನಿರತ ರೈತರು ಮಾತನಾಡಿ ಹುಬ್ಬಳ್ಳಿ, ರಾಣೇಬೆನ್ನೂರಿನ ಮಾರುಕಟ್ಟೆಯಲ್ಲಿ ಪ್ರತೀ ಕ್ವಿಂಟಾಲ್‌ಗೆ ೧೮೦೦ ರಿಂದ ೧೯೦೦ ರೂ ದರ ಸಿಗುತ್ತದೆ. ದಾವಣಗೆರೆ ಮಾರುಕಟ್ಟೆಯಲ್ಲಿ ೬೦೦ ರಿಂದ ೧೦೦೦ ರೂ,ಗೆ ಕೇಳುತ್ತಿದ್ದು ದಲ್ಲಾಳಿಗಳು ಹಾಗೂ ವ್ಯಾಪಾರಸ್ಥರು ಶಾಮೀಲಾಗಿ ರೈತರನ್ನು ಶೋಷಣೆ ಮಾಡುತ್ತಿದ್ದಾರೆ. ಎರಡು ತಿಂಗಳ ಹಿಂದೆ ಇದೇ ರೀತಿ ಈರುಳ್ಳಿ ಬೆಲೆ ಕುಸಿದಿದ್ದು, ರೈತರಿಂದ ಖರೀದಿಸುವಾಗ ಅತ್ಯಂತ ಕಡಿಮೆ ದರಕ್ಕೆ ಖರೀದಿಸಿ, ಗ್ರಾಹಕರಿಗೆ ಮಾರುವಾಗ ಉತ್ತಮ ಬೆಲೆಗೆ ಮಾರಾಟ ಮಾಡಿ ವ್ಯಾಪಾರಸ್ಥರು, ದಲ್ಲಾಳರು ಅಧಿಕ ಲಾಭ ಪಡೆಯುತ್ತಾರೆ. ದುಬಾರಿ ದಿನಗಳಲ್ಲಿ ರೈತರ ಬಾಳುವೆ ನಡೆಸುವದೇ ಕಷ್ಟವಾಗಿದೆ. ಹೀಗಿದ್ದರೂ ದಲ್ಲಾಳಿ ವರ್ತಕರುಗಳು ಹಾಡೆಹಗಲೇ ಶೋಷಣೆಗೀಡು ಮಾಡುತ್ತಿದ್ದಾರೆ ಎಂದು ದೂರಿದರು. ಬೆಲೆ ಕುಸಿತದ ಹಿನ್ನೆಲೆಯಲ್ಲಿ ಈರುಳ್ಳಿ ಬೆಳೆಗಾರರು ಸಂಕಷ್ಟಕ್ಕೆ ಸಿಲುಕ್ಕಿದ್ದು, ಸರ್ಕಾರ ಹಾಗೂ ಜಿಲ್ಲಾಡಳಿತವು ರೈತರ ನೆರವಿಗೆ ಧಾವಿಸಬೇಕು. ತೋಟಗಾರಿಕೆ ಇಲಾಖೆ ಉಪನಿರ್ದೇಶಕರು, ಎ.ಪಿ.ಎಂ.ಸಿ. ಕಾರ್ಯದರ್ಶಿಗಳು ಸ್ಥಳಕ್ಕೆ ಧಾವಿಸಿ, ಈರುಳ್ಳಿಗೆ ಉತ್ತಮ ಬೆಲೆ ಕೊಡಿಸುವವರೆಗೆ ಪ್ರತಿಭಟನೆ ನಿಲ್ಲಿಸುವುದಿಲ್ಲವೆಂದು ಹೇಳಿದರು.

ರೈತರು ಮಾತನಾಡುತ್ತ ಸಾಲ ಮಾಡಿ ಈರುಳ್ಳಿ ಬೆಳೆದಿದ್ದೇವೆ. ಏಕಾಏಕಿ ಕಡಿಮೆ ದರ ನೀಡಿದರೆ ರೈತರು ಹೇಗೆ ಬಾಳಬೇಕು? ಕಷ್ಟಪಟ್ಟು ದುಡಿದವರಿಗೆ ಗೌರವದ ಬೆಲೆಯು ಸಿಗದಿದ್ದರೆ,

ನಮ್ಮ ಪರಿಶ್ರಮ, ಬೆವರಿಗೆ ಬೆಲೆಯೂ ಬಾರದಿದ್ದರೆ, ನಾವು ಯಾರನ್ನು ನಂಬಬೇಕು? ಇದೇ ರೀತಿ ಬೆಲೆ ಕುಸಿತ ಕಂಡರೆ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳಬೇಕಾಗುತ್ತದೆ ಎಂದು ಎಚ್ಚರಿಸಿದರು.[೧೧೮]

ದಾವಣಗೆರೆ ತಾಲೂಕಿನಲ್ಲಿ ಕಳೆದ ಎಂಟತ್ತು ದಿನಗಳಿಂದ ಹಠಾತ್ತನೆ ಈರುಳ್ಳಿ ಬೆಲೆ ಕುಸಿತ ಕಂಡಿದ್ದು ರೈತರಲ್ಲಿ ಆತಂಕದ ವಾತಾವರಣ ಉಂಟಾಗಿದೆ. ಮಾರುಕಟ್ಟೆಗೆ ಈರುಳ್ಳಿಯನ್ನು ತಂದ ರೈತರು ಕ್ವಿಂಟಾಲ್‌ಗೆ ೧೫೦ ರೂಗಳಂತೆ ಮಾರಿ ಅಧಿಕ ನಷ್ಟ ಅನುಭವಿಸಿದರು. ರೈತರು ಅಸಾಹಕತೆಯಿಂದ ನೊಂದು ಆಕ್ರೋಶ ವ್ಯಕ್ತಪಡಿಸಿ ೧೪೫೦ ರೂಗಳಿಂದ ೧೫೦೦ ರೂಗಳವರೆಗೆ ಬೆಂಬಲ ಬೆಲೆ ನೀಡುವಂತೆ ಆಗ್ರಹಿಸಿ ಪ್ರತಿಭಟನೆ ಮಾಡಿದರು.

ಪ್ರತಿಭಟನೆ ನಡೆಯುವ ಸ್ಥಳಕ್ಕೆ ಆಗಮಿಸಿದ ತೋಟಗಾರಿಕೆ ಇಲಾಖೆ ಉಪನಿರ್ದೇಶಕರು ಮಾತನಾಡಿ, ಈರುಳ್ಳಿ ಬೆಲೆ ಕುಸಿಯಲು ಕಾರಣ ಬೆಳೆಯು ಕೊಳೆ ರೋಗಕ್ಕೆ ತುತ್ತಾಗಿ ಗುಣಮಟ್ಟದ ಕ್ಷಮತೆ ಕಳೆದುಕೊಂಡಿದೆ. ಕರ್ನಾಟಕದ ಈರುಳ್ಳಿ ಬೆಳೆಯು ಹೆಚ್ಚಾಗಿ ಕಲ್ಕತ್ತಾದ ಮೂಲಕ ಬಾಂಗ್ಲಾದೇಶಕ್ಕೆ ರಫ್ತಾಗುತ್ತಿತ್ತು. ಆದರೆ ಅಲ್ಲಿ ಪ್ರವಾಹ ಪರಿಸ್ಥಿತಿಯಿಂದ ರಫ್ತು ಮಾಡಲು ಸಾಧ್ಯವಾಗಿರಲಿಲ್ಲ. ಇದರಿಂದಾಗಿ ಬೆಲೆ ಕುಸಿತ ಕಂಡಿದೆ ಎಂದರು.

**ಬಿತ್ತನೆ ಶೇಂಗಾ ದರ ಇಳಿಕೆಗೆ ಮೊಳಕಾಲ್ಮೂರು ರೈತರ ಪ್ರತಿಭಟನೆ:- ೨೪/೦೫/೨೦೧೬**

ಸರ್ಕಾರ ಮೊಳಕಾಲ್ಮೂರಿನಲ್ಲಿ ಕೃಷಿ ಇಲಾಖೆಯ ಮೂಲಕ ವಿತರಣೆ ಮಾಡುತ್ತಿರುವ ಶೇಂಗಾ ಬೆಲೆ ಮಾರುಕಟ್ಟೆ ದರಕ್ಕಿಂತ ಹೆಚ್ಚಾಗಿದ್ದು ದರ ಇಳಿಕೆಗೆ ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿ ಮೇ ೨೪ ೨೦೧೬ ರ ಮಂಗಳವಾರದಂದು ನೂರಾರು ರೈತರು ಸಂಕೇತಿಕ ಪ್ರತಿಭಟನೆ ಮಾಡಿದರು.

ರೈತರು ಮೇ ೨೪ ೨೦೧೬ರ ಮಂಗಳವಾರದಂದು ಕೃಷಿ ಇಲಾಖೆಯ ಆವರಣದಲ್ಲಿ ಪ್ರತಿಭಟನೆ ನಡೆಸಿದರು. ಮಾರುಕಟ್ಟೆಯಲ್ಲಿ ಪ್ರಸ್ತುತ ಬಿತ್ತನೆ ಮಾಡುವ ಶೇಂಗಾ ದರ ನಾಲ್ಕುಸಾವಿರದಿಂದ ಐದುಸಾವಿರ ರೂಗಳಿತ್ತು. ಕೃಷಿ ಇಲಾಖೆ ಏಳುಸಾವಿರ ರೂ ನಿಗದಿ ಮಾಡಿದೆ. ಸರ್ಕಾರ ಸಹಾಯ ಧನ ನೀಡಿದರು ಏನೂ ಪ್ರಯೋಜನವಾಗದೇ ಬೀಜ ಸರಬರಾಜು ಮಾಡುವ ಕಂಪನಿಗಳ ಪಾಲಾಗುತ್ತಿದೆ ಎಂದು ದೂರಿದರು. ತಾಲೂಕಿನಲ್ಲಿ ಸತತ ಬರ ಪರಿಣಾಮವಾಗಿ ರೈತರು ಬೀಜ ಖರೀದಿ ಮಾಡಿ ಬಿತ್ತನೆ ಮಾಡುವ ಸ್ಥಿತಿಯಲ್ಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ದುಬಾರಿ ಬೆಲೆ ನಿಗದಿ ಸರಿಯಲ್ಲ. ದರ ಇಳಿಕೆ ಮಾಡದೇ ಬೀಜ ವಿತರಣೆ ಮಾಡಲು ಬಿಡುವುದಿಲ್ಲವೆಂದು ರೈತರು ಪ್ರತಿಭಟನೆ ಮಾಡಿದರು. ಕೈ ಹಿಡಿಯಬೇಕಾದ ಸರ್ಕಾರವೇ ರೈತರಿಗೆ ಅನ್ಯಾಯ ಮಾಡಲು ಹೊರಟಿರುವುದು ಯಾವ ನ್ಯಾಯ? ಎಂದು ಪ್ರಶ್ನೆ ಮಾಡಿ ಮನವಿಯನ್ನು ತಹಶೀಲ್ದಾರ್ ಕೊಟ್ರೇಶ್ ಹಾಗೂ ಕೃಷಿ ಅಧಿಕಾರಿ ಡಾ.ಮಹಮದ್ ಒಬೇದುಲ್ಲಾ ಅವರಿಗೆ ಸಲ್ಲಿಸಿದ್ದರು.[೧೧೯]

ಮನವಿ ಸ್ವೀಕರಿಸಿದ ತಹಶೀಲ್ದಾರ್ ಕೊಟ್ರೇಶ್ ಹಾಗೂ ಕೃಷಿ ಅಧಿಕಾರಿ ಡಾ.ಮಹಮದ್ ಒಬೇದುಲ್ಲಾರವರು ಮಾತನಾಡಿ, ಜಿಲ್ಲಾಧಿಕಾರಿಗಳ ಜೊತೆ ಚರ್ಚಿಸಿ ಇನ್ನೆರಡು ದಿನಗಳಲ್ಲಿ ಬಿತ್ತನೆ ಶೇಂಗಾ ದರ ಇಳಿಕೆ ಮಾಡುವದಾಗಿ ಭರವಸೆ ನೀಡಿದರು. ಅದರಂತೆ ಮೇ ೨೭ ೨೦೧೬ ರಂದು ಶೇಂಗಾ ಬಿತ್ತನೆ ಬೀಜದ ದರವನ್ನು ೪,೫೦೦/- ರೂಗಳಿಗೆ ನಿಗದಿ ಪಡಿಸಿದರು.

**ಬಿತ್ತನೆ ಶೇಂಗಾ ದರ ಇಳಿಕೆಗೆ ಆಗ್ರಹಿಸಿ ರೈತರ ಪ್ರತಿಭಟನೆ:- ೩೦/೦೫/೨೦೧೬**

ಚಳ್ಳಕೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಜಿಲ್ಲಾ ಕಾರ್ಯಾಧ್ಯಕ್ಷರಾದ ಕೆ.ಪಿ. ಭೂತಯ್ಯರವರ ನೇತೃತ್ವದಲ್ಲಿ ನೂರಾರು ರೈತರು ಶೇಂಗಾ ದರ ಇಳಿಕೆಗೆ ಆಗ್ರಹಿಸಿ ಮೇ ೩೦ ೨೦೧೬ರಂದು, ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ಪ್ರತಿಭಟನೆ ಮಾಡಿದರು.

ಪ್ರತಿಭಟನಾನಿರತ ರೈತರನ್ನು ಉದ್ದೇಶಿಸಿ ಮಾತನಾಡಿದ ಕೆ.ಪಿ. ಭೂತಯ್ಯರವರು, ಚಳ್ಳಕೆರೆ ಮತ್ತು ಮೊಳಕಾಲ್ಮೂರು ಪ್ರದೇಶಗಳಲ್ಲಿ ಮಳೆ ಬೆಳೆಯಿಲ್ಲದೆ ರೈತರು ಸಾಲಗಾರರಾಗಿದ್ದು, ಈಗ ಬಿತ್ತನೆಗೆ ಶೇಂಗಾ ಬೀಜವಿಲ್ಲದಂತಾಗಿದೆ. ಮುಂಗಾರು ಬಿತ್ತನೆಗೆ ಸರಕಾರ ದುಬಾರಿ ಬೆಲೆಯಲ್ಲಿ ನೀಡುತ್ತಿರುವ ಶೇಂಗಾವನ್ನು ಕಡಿಮೆ ದರಕ್ಕೆ ನೀಡಬೇಕೆಂದು ಒತ್ತಾಯಿಸಿದರು. ಆಂಧ್ರದ ಗಡಿಗೆ ಹೊಂದಿಕೊಂಡಿರುವ ಮೂರು ತಾಲೂಕುಗಳಲ್ಲಿ ಹಲವಾರು ವರ್ಷಗಳಿಂದ ಶೇಂಗಾ ಬೆಳೆ ಕೈಕೊಡುತ್ತಿದೆ. ಸರಕಾರವು ಬರಪೀಡಿತ ಪ್ರದೇಶವೆಂದು ಘೋಷಿಸಿ ವಿಶೇಷ ಪ್ಯಾಕೇಜಿನಲ್ಲಿ ಶೇಂಗಾ ವಿತರಿಸಬೇಕಿತ್ತು, ಅದನ್ನು ಬಿಟ್ಟು ಎಸ್,ಸಿ ಹಾಗೂ ಎಸ್,ಟಿಗಳಿಗೆ ಕ್ವಿಂಟಾಲ್‌ಗೆ ೪.೮೦೦ ರೂ. ಇತರರಿಗೆ ೫.೫೦೦ ರೂ ನಿಗದಿಪಡಿಸಲಾಗಿದೆ. ರೈತರಿಗೆ ಹಣ ಇಲ್ಲದ ಪರಿಣಾಮವಾಗಿ ಖರೀದಿಸಲು ಕಷ್ಟವಾಗಿದೆ. ರೈತರಿಗೆ ವಿತರಿಸುವ ಶೇಂಗಾ ಬೆಲೆಯಲ್ಲಿ ತಾರತಮ್ಯ ಬೇಡ, ಸಮಾನವಾಗಿ ಬೆಲೆ ನಿಗದಿಪಡಿಸಿ ಎಂದು ಪ್ರತಿಭಟಿಸಿದರು.[೨೦]

ಕಳೆದ ವರ್ಷ ರೈತರಿಂದ ಬೆಳೆ ವಿಮೆ ಕಟ್ಟಿಕೊಂಡಿರುವ ಬ್ಯಾಂಕ್‌ಗಳು ಬೆಳೆ ವಿಮೆ ನೀಡುತ್ತಿಲ್ಲ. ಶೇಂಗಾ ಬಿತ್ತನೆಗೆ ಹಣದ ಸಮಸ್ಯೆ ಉಂಟಾಗಿ, ರೈತರು ಪರದಾಡುವ ಸ್ಥಿತಿ ನಿರ್ಮಾಣವಾಗಿದೆ. ಮಾರುಕಟ್ಟೆಗಳಲ್ಲಿ ೫.೦೦೦ ದಿಂದ ೫.೫೦೦ರವರೆಗೆ ಒಂದು ಕ್ವಿಂಟಾಲ್ ಶೇಂಗಾ ಬಿತ್ತನೇ ಬೀಜ ಮಾರಾಟ ಮಾಡಲಾಗುತ್ತಿದೆ. ಆದರೆ ಕೃಷಿ ಇಲಾಖೆಯಲ್ಲಿ ೬.೦೦೦ರೂ ನಿಗದಿ ಮಾಡಲಾಗಿದೆ ಎಂದು ಆರೋಪಿಸಿ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿದರು. ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು ಸಬ್ಸಿಡಿ ದರದಲ್ಲಿ ನೀಡಲಾಗುವ ಬಿತ್ತನೆ ಬೀಜಗಳನ್ನು ತಾರತಮ್ಯವಿಲ್ಲದೆ ಎಲ್ಲಾ ರೈತರಿಗೂ ನೀಡುವುದಾಗಿ ಭರವಸೆ ನೀಡಿದರು, ಅದರಂತೆ ಮಾರನೆಯ ದಿನವೇ ಕ್ವಿಂಟಾಲ್ ಶೇಂಗಾಕ್ಕೆ ೫೦೦೦ ರೂ ಗಳನ್ನು ನಿಗದಿಗೊಳಿಸಲಾಯಿತು.

ಪ್ರತಿಭಟನೆಯಲ್ಲಿ ರೈತ ಸಂಘದ ಕಾರ್ಯಾಧ್ಯಕ್ಷ ಕೆ.ಪಿ. ಭೂತಯ್ಯ, ಪಿ.ಟಿ. ರಾಮಚಂದ್ರ ರೆಡ್ಡಿ, ತಿಪ್ಪೇಸ್ವಾಮಿ, ಆರ್ ರಾಜಣ್ಣ, ತಿಮ್ಮಣ್ಣ, ಮಂಜುನಾತ್, ರಂಗನಾಥಪ್ಪ ಮುಂತಾದ ರೈತರು ಪಾಲ್ಗೊಂಡಿದ್ದರು.

**ಒಣಗಿದ ಶೇಂಗಾ ಮತ್ತು ಈರುಳ್ಳಿ ಬೆಳೆಗೆ ಸೂಕ್ತ ಪರಿಹಾರ ನೀಡುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:- ೦೭/೦೯/೨೦೧೬**

ಚಳ್ಳಕೆರೆ ತಾಲೂಕಿನಾದ್ಯಾಂತ ತೀವ್ರ ಮಳೆ ಕೊರತೆ ಉಂಟಾಗಿ, ಶೇಂಗಾ ಮತ್ತು ಈರುಳ್ಳಿ ಬೆಳೆಯ ಇಳುವರಿ ಸಂಪೂರ್ಣವಾಗಿ ಕುಂಠಿತವಾಗಿದ್ದು ತೀವ್ರ ಸಂಕಷ್ಟಕ್ಕೆ ಒಳಗಾಗಿದ್ದಾರೆ. ಒಣಗಿದ ಬೆಳೆಗೆ ಸೂಕ್ತ ಪರಿಹಾರ ನೀಡುವಂತೆ ಒತ್ತಾಯಿಸಿ, ಕರ್ನಾಟಕ ರಾಜ್ಯ ರೈತ ಸಂಘದ ವತಿಯಿಂದ ನೂರಾರು ರೈತರು ಸೆಪ್ಟೆಂಬರ್ ೦೭ ೨೦೧೬ರಂದು ಪ್ರತಿಭಟನೆ ಮಾಡಿದರು.

ತಾಲೂಕಿನ ತಳಕು, ನನ್ನಿವಾಳ, ದೊಡ್ಡೇರಿ, ಹಿರೇಹಳ್ಳಿ ಹೋಬಳಿ ಸೇರಿದಂತೆ ಹಲವು ಗ್ರಾಮಗಳಲ್ಲಿ ಬಿತ್ತನೆ ಮಾಡಿದ್ದ ಈರುಳ್ಳಿ ಮತ್ತು ಶೇಂಗಾ ಬೆಳೆ ಸಂಪೂರ್ಣವಾಗಿ ಒಣಗಿ ಹೋಗಿದೆ. ತಾಲೂಕಿನಲ್ಲಿ ೯೦,೦೦೦ಕ್ಕೂ ಹೆಚ್ಚು ಎಕ್ಟೇರ್ ಬಿತ್ತನೆ ಭೂಮಿಯಿದ್ದು, ಶೇ. ೭೫ಕ್ಕಿಂತಲೂ ಹೆಚ್ಚು ಭೂಮಿಯಲ್ಲಿ ಈರುಳ್ಳಿ ಶೇಂಗಾ ಬಿತ್ತನೆ ಮಾಡಲಾಗಿತ್ತು. ಸಕಾಲಕ್ಕೆ ಮಳೆ ಬೀಳದೆ ಬಿತ್ತನೆ ಮಾಡಿರುವ ಬೆಳೆ ಹಾಳಾಗಿದೆ. ಸ್ಥಳೀಯ ಗ್ರಾಮೀಣ ಬ್ಯಾಂಕುಗಳಲ್ಲಿ ಸಾಲ ಪಡೆದು ಬಿತ್ತನೆ ಮಾಡಿ ಉತ್ತಮ ಇಳುವರಿ ನಿರೀಕ್ಷಿಸಿದ ರೈತರು ಕಂಗಾಲಾಗುವಂತಾಗಿದೆ. ಶೇಂಗಾ ಬಿತ್ತನೆಗೆ ಎಕರೆಗೆ ರೂ. ೧೫,೦೦೦ ದಿಂದ ೨೦,೦೦೦ರೂ ಸಾಲ ಮಾಡಿ ಬಿತ್ತನೆ ಮಾಡಲಾಗಿತ್ತು. ಜೊತೆಗೆ ರಸಗೊಬ್ಬರ ಹಾಗೂ ಕೂಲಿ ಖರ್ಚಿಗಾಗಿ ಮನೆಯಲ್ಲಿರುವ ಒಡವೆಗಳನ್ನು ಅಡವಿಟ್ಟು ವೆಚ್ಚವನ್ನು ಭರಿಸಲಾಗಿದೆ. ವರುಣನ ಅಪಕೃಪೆಯಿಂದ ಬೆಳೆಯೂ ಇಲ್ಲದೆ ಸಾಲವನ್ನು ತೀರಿಸಲಾಗದೆ. ಸಂಕಷ್ಟ ಎದುರಿಸುವಂತಾಗಿದೆ ಎಂದು ರೈತ ಮುಖಂಡರು ಪ್ರತಿಭಟಿಸಿದರು.

ಕುರುಡಿಹಳ್ಳಿ ಗ್ರಾಮದ ರೈತರಾದ ಕೆ. ಲಿಂಗಾರೆಡ್ಡಿ ಮಾತನಾಡಿ ೩.೫೦ ಎಕರೆ ಪ್ರದೇಶದಲ್ಲಿ ಶೇಂಗಾ ಮತ್ತು ೪.೫೦ ಎಕರೆ ಪ್ರದೇಶದಲ್ಲಿ ಈರುಳ್ಳಿ ಬಿತ್ತನೆ ಮಾಡಲಾಗಿದೆ. ಈ ಬೆಳೆಗಳ ಬಿತ್ತನೆಗಾಗಿ ಐ.ಸಿ.ಐ.ಸಿ.ಐ ಬ್ಯಾಂಕ್‌ನಲ್ಲಿ ಎರಡು ಲಕ್ಷ ಸಾಲ ಪಡೆದು ಬಿತ್ತನೆ ಮಾಡಿದ್ದೇವೆ. ಸಾಲದ ಹಣದಲ್ಲಿಯೇ ಜಮೀನಿನಲ್ಲಿ ಎರಡು ಕೊಳವೆ ಬಾವಿಗಳನ್ನು ಕೊರೆಸಲಾಗಿದೆ. ಮಳೆ ಅಭಾವದಿಂದ ಬೋರ್‌ವೆಲ್‌ನಲ್ಲಿ ಒಂದು ಹನಿ ನೀರಿಲ್ಲದೆ ಬೆಳೆಗಳು ಒಣಗಿ ನಿಂತಿವೆ. ಇದರಿಂದಾಗಿ ಮಾಡಿರುವ ಸಾಲಕ್ಕೆ ಬಡ್ಡಿ ಸಹ ಕಟ್ಟಲು ಆಗದಂತಹ ಪರಿಸ್ಥಿತಿ ನಿರ್ಮಾಣವಾಗಿದ್ದು, ಕುಟುಂಬ ನಿರ್ವಹಣೆ ಸಹ ಅತ್ಯಂತ ಸಮಸ್ಯೆಯಿಂದ ಕೂಡಿದೆ ಎಂದು ತಮ್ಮ ಅಳಲು ತೋಡಿಕೊಂಡರು.

ರಾಜ್ಯಾದಾದ್ಯಾಂತ ಈರುಳ್ಳಿ ಬೆಲೆ ಕುಸಿತ ಕಂಡಿದ್ದು, ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ರೈತರ ಈರುಳ್ಳಿ ಬೆಳೆಗಳಿಗೆ ಕನಿಷ್ಠ ವೈಜ್ಞಾನಿಕ ಬೆಲೆ ನಿಗದಿ ಮಾಡಿ, ಖರೀದಿ ಕೇಂದ್ರಗಳನ್ನು ಚಿತ್ರದುರ್ಗ ಮತ್ತು ಚಳ್ಳಕೆರೆಯಲ್ಲಿ ತೆರೆಯಬೇಕು. ಈಗಾಗಲೇ ಸರಕಾರದ ಆದೇಶದಂತೆ ಬೆಳೆ ಸಮೀಕ್ಷೆಯಲ್ಲಿ, ಒಬ್ಬ ರೈತರಿಗೆ ೫ ಎಕರೆಗೆ ಮಾತ್ರ ಪರಿಹಾರ ನೀಡಲು ಆದೇಶಿಸಿರುತ್ತದೆ.

ಹಾಗಾದರೆ ಉಳಿದ ಭೂಮಿಯಲ್ಲಿ ಹಾಳಾದ ಬೆಳೆಯು ಗತಿಯೇನು?. ಹಾಗೂ ೫ ಎಕರೆಗಿಂತ ಹೆಚ್ಚು ಭೂಮಿ ಹೊಂದಿರುವ ದೊಡ್ಡ ರೈತರ ಗತಿಯೇನು?. ಇದರಿಂದಾಗಿ ತಾರತಮ್ಯ ನೀತಿ ಅನುಸರಿಸದೆ, ಎಲ್ಲಾ ರೈತರಿಗೂ ಬೆಳೆ ಸಮೀಕ್ಷೆ ನಡೆಸಿ ಸಂಪೂರ್ಣ ಎಕರೆವಾರುವಾಗಿ ಬೆಳೆ ಪರಿಹಾರವನ್ನು ಘೋಷಿಸಬೇಕೆಂದು ಒತ್ತಾಯಿಸಿ ತಹಶೀಲ್ದಾರರಿಗೆ ಮನವಿ ಪತ್ರ ಸಲ್ಲಿಸಿದರು.[೧೨೧]

ಪ್ರತಿಭಟನೆಯಲ್ಲಿ ಕೆ.ಪಿ. ಭೂತಯ್ಯ, ಸಿ.ಆರ್. ತಿಮ್ಮಣ್ಣ, ಪುಟ್ಟಸ್ವಾಮಿ, ಸಿದ್ಧರಾಮಣ್ಣ, ಹನುಮಂತಪ್ಪ, ಶಾಂತಪ್ಪ, ಬಸ್ತಿಹಳ್ಳಿ , ಸುರೇಶ್‌ಬಾಬು ಮುಂತಾದ ರೈತ ಮುಖಂಡರು ಭಾಗವಹಿಸಿದ್ದರು.

**ಬೆಂಬಲ ಬೆಲೆ, ಬೆಳೆ ನಷ್ಟ ಪರಿಹಾರ ಹಾಗೂ ಸಾಲ ಮನ್ನಕ್ಕಾಗಿ ಬೃಹತ್ ರೈತ ಪ್ರತಿಭಟನೆ:- ೨೪/೦೯/೨೦೧೬**

ಚಿತ್ರದುರ್ಗ ಜಿಲ್ಲೆಯ ಆರು ತಾಲೂಕುಗಳಲ್ಲಿ ಮಳೆ ಕೊರತೆಯಿಂದಾಗಿ ಬರ ವ್ಯಾಪಿಸಿದೆ. ಹಾಗಾಗಿ ಜಿಲ್ಲೆಯನ್ನು ಬರ ಪೀಡಿತ ಪ್ರದೇಶವೆಂದು ಘೋಷಿಸಬೇಕು, ಈರುಳ್ಳಿ, ಶೇಂಗಾ, ಮೆಕ್ಕೆಜೋಳ ಬೆಳೆಗಳಿಗೆ ಬೆಳೆ ನಷ್ಟ ಪರಿಹಾರ ನೀಡಬೇಕೆಂದು ಒತ್ತಾಯಿಸಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ನೂರಾರು ಕಾರ್ಯಕರ್ತರು ಚಿತ್ರದುರ್ಗ ನಗರದಲ್ಲಿ ಶುಕ್ರವಾರದಂದು ಬೃಹತ್ ಪ್ರತಿಭಟನೆ ನಡೆಸಿದರು.

ಟ್ರ್ಯಾಕ್ಟರ್ ಮೂಲಕ ನಗರಕ್ಕೆ ಆಗಮಿಸಿದ ಸಾವಿರಾರು ರೈತರು ಒಣಗಿದ ಈರುಳ್ಳಿ, ಶೇಂಗಾ, ಮೆಕ್ಕೆಜೋಳ, ಬೆಳೆಗಳನ್ನು ತಂದು ಪ್ರತಿಭಟನೆಯಲ್ಲಿ ಪಾಲ್ಗೊಂಡರು. ನಗರದ ಎ.ಪಿ.ಎಂ.ಸಿ. ಆವರಣದಲ್ಲಿ ಸೇರಿದ ನೂರಾರು ರೈತರು, ಸಂಪೂರ್ಣ ಸಾಲ ಮನ್ನಾ ಮಾಡಬೇಕು, ಈರುಳ್ಳಿ, ಶೇಂಗಾ, ಮೆಕ್ಕೆಜೋಳ ಬೆಳೆಗಳಿಗೆ ಬೆಳೆ ನಷ್ಟಕ್ಕೆ ಪರಿಹಾರ ನೀಡುವುದು, ಜಿಲ್ಲೆಯನ್ನು ಬರಪೀಡಿತ ಪ್ರದೇಶವೆಂದು ಘೋಷಿಸಬೇಕೆಂದು ಘೋಷಣೆಗಳನ್ನು ಕೂಗುತ್ತಾ ಮೆರವಣಿಗೆ ಮಾಡಿದರು. ಮೆರವಣಿಗೆ ಎಂ.ಜಿ. ವೃತ್ತ, ಬಿ.ಡಿ. ರಸ್ತೆ ಮೂಲಕ ಎಸ್.ಬಿ.ಎಂ. ವೃತ್ತ, ಪ್ರವಾಸಿ ಮಂದಿರದ ಮೂಲಕ ಜಿಲ್ಲಾಧಿಕಾರಿಯ ವೃತ್ತ ತಲುಪಿತು. ಪ್ರತಿಭಟನಾನಿರತ ರೈತರು ಮಳೆ ಕೊರತೆಯಿಂದ ಬೆಳೆ ಒಣಗಿದೆ, ಬೆಳೆ ಸಮೀಕ್ಷೆಯಲ್ಲಿ ರೈತರ ನಡುವೆ ತಾರತಮ್ಯ ಮಾಡಲಾಗುತ್ತಿದೆ. ಬೆಳೆ ವಿಮೆಯ ಮೇಲೆ ವಿವಿಧ ನಿರ್ಬಂಧಗಳನ್ನು ಹಾಕಲಾಗಿದೆ. ಇವುಗಳಿಂದ ಎಲ್ಲಾ ರೈತರು ವಿಮಾ ವ್ಯಾಪ್ತಿಗೆ ಒಳಪಡುವುದಿಲ್ಲ. ಈ ಮಿತಿಗಳನ್ನು ತೆಗೆದು ಹಾಕಬೇಕು. ಪ್ರತಿ ಎಕರೆ ಈರುಳ್ಳಿ, ಶೇಂಗಾ ಹಾಗೂ ಮೆಕ್ಕೆಜೋಳ ಬೆಳೆಗೆ ೧೫,೦೦೦ ರೂ ಬೆಳೆ ನಷ್ಟ ಪರಿಹಾರ ಘೋಷಿಸಬೇಕು. ಟ್ಯಾಂಕರ್ ಮೂಲಕ ನೀರು ಹಾಯಿಸಿ ಈರುಳ್ಳಿ ಬೆಳೆ ಬೆಳೆದಿದ್ದು, ಕ್ವಿಂಟಾಲ್‌ಗೆ ೨,೫೦೦ ರೂ ನಿಗದಿ ಮಾಡಿ ತುರ್ತಾಗಿ ಖರೀದಿ ಕೇಂದ್ರ ತೆರೆಯಬೇಕೆಂದು ಒತ್ತಾಯಿಸಿದರು.[೧೨೨]

ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದ ಜಿಲ್ಲಾಧಿಕಾರಗಳು ರೈತರಿಂದ ಮನವಿ ಪಡೆದರು. ನಂತರ ರೈತರನ್ನು ಉದ್ದೇಶಿಸಿ ಮಾತನಾಡಿದ ಜಿಲ್ಲಾಧಿಕಾರಗಳು ಸರ್ಕಾರದೊಂದಿಗೆ ಚರ್ಚಿಸಿ ಈರುಳ್ಳಿ,

ಶೇಂಗಾ ಹಾಗೂ ಮೆಕ್ಕೆಜೋಳ ಬೆಳೆಗಳಿಗೆ ಬೆಳೆ ನಷ್ಟ ಪರಿಹಾರ ಒದಗಿಸುವದಾಗಿ ಭರವಸೆ ನೀಡಿದರು.

**ಚಳ್ಳಕೆರೆಯಲ್ಲಿ ಈರುಳ್ಳಿ, ಶೇಂಗಾ ಬೆಳೆ ನಷ್ಟ : ಪರಿಹಾರಕ್ಕಾಗಿ ರೈತ ಪ್ರತಿಭಟನೆ:– ೨೬/೦೯/೨೦೧೬**

ಚಳ್ಳಕೆರೆ ತಾಲೂಕಿನಲ್ಲಿ ಮುಂಗಾರು ಬೆಳೆ ವಿಫಲವಾಗಿದ್ದು, ಬೆಳೆ ನಷ್ಟದ ಪ್ರಮಾಣ ಹೆಚ್ಚಾಗಿದ್ದು ರೈತರು ಸಂಕಷ್ಟದಲ್ಲಿದ್ದಾರೆ. ಈರುಳ್ಳಿ, ಶೇಂಗಾ ಬೆಳೆದು ನಷ್ಟ ಅನುಭವಿಸಿರುವ ರೈತರಿಗೆ ಪರಿಹಾರ ವಿತರಿಸಬೇಕೆಂದು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರುಸೇನೆ ಕಾರ್ಯಕರ್ತರು ತಾಲೂಕು ಕಚೇರಿಯ ಆವರಣದಲ್ಲಿ ಪ್ರತಿಭಟನೆ ನಡೆಸಿದರು.

ಚಳ್ಳಕೆರೆ ತಾಲೂಕಿನಲ್ಲಿ ೬,೩೮೭ ಹೆಕ್ಟೇರ್ ಭೂಮಿಯಲ್ಲಿ ಈರುಳ್ಳಿಯನ್ನು ಬಿತ್ತನೆ ಮಾಡಲಾಗಿದೆ. ಪ್ರತಿ ಹೆಕ್ಟೇರ್ ಬಿತ್ತನೆ ಮಾಡಲು ೪ ರಿಂದ ೫ ಕೆ.ಜಿ.ಈರುಳ್ಳಿ ಬಿತ್ತನೆ ಬೀಜ ಬೇಕು. ಪ್ರತಿ ಕೆ.ಜಿ.ಈರುಳ್ಳಿ ಬೀಜಕ್ಕೆ ೨ರೂ. ಸಾವಿರ ಇದೆ. ಭೂಮಿ ಸಿದ್ಧತೆ ಮಾಡಿಕೊಳ್ಳಲು ತಿಪ್ಪೆಗೊಬ್ಬರ ರಾಸಾಯನಿಕ ಗೊಬ್ಬರಕ್ಕೆ ೩೦,೦೦೦ ಬೇಕಾಗುತ್ತದೆ. ಬಿತ್ತನೆಯಾದ ನಂತರ ಮೇಲುಗೊಬ್ಬರ, ರಾಸಾಯನಿಕ ಸಿಂಪಡಣೆ, ಕಳೆತೆಗೆಯುವುದಕ್ಕೆ ಕನಿಷ್ಠ ೮ ಸಾವಿರದಿಂದ ೧೦ ಸಾವಿರ ಖರ್ಚಾಗುತ್ತದೆ, ತಾಲೂಕಿನಾದ್ಯಂತ ತೀವ್ರ ಮಳೆ ಕೊರತೆ ಉಂಟಾಗಿ ರೈತರ ಬೆಳೆಗಳು ಒಣಗಿ ನಿಂತಿವೆ. ರೈತ ಸಂಕಷ್ಟ ಎದುರಿಸುವಂತಾಗಿದ್ದು, ಬಿತ್ತನೆ ಸಮಯದಲ್ಲಿ ಮಾಡಿದ್ದ ಸಾಲಕ್ಕೆ ಬಡ್ಡಿಯನ್ನು ಸಹ ಕಟ್ಟಲಾದ ಪರಿಸ್ಥಿತಿ ನಿರ್ಮಾಣವಾಗಿದೆ. ಹಾಗಾಗಿ ಶೇಂಗಾ ಬೆಳೆದು ನಷ್ಟವಾಗಿರುವ ರೈತರಿಗೆ ಎಕರೆಗೆ ೪೦ ಸಾವಿರ ರೂ, ಮಳೆಯಾಶ್ರಿತ ಈರುಳ್ಳಿ ಬೆಳೆಯಲ್ಲಿ ನಷ್ಟವಾಗಿರುವ ರೈತರಿಗೆ ಎಕರೆಗೆ ೬೦,೦೦೦ ಪರಿಹಾರ ವಿತರಿಸಬೇಕೆಂದು ಪ್ರತಿಭಟನೆ ಮಾಡಿ, ತಹಶೀಲ್ದಾರ್‌ರವರಿಗೆ ಮನವಿ ಸಲ್ಲಿಸಿದರು.[೧೨೩] ಮನವಿ ಸ್ವೀಕರಿಸಿ ಮಾತನಾಡಿದ ತಹಶೀಲ್ದಾರ್‌ರು, ಜಿಲ್ಲಾಧಿಕಾರಿಗಳ ಜೊತೆ ಚರ್ಚಿಸಿ, ಈರುಳ್ಳಿ, ಶೇಂಗಾ ಬೆಳೆದು ನಷ್ಟ ಅನುಭವಿಸಿರುವ ರೈತರಿಗೆ ಪರಿಹಾರ ವಿತರಿಸುವುದಾಗಿ ಭರವಸೆ ನೀಡಿದರು.

**ಈರುಳ್ಳಿ ಹಾಗೂ ಶೇಂಗಾ ಬೆಳೆ ನಷ್ಟ ಪರಿಹಾರಕ್ಕಾಗಿ ಚಿತ್ರದುರ್ಗ ರೈತರ ಪ್ರತಿಭಟನೆ:– ೨೯/೧೦/೨೦೧೬**

ಚಿತ್ರದುರ್ಗ ತಾಲೂಕಿನಾದ್ಯಂತ ಮುಂಗಾರು ವಿಫಲವಾಗಿ, ಬೆಳೆ ಹಾನಿಯಾಗಿ ರೈತರು ಸಂಕಷ್ಟದಲ್ಲಿದ್ದಾರೆ. ಸರ್ಕಾರ ಬೆಳೆ ನಷ್ಟ ಪರಿಹಾರ ನೀಡುವುದರ ಜೊತೆಗೆ, ಬರ ಪೀಡಿತ ಪ್ರದೇಶವೆಂದು ಘೋಷಿಸುವಂತೆ ಒತ್ತಾಯಿಸಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ)ಯನೂರಾರು ಕಾರ್ಯಕರ್ತರು ಅಕ್ಟೋಬರ್ ೨೯ ೨೦೧೬ರಂದು ಪ್ರತಿಭಟನೆ ಮಾಡಿದರು.

ನಗರದ ಪ್ರವಾಸಿ ಮಂದಿರದಿಂದ ಆರಂಭವಾದ ಪ್ರತಿಭಟನಾ ಮೆರವಣಿಗೆಯು, ತಹಶೀಲ್ದಾರ್ ಕಚೇರಿಗೆ ಬಂದು ತಲುಪಿತು. ಪ್ರತಿಭಟನೆಕಾರರು ಬೆಳೆ ನಷ್ಟ ಪರಿಹಾರ ನೀಡಬೇಕು

ಹಾಗೂ ಬರಪೀಡಿತ ಪ್ರದೇಶವೆಂದು ಘೋಷಿಸಬೇಕೆಂದು ಒತ್ತಾಯಿಸಿ ತಹಶೀಲ್ದಾರ್‌ರಿಗೆ ಮನವಿ ಸಲ್ಲಿಸಿದರು.[೧೨೪]

ಈರುಳ್ಳಿ, ಶೇಂಗಾ ಬೆಳೆಗಳು ಮಳೆ ಕೊರತೆಯಿಂದಾಗಿ ಸಂಪೂರ್ಣ ನೆಲಕಚ್ಚಿದ್ದು, ರೈತರು ಸಂಕಷ್ಟದಲ್ಲಿದ್ದಾರೆ. ಇದರಿಂದ ಸರ್ಕಾರ ಈರುಳ್ಳಿಗೆ ಎಕರೆಗೆ ೬೦ ಸಾವಿರರೂ, ಶೇಂಗಾಕ್ಕೆ ೪೦ ಸಾವಿರರೂ, ಪರಿಹಾರ ನಿಗದಿ ಮಾಡಬೇಕೆಂದು ಒತ್ತಾಯಿಸಿದರು. ಮನವಿ ಸ್ವೀಕರಿಸಿ ಮಾತನಾಡಿದ ತಹಶೀಲ್ದಾರ್‌ರು, ಜಿಲ್ಲಾದಿಕಾರಿಗಳ ಜೊತೆ ಚರ್ಚಿಸಿ, ಈರುಳ್ಳಿ, ಶೇಂಗಾ ಬೆಳೆದು ನಷ್ಟ ಅನುಭವಿಸಿರುವ ರೈತರಿಗೆ ಬೆಳೆ ಪರಿಹಾರ ವಿತರಿಸುವುದಾಗಿ ಭರವಸೆ ನೀಡಿದರು. ಪ್ರತಿಭಟನೆಯಲ್ಲಿ ನೂರಾರು ರೈತರು ಪಾಲ್ಗೊಂಡಿದ್ದರು.

**ತಾಲೂಕಿಗೊಂದು ಈರುಳ್ಳಿ ಖರೀದಿ ಕೇಂದ್ರ ಆರಂಭಿಸುವಂತೆ ಒತ್ತಾಯಿಸಿ ರೈತ ಪ್ರತಿಭಟನೆ:– ೦೨/೧೧/೨೦೧೬**

ಜಗಳೂರು ತಾಲೂಕಿನಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ)ಯ ವತಿಯಿಂದ, ತಾಲೂಕಿಗೊಂದು ಈರುಳ್ಳಿ ಖರೀದಿ ಕೇಂದ್ರ ಆರಂಭಿಸಬೇಕೆಂದು ಆಗ್ರಹಿಸಿ, ನೂರಾರು ರೈತರು ನವೆಂಬರ್ ೦೨ ೨೦೧೬ರಂದು ಬುಧವಾರ ಬೆಳಿಗ್ಗೆ ೧೧:೩೦ಕ್ಕೆ ಸರಿಯಾಗಿ ಪ್ರತಿಭಟನೆ ಮಾಡಿದರು.

ಪಟ್ಟಣದ ಪ್ರವಾಸಿ ಮಂದಿರದಿಂದ ತಾಲೂಕು ಕಚೇರಿಯವರೆಗೆ ಬೈಕ್ ರ‍್ಯಾಲಿಯ ಮೂಲಕ ತೆರಳಿದ ರೈತರು, ತಹಶೀಲ್ದಾರ್ ಕಚೇರಿಯ ಮುಂಭಾಗ ಎರಡು ಚೀಲಕ್ಕು ಹೆಚ್ಚು ಈರುಳ್ಳಿಯನ್ನು ರಸ್ತೆಗೆ ಸುರಿದು ಪ್ರತಿಭಟನೆ ಮಾಡಿದರು.

ರೈತ ಸಂಘದ ರಾಜ್ಯಾಧ್ಯಕ್ಷ ಹುಚ್ಚವನಹಳ್ಳಿ ಮಂಜುನಾಥ್ ಮಾತನಾಡಿ, ತಾಲೂಕಿನಾದ್ಯಂತ ರೈತರು ಅತೀ ಹೆಚ್ಚು ಈರುಳ್ಳಿ ಬೆಳೆದಿದ್ದು, ದರ ಕುಸಿತದಿಂದ ಸಾಲಗಾರರಾಗಿ ಆತ್ಮಹತ್ಯೆಯ ಹಾದಿ ಹಿಡಿಯುವಂತಾಗಿದೆ. ಈ ಬಗ್ಗೆ ಹಲವು ಬಾರಿ ರೈತ ಸಂಘದಿಂದ ಹೋರಾಟ ಮಾಡಿ ಬೆಂಬಲ ಬೆಲೆ ನಿಗದಿಗೊಳಿಸುವಂತೆ ಒತ್ತಾಯಿಸಿದ್ದರಿಂದ, ರಾಜ್ಯ ಸರ್ಕಾರ ಪ್ರತೀ ಕ್ವಿಂಟಾಲ್‌ಗೆ ೬೨೪ ರೂ. ಬೆಂಬಲ ಬೆಲೆ ನಿಗದಿಗೊಳಿಸಿದೆ. ಆದರೆ ಜಿಲ್ಲಾ ಮಟ್ಟದಲ್ಲಿ ಕೇವಲ ೫ ಖರೀದಿ ಕೇಂದ್ರ ಆರಂಭಿಸಿದ್ದು, ರೈತರಿಗೆ ಹೋಗಿ ಬರಲು ತೊಂದರೆಯಾಗಿದೆ ಎಂದು ರೈತರ ಸಮಸ್ಯೆಯನ್ನು ತಿಳಿಸಿದರು. ಜಗಳೂರು ಮತ್ತು ಹರಪನಹಳ್ಳಿ ತಾಲೂಕು ಕೇಂದ್ರದ ಎ.ಪಿ.ಎಂ.ಸಿ. ಮಾರುಕಟ್ಟೆಯಲ್ಲಿ ಖರೀದಿ ಕೇಂದ್ರ ಸ್ಥಾಪನೆ ಮಾಡಬೇಕು ಹಾಗೂ ಈರುಳ್ಳಿಯನ್ನು ೩ ಗಾತ್ರವಾಗಿ ವಿಂಗಡಿಸುವಂತಿಲ್ಲ, ಎಲ್ಲಾ ಗಾತ್ರದ ಗಡ್ಡೆಗಳನ್ನು ನಿಗದಿತ ದರಕ್ಕೆ ಖರೀದಿಸಬೇಕು. ರಾಜ್ಯ ಸರ್ಕಾರದೊಂದಿಗೆ ಕೇಂದ್ರ ಸರ್ಕಾರವು ೬೦೦ ರೂ. ಬೆಂಬಲ ಬೆಲೆ ನೀಡುವ ಮೂಲಕ, ಈರುಳ್ಳಿ ಬೆಳೆಗಾರರ ಸಂಕಷ್ಟಕ್ಕೆ ಸ್ಪಂದಿಸಬೇಕು. ತಾಲೂಕು ಮಟ್ಟದಲ್ಲಿ ಖರೀದಿ ಕೇಂದ್ರಗಳನ್ನು ಆರಂಭಿಸದಿದ್ದರೆ ಮುಂಬರುವ ದಿನಗಳಲ್ಲಿ ರಾಷ್ಟ್ರೀಯ ಹೆದ್ದಾರಿ ಬಂದ್ ಮಾಡುವ ಮೂಲಕ ತೀವ್ರ ಹೋರಾಟ ನಡೆಸಲಾಗುವುದೆಂದು ಎಚ್ಚರಿಕೆ ನೀಡಿದರು.[೧೨೫]

ಅ ಸಮಯದಲ್ಲಿ ಪ್ರತಿಭಟನಾ ಸ್ಥಳಕ್ಕೆ ಆಗಮಿಸಿದ ತಹಶೀಲ್ದಾರರು ರೈತರಿಂದ ಮನವಿ ಸ್ವೀಕರಸಿ ಮಾತನಾಡಿದ ಅವರು, ಜಗಳೂರು ಹಾಗೂ ಹರಪನಹಳ್ಳಿಯಲ್ಲಿ ಈರುಳ್ಳಿ ಖರೀದಿ ಕೇಂದ್ರಗಳನ್ನು ಸ್ಥಾಪಿಸುವಂತೆ ಜಿಲ್ಲಾಧಿಕಾರಿಗಳು ಹಾಗು ಸರ್ಕಾರದ ಜೊತೆ ಚರ್ಚಿಸಿ ಸಮಸ್ಯೆ ಬಗೆಹರಿಸುವದಾಗಿ ಹೇಳಿದರು. ಇದರಿಂದಾಗಿ ರೈತರು ಪ್ರತಿಭಟನೆಯನ್ನು ಹಿಂಪಡೆದರು. ಪರಿಣಾಮವಾಗಿ ಜಿಲ್ಲಾಧಿಕಾರಿಗಳು ನವಂಬರ್ ೭ ರಂದು ಖರೀದಿ ಕೇಂದ್ರ ಆರಂಭಿಸಿದರು.

ಪ್ರತಿಭಟನೆಯಲ್ಲಿ ರಾಜ್ಯಾಧ್ಯಕ್ಷ ಹುಚ್ಚವನಹಳ್ಳಿ ಮಂಜುನಾಥ್, ತಾಲೂಕು ಅಧ್ಯಕ್ಷ ಕಾನನಕಟ್ಟೆ ತಿಪ್ಪೇಸ್ವಾಮಿ, ಪೂಜಾರಿ ಹನುಮಂತಪ್ಪ, ಯಮನೂರಪ್ಪ, ಮಾರನಾಯಕ ಮುಂತಾದ ರೈತರು ಭಾಗವಹಿಸಿದ್ದರು.

**ಶೇಂಗಾ ಬೆಂಬಲ ಬೆಲೆಗೆ ಆಗ್ರಹಿಸಿ ರೈತರ ಪ್ರತಿಭಟನೆ:– ೨೪/೧೧/೨೦೧೭**

ಚಳ್ಳಕೆರೆ ನಗರದಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ವತಿಯಿಂದ ಐದುನೂರಕ್ಕಿಂತ ಹೆಚ್ಚು ರೈತರು ಶೇಂಗಾ ಬೆಂಬಲ ಬೆಲೆಗೆ ಆಗ್ರಹಿಸಿ ನವಂಬರ್ ೨೪ ೨೦೧೭ ರಂದು ಎ.ಪಿ.ಎಂ.ಸಿ ಕಛೇರಿಯನ್ನು ಮುತ್ತಿಗೆ ಹಾಕುವ ಮೂಲಕ ಪ್ರತಿಭಟನೆ ಮಾಡಿದರು.

ನಾಲ್ಕೈದು ವರ್ಷಗಳಿಂದ ಮಳೆಯಿಲ್ಲದೆ ಭೂಮಿಗೆ ಹಾಕಿದ ಬೆಳೆ ರೈತನಿಗೆ ಸಿಗದೆ ಸಾಲದ ಸುಳಿಯಲ್ಲಿದ್ದಾರೆ. ಈ ವರ್ಷ ಕೊನೆಗೆ ಮಳೆರಾಯ ಕಣ್ಣು ಬಿಟ್ಟಿದ್ದರಿಂದ ಅಲ್ಪಸ್ವಲ್ಪ ಶೇಂಗಾ ಬಂದಿದೆ. ಆದರೆ ಅದಕ್ಕೂ ಬೆಲೆಯಿಲ್ಲದಂತಾಗಿದೆ. ಕೂಡಲೆ ಸರಕಾರ ಬೆಂಬಲ ಬೆಲೆ ಘೋಷಣೆ ಮಾಡಿ ಕ್ವಿಂಟಾಲ್ ಶೇಂಗಾವನ್ನು ಎಂಟು ಸಾವಿರದಂತೆ ಖರೀದಿಸಬೇಕೆಂದು ಒತ್ತಾಯಿಸಿ ನವೆಂಬರ್ ೨೪ ೨೦೧೭ರಂದು ಎ.ಪಿ.ಎಂ.ಸಿ.ಯನ್ನು ಮುತ್ತಿಗೆ ಹಾಕಿದರು.

ಕೈಗಾರಿಕೆಗಳು ತಯಾರು ಮಾಡುವ ಸಣ್ಣ ಗುಂಡು ಸೂಜಿಗೆ ನಿಗದಿಯಾದ ಬೆಲೆಯಿದೆ. ಆದರೆ ದೇಶಕ್ಕೆ ಅನ್ನ ಕೊಡುವ ರೈತ ಬೆಳೆಯುವ ಯಾವ ಧಾನ್ಯಗಳಿಗೂ ಬೆಲೆಯಿಲ್ಲ. ದೇಶದಲ್ಲಿ ರೈತ ಬೆಳೆಯುವ ವಸ್ತುಗಳನ್ನು ಬಿಟ್ಟು, ಬೇರೆ ಯಾವುದೇ ವಸ್ತುಗಳ ಬೆಳೆ ಇಳಿಕೆಯಾಗಿಲ್ಲ. ರೈತರು ಬೆಳೆದ ಧಾನ್ಯಗಳನ್ನು ವರ್ತಕರು ಮತ್ತು ವ್ಯಾಪಾರಿಗಳು ಬೇಕಾಬಿಟ್ಟಿಯಾಗಿ ಕೊಳ್ಳುತ್ತಿದ್ದಾರೆ. ಇದರಿಂದ ರೈತರ ಬದುಕು ಕಷ್ಟವಾಗಿದೆ. ಸರ್ಕಾರ ಮಾತ್ರ ಕಣ್ಣುಮುಚ್ಚಿ ಕುಳುತಿದೆ. ಸರ್ಕಾರ ಕೃಷಿಗಾಗಿ ಆವರ್ತ ನಿಧಿ ಸ್ಥಾಪಿಸಿರುವದನ್ನು ಕೆ.ಒ.ಎಫ್‌ಗೆ ಅನುಧಾನ ನೀಡಿ, ಅವರಿಂದ ಖರೀದಿ ಕೇಂದ್ರಗಳನ್ನು ತೆರೆದು ಎಂಟು ಸಾವಿರದಂತೆ ಕ್ವಿಂಟಾಲ್ ಶೇಂಗಾ ಮತ್ತು ಎರಡು ಸಾವಿರದಂತೆ ಮೆಕ್ಕೆಜೋಳವನ್ನು ಖರೀದಿಸಬೇಕು. ಜೊತೆಗೆ ಸ್ಥಳೀಯ ವ್ಯಾಪಾರಗಳಿಂದ ರೈತರಿಗೆ ಬೆಲೆ ಸಿಗುತ್ತಿಲ್ಲ. ಇದರಿಂದ ಮಹಾರಾಷ್ಟ್ರ ಮತ್ತು ತಮಿಳುನಾಡಿನಿಂದ ಖರೀದಿದಾರರನ್ನು ಕರೆಸುವಂತೆ ರೈತ ಮುಖಂಡರು ಒತ್ತಾಯಿಸಿದರು.

ರಾಜ್ಯ ರೈತ ಸಂಘದ ಉಪಾಧ್ಯಕ್ಷರಾದ ಕೆ.ಪಿ. ಭೂತಯ್ಯರವರು ಮಾತನಾಡಿ ಸರಕಾರ ಬಿತ್ತನೆ ಶೇಂಗಾ ವಿತರಿಸುವಾಗ ೬ ರಿಂದ ೭ ಸಾವಿರಕ್ಕೆ ನೀಡಿದೆ ಅದರಂತೆ ರೈತರಿಂದ

ಖರೀದಿಸಬೇಕು. ಆದರೆ ಸರ್ಕಾರ ರೈತರ ನೆರವಿಗೆ ಬರುತ್ತಿಲ್ಲ. ರೈತ ಸಂಘದಿಂದ ಜಿಲ್ಲಾಧಿಕಾರಿಗೆ ಪತ್ರ ನೀಡಿದ ನಂತರ ಡಿ.ಸಿ.ಯವರು ೪.೪೫೦ ರೂ.ಗಿಂತ ಕಡಿಮೆ ಮಾಡದೆ. ಕ್ವಿಂಟಾಲ್ ಶೇಂಗಾವನ್ನು ಖರೀದಿ ಮಾಡುವಂತೆ ಸೂಚನೆ ನೀಡಿದರು. ಎ.ಪಿ.ಎಂ.ಸಿ.ಯಲ್ಲಿ ತೋರಿಕೆಗಾಗಿ ಒಂದಿಬ್ಬರಿಗೆ ರೇಟು ಕೊಟ್ಟು, ಉಳಿದಂತೆ ಸ್ಥಳೀಯ ವ್ಯಾಪಾರಿಗಳು ಕ್ವಿಂಟಾಲ್‌ಗೆ ೨೫೦೦ ರಿಂದ ೩೫೦೦ ರೂ. ಶೇಂಗಾಕ್ಕೆ ಟೆಂಡರ್ ಹಾಕುತ್ತಿದ್ದಾರೆ. ಶನಿವಾರದಂದು ಶಾಸಕರ ಅಧ್ಯಕ್ಷತೆಯಲ್ಲಿ ಸಭೆ ಕರೆದು, ಶೇಂಗಾ ಬೆಳೆಯಲ್ಲಿ ಆಗುತ್ತಿರುವ ಮೋಸ ತಪ್ಪಿಸಿ ಕೆ.ಒ.ಎಫ್ ನಿಂದ ಶೇಂಗಾ ಖರೀದಿ ಮಾಡುವಂತೆ ಕ್ರಮಕೈಗೊಳ್ಳಬೇಕು. ಇಲ್ಲದಿದ್ದರೆ ಎ.ಪಿ.ಎಂ.ಸಿ. ಬಾಗಿಲು ಹಾಕಿ ಎಂದು ಎಚ್ಚರಿಸಿದರು.[೧೬]

ಆ ಸಮಯದಲ್ಲಿ ಪ್ರತಿಭಟನಾ ನಿರತ ರೈತರನ್ನು ಉದ್ದೇಶಿಸಿ ಮಾತನಾಡಿದ ಕೃಷಿ ಉಪನಿರ್ದೇಶಕಿ ಡಾ. ಸುಜಾತರವರು ಕೆಲ ವರ್ಷಗಳಿಂದ ಮಳೆಯಿಲ್ಲದೆ ಶೇಂಗಾ ಬೆಳೆಯೇ ಬರುತ್ತಿಲ್ಲ. ಈ ವರ್ಷ ಉತ್ತಮ ಬೆಳೆ ಬಂದರೂ ಬೆಲೆಯಿಲ್ಲದಿರುವುದು ನೋವು ತಂದಿದೆ. ನಿಮ್ಮ ಬೇಡಿಕೆಯಂತೆ ಕೆ.ಒ.ಎಫ್.ನವರು ಶೇಂಗಾ ಖರೀದಿಸಿದರೆ ಉತ್ತಮ ಬೆಲೆ ಸಿಗುವುದು. ಇದನ್ನು ಕುರಿತು ಸರ್ಕಾರದ ಗಮನಕ್ಕೆ ತರಲಾಗುವುದೆಂದು ತಿಳಿಸಿದರು.

ಎ.ಪಿ.ಎಂ.ಸಿ ಉಪನಿರ್ದೇಶಕರು ಪ್ರತಿಭಟನಾ ಸ್ಥಳಕ್ಕೆ ಭೇಟಿ ನೀಡಿ, ಕೆ.ಒ.ಎಫ್.ನಿಂದ ಕೇವಲ ಶೇಂಗಾವನ್ನು ಮಾತ್ರ ಖರೀದಿ ಮಾಡಲಾಗುತ್ತದೆ ಆದರೆ ಎಲ್ಲಾ ಬೆಳೆಗಳನ್ನು ಖರೀದಿಸಲು ಸಾಧ್ಯವಿಲ್ಲವೆಂದು ಹೇಳಿದರು.

ರೈತರ ಪ್ರತಿಭಟನೆಯ ಹಿನ್ನೆಲೆಯಲ್ಲಿ ಶನಿವಾರದಂದು ಎ.ಪಿ.ಎಂ.ಸಿ.ಯ ಸಭಾಂಗಣದಲ್ಲಿ ಶೇಂಗಾ ಬೆಳೆಗೆ ಬೆಂಬಲ ನೀಡುವ ಕುರಿತು ತುರ್ತು ಸಭೆ ನಡೆಸಲಾಯಿತು. ಸಭೆಯಲ್ಲಿ ತಹಶೀಲ್ದಾರ್ ಟಿ.ಸಿ. ಕಾಂತರಾಜ್, ಕೃಷಿ ಇಲಾಖೆಯ ಉಪನಿರ್ದೇಶಕಿ ಡಾ. ಸುಜಾತರೆಡ್ಡಿ, ಎ.ಪಿ.ಎಂ.ಸಿ. ಅಧ್ಯಕ್ಷ ರೆಡ್ಡಿಹಳ್ಳಿ ಶಿವಣ್ಣ, ಉಪಾಧ್ಯಕ್ಷ ದೊಡ್ಡರಂಗಣ್ಣ, ಜಂಟಿ ನಿರ್ದೇಶಕ ಮಹಮದ್ ಖಲೀಲ್, ಕೆಒಎಫ್ ಡಿಜಿಎಂ ಮಹಮ್ಮದ್ ಮೊಯಿದ್ದೀನ್, ನಿರ್ದೇಶಕರಾದ ಹನುಮಂತಪ್ಪ, ರೈತ ಸಂಘ ಜಿಲ್ಲಾಧ್ಯಕ್ಷ ರೆಡ್ಡಿಹಳ್ಳಿ ವೀರಣ್ಣ ಮತ್ತಿತರರು ಭಾಗವಹಿಸಿದ್ದರು.

ದಲ್ಲಾಳರ ಸಂಘದ ಅಧ್ಯಕ್ಷ ಕೆ.ಎಂ. ಅರವಿಂದ್ ಮಾತನಾಡಿ, ಇಲ್ಲಿನ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಖರೀದಿದಾರರು ಶೇಂಗಾ ಬೆಳೆಯ ಗುಣಮಟ್ಟವನ್ನು ಅವಲೋಕಿಸಿ ದರವನ್ನು ನಿಗದಿಗೊಳಿಸುತ್ತಾರೆ. ಕೆಲವರಿಗೆ ಕಡಿಮೆ ದರ ಸಿಕ್ಕಂತೆ ಮತ್ತೆ ಕೆಲವರಿಗೆ ಉತ್ತಮ ದರ ದೊರಕಿದೆ. ರೈತರಿಗೆ ಅನ್ಯಾಯ ಮಾಡುವ ಉದ್ದೇಶ ನಮಗಿಲ್ಲ ಎಂದರು.

ಇದಕ್ಕೆ ಅಕ್ಷೇಪ ವ್ಯಕ್ತಪಡಿಸಿದ ರೈತ ಸಂಘದ ರಾಜ್ಯ ಉಪಾಧ್ಯಕ್ಷ ಕೆ.ಪಿ. ಭೂತಯ್ಯ ಚಿತ್ರದುರ್ಗದಲ್ಲಿ ಪ್ರತಿ ಕ್ವಿಂಟಾಲ್ ಶೇಂಗಾಕ್ಕೆ ೪೦೦೦–೫೦೦೦ ರೂವರೆಗೂ ದರ ನಿಗದಿಗೊಳಿಸಲಾಗುತ್ತದೆ. ಇಲ್ಲಿ ಕಡಿಮೆಯಾಗಲು ಕಾರಣವೇನು? ಎಂದು ಪ್ರಶ್ನಿಸಿದರು. ಖರೀದಿದಾರರ ನಿರ್ಲಕ್ಷ್ಯದಿಂದ ಶೇಂಗಾ ಬೆಳೆಗಾರರು ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ

ನಿರ್ಮಾಣವಾಗಿದೆ. ತಾಲೂಕು ಆಡಳಿತ ಕೂಡಲೇ ಶೇಂಗಾ ಬೆಳೆಗೆ ಹೆಚ್ಚಿನ ದರ ನೀಡಬೇಕು. ಹೋಬಳಿ ಮಟ್ಟದಲ್ಲಿ ಶೇಂಗಾ ಖರೀದಿ ಕೇಂದ್ರಗಳನ್ನು ಸ್ಥಾಪಿಸಬೇಕು. ಇಲ್ಲವಾದಲ್ಲಿ ಉಗ್ರ ಹೋರಾಟ ಅನಿವಾರ್ಯವೆಂದು ಎಚ್ಚರಿಕೆ ನೀಡಿದರು.

ತಹಶೀಲ್ದಾರ್ ಟಿ.ಸಿ. ಕಾಂತರಾಜ್ ಪ್ರತಿಕ್ರಿಯಿಸಿ, ಶೇಂಗಾ ಬೆಳೆಗೆ ಬೆಂಬಲ ಬೆಲೆ ನೀಡದೇ ಹೋದಲ್ಲಿ ರೈತರು ಸಂಪೂರ್ಣವಾಗಿ ನಷ್ಟ ಅನುಭವಿಸಬೇಕಾಗುತ್ತದೆ. ಖರೀದಿದಾರರೂ ಹೆಚ್ಚಿನ ದರ ನಮೂದಿಸುವ ಬಗ್ಗೆ ಉತ್ಸಾಹ ತೋರುತ್ತಿಲ್ಲವೆಂದರು. ನಂತರ ಕೆ.ಒ.ಎಫ್‌ನ ಡಿ.ಜಿ.ಎಂ ಮಹಮದ್ ಮೊಯಿದ್ದೀನ್ ಅವರಿಗೆ ಮನವೊಲಿಸಿ ಶೇಂಗಾ ಖರೀದಿ ಮಾಡುವಂತೆ ಮಾಡುವಲ್ಲಿ ಸಫಲವಾದರು. ನವೆಂಬರ್ ೨೭ರಂದು ಹಿರಿಯ ಅಧಿಕಾರಿಗಳ ಅನುಮತಿ ಪಡೆದು ಖರೀದಿ ಪ್ರಾರಂಭಿಸುವುದಾಗಿ ಮೊಯಿದ್ದೀನ್ ಭರವಸೆ ನೀಡಿದರು.

**ಬೆಳೆ ವಿಮೆ ಮಂಜೂರು ಮಾಡಿಸುವಂತೆ ಹಾಗೂ ಶೇಂಗಾ ನಷ್ಟಕ್ಕೆ ಪರಿಹಾರ ನೀಡುವಂತೆ ಒತ್ತಾಯಿಸಿ ರೈತರ ಪ್ರತಿಭಟನೆ:- ೧೩/೦೩/೨೦೧೮**

ಚಿತ್ರದುರ್ಗ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ವತಿಯಿಂದ ನೂರಾರು ರೈತರು, ಬೆಳೆ ವಿಮೆ ಪಾವತಿ ಮಾಡಿರುವ ರೈತರಿಗೆ ಬೆಳೆ ವಿಮೆ ಮಂಜೂರು ಮಾಡಿಸಿ ಶೇಂಗಾ ಬೆಳೆ ನಷ್ಟದ ಪರಿಹಾರವನ್ನು ರೈತರ ಬ್ಯಾಂಕ್ ಖಾತೆಗಳಿಗೆ ಜಮಾ ಮಾಡುವಂತೆ ಆಗ್ರಹಿಸಿ, ಮಾರ್ಚ್ ೧೩ ೨೦೧೮ ರಂದು ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ಪ್ರತಿಭಟನೆ ಮಾಡಿದರು.

ರೈತ ಮುಖಂಡರಾದ ಕೆ.ಪಿ. ಭೂತಯ್ಯರವರು ಮಾತನಾಡಿ ಜಿಲ್ಲೆಯಲ್ಲಿ ೨೦೧೭ನೇ ಸಾಲಿನ ಬೆಳೆ ವಿಮೆಗೆ ಸಂಬಂಧಿಸಿದಂತೆ ಈಗಾಗಲೇ ರೈತರು ಶೇಂಗಾ, ಈರುಳ್ಳಿ, ಮೆಕ್ಕೆಜೋಳ, ತೆಂಗು, ಅಡಕೆ ಬೆಳೆಗಳಿಗೆ ರೈತರು ಬೆಳೆ ವಿಮೆಯನ್ನು ಬ್ಯಾಂಕ್ ಖಾತೆಗೆ ಜಮಾ ಮಾಡಿದ್ದಾರೆ. ಸರ್ಕಾರ ಮತ್ತು ವಿಮೆ ಕಂಪನಿಗಳು ರೈತರ ಬ್ಯಾಂಕ್ ಖಾತೆಗೆ ವಿಮೆ ಹಣವನ್ನು ತುಂಬದೆ ವಿಳಂಬ ಮಾಡುತ್ತಿವೆ. ಚಳ್ಳಕೆರೆಯಲ್ಲಿ ೨೦೧೭ರ ಮುಂಗಾರು ಹಂಗಾಮಿಗೆ ಶೇಂಗಾ ಬಿತ್ತಿದ ರೈತರು ಸಂಪೂರ್ಣವಾಗಿ ನಷ್ಟ ಅನುಭವಿಸಿದ್ದಾರೆ ಎಂದರು. ಜಿಲ್ಲೆಯಲ್ಲಿ ಶೇಂಗಾ, ಈರುಳ್ಳಿ, ಮೆಕ್ಕೆಜೋಳ ಸಂಪೂರ್ಣ ಒಣಗಿ ಹೋಗಿವೆ. ಮೊಳಕಾಲ್ಮೂರು ತಾಲೂಕಿನ ರೈತರು ಶೇಂಗಾ ಬಿತ್ತನೆಗೆ ಹಾಕಿದ ಬಂಡವಾಳವು ಕೈಗೆ ಸಿಗದೆ ಹೀನಾಯ ಪರಿಸ್ಥಿತಿ ಎದುರಾಗಿದೆ. ನನ್ನಿವಾಳ, ನಾಯಕನಹಟ್ಟಿ, ದೇವರರೆಡ್ಡಿಹಳ್ಳಿ, ಗೌರಿಸಮುದ್ರ ಹೋಬಳಿಗಳಲ್ಲಿ ಕಂದಾಯ ಮತ್ತು ಕೃಷಿ ಇಲಾಖೆಯವರು ಜಂಟಿಯಾಗಿ ಸಮೀಕ್ಷೆ ನಡೆಸಬೇಕು. ನಷ್ಟದ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಬೇಕೆಂದು ಒತ್ತಾಯಿಸಿ, ರೈತರು ಜಿಲ್ಲಾಧಿಕಾರಿಯವರಿಗೆ ಮನವಿ ಸಲ್ಲಿಸಿದರು.[೧೨೭] ಮನವಿ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು ಸರ್ಕಾರದ ಜೊತೆಗೆ ಚರ್ಚಿಸಿ, ತಕ್ಷಣವೇ ಹಾನಿಯಾಗಿರುವ ಬೆಳೆಗಳ ಸಮೀಕ್ಷೆಯನ್ನು ಮಾಡಲು ಈ ಕೂಡಲೇ ಕ್ರಮ ಕೈಗೊಂಡು, ಬೆಳೆ ಹಾನಿಯಾದ ರೈತರಿಗೆ ಪರಿಹಾರ ಸಿಗುವಂತೆ ಮಾಡುವುದಾಗಿ ಭರವಸೆ ನೀಡಿದರು.

ಪ್ರತಿಭಟನೆಯಲ್ಲಿ ರಾಜ್ಯ ರೈತ ಸಂಘದ ಉಪಾಧ್ಯಕ್ಷ ಕೆ.ಪಿ. ಭೂತಯ್ಯ, ದಯಾನಂದಮೂರ್ತಿ, ಜಿಲ್ಲಾ ಸಂಚಾಲಕ ಧನಂಜಯ, ಪಿಲ್ಲಹಳ್ಳಿ ಚಿತ್ರಲಿಂಗಪ್ಪ, ಪಿ.ಬಿ. ರಾಮಚಂದ್ರ ರೆಡ್ಡಿ, ಹಿರಿಯೂರು ತಾಲೂಕು ಅಧ್ಯಕ್ಷ ಹೊರಕೇರಪ್ಪ, ಸಿದ್ದರಾಮಣ್ಣ, ಶಿವಕುಮಾರ್ ಮುಂತಾದವರು ಪಾಲ್ಗೊಂಡಿದ್ದರು.

ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನಡೆದ ಈ ಎಲ್ಲಾ ರೈತ ಪ್ರತಿಭಟನೆಗಳು, ಈ ಭಾಗದ ರೈತರ ಬದುಕಿನಲ್ಲಿ ಹೊಸ ಬದಲಾವಣೆಯನ್ನು ತಂದಿದೆ. ಕವಿದ ಕಷ್ಟಗಳ ಕಾರ್ಮೋಡಗಳು ಮರೆಯಾಗಿ ಹೊಸ ಮನ್ವಂತರಗಳು ರೈತರ ಬದುಕಿನಲ್ಲಿ ಹೊಸ ಭರವಸೆಗಳನ್ನು ಮೂಡಿಸಿದವು.

ಈ ಎಲ್ಲಾ ರೈತ ಪ್ರತಿಭಟನೆಗಳಿಂದ ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳ ರೈತರ ಬದುಕಿನಲ್ಲಿ, ಹೊಸ ಬದಲಾವಣೆಯನ್ನು ತರಲಾಯಿತು. ಕವಿದ ಕಷ್ಟಗಳ ಕಾರ್ಮೋಡಗಳು ಮರೆಯಾಗಿ ಹೊಸ ಮನ್ವಂತರಗಳು ರೈತರ ಬದುಕಿನಲ್ಲಿ ಹೊಸ ಭರವಸೆಗಳನ್ನು ಮೂಡಿಸಿದವು.[೧೮]

## ಕೊನೆ ಟಿಪ್ಪಣಿಗಳು

೦೧. ಸಂದರ್ಶನದ ಮಾಹಿತಿ, ಎಂ.ಎಸ್.ಕೆ.ಶಾಸ್ತ್ರಿ, ದಿ.೧೦.೦೫.೨೦೧೮
೦೨. ಜನತಾವಾಣಿ ದಿನಪತ್ರಿಕೆ, ೧೬ ಮಾರ್ಚ್ ೧೯೮೫, ಪುಟ,೦೪
೦೩. ಜನತಾವಾಣಿ ದಿನಪತ್ರಿಕೆ, ೨೯ ಮಾರ್ಚ್ ೧೯೮೫, ಪುಟ,೦೨
೦೪. ಚಿತ್ರದುರ್ಗದ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ೦೯ ಸೆಪ್ಟಂಬರ್ ೧೯೯೧
೦೫. ಜನತಾವಾಣಿ ದಿನಪತ್ರಿಕೆ, ೨೧ ಡಿಸೆಂಬರ್ ೧೯೯೧, ಪುಟ,೦೪
೦೬. ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ, ದಿ.೨೮.೦೬.೨೦೧೮
೦೭. ಸಂದರ್ಶನದ ಮಾಹಿತಿ, ಎಂ.ಎಸ್.ಕೆ.ಶಾಸ್ತ್ರಿ, ದಿ.೧೦.೦೫.೨೦೧೮
೦೮. ಜನತವಾಣಿ ದಿನಪತ್ರಿಕೆ, ಸೆಪ್ಟಂಬರ್ ೧೧, ೧೯೯೨, ಪುಟ,೦೧
೦೯. ಸಂದರ್ಶನದ ಮಾಹಿತಿ, ಅವರಗೆರೆ ರುದ್ರಮುನಿ, ದಿ.೧೯.೦೭.೨೦೧೮
೧೦. ಸಂದರ್ಶನದ ಮಾಹಿತಿ, ಎಂ.ಎಸ್.ಕೆ.ಶಾಸ್ತ್ರಿ, ದಿ.೧೦.೦೫.೨೦೧೮
೧೧. ಜನತವಾಣಿ ದಿನಪತ್ರಿಕೆ, ೨೨ ೧೧ ೧೯೯೨, ಪುಟ,೦೧
೧೨. ಸಂದರ್ಶನದ ಮಾಹಿತಿ, ಅವರಗೆರೆ ರುದ್ರಮುನಿ, ದಿ.೧೦.೦೫.೨೦೧೮
೧೩. ಜನತಾವಾಣಿ ದಿನಪತ್ರಿಕೆ, ದಿ.೦೪.೦೮.೧೯೯೩, ಪುಟ,೦೪
೧೪. ಸಂದರ್ಶನದ ಮಾಹಿತಿ, ಅರುಣ್‌ಕುಮಾರ್ ಕುರುಡಿ, ದಿ.೧೫.೧೧.೨೦೧೮
೧೫. ಸಣ್ಣ ನೀರಾವರಿ ಇಲಾಖೆ, ಕರ್ನಾಟಕ ಸರ್ಕಾರದ ಆದೇಶ ಪತ್ರ, ೨೧-೦೩-೧೯೯೪
೧೬. ವಿಜಯ ಟೈಮ್ಸ್, ಶನಿವಾರ, ೪ ಸೆಪ್ಟಂಬರ್ ೨೦೦೪, ಪುಟ,೦೬
೧೭. ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್, ಶನಿವಾರ, ೪ ಸೆಪ್ಟಂಬರ್ ೨೦೦೪, ಪುಟ,೦೬

೧೮. ಬೃಹತ್ ನೀರಾವರಿ ಸಚಿವರಿಗೆ ನೀಡಿದ ೧೯ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿಯ ಮನವಿ ಪತ್ರ, ೨೫-೦೫-೨೦೦೫
೧೯. ಬೃಹತ್ ನೀರಾವರಿ ಸಚಿವರಿಗೆ ನೀಡಿದ ೧೯ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿಯ ಮನವಿ ಪತ್ರ, ೧೭-೦೩-೨೦೦೬
೨೦. ೨೨ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿಯ ಕರ ಪತ್ರ, ೧೩,೧೧,೨೦೦೬
೨೧. ಬೃಹತ್ ನೀರಾವರಿ ಸಚಿವರಿಗೆ ನೀಡಿದ ೧೯ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿಯ ಮನವಿ ಪತ್ರ, ೦೫-೧೨-೨೦೦೬
೨೨. ಕರ್ನಾಟಕ ಸರ್ಕಾರ, ಜಲಸಂಪನ್ಮೂಲ ಸಚಿವರು, ಸಂ.ಜಸಂ.ಸಾ.ಕಾ: ಅಸಪ:೧೦೪೦:೨೦೦೬,೧೧-೧೨-೨೦೦೬
೨೩. ಮುಖ್ಯ ಇಂಜಿನಿಯರ್ ಕರ್ನಾಟಕ ನೀರಾವರಿ ನಿಗಮ ನಿಯಮಿತ, ತುಂಗಾ ಮೇಲ್ದಂಡೆ ಯೋಜನೆ ವಲಯ, ಶಿವಮೊಗ್ಗ ಇ.ಆರ್.ಸಂಖ್ಯೆ ೧೨೫೩/೨-೦, ದಿನಾಂಕ:೧೪/೦೮/೨೦೦೭
೨೪. ಸಂದರ್ಶನದ ಮಾಹಿತಿ, ಅವರಗೆರೆ ರುದ್ರಮುನಿ, ದಿ.೧೦.೦೫.೨೦೧೮
೨೫. ಸಂದರ್ಶನದ ಮಾಹಿತಿ, ಟಿ. ನುಲೇನೂರು ಶಂಕರಪ್ಪ, ದಿ.೨೯.೦೬.೨೦೧೮
೨೬. ಉದಯವಾಣಿ ದಿನಪತ್ರಿಕೆ ೮ ಮಾರ್ಚ್ ೧೯೯೯, ಪುಟ,೦೩
೨೭. ಉದಯವಾಣಿ ದಿನಪತ್ರಿಕೆ ೨೪ ಮಾರ್ಚ್ ೧೯೯೯, ಪುಟ,೦೨
೨೮. ಚಿತ್ರದುರ್ಗದ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ ೦೧ ಜುಲೈ ೨೦೦೧
೨೯. ಉದಯವಾಣಿ ದಿನಪತ್ರಿಕೆ ೦೨ ಜುಲೈ ೨೦೦೧, ಪುಟ,೦೨
೩೦. ಸಂದರ್ಶನದ ಮಾಹಿತಿ, ಟಿ. ನುಲೇನೂರು ಶಂಕರಪ್ಪ, ದಿ.೨೯.೦೬.೨೦೧೮
೩೧. ಸಂದರ್ಶನದ ಮಾಹಿತಿ, ಪಿ.ಕೋಂದಂಡರಾಮಯ್ಯ,ದಿ.೨೯.೦೬.೨೦೧೮
೩೨. ವಿಜಯ ಕರ್ನಾಟಕ ದಿನಪತ್ರಿಕೆ, ೨೪ ಜುಲೈ ೨೦೦೧, ಪುಟ,೦೧
೩೩. ಸಂದರ್ಶನದ ಮಾಹಿತಿ, ಪಿ. ಕೋದಂಡರಾಮಯ್ಯ, ದಿ.೨೯.೦೬.೨೦೧೮
೩೪. ವಿಜಯ ಕರ್ನಾಟಕ ದಿನಪತ್ರಿಕೆ, ೨೪ ಅಕ್ಟೋಬರ್ ೨೦೦೧, ಪುಟ,೦೪
೩೫. ಸಂದರ್ಶನದ ಮಾಹಿತಿ, ಟಿ. ನುಲೇನೂರು ಶಂಕರಪ್ಪ, ದಿ.೨೯.೦೬.೨೦೧೮
೩೬. ಉದಯವಾಣಿ ದಿನಪತ್ರಿಕೆ ೧೩ ನವಂಬರ್ ೨೦೦೧, ಪುಟ,೦೩
೩೭. ಉದಯವಾಣಿ ದಿನಪತ್ರಿಕೆ ೨೨ ಡಿಸೆಂಬರ್ ೨೦೦೧, ಪುಟ,೦೩
೩೮. ವಿಜಯ ಕರ್ನಾಟಕ ದಿನಪತ್ರಿಕೆ ೧೪ ಮೇ ೨೦೦೩, ಪುಟ,೦೨
೩೯. ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ, ದಿ.೨೮.೦೬.೨೦೧೮
೪೦. ಕರ್ನಾಟಕ ರಾಜ್ಯ ರೈತ ಸಂಘದ ಮನವಿ ಪತ್ರ,ಫೆಬ್ರವರಿ ೧೬ ೨೦೧೫
೪೧. ಪ್ರಜಾವಾಣಿ ದಿನಪತ್ರಿಕೆ, ೧೯ ಫೆಬ್ರವರಿ ೨೦೧೫, ಪುಟ,೦೨
೪೨. ಚಿತ್ರದುರ್ಗದ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ ೬ ಡಿಸೆಂಬರ್ ೨೦೧೫

೪೩. ಸಂದರ್ಶನದ ಮಾಹಿತಿ, ನುಲೇನೂರು ಶಂಕರಪ್ಪ, ದಿ.೨೯.೦೬.೨೦೧೮

೪೪. ಕರ್ನಾಟಕ ರಾಜ್ಯ ರೈತ ಸಂಘದ ಮನವಿ ಪತ್ರ,೨೬ ಮೇ ೨೦೧೬

೪೫. ಪ್ರಜಾವಾಣಿ ದಿನಪತ್ರಿಕೆ ಜುಲೈ ೧೬ ೨೦೧೬, ಪುಟ,೦೩

೪೬ ವಿಜಯ ಕರ್ನಾಟಕ ದಿನಪತ್ರಿಕೆ, ಆಗಸ್ಟ್ ೦೨ ೨೦೧, ಪುಟ,೦೨

೪೭ ಕರ್ನಾಟಕ ರಾಜ್ಯ ರೈತ ಸಂಘದ ಮನವಿ ಪತ್ರ, ಆಗಸ್ಟ್ ೫ ೨೦೧೬

೪೮. ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ, ದಿ.೨೮.೦೬.೨೦೧೮

೪೯. ಚಿತ್ರದುರ್ಗದ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ಸೆಪ್ಟೆಂಬರ್ ೦೩ ೨೦೧೬

೫೦. ಉದಯವಾಣಿ ದಿನಪತ್ರಿಕೆ, ಸೆಪ್ಟೆಂಬರ್ ೦೪ ೨೦೧೬, ಪುಟ,೦೩

೫೧. ಪ್ರಜಾವಾಣಿ ದಿನಪತ್ರಿಕೆ, ಡಿಸೆಂಬರ್ ೨೩ ೨೦೧೬, ಪುಟ,೦೨

೫೨. ಚಿತ್ರದುರ್ಗದಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ಜನವರಿ ೨೨ ೨೦೧೭

೫೩. ಅದೇ, ಜನವರಿ ೨೫ ೨೦೧೭

೫೪. ಅದೇ, ಜನವರಿ ೨೫ ೨೦೧೭

೫೫. ಪ್ರಜಾವಾಣಿ ದಿನಪತ್ರಿಕೆ,  ಜನವರಿ ೨೯ ೨೦೧೭, ಪುಟ,೦೩

೫೬. ಕರ್ನಾಟಕ ರಾಜ್ಯ ರೈತ ಸಂಘದ ಮನವಿ ಪತ್ರ, ಜನವರಿ ೨೮ ೨೦೧೭

೫೭. ಚಿತ್ರದುರ್ಗದ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ಏಪ್ರೀಲ್ ೧೮ ೨೦೧೭

೫೮. ಅದೇ, ಜೂನ್ ೧೫ ೨೦೧೭

೫೯. ಅದೇ, ಮೇ ೧೭ ೨೦೧೭

೬೦. ಸಂದರ್ಶನದ ಮಾಹಿತಿ, ರೆಡ್ಡಿಹಳ್ಳಿ ವೀರಣ್ಣ, ದಿ.೩೦.೦೬.೨೦೧೮

೬೧. ಸಂದರ್ಶನದ ಮಾಹಿತಿ, ಟಿ ನುಲೇನೂರು ಎಂ.ಶಂಕರಪ್ಪ,ದಿ.೨೯.೦೬.೨೦೧೮

೬೨. ಸಂದರ್ಶನದ ಮಾಹಿತಿ, ಟಿ ನುಲೇನೂರು ಎಂ.ಶಂಕರಪ್ಪ,ದಿ.೨೯.೦೬.೨೦೧೮

೬೩. ಕರ್ನಾಟಕ ರಾಜ್ಯ ರೈತ ಸಂಘದ ಮನವಿ ಪತ್ರ, ಆಗಸ್ಟ್ ೨೨ ೨೦೧೭

೬೪. ಸಂದರ್ಶನದ ಮಾಹಿತಿ, ಟಿ ನುಲೇನೂರು ಎಂ.ಶಂಕರಪ್ಪ,ದಿ.೨೯.೦೬.೨೦೧೮

೬೫. ಉದಯವಾಣಿ ದಿನಪತ್ರಿಕೆ, ಜನವರಿ ೧೧ ೨೦೧೮, ಪುಟ,೦೨

೬೬. ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ, ದಿ.೨೮.೦೬.೨೦೧೮

೬೭. ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ, ದಿ.೨೮.೦೬.೨೦೧೮

೬೮. ಸಂದರ್ಶನದ ಮಾಹಿತಿ, ಅವರಗೆರೆ ರುದ್ರಮುನಿ, ದಿ.೧೯.೦೭.೨೦೧೮

೬೯. ಜನತಾವಾಣಿ ದಿನಪತ್ರಿಕೆ, ಫೆಬ್ರವರಿ ೦೨ ೧೯೯೯, ಪುಟ,೦೬

೭೦. ಸಂದರ್ಶನದ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್,ದಿ.೨೧.೦೭.೨೦೧೮

೭೧. ಸಂದರ್ಶನದ ಮಾಹಿತಿ, ಅರುಣ್‌ಕುಮಾರ್ ಕುರುಡಿ,ದಿ.೧೫.೧೧.೨೦೧೮

೭೨. ಜನತವಾಣಿ ದಿನಪತ್ರಿಕೆ, ನವೆಂಬರ್ ೧೩ ೨೦೦೧, ಪುಟ,೦೨

೭೩. ಸಂದರ್ಶನದ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್,ದಿ.೨೧.೦೭.೨೦೧೮
೭೪. ಸಂದರ್ಶನದ ಮಾಹಿತಿ, ಕಾನನಕಟ್ಟೆ ತಿಪ್ಪೇಸ್ವಾಮಿ, ದಿ.೧೩.೧೨.೨೦೧೬
೭೫. ಸಂದರ್ಶನದ ಮಾಹಿತಿ, ರವಿಕುಮಾರ್ ಬಲ್ಲೂರ್, ದಿ.೧೧.೦೮.೨೦೧೬
೭೬. ಸಂದರ್ಶನದ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್, ದಿ.೨೧.೦೭.೨೦೧೮
೭೭. ಸಂದರ್ಶನದ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್, ದಿ.೨೧.೦೭.೨೦೧೮
೭೮. ವಿಜಯ ಕರ್ನಾಟಕ ದಿನಪತ್ರಿಕೆ, ಏಪ್ರೀಲ್ ೦೩ ೨೦೦೯, ಪುಟ,೦೪
೭೯. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ಏಪ್ರೀಲ್ ೦೭ ೨೦೦೯
೮೦. ಸಂದರ್ಶನದ ಮಾಹಿತಿ, ಕಾನನಕಟ್ಟೆ ತಿಪ್ಪೇಸ್ವಾಮಿ, ದಿ.೧೩.೧೨.೨೦೧೬
೮೧. ನನ್ನ ಮಿತ್ರ ದಿನಪತ್ರಿಕೆ, ೦೪ ೦೨ ೨೦೧೩, ಪುಟ, ೦೧
೮೨. ಸಂದರ್ಶನದ ಮಾಹಿತಿ, ಹುಚ್ಚವ್ವನಹಳ್ಳಿ ಮಂಜುನಾಥ್, ದಿ.೨೧.೦೭.೨೦೧೮
೮೩. ಸಂದರ್ಶನದ ಮಾಹಿತಿ, ಪಣಿಯಾಪುರದ ಲಿಂಗರಾಜ್, ದಿ.೨೧.೦೭.೨೦೧೮
೮೪. ವಿಜಯ ಕರ್ನಾಟಕ ದಿನಪತ್ರಿಕೆ, ನವೆಂಬರ್ ೨೩ ೨೦೧೪, ಪುಟ,೦೨
೮೫. ಸಂದರ್ಶನದ ಮಾಹಿತಿ, ಶೇಖರ್‌ನಾಯ್ಕ,ದಿ.೦೨.೦೧.೨೦೧೭
೮೬. ಸಂದರ್ಶನದ ಮಾಹಿತಿ, ಕಾನನಕಟ್ಟೆ ತಿಪ್ಪೇಸ್ವಾಮಿ, ದಿ.೧೩.೧೨.೨೦೧೬
೮೭. ಕನ್ನಡ ಪ್ರಭ, ದಿನಪತ್ರಿಕೆ, ಡಿಸೆಂಬರ್,೩೧,೨೦೧೪, ಪುಟ,೦೩
೮೮. ನನ್ನ ಮಿತ್ರ ದಿನಪತ್ರಿಕೆ, ೨೮ ೦೭ ೨೦೧೫, ಪುಟ,೦೧
೮೯. ಸಂದರ್ಶನದ ಮಾಹಿತಿ, ಶ್ರೀ ಬಲ್ಲೂರು ರವಿಕುಮಾರ್, ದಿ.೧೧.೦೮.೨೦೧೬
೯೦. ಸಂದರ್ಶನದ ಮಾಹಿತಿ, ಶ್ರೀ ಚಿನ್ನಸಮುದ್ರ ಶೇಖರ್‌ನಾಯ್ಕ್, ದಿ.೦೨.೦೧.೨೦೧೭
೯೧. ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣಯ್ಯ ಬಣ) ಮನವಿ ಪತ್ರ, ಮೇ ೧೩ ೨೦೧೬
೯೨. ಸಂದರ್ಶನದ ಮಾಹಿತಿ, ಕಾನನಕಟ್ಟೆ ತಿಪ್ಪೇಸ್ವಾಮಿ, ದಿ.೧೩.೧೨.೨೦೧೬
೯೩. ಸಂದರ್ಶನದ ಮಾಹಿತಿ, ಕಾನನಕಟ್ಟೆ ತಿಪ್ಪೇಸ್ವಾಮಿ, ದಿ.೧೩.೧೨.೨೦೧೬
೯೪. ಪ್ರಜಾವಾಣಿ ದಿನಪತ್ರಿಕೆ, ಜೂನ್ ೨೮ ೨೦೧೬, ಪುಟ,೦೩
೯೫. ಸಂದರ್ಶನದ ಮಾಹಿತಿ, ಚಿನ್ನಸಮುದ್ರ, ಶೇಖರನಾಯ್ಕ್,ದಿ.೦೨.೦೧.೨೦೧೭
೯೬. ಸಂದರ್ಶನದ ಮಾಹಿತಿ, ಶ್ರೀ ಹೊನ್ನೂರು ಮುನಿಯಪ್ಪರ, ದಿ.೦೩.೦೬.೨೦೧೭
೯೭. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ೯ ಸೆಪ್ಟೆಂಬರ್ ೨೦೧೬
೯೮. ಸಂದರ್ಶನದ ಮಾಹಿತಿ, ಹೊನ್ನೂರು ಮುನಿಯಪ್ಪ, ದಿ.೦೩.೦೬.೨೦೧೭
೯೯. ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಮನವಿ ಪತ್ರ, ಅಕ್ಟೋಬರ್ ೨೪ ೨೦೧೬
೧೦೦. ಸಂದರ್ಶನದ ಮಾಹಿತಿ, ಬಲ್ಲೂರು ರವಿಕುಮಾರ್, ದಿ.೧೧.೦೮.೨೦೧೬

೧೦೧. ಸಂದರ್ಶನದ ಮಾಹಿತಿ, ಶ್ರೀ ಹುಚ್ಚವನಹಳ್ಳಿ ಮಂಜುನಾಥ್,ದಿ.೨೧.೦೭.೨೦೧೮
೧೦೨. ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಮನವಿ ಪತ್ರ, ೨ ಜನವರಿ ೨೦೧೭
೧೦೩. ಸಂದರ್ಶನದ ಮಾಹಿತಿ, ಶ್ರೀ ಮಹೇಶ್ವರಸ್ವಾಮಿ, ದಿ.೦೮.೦೪.೨೦೧೮
೧೦೪. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ,ಮೇ ೨೯ ೨೦೧೭
೧೦೫. ಸಂದರ್ಶನದ ಮಾಹಿತಿ, ಬಲ್ಲೂರು ರವಿಕುಮಾರ್,ದಿ.೧೧.೦೮.೨೦೧೬
೧೦೬. ವಿಜಯ ಕರ್ನಾಟಕ ದಿನಪತ್ರಿಕೆ, ಜನವರಿ ೧೯ ೨೦೧೮, ಪುಟ,೦೧
೧೦೭. ಅದೇ, ಜನವರಿ ೨೦ ೨೦೧೮, ಪುಟ,೦೨
೧೦೮. ಪ್ರಜಾವಾಣಿ ದಿನಪತ್ರಿಕೆ, ಮೇ ೦೨ ೨೦೧೬, ಪುಟ,೦೨
೧೦೯. ಅದೇ, ಮೇ ೧೫ ೨೦೧೬, ಪುಟ,೦೨
೧೧೦. ಅದೇ, ಮೇ ೨೦ ೨೦೧೬, ಪುಟ,
೧೧೧. ಬಳ್ಳಾರಿ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ಮೇ ೨೭ ೨೦೧೬
೧೧೨. ಅದೇ, ಮೇ ೩೦ ೨೦೧೬
೧೧೩. ವಿಜಯ ಕರ್ನಾಟಕ ದಿನಪತ್ರಿಕೆ, ಜೂನ್ ೦೨ ೨೦೧೬, ಪುಟ,೦೨
೧೧೪. ಅದೇ, ಜುಲೈ ೨೨ ೨೦೧೬, ಪುಟ,೦೧
೧೧೫.ಸಂದರ್ಶನದ ಮಾಹಿತಿ, ಮಲೆ ಮಾಚಿಕೆರೆ ನಾಗರಾಜು. ರೈತರು, ಜಗಳೂರು,ದಿ.೨೨.೦೮.೨೦೧೬
೧೧೬.ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ಸೆಪ್ಟೆಂಬರ್ ೨೯ ೨೦೦೪
೧೧೭.ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ) ಅಕ್ಟೋಬರ್ ೩ ೨೦೦೪
೧೧೮.ಸಂದರ್ಶನದ ಮಾಹಿತಿ, ಅರುಣ್‌ಕುಮಾರ್ ಕುರುಡಿ, ದಿ.೧೫.೧೧.೨೦೧೮
೧೧೯.ಚಿತ್ರದುರ್ಗದ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ೨೪/೦೫/೨೦೧೬
೧೨೦.ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕರ ಪತ್ರ, ಮೇ ೩೦ ೨೦೧೬
೧೨೧.ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ,ದಿ.೨೮.೦೬.೨೦೧೮
೧೨೨.ಸಂದರ್ಶನದ ಮಾಹಿತಿ, ಟಿ ನುಲೇನೂರು ಎಂ.ಶಂಕರಪ್ಪ.ದಿ.೨೯.೦೬.೨೦೧೮
೧೨೩.ಸಂದರ್ಶನದ ಮಾಹಿತಿ, ಕಾನನಕಟ್ಟೆ ತಿಪ್ಪೇಸ್ವಾಮಿ, ದಿ.೧೩.೧೨.೨೦೧೬
೧೨೪.ಸಂದರ್ಶನದ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್,ದಿ.೨೧.೦೭.೨೦೧೮
೧೨೫.ಸಂದರ್ಶನದ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್,ದಿ.೨೧.೦೭.೨೦೧೮
೧೨೬.ಸಂದರ್ಶನದ ಮಾಹಿತಿ, ಕೆ.ಪಿ. ಭೂತಯ್ಯ,ದಿ.೨೮.೦೬.೨೦೧೮
೧೨೭.ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಮನವಿ ಪತ್ರ, ಮಾರ್ಚ್ ೧೩ ೨೦೧೮

೧೨೮. ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಕೆಳಗಿನ ಅಂಶಗಳು ಬೆಳಕಿಗೆ ಬಂದಿವೆ. ಚಳ್ಳಕೆರೆ ತಾಲೂಕಿನ ಮಲ್ಲೂರಹಳ್ಳಿಯ ಮ್ಯಾಸರ್ ಪಾಲಯ್ಯರವರು ನೂರಾರು ಎಕರೆಯ ರೈತರಾಗಿದ್ದು, ತಮ್ಮ ಭೂಮಿಯಲ್ಲಿ ಅತ್ಯಧಿಕ ಬೋರ್‌ವೆಲ್‌ಗಳನ್ನು ಕೊರೆಸಿದ್ದು, ಅಂತರ್ಜಲ ಮಟ್ಟ ಕಡಿಮೆಯಾಗಿ ಬೋರ್‌ವೆಲ್‌ಗಳು ಒಣಗಿ ಹೋಗಿದ್ದರಿಂದ ಬೆಳೆಗಳು ಸರಿಯಾಗಿ ಬೆಳೆಯದೆ ಅಧಿಕ ನಷ್ಟವನ್ನು ಅನುಭವಿಸಿರುತ್ತಾರೆ. ಶ್ರೀಮಂತ ಕುಟುಂಬ ಇಂದು ಬಡತನದ ಬೇಗೆಯಲ್ಲಿ ನರಳುತ್ತಿದ್ದಾರೆ. ಮುಸ್ಟಲಗುಮ್ಮಿಯ ಕೆಂಗಯ್ಯ ಮತ್ತು ವಿದ್ಯಾಭೂಷಣ್‌ರವರು ಪ್ರಮುಖ ರೈತರಾಗಿದ್ದು, ತಮ್ಮ ಜಮೀನಿನಲ್ಲಿ ಬೋರ್‌ವೆಲ್‌ಗಳನ್ನು ಕೊರೆಸಿದ್ದು, ಅಂತರ್ಜಲ ಮಟ್ಟ ಕಡಿಮೆಯಾಗಿ ಬೋರ್‌ವೆಲ್‌ಗಳು ಒಣಗಿ ಹೋಗಿದ್ದರಿಂದ ಬೆಳೆಗಳನ್ನು ಸರಿಯಾಗಿ ಬೆಳೆದಿರುವದಿಲ್ಲ. ಇದರಿಂದಾಗಿ ಇವರ ಬದುಕು ಅತಂತ್ರವಾಗಿದೆ. ದಾಸರಮುತ್ತೇನಹಳ್ಳಿಯ ಓಬಯ್ಯ, ಬೋರಯ್ಯ ಮುಂತಾದ ರೈತರು ತಮ್ಮ ಜಮೀನಿನಲ್ಲಿ ಬೆಳೆ ಬೆಳೆಯಲು ಬೋರ್‌ವೆಲ್‌ಗಳನ್ನು ಕೊರೆಸಿದ್ದು, ಅಂತರ್ಜಲದ ಅಭಾವದಿಂದಾಗಿ ಬೋರ್‌ವೆಲ್‌ಗಳು ಒಣಗಿ ಹೋಗಿದ್ದರಿಂದ ಬೆಳೆಗಳು ಹಾಳಗಿರುತ್ತವೆ. ನಾಯಕನಹಟ್ಟಿ, ಬೈರನಾಯಕನಹಟ್ಟಿ ಹಾಗೂ ರೇಖಲಗೆರೆ ಹಳ್ಳಿಯ ನೂರಾರು ರೈತರು ತಮ್ಮ ಜಮೀನುಗಳಲ್ಲಿ ಬೆಳೆ ಬೆಳೆಯಲು ಬೋರ್‌ವೆಲ್‌ಗಳನ್ನು ಕೊರೆಸಿದ್ದು, ಮಳೆಯ ಅಭಾವದಿಂದಾಗಿ ಬೋರ್‌ವೆಲ್‌ಗಳು ಸಂಪೂರ್ಣವಾಗಿ ಒಣಗಿ ಹೋಗಿವೆ. ಇದರಿಂದಾಗಿ ನೂರಾರು ರೈತರು ಅಧಿಕ ನಷ್ಟವನ್ನು ಅನುಭವಿಸಿರುತ್ತಾರೆ ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ. ಹಾಗೆಯೇ ಈ ಮೇಲಿನ ರೈತರು ಒಣ ಬೇಸಾಯದಲ್ಲಿ ಶೇಂಗಾವನ್ನು ಮತ್ತು ನೀರಾವರಿ ಬೆಳೆಯಾಗಿ ಈರುಳ್ಳಿಯನ್ನು ಬೆಳೆದು ಬೆಲೆ ಸರಿಯಾಗಿ ಸಿಗದೆ ಬೀದಿಪಾಲಾದ ಉದಾಹರಣೆಗಳಿವೆ.

ಅಧ್ಯಾಯ – ೭

# ಬಯಲುಸೀಮೆಯ ರೈತ ಸಂಘಟನೆಗಳು : ಅವಲೋಕನ

ಕರ್ನಾಟಕ ರಾಜ್ಯ ರೈತ ಸಂಘ ಮೂಲಭೂತವಾಗಿ ಚಳವಳಿಗೋಸ್ಕರ ಹುಟ್ಟಿಕೊಂಡ ಸಂಘಟನೆ. ರೈತ ಮುಕ್ತಿಯನ್ನು ಧ್ಯೇಯವಾಗಿರಿಸಿಕೊಂಡು ವ್ಯವಸ್ಥೆಯ ಪ್ರಗತಿ ವಿರೋಧಿ ಧೋರಣೆಗಳ ವಿರುದ್ಧ ಹೋರಾಡುವುದು ಅದರ ಪ್ರಧಾನ ಉದ್ದೇಶವಾಗಿದೆ. ಆ ಕೆಲಸವನ್ನು ಸಂಘಟನೆ ನಿರೀಕ್ಷೆಗೆ ಮೀರಿ ತೀವ್ರಗತಿಯಲ್ಲಿ ಮಾಡಿತೆಂಬುದು ಇಂದು ಐತಿಹಾಸಿಕ ಸತ್ಯ. ರೈತರು ಇಂದು ಸಲಾಮು ಹೊಡೆಯುವದನ್ನು ಬಿಟ್ಟು ಅಧಿಕಾರಿಗಳ ಮುಂದೆಯು. ಅವರ ಕಚೇರಿಗಳಲ್ಲಿಯೂ ಇವರ ಸೂತ್ರಧಾರಿಗಳಂತೆ ವರ್ತಿಸುವ ರಾಜಕಾರಣಿಗಳ ಮುಂದೆಯು ಎದೆಸೆಟೆದು ನಿಂತು, ತಮ್ಮ ಹಕ್ಕೊತ್ತಾಯವನ್ನು ಮಂಡಿಸುವ ಶಕ್ತಿಯನ್ನು ಪಡೆದಿದ್ದಾರೆ. ಇಂತಹ ಬೆಳವಣಿಗೆ ರೈತ ಸಂಘದ ಪ್ರತಿಫಲವಾಗಿದೆ. ಪ್ರಾಮಾಣಿಕವಾಗಿ ದೇಶಕ್ಕಾಗಿ ದುಡಿದು, ಮೋಸಕ್ಕೊಳಗಾಗಿಯು ಇನ್ನೂ ಮುಗ್ಧರಾಗಿ, ಪ್ರಾಮಾಣಿಕರಾಗಿ ಬದುಕುತ್ತಿರುವ ರೈತ ಮತ್ತು ರೈತ ಕೂಲಿಕಾರರದಿಂದ ರೈತ ಸರ್ಕಾರವೊಂದನ್ನು ರಚಿಸಿ, ಹೊಸ ಕರ್ನಾಟಕ ಕಟ್ಟಲು ರೈತ ಸಂಘಟನೆಗಳು ಮುಂದಾಗಿದ್ದು ವಿಶೇಷವಾಗಿ ಇದು ರೈತರಿಗೆ ಸವಾಲಗಿದೆ. ನಿರ್ಭೀತಿ ಮತ್ತು ಪ್ರೀತಿಯನ್ನು ಮೈಗೂಡಿಸಿಕೊಳ್ಳುವದರಿಂದ ಮಾತ್ರ ರೈತ ಸಂಘಟನೆ ಜೀವಂತಿಕೆಯಿಂದ ಇರಲು ಸಾಧ್ಯ.

೧೯೮೦ರಲ್ಲಿ ನರಗುಂದ ಮತ್ತು ನವಲಗುಂದದಲ್ಲಿ ರೈತರು, ನೀರು ಕೊಡದೇ ನೀರಿನ ತೆರಿಗೆ ವಿಧಿಸಿದ್ದ ಸರ್ಕಾರದ ವಿರುದ್ಧ ಪ್ರತಿಭಟನೆ ನಡೆಸಿದರು. ೧೯೮೦ ಜುಲೈ ೨೧ರಂದು ಪೋಲೀಸರ ಗೋಲಿಬಾರ್‌ಗೆ ಇಬ್ಬರು ರೈತರು ಬಲಿಯಾದರು ನಂತರ ಅನೇಕ ರೈತರನ್ನು ಬಂಧಿಸಿದರು. ೧೯೮೦ ಜುಲೈ ೨೩ರಂದು ರೈತರೆಲ್ಲರೂ ಹುಬ್ಬಳ್ಳಿಯಲ್ಲಿ ಪತ್ರಿಕಾಗೋಷ್ಠಿ ಮಾಡಿ ರೈತ ಮತ್ತು ರೈತ ಕೂಲಿಕಾರರ ಸಂಘವನ್ನು ಹುಟ್ಟು ಹಾಕಿದರು. ಈ ಸಂಘಕ್ಕೆ ರುದ್ರಪ್ಪನವರು ಅಧ್ಯಕ್ಷರಾದರೆ, ಸುಂದರೇಶ್‌ರವರು ಪ್ರಧಾನ ಕಾರ್ಯದರ್ಶಿಯಾದರು.[೧]

೧೯೮೦ ಆಗಸ್ಟ್ ೧೬ರಂದು ಶಿವಮೊಗ್ಗದಲ್ಲಿ ರೈತರು ಗುಂಡೂರಾವ್ ಸರ್ಕಾರದ ದಮನಕಾರಿ ಮತ್ತು ಪ್ರಜಾಪ್ರಭುತ್ವ ವಿರೋಧಿ ನೀತಿಯ ವಿರುದ್ಧ ರೈತ ಸಂಘಟನೆ ಅಡಿಯಲ್ಲಿ ಪ್ರತಿಭಟನೆ ನಡೆಸಿದರು. ಅಕ್ಟೋಬರ್ ೩ರಂದು ಎಂ.ಡಿ.ಎನ್.ರವರ ನೇತೃತ್ವದಲ್ಲಿ ಪ್ರತಿಭಟನೆಗೆ ಕರೆ ನೀಡಿದರು. ಅ ದಿನ ಶಿವಮೊಗ್ಗ ಜಿಲ್ಲೆಯು ಸಾವಿರಾರು ರೈತರಿಂದ ತುಂಬಿ ಹೋಯಿತು. ಪ್ರತಿಭಟನೆ ಆರಂಭವಾದ ನಂತರ ಪೊಲೀಸರು ೧೦ ರಿಂದ ೧೨ ಸಾವಿರ ರೈತರನ್ನು ಬಂಧಿಸಿದರು. ಇವರನ್ನು ವಿವಿಧ ಜೈಲುಗಳಿಗೆ ಹಾಕಲು ಕರೆದೊಯ್ಯುತ್ತಿರುವಾಗ ರೈತರು ಎಲ್ಲಿಗಪ್ಪ ಎಲ್ಲಿಗೆ ಗುಂಡೂರಾಯನ ಜೈಲಿಗೆ ಅಂತ ಕೂಗುತ್ತಾ ಹೋದರು. ಇದು ಸರಕಾರಕ್ಕೆ ನಡುಕ ಹುಟ್ಟಿಸಿತು.[೨] ಶತಶತಮಾನಗಳಿಂದ ಶೋಷಣೆಗೆ ಒಳಗಾಗಿದ್ದ ಅನ್ನದಾತರ ಆಕ್ರೋಶ ೧೯೮೦ರಲ್ಲಿ ಸ್ಫೋಟಗೊಂಡು, ಅದೊಂದು ಚಳವಳಿಯಾಗಿ, ಪ್ರತಿಭಟನೆಗಳಾಗಿ ರೂಪಾಂತರಗೊಂಡು ಇಂದಿಗೂ ನಡೆಯುತ್ತಾ ಬಂದಿವೆ.

ಶಿವಮೊಗ್ಗದಲ್ಲಿ ಕಬ್ಬು ಬೆಳೆಗಾರರು ಹೆಚ್ಚಾಗಿದ್ದು, ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಕಬ್ಬುಬೆಳೆಗಾರರ ಸಂಘಟನೆಯನ್ನು ರಚಿಸಿಕೊಂಡರು. ಕಬ್ಬಿಗೆ ಯೋಗ್ಯ ಬೆಲೆ ಕೊಡಿ ಎಂಬುದಷ್ಟೇ ಅವರ ಪ್ರಮುಖ ಬೇಡಿಕೆಯಾಗಿತ್ತು. ಈ ಬೇಡಿಕೆಯನ್ನು ಈಡೇರಿಸಿಕೊಳ್ಳಲು ರೈತರು ಉಪವಾಸ ಸತ್ಯಾಗ್ರಹವನ್ನು ನಡೆಸಿಕೊಂಡು ಬಂದಿದ್ದರು. ಆಗ ಕಾರ್ಖಾನೆಯವರಾಗಲಿ ಹಾಗೂ ಸರ್ಕಾರವಾಗಲಿ ಇತ್ತ ಮುಖ ತಿರುಗಿಸಿರಲಿಲ್ಲ. ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ಬೆಂಗಳೂರಿನಲ್ಲಿ ಇದ್ದುಕೊಂಡೆ ಸಲಹೆ ಸೂಚನೆ ಹಾಗೂ ನೈತಿಕ ಬೆಂಬಲವನ್ನು ನೀಡುತ್ತಿದ್ದರು. ಶಿವಮೊಗ್ಗದಲ್ಲಿ ನಂಜುಂಡಸ್ವಾಮಿಯವರ ನೇತೃತ್ವದಲ್ಲಿ ಅನೇಕ ಚಿಂತನಾ ಸಭೆಗಳು ನಡೆದವು. ಕಬ್ಬು ಬೆಳೆಗಾರರ ಹೋರಾಟ ಅಷ್ಟಕ್ಕೇ ಸೀಮಿತವಾಗಬಾರದು. ಇಡೀ ರಾಜ್ಯ ರೈತರ ಹೋರಾಟವಾಗಬೇಕು. ಹಾಗಾಗಿ ಅಕ್ಟೋಬರ್ ೧೭ ೧೯೮೦ರಂದು ಶಿವಮೊಗ್ಗದಲ್ಲಿ ಕರ್ನಾಟಕ ರಾಜ್ಯ ರೈತ ಸಂಘವನ್ನು ಹುಟ್ಟು ಹಾಕಿ, ರಾಜ್ಯದಾದ್ಯಂತ ಹೋರಾಟವನ್ನು ಹಮ್ಮಿಕೊಂಡರು.[೩] ಈ ಸಂಘದ ಅಧ್ಯಕ್ಷರಾಗಿ ಹೆಚ್.ಎಸ್. ರುದ್ರಪ್ಪನವರು. ಪ್ರಧಾನ ಕಾರ್ಯದರ್ಶಿಯಾಗಿ ಎನ್.ಡಿ. ಸುಂದರೇಶ್ ನೇಮಕಗೊಂಡರು. ಹೋರಾಟ ಸಮಿತಿಯ ಸಂಚಾಲಕರಾಗಿ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ನೇಮಕವಾದರು.

**ಕರ್ನಾಟಕ ರಾಜ್ಯ ರೈತ ಸಂಘದ ಬೇಡಿಕೆಗಳು**

ರೈತ ಸಂಘಟನೆ ಸ್ಥಾಪನೆಯಾದ ಕೂಡಲೇ ರೈತ ನಾಯಕರು ೧೯ ಬೇಡಿಕೆಗಳನ್ನು ಮುಂದಿಟ್ಟು, ಗುಂಡೂರಾವ್ ಸರ್ಕಾರಕ್ಕೆ ಪತ್ರವನ್ನು ಬರೆದು, ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯಿಸಿದರು. ಅವುಗಳು ಈ ಕೆಳಕಂಡಂತಿವೆ.[೪]

೧. ಪ್ರತಿಭಟನೆಯ ಸಂದರ್ಭದಲ್ಲಿ ಬಂದಿತ ರೈತ ನಾಯಕರನ್ನು ಹಾಗೂ ರೈತರನ್ನು ಬಿಡುಗಡೆ ಮಾಡಿ, ರೈತರ ವಿರುದ್ಧವಿರುವ ಎಲ್ಲಾ ಪ್ರಕರಣಗಳನ್ನು ಹಿಂತೆಗೆದುಕೊಳ್ಳುವುದು.
೨. ಸರ್ಕಾರಿ ಬ್ಯಾಂಕ್‌ಗಳು ಮತ್ತು ಸಹಕಾರಿ ಸಂಘಗಳಿಂದ ಪಡೆದ ಸಾಲಗಳನ್ನು ಮನ್ನಾ ಮಾಡುವುದು.

೩. ರೈತರಿಗೆ ಹೊಸ ಸಾಲಗಳನ್ನು ಶೇ.೪% ಸರಳ ಬಡ್ಡಿ ದರದಲ್ಲಿ ನೀಡಬೇಕು. ಬ್ಯಾಂಕ್‌ಗಳು ಯಾರ ಮಧ್ಯಸ್ತಿಕೆ ಇಲ್ಲದೆ ರೈತರಿಗೆ ನೇರವಾಗಿ ಸಾಲಗಳನ್ನು ನೀಡುವುದು.

೪. ರೈತರು ಬ್ಯಾಂಕ್‌ಗಳ ಸಾಲ ಮರುಪಾವತಿ ಮಾಡಲು ವಿಫಲವಾದಾಗ, ಬ್ಯಾಂಕ್‌ಗಳು ರೈತರಿಂದ ಮುಟ್ಟುಗೋಲು ಹಾಕಿಕೊಂಡ ವಸ್ತುಗಳನ್ನು, ಕೃಷಿ ಉಪಕರಣಗಳನ್ನು ಹಾಗೂ ಭೂಮಿಯನ್ನು ವಾಪಸ್ಸು ನೀಡಬೇಕು.

೫. ಕೃಷಿ ಅಭಿವೃದ್ಧಿಗಾಗಿ ಹಾಗೂ ಹೆಚ್ಚಿನ ಉತ್ಪಾದನೆಗಾಗಿ, ಕೃಷಿಗಾಗುವ ವೆಚ್ಚವನ್ನು ಪರಿಗಣಿಸಿ, ರೈತರ ಕೃಷಿ ಸಾಲದ ಪ್ರಮಾಣವನ್ನು ಹೆಚ್ಚಿಸುವುದು.

೬. ಕೃಷಿ ಉತ್ಪಾದನೆಯ ಆಧಾರದ ಮೇಲೆ ತೆರಿಗೆಯನ್ನು ವಿಧಿಸುವುದು. ಬೆಟರ್‌ಮೆಂಟ್ ಲೆವಿಯನ್ನು ರದ್ದುಗೊಳಿಸುವುದು. ೧೯೭೨-೭೩ ರಲ್ಲಿದ್ದ ನೀರಿನ ತೆರಿಗೆಯನ್ನು ಜಾರಿಗೆ ತರುವುದು. ಕೃಷಿ ರಹಿತ ಭೂಮಿಯ ಮೇಲೆ ಹಾಗೂ ಸಂಪಾದನೆಯಿಲ್ಲದ ರೈತರ ಮೇಲೆ ಕೃಷಿ ಕಂದಾಯ ವಿಧಿಸಬಾರದು.

೭. ಸರ್ಕಾರ ರೈತರ ಬೆಳೆಗಳಿಗೆ ವೈಜ್ಞಾನಿಕ ಬೆಲೆ ನಿಗದಿಪಡಿಸಬೇಕು. ಈ ಬೆಲೆಯು ರೈತನ ಸಮಯ, ಶ್ರಮ, ಖರ್ಚು, ವೆಚ್ಚ ಸೇರಿದಂತೆ, ಬೆಂಬಲ ಬೆಲೆ ಘೋಷಿಸುವುದು.

೮. ಕೃಷಿಯನ್ನು ಒಂದು ಉದ್ಯಮವೆಂದು ಘೋಷಿಸುವುದು. ಉದ್ಯಮಗಳಿಗೆ ನೀಡುವ ಎಲ್ಲಾ ಸವಲತ್ತುಗಳನ್ನು ಕೃಷಿಗೆ ವಿಸ್ತರಿಸುವುದು. ಎಲ್ಲಾ ರೈತರಿಗೂ ಮತ್ತು ಕೃಷಿ ಕಾರ್ಮಿಕರಿಗೂ ನಿವೃತ್ತಿ ವೇತನ ನೀಡಬೇಕು.

೯. ಕನಿಷ್ಠ ವೇತನ ನೀತಿಯನ್ನು ಕೃಷಿಗೆ ಅನುಷ್ಠಾನಗೊಳಿಸುವುದು. ಕಾರ್ಮಿಕರಿಗೆ ನೀಡುವ ವೇತನವನ್ನು ಕೃಷಿ ಕಾರ್ಮಿಕರಿಗೂ ನೀಡುವುದು.

೧೦. ಭೂಮಿಯ ಮೇಲಿನ ಒತ್ತಡವನ್ನು ತಗ್ಗಿಸಲು ಹೆಚ್ಚುವರಿ ಭೂಮಿ ಲಭ್ಯವಿದ್ದಲ್ಲಿ, ಭೂಸುಧಾರಣಾ ಕಾಯ್ದೆಯನ್ನು ಅನುಷ್ಠಾನಗೊಳಿಸುವುದರ ಮೂಲಕ ಭೂರಹಿತ ಗೇಣಿದಾರರಿಗೆ ಭೂಮಿಯನ್ನು ನೀಡುವುದು. ನಂತರ ಯಾವುದೇ ಹಣವನ್ನು ಇವರಿಂದ ಸಂಗ್ರಹಿಸದೇ ಭೂಮಿಯ ಹಕ್ಕು ಹಾಗೂ ಪಟ್ಟಾವನ್ನು ಅವರ ಹೆಸರಿಗೆ ವರ್ಗಾಯಿಸಬೇಕು. ಭೂಮಾಲೀಕನಿಗೆ ಸರ್ಕಾರವೇ ಪರಿಹಾರ ಕೊಡಬೇಕು.

೧೧. ರಾಜ್ಯಾದ್ಯಂತ ರೈತರು ಬೆಳೆ ವಿಮೆ ಕಟ್ಟದಿದ್ದರು, ಸರ್ಕಾರ ರೈತನಿಗೆ ಬೆಳೆ ಪರಿಹಾರ ನೀಡಬೇಕು.

೧೨. ಸರ್ಕಾರಿ ಭೂಮಿ ಲಭ್ಯವಿರುವ ಕಡೆ ರೈತರು ವ್ಯವಸಾಯ ಮಾಡಲು ಮುಂದಾದರೆ, ಸರ್ಕಾರ ಅದಕ್ಕೆ ಆರ್ಥಿಕ ನೆರವು ನೀಡಬೇಕು ಹಾಗೂ ಆ ಭೂಮಿಯನ್ನು ರೈತರಿಗೆ ನೀಡಬೇಕು.

೧೩. ಸರ್ಕಾರ ಕೃಷಿ ಅಭಿವೃದ್ಧಿಗಾಗಿ ರೈತರಿಗೆ ಉಚಿತ ಮನೆಗಳ ನಿರ್ಮಾಣ, ಉಚಿತ ಶಿಕ್ಷಣ, ವೈದ್ಯಕೀಯ ಸೌಲಭ್ಯ ನೀಡುವುದು. ಹಳ್ಳಿಗಳಲ್ಲಿ ಕೃಷಿ ಆಧಾರಿತ ಸಣ್ಣ ಪ್ರಮಾಣದ

ಕೈಗಾರಿಕೆಗಳನ್ನು ಪ್ರಾರಭಿಸುವುದು. ಸಮಂಜಸವಾದ ಆಹಾರ ಧಾನ್ಯಗಳನ್ನು ಮತ್ತು ಅಗತ್ಯ ಸರಕುಗಳನ್ನು ಒದಗಿಸುವುದು.

೧೪. ಒಟ್ಟು ಆದಾಯದಲ್ಲಿ ಶೇ.೮೦ ರಷ್ಟು ಹಣವನ್ನು ಗ್ರಾಮದ ಅಭಿವೃದ್ಧಿಗಾಗಿ ಹಾಗೂ ಗ್ರಾಮೀಣ ಬಡ ಜನರಿಗೆ ಸಣ್ಣ ಕೈಗಾರಿಕೆ ಸ್ಥಾಪಿಸಲು ವೆಚ್ಚ ಮಾಡುವುದು.

೧೫. ಎಲ್ಲಾ ಶೈಕ್ಷಣಿಕ ಸಂಸ್ಥೆಗಳಲ್ಲಿ ಹಾಗೂ ಉದ್ಯೋಗಗಳಲ್ಲಿ ರೈತರ ಮಕ್ಕಳಿಗೆ ಶೇ.೫೦ರಷ್ಟನ್ನು ಮೀಸಲಿಡಬೇಕು

೧೬. ೧೯೭೯-೮೦ ರಿಂದ ಕಬ್ಬಿನ ಮೇಲಿನ ಖರೀದಿ ತೆರಿಗೆಯನ್ನು ನಿಷೇಧಿಸುವುದು.

೧೭. ಕೃಷಿ ಉದ್ದೇಶಕ್ಕಾಗಿ ಬಳಸುವ ಒಂದು ಯುನಿಟ್ ವಿದ್ಯುತ್‌ಗೆ ೬.೧/₂ ಪೈಸೆಯಂತೆ ವಿದ್ಯುತ್ ಶುಲ್ಕ ನಿಗದಿಪಡಿಸುವುದು. ವಿದ್ಯುತ್‌ನ್ನು ಉಪಯೋಗಿಸಿದಷ್ಟಕ್ಕೆ ಮಾತ್ರ ತೆರಿಗೆ ಹಾಕಬೇಕು.

೧೮. ರೈತರು ಬಳಸುವ ಟ್ರಾಕ್ಟರ್‌ಗಳ ಮೇಲೆ ಯಾವ ರೀತಿಯ ಕಂದಾಯ, ತೆರಿಗೆ ಹಾಗೂ ನಿರ್ಬಂಧಗಳನ್ನು ಹಾಕುವಂತಿಲ್ಲ.

೧೯. ದೇಶದ ವಿವಿಧ ಹಳ್ಳಿಗಳಲ್ಲಿರುವ ರಸ್ತೆಗಳ ದುರಸ್ತಿ ಪಡಿಸಬೇಕು. ಕಬ್ಬು ಕೃಷಿ ಹಾಗೂ ಮಾರುಕಟ್ಟೆಯ ಮೇಲಿನ ಕಂದಾಯ ಹಣವನ್ನು ರೈತರ ಅಭಿವೃದ್ಧಿಗೆ ವಿನಿಯೋಗಿಸುವುದು.

ಇವುಗಳಲ್ಲದೆ ರೈತ ಸಂಘವು ಇತ್ತೀಚಿನ ಸಂದರ್ಭದಲ್ಲಿ ಹೆಚ್ಚುವರಿಯಾಗಿ ವರದಕ್ಷಿಣೆ, ಪರಿಸರ ಸಮಸ್ಯೆ, ಸಾಮಾಜಿಕ ದುಷ್ಪರ ವಿರುದ್ಧ, ಸಾರಾಯಿ ಅಂಗಡಿಗಳ ವಿರುದ್ಧ, ಡೆಂಕಲ್ ಪ್ರಸ್ತಾವನೆಯ ವಿರೋದ, ಕಾರ್ಗಿಲ್ ಬೀಜ ಸಮಸ್ಯೆ, ರಾಜ್ಯದ ನೀರಿನ ಹಂಚಿಕೆಗೆ ಸಂಬಂಧಿಸಿದಂತೆ ವಿವಿಧ ಬೇಡಿಕೆಗಳನ್ನಿಟ್ಟುಕೊಂಡು ರೈತ ಸಂಘವು ಪ್ರತಿಭಟನೆ ಮಾಡುತ್ತಾ ಬಂದಿದೆ.

**ಕರ್ನಾಟಕ ರಾಜ್ಯ ರೈತ ಸಂಘಟನೆಯ ರಚನೆ**

ಕರ್ನಾಟಕ ರಾಜ್ಯ ರೈತ ಸಂಘಟನೆಯು ಆಕ್ಟೋಬರ್ ೧೭ ೧೯೮೦ ರಂದು ಪ್ರಾರಂಭವಾಯಿತು. ಇದು ರೈತರ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ರೈತರಿಗಾಗಿ ಹೊರಹೊಮ್ಮಿದ ಸಂಘಟನೆಯಾಗಿದೆ. ಈ ಸಂಘಟನೆ ಆರಂಭವಾದಾಗ ಕರ್ನಾಟಕದಲ್ಲಿ ಕೆಲವೇ ಶಾಖೆಗಳಿದ್ದವು. ಇಂದು ಕರ್ನಾಟಕದಾದ್ಯಂತ ಎಲ್ಲಾ ಜಿಲ್ಲೆ, ತಾಲೂಕು, ಗ್ರಾಮಗಳಲ್ಲಿಯೂ ರೈತ ಸಂಘಟನೆಯ ವಿವಿಧ ಶಾಖೆಗಳು ಹರಡಿವೆ. ಕರ್ನಾಟಕ ರಾಜ್ಯ ರೈತ ಸಂಘದ ಪ್ರಧಾನ ಕಚೇರಿ ಶಿವಮೊಗ್ಗದಲ್ಲಿದೆ. ಈ ಸಂಘಟನೆ ಚಿಕ್ಕದಾಗಿ ಆರಂಭವಾದರೂ, ರೈತ ಕಾರ್ಯಕರ್ತರನ್ನು ಸಂಘಟಿಸುವಲ್ಲಿ ಅಗಾಧತೆ ಕಂಡುಬರುತ್ತದೆ. ರೈತ ಸಂಘದ ಕಾರ್ಯಚಟುವಟಿಕೆಗಳು ಕೃಷಿ ಮತ್ತು ಆರ್ಥಿಕ ಸಮಸ್ಯೆಗಳಿಗೆ ಸೀಮಿತವಾಗಿಲ್ಲ. ಸಾಮಾಜಿಕ-ಸಾಂಸ್ಕೃತಿಕ ವಿಷಯಗಳ ವಿಶಾಲವಾದ ಅಂಶಗಳ ಬಗ್ಗೆ ಗಮನಹರಿಸಿದೆ. ಹಸಿರು ಶಾಲು ಧರಿಸುವುದು ಈ ಸಂಘಟನೆಯ ಸಂಕೇತ. ಇದು ಒಂದು ಸದಸ್ಯತ್ವದ ಕಾರ್ಡ್ ಇದ್ದಂತೆ. ಹಸಿರು ಧ್ವಜ ಈ ಸಂಘಟನೆಯ ಬಾವುಟವಾಗಿದೆ. ಕರ್ನಾಟಕ ರಾಜ್ಯ ರೈತ ಸಂಘಟನೆಯು ಅಧ್ಯಕ್ಷರು, ಕಾರ್ಯದರ್ಶಿ, ಖಜಾಂಚಿ

ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರನ್ನು ಒಳಗೊಂಡಿರುತ್ತದೆ. ಈ ಸ್ಥಾನಗಳು ಗೌರವಾನ್ವಿತವಾಗಿದ್ದು, ಯಾವುದೇ ಸಂಭಾವನೆಗಳನ್ನು ನೀಡುವುದಿಲ್ಲ.

**ಜಿಲ್ಲಾ ಮಟ್ಟದ ಸಂಘಟನೆ**

ಕರ್ನಾಟಕ ರಾಜ್ಯಾದ್ಯಂತ ಪ್ರತಿಯೊಂದು ಜಿಲ್ಲೆಯಲ್ಲೂ ಜಿಲ್ಲಾ ಮಟ್ಟದ ಸಮಿತಿ ಹಾಗೂ ಶಾಖೆಗಳು ಇರುತ್ತವೆ. ಇದು ಎಲ್ಲಾ ತಾಲೂಕು ಘಟಕಗಳ ಕಚೇರಿಯ ಅಧಿಕಾರಿಗಳನ್ನು ಒಳಗೊಂಡಿದ್ದು ಅಯಾ ಜಿಲ್ಲಾ ಘಟಕದ ವ್ಯಾಪ್ತಿಗೆ ಬರುತ್ತವೆ. ಈ ಸಮಿತಿಯು ಜಿಲ್ಲಾ ಘಟಕದ ಅಧ್ಯಕ್ಷರು, ಕಾರ್ಯದರ್ಶಿಗಳು, ಖಜಾಂಚಿ ಹಾಗೂ ಸದಸ್ಯರುಗಳನ್ನು ಒಳಗೊಂಡಿರುತ್ತದೆ. ಇವರೆಲ್ಲರೂ ರೈತ ಪರಿವಾರದವರು ಹಾಗೂ ಕೃಷಿ ಅವಲಂಬಿತರಾಗಿರುತ್ತಾರೆ.[೫]

**ತಾಲೂಕು ಮಟ್ಟದ ಸಂಘಟನೆ**

ಜಿಲ್ಲೆಯ ಪ್ರತಿ ತಾಲೂಕುಗಳಲ್ಲಿಯೂ, ತಾಲೂಕು ಮಟ್ಟದ ಸಂಘಟನೆ ರಚನೆಯಾಗಿರುತ್ತದೆ. ಈ ಸಂಘಟನೆಯಲ್ಲಿ ಗ್ರಾಮ ಘಟಕದ ಅಧಿಕಾರಿಗಳನ್ನು ಒಳಗೊಂಡಿರುತ್ತದೆ. ಎಲ್ಲಾ ಗ್ರಾಮ ಘಟಕಗಳು ತಾಲೂಕು ಘಟಕದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ಸಮಿತಿಯು ತಾಲೂಕು ಘಟಕದ ಅಧ್ಯಕ್ಷರು, ಕಾರ್ಯದರ್ಶಿಗಳು, ಖಜಾಂಚಿ ಹಾಗೂ ಸದಸ್ಯರುಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ತಾಲೂಕು ಘಟಕದ ವ್ಯಾಪ್ತಿಗೆ ಬರುವ ಗ್ರಾಮಗಳಲ್ಲಿ ಗ್ರಾಮ ಘಟಕದ ಸಂಘಟನೆ ರಚನೆಯಾಗಿರುತ್ತದೆ.[೬]

ಈ ಎಲ್ಲಾ ಸಮಿತಿಗಳಲ್ಲೂ ೧೫ ಸದಸ್ಯರಿದ್ದು, ಕಡಿಮೆ ಎಂದರೇ ಐದು ಸದಸ್ಯರು ರೈತ ಹಾಗೂ ಕೃಷಿ ಕಾರ್ಮಿಕರು ಆಗಿರಲೇಬೇಕು.

**ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಖರ್ಚು-ವೆಚ್ಚ**

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಹಣಕಾಸು ಪರಿಸ್ಥಿತಿಯು, ಅ ಸಂಘಟನೆಯ ಸದಸ್ಯರುಗಳನ್ನು ಒಳಗೊಂಡಿರುತ್ತದೆ. ಇದು ಯಾವುದೇ ದೇಣಿಗೆಗಳನ್ನು ಸ್ವೀಕರಿಸುವುದಿಲ್ಲ. ಪ್ರತೀ ರೂಪಾಯಿಯನ್ನು ಸ್ವೀಕರಿಸುವುದು ಹಾಗೂ ಖರ್ಚು ಮಾಡುವುದು ಯೋಗ್ಯ ರೀತಿಯಲ್ಲಿರುತ್ತದೆ. ಸಂಘಟನೆಯು ತಾನು ಮಾಡಿದ ಖರ್ಚು ವೆಚ್ಚಕ್ಕೆ ಸರಿಯಾಗಿ ಪ್ರತೀ ವರ್ಷ ರಸೀದಿ ಮತ್ತು ದಾಖಲೆಗಳ ನಿರ್ವಹಣೆ ಮಾಡುತ್ತದೆ. ಹಣವನ್ನು ರೈತ ಸಂಘಟನೆಯು ರಾಜ್ಯ, ಜಿಲ್ಲೆ, ತಾಲೂಕು ಹಾಗೂ ಗ್ರಾಮ ಘಟಕದ ಸದಸ್ಯರಿಂದ ಸಂಗ್ರಹಿಸುತ್ತದೆ.

**ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಸದಸ್ಯತ್ವದ ಶುಲ್ಕ**

ಈ ಸಂಘಟನೆಯು ರಾಜ್ಯ, ಜಿಲ್ಲೆ, ತಾಲೂಕು ಹಾಗೂ ಗ್ರಾಮ ಘಟಕದ ಸದಸ್ಯರನ್ನು ಒಳಗೊಂಡಿದ್ದು, ಸದಸ್ಯತ್ವದ ಶುಲ್ಕವಾಗಿ ನೀರಾವರಿ ಪ್ರದೇಶದಿಂದ ೯೦೦ ರೂಪಾಯಿ, ಒಣ ಭೂಮಿಯಿಂದ ೩೦೦ ರೂಪಾಯಿಯನ್ನು ಸಂಗ್ರಹಿಸಲಾಗುತ್ತದೆ.[೭]

**ಪ್ರತಿಭಟನೆನಿರತ ರೈತರ ಸಂಕೇತ ಹಾಗೂ ನಿಯಮಗಳು**

ಪ್ರತಿಭಟನೆಯಲ್ಲಿ ಭಾಗವಹಿಸುವ ಎಲ್ಲಾ ರೈತರು ಈ ಕೆಳಕಂಡ ನಿಯಮಗಳನ್ನು ಪಾಲಿಸಬೇಕೆಂದು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯು ಕೆಲವೊಂದು ಸಂಕೇತ ಮತ್ತು ನಿಯಮಗಳನ್ನು ಸಿದ್ಧಪಡಿಸಿದೆ.[೮]

೧. ಹಸಿರು ಶಾಲು ಹಾಗೂ ಟೋಪಿಗಳನ್ನು ಧರಿಸುವುದು.

೨. ಅಹಿಂಸೆ ಮತ್ತು ಸತ್ಯದಲ್ಲಿ ನಂಬಿಕೆ ಇಡುವುದು.

೩. ಪ್ರತಿಭಟನೆಗೆ ಮುನ್ನ, ಪ್ರತಿಭಟನೆಗೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಕರ ಪತ್ರದ ಮೂಲಕ ಅರಿವು ಮೂಡಿಸುವುದು.

೪. ದ್ವೇಷದ ಬದಲಿಗೆ ಪ್ರೀತಿ ಮತ್ತು ಸತ್ಯದಿಂದ ತಮ್ಮ ಎದುರಾಳಿಗಳನ್ನು ಗೆಲ್ಲುವುದು.

೫. ರೈತ ಪ್ರತಿಭಟನೆಗಳು ಪ್ರತೀಕಾರವಾಗಿರಬಾರದು.

೬. ಪ್ರತಿಭಟನೆನಿರತ ರೈತರು ಯಾವುದೇ ಪರಿಸ್ಥಿತಿಯಲ್ಲೂ ತಾಳ್ಮೆ ಕಳೆದುಕೊಳ್ಳಬಾರದು.

೭. ಪ್ರತಿಭಟನೆಯ ಸಮಯದಲ್ಲಿ ಯಾವುದೇ ತ್ಯಾಗಕ್ಕೂ ಸಿದ್ಧರಿರಬೇಕು. ದೈಹಿಕವಾಗಿ ದಾಳಿಯಾದಾಗ ಎದುರಿಸಲು ಹಾಗೂ ಸೆರೆಮನೆವಾಸಕ್ಕೆ ತಯಾರಾಗಿರಬೇಕು.

೮. ಬಂಧನಕ್ಕೆ ಒಳಗಾದರೆ ಜೈಲಿನಲ್ಲಿ ಉತ್ತಮವಾಗಿ ವರ್ತಿಸಬೇಕು.

೯. ಸಾಮಾಜಿಕ ವಿರೋಧಿ ಅಂಶಗಳನ್ನು ಗುರುತಿಸುವುದು.

೧೦. ಪ್ರತಿಭಟನೆಯ ಸಂದರ್ಭದಲ್ಲಿ ಸಾರ್ವಜನಿಕ ಆಸ್ತಿಪಾಸ್ತಿಗೆ ದಕ್ಕೆಯಾಗದಂತೆ ನೋಡಿಕೊಳ್ಳುವುದು.

೧೧. ಪ್ರತಿಭಟನೆಯ ಸಮಯದಲ್ಲಿ ಅಂಬ್ಯುಲೆನ್ಸ್, ಆಸ್ಪತ್ರೆ ವಾಹನಗಳು, ವೈದ್ಯರ ವಾಹನಗಳು, ಹಾಲಿನ ವಾಹನ ಹಾಗೂ ಅಗ್ನಿ ಶಾಮಕ ದಳದ ವಾಹನಗಳನ್ನು ತಡೆಯಬಾರದು.

೧೨. ಪ್ರತಿಭಟನೆಯು ಭ್ರಷ್ಟವ್ಯವಸ್ಥೆ ವಿರುದ್ಧವಾಗಿರಬೇಕು ಹಾಗೂ ಪೊಲೀಸರನ್ನು ತಮ್ಮ ಸಹೋದರರರೆಂದು ಪರಿಗಣಿಸಬೇಕು.

೧೩. ರಸ್ತೆ ತಡೆ ಪ್ರತಿಭಟನೆಯನ್ನು ಬೆಳಿಗ್ಗೆ ಆರು ಗಂಟೆಯಿಂದ, ಸಾಯಂಕಾಲ ಆರು ಗಂಟೆಯವರೆಗೆ ಮಾತ್ರ ಮಾಡಬೇಕು. ಈ ಸಮಯದಲ್ಲಿ ಪೊಲೀಸರು ಪ್ರತಿಭಟನೆನಿರತ ತಂಡವನ್ನು ಬಂಧಿಸಿದರೆ, ಆ ಸ್ಥಳವನ್ನು ತೆರವುಗೊಳಿಸಿ, ಮುಂದಿನ ತಂಡಕ್ಕೆ ದಾರಿ ಮಾಡಿಕೊಡುವುದು.

೧೪. ಪ್ರತಿಭಟನೆಗಳಲ್ಲಿ ಭಾಗವಹಿಸಲು ರೈತ ಮಹಿಳೆಯರನ್ನು ಪ್ರೋತ್ಸಹಿಸುವುದು.

**ರೈತ ಸಂಘದ ಘೋಷಣೆಗಳು**

"ರೈತರು ಗುಲಾಮರಲ್ಲ-ಸಮಾನರು"

"ನಾವು ಸಹ ಬದುಕಲು ಮೂಲ ಹಕ್ಕನ್ನು ಹೊಂದಿದ್ದೇವೆ"

"ರೈತರಿಗೆ ಸೇರಿದ ಭೂಮಿ ಹರಾಜು ನಿಲ್ಲಿಸಿ"

"ನಮಗೆ ಸಮಂಜಸ ದರಗಳನ್ನು ನೀಡಿ-ಭರವಸೆ ಬೇಡ"

**ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಸ್ವಯಂ ಸೇವಕರ ಪ್ರಮಾಣ ವಚನ**

ರೈತರ ಸಮಸ್ಯೆಗಳನ್ನು ಬಗೆಹರಿಸಲು ಸಂಘಟಿತವಾಗಿರುವ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಗೆ ನನ್ನ ಎಲ್ಲಾ ಕಾಲ ಮತ್ತು ಶ್ರಮವನ್ನು ವ್ಯಯಸುತ್ತೇನೆ. ಯಾವ ಕಾಲಕ್ಕೂ ಯಾವುದೇ ರಾಜಕೀಯ ಅಮೀಷಗಳಿಗೂ, ರಾಜಕೀಯ ಹುದ್ದೆಗಳಿಗೂ ಆಸೆ ಪಡದೆ, ರೈತ ಪಕ್ಷತೀತವಾಗಿ ಈ ಹೋರಾಟದಲ್ಲಿ ಭಾಗವಹಿಸುತ್ತೇನೆಂದು ಸ್ವಯಂ ಸೇವಕರು ಪ್ರಮಾಣ ವಚನ ಸ್ವೀಕರಿಸುತ್ತಾರೆ.

**ಕರ್ನಾಟಕದ ಪ್ರತಿ ಗ್ರಾಮ ಹಾಗೂ ಹಳ್ಳಿಗಳ ಎದುರು ರೈತರು ಹಾಕುವ ಬೋರ್ಡಿನ ನಮೂನೆ**

**ರೈತ ಸಂಘದವರಿಂದ ಸೂಚನೆ**

ಸಹಕಾರಿ ಬ್ಯಾಂಕ್, ಸರ್ಕಾರಿ ಬ್ಯಾಂಕ್, ರೆವಿನ್ಯೂ ಅಧಿಕಾರಿಗಳು
ರೈತ ಮುಖಂಡರ ಅಪ್ಪಣೆ ಇಲ್ಲದೆ ಊರೊಳಗೆ ಪ್ರವೇಶಿಸಕೂಡದು.

**ರೈತರನ್ನು ಭೇಟಿ ಮಾಡುವ ಸಮಯ**

ಸಂಜೆ ಆರು ಘಂಟೆಯಿಂದ ಸಂಜೆ ಏಳು ಘಂಟೆಯವರೆಗೆ. ಸೋಮವಾರ
ರೈತರಿಗೆ ರಜಾ ದಿನ.

ಈ ನಿಯಮ ಉಲ್ಲಂಘಿಸಿದ ಅಧಿಕಾರಿಗಳು, ರೈತ ಸಂಘ ತೀರ್ಮಾನಿಸಿದ ಶಿಕ್ಷೆಗೆ
ಗುರಿಯಾಗಬೇಕಾಗುತ್ತದೆ.

**ಹಸಿರು ಬಣ್ಣ**

ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಸಂಕೇತ ಹಸಿರು ಬಣ್ಣ. ರೈತರು ಹಸಿರು ಬಣ್ಣದ ಶಾಲನ್ನು ಸಭೆಗಳು ಸೇರಿದಾಗ, ಪ್ರತಿಭಟನೆ ಮಾಡುವ ಸಮಯದಲ್ಲಿ ಹಾಕಿಕೊಳ್ಳಬೇಕು. ಇದು ಕರ್ನಾಟಕದಲ್ಲಿ ಉದಯೋನ್ಮುಖ ಗ್ರಾಮೀಣ ಶಕ್ತಿಯಾಗಿ ಗುರುತಿಸುವಿಕೆಯ ಮೂಲವಾಗಿದೆ. ಈ ಸಮಯದಲ್ಲಿ ಹಸಿರು ಶಾಲನ್ನು ಧರಿಸುವುದು ರೈತ ಸಂಘದ ಸಾಮಾನ್ಯ ಅಭ್ಯಾಸವಾಗಿದೆ.

ರೈತ ಸಂಘ ಹಸಿರು ಧ್ವಜವನ್ನು ಹೊಂದಿದ್ದು, ಕರಪತ್ರಗಳನ್ನು ಸಹ ಹಸಿರು ಬಣ್ಣದಲ್ಲಿಯೇ ಮುದ್ರಿಸಲಾಗುತ್ತದೆ. ಕಾರಣ ಹಸಿರು ಪ್ರಕೃತಿಯ ಸಂಕೇತ. ಪ್ರಕೃತಿಯು ಎಲ್ಲವನ್ನು ಒದಗಿಸುತ್ತದೆ. "ಹಸಿರು ರೈತನ ಉಸಿರು" ಶಾಂತಿ ಮತ್ತು ಅಹಿಂಸೆಯ ಸಂಕೇತವಾಗಿ ಬಳಸಲಾಗುತ್ತದೆ. ಹಸಿರು ಕೃಷಿ ಚಟುವಟಿಕೆಯ ಪ್ರಬಲ ನೆರಳಾಗಿದೆ. ಹಾಗಾಗಿ ಹಸಿರು ಬಣ್ಣವನ್ನು ತಮ್ಮ ಸಂಘಟನೆಯ ಸಂಕೇತವಾಗಿ ಬಳಸುತ್ತಿದ್ದಾರೆ.[7]

ಪ್ರೋ.ಎ.ಡಿ.ಎನ್ ರವರ ಮರಣದ ನಂತರ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯಲ್ಲಿ ನಾಯಕತ್ವಕ್ಕಾಗಿ ಅಂತರಿಕ ಕಲಹಗಳು ಅರಂಭವಾದವು. ಇದರಿಂದಾಗಿ ರೈತ ಸಂಘಟನೆ ವಿವಿಧ ಬಣಗಳಾಗಿ ವಿಭಜನೆಯಾಯಿತು. ಅದರ ಪರಿಣಾಮವೇ ಇಂದು ಹಲವು ರೈತ ಸಂಘಗಳು ಅಸ್ತಿತ್ವದಲ್ಲಿವೆ. ಅವುಗಳನ್ನು ಕೆಳಕಂಡತೆ ಕಾಣಬಹುದಾಗಿದೆ.

೧. ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಪುಟ್ಟಣ್ಣಯ್ಯ ಬಣ
೨. ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ, ಪ್ರೋ.ಎಂ.ಡಿ. ನಂಜುಂಡಸ್ವಾಮಿ ಬಣ
೩. ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರುಸೇನೆ (ಎಂ.ಡಿ.ಎನ್. ಬಣ ಮತ್ತು ಪುಟ್ಟಣ್ಣಯ್ಯ ಬಣ ಸಂಯುಕ್ತ)
೪. ಕರ್ನಾಟಕ ಪ್ರಾಂತ್ಯ ರೈತ ಸಂಘ
೫. ಕರ್ನಾಟಕ ರಾಜ್ಯ ರೈತ ಮತ್ತು ಸ್ವ ಸಹಾಯ ಸ್ತ್ರೀ ಶಕ್ತಿ ಸೇನೆ ರಾಜ್ಯ ಸಮಿತಿ
೬. ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ)
೭. ಅಖಿಲ ಭಾರತೀಯ ಕಿಸಾನ್ ಸಭಾ (ಎ.ಐ.ಕೆ.ಎಸ್) (ಸಿ.ಪಿ.ಐ.ಎಂ ಪಕ್ಷ)
೮. ೨೨ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿ

**ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ)**

**ದಾವಣಗೆರೆ ಜಿಲ್ಲಾ ಘಟಕ:** ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಪುಟ್ಟಣ್ಣಯ್ಯ ಬಣ ದಾವಣಗೆರೆ ಜಿಲ್ಲಾ ಘಟಕವು. ೨೦೦೦ರಲ್ಲಿ ಅಸ್ತಿತ್ವಕ್ಕೆ ಬಂದಿತು. ಕಛೇರಿಯು ಹೊಸ ಬಸ್ ನಿಲ್ದಾಣದ ಮುಂಭಾಗ ಮಳಿಗೆಯಲ್ಲಿದ್ದು, ಯಾವುದೇ ರಾಜಕೀಯ ಪಕ್ಷಗಳೊಂದಿಗೆ ಗುರುತಿಸಿಕೊಂಡಿರುವುದಿಲ್ಲ.

**ಸಂಘಟನೆಯ ಧ್ಯೇಯ:** ರೈತರು ಬೆಳೆದ ಬೆಳೆಗಳಿಗೆ ವೈಜ್ಞಾನಿಕ ಬೆಂಬಲ ಬೆಲೆ ನೀಡುವಂತೆ ಮಾಡುವುದು. ದಾವಣಗೆರೆ ರೈತರಿಗೆ ಅಸಮರ್ಪಕ ವಿದ್ಯುತ್‌ನಿಂದಾಗಿ ಅಧಿಕ ನಷ್ಟ ಅನುಭವಿಸುತ್ತಿದ್ದು, ರೈತರ ಪಂಪ್‌ಸೆಟ್‌ಗಳಿಗೆ ಸಮರ್ಪಕ ವಿದ್ಯುತ್ ಪೂರೈಕೆ, ಉಚಿತ ವಿದ್ಯುತ್, ಗೊಬ್ಬರದ ಅಭಾವವನ್ನು ತಡೆಗಟ್ಟುವುದು, ರೈತರ ಸಾಲ ಮನ್ನಾ ಮಾಡುವುದು, ನೀರಾವರಿ ಸೌಲಭ್ಯ ಮುಂತಾದ ಬೇಡಿಕೆಗಳ ಬಗ್ಗೆ ಹೋರಾಟದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಈ ಸಂಘಟನೆಯ ಪ್ರಮುಖ ಧ್ಯೇಯವಾಗಿರುತ್ತದೆ.[೧೦]

**ದಾವಣಗೆರೆ ಜಿಲ್ಲಾ ಸಂಘಟನೆಯ ಪದಾಧಿಕಾರಿಗಳು**[೧೧]

ಜಿಲ್ಲಾಧ್ಯಕ್ಷರು–ಹೊನ್ನೂರು ಮುನಿಯಪ್ಪ (ಹೊನ್ನೂರು ಗ್ರಾಮ, ದಾವಣಗೆರೆ ತಾ.ಜಿ.). ಜಿಲ್ಲಾ ಗೌರವಾಧ್ಯಕ್ಷರು– ಅವರಗೆರೆ ರುದ್ರಮುನಿ (ಬಸವೇಶ್ವರ ದೇವಸ್ಥಾನದ ಬೀದಿ, ಅವರಗೆರೆ ಗ್ರಾಮ, ದಾವಣಗೆರೆ ತಾ.ಜಿ.). ಜಿಲ್ಲಾ ಪ್ರಧಾನ ಕಾರ್ಯದರ್ಶಿ–ಬುಳ್ಳಾಪುರದ ಹನುಮಂತಪ್ಪ (ಆನಗೋಡು ಗ್ರಾಮ, ದಾವಣಗೆರೆ ತಾ.ಜಿ.). ದಾವಣಗೆರೆ ತಾಲೂಕು ಅಧ್ಯಕ್ಷರು–ಕೊಗ್ಗನೂರು ಹನುಂತಪ್ಪ (ಕೊಗ್ಗನೂರು ಗ್ರಾಮ, ದಾವಣಗೆರೆ ತಾ.ಜಿ.).

**ಚಿತ್ರದುರ್ಗ ಜಿಲ್ಲಾ ಸಂಘಟನೆಯ ಪದಾಧಿಕಾರಿಗಳು**

ಜಿಲ್ಲಾಧ್ಯಕ್ಷರು–ನುಲೇನೂರು ಶಂಕ್ರಪ್ಪ, ನುಲೇನೂರು, ಚಿತ್ರದುರ್ಗ ಜಿಲ್ಲೆ. ಗೌರವಾಧ್ಯಕ್ಷರು–ಎಸ್.ಬಿ.ಶಿವಕುಮಾರ್, ಹಿರಿಯೂರು ತಾಲೂಕು, ಚಿತ್ರದುರ್ಗ ಜಿಲ್ಲೆ. ಉಪಾಧ್ಯಕ್ಷರು–ಮಲ್ಲಾಪುರ ತಿಪ್ಪೇಸ್ವಾಮಿ. ಸಂಘಟನಾ ಕಾರ್ಯದರ್ಶಿ–ಶಿವಕುಮಾರ್. ಖಜಾಂಚಿ–ಸಿ.ಆರ್.ತಿಮ್ಮಣ್ಣ, ಚಿಕ್ಕಲಾಪುರ, ಚಿತ್ರದುರ್ಗ ಜಿಲ್ಲೆ. ಹಸಿರು ಸೇನೆಯ ಜಿಲ್ಲಾ ಸಂಚಾಲಕರು–ಧನಂಜಯ್. ಚಿತ್ರದುರ್ಗ ಜಿಲ್ಲೆಯ ಪ್ರತಿಯೊಂದು ತಾಲೂಕು ಘಟಕ ಹಾಗೂ ಗ್ರಾಮ ಘಟಕದ ಸದಸ್ಯರು ಜಿಲ್ಲಾ ಸಂಘಟನೆಯ ಸದಸ್ಯರಾಗಿರುತ್ತಾರೆ.

**ಹಣದ ಮೂಲ**

ಸದರಿ ರೈತ ಸಂಘದವರು ತಮ್ಮ ಹೋರಾಟದ ಕಾರ್ಯಕ್ರಮಗಳನ್ನು ರೂಪಿಸುವಾಗ ಜಿಲ್ಲಾ, ತಾಲೂಕು, ಗ್ರಾಮ ಘಟಕದ ಕಾರ್ಯಕತ್ರರು ಹಾಗು ರೈತರಿಂದ ಹಣ ಸಂಗ್ರಹಿಸುತ್ತಾರೆ. ರೈತ ಸಂಘಟನೆಯ ಸದಸ್ಯತ್ವ ಪಡೆಯಲು ರೈತರಿಂದ ಹಣ ಪಡೆಯಲಾಗುತ್ತದೆ.

**ರಾಜ್ಯ ರೈತ ಸಂಘಟನೆಯ ಪ್ರಮುಖರ ಹೆಸರು**

ರಾಜಾಧ್ಯಕ್ಷರು–ಕೆ.ಎಸ್. ಪುಟ್ಟಣ್ಣಯ್ಯ, ಕಾರ್ಯಧ್ಯಕ್ಷರು–ಕೋಡಿಹಳ್ಳಿ ಚಂದ್ರಶೇಖರ್, ರಾಜ್ಯ ಗೌರವಾಧ್ಯಕ್ಷರು–ಸುರೇಶ್ ಬಾಬು ಪಾಟೀಲ್, ರಾಜ್ಯ ಸಂಚಾಲಕರು–ಹೆಚ್. ಓಂಕಾರಪ್ಪ ಬಿನ್ ಹನುಮಂತಪ್ಪ ವಾಸನ ಗ್ರಾಮ, ಹರಿಹರ ತಾಲ್ಲೂಕು, ರಾಜ್ಯ ಕಾರ್ಯದರ್ಶಿ–ಅರುಣ್ ಕುಮಾರ್‌ಕುರುಡಿ ಬಿನ್ ಕೆ.ಎಂ. ನೀಲಕಂಠಯ್ಯ ಕುರುಡಿ ಗ್ರಾಮ, ಹೆಮ್ಮನಬೇತೂರು (ಪೋ) ದಾವಣಗೆರೆ ತಾ.ಜಿ, ರಾಜ್ಯ ಮಹಾಪ್ರಧಾನ ಕಾರ್ಯದರ್ಶಿ–ಹೆಚ್.ಆರ್. ಬಸವರಾಜಪ್ಪ.

**ಕರ್ನಾಟಕ ರಾಜ್ಯ ರೈತ ಸಂಘ (ಪುಟ್ಟಣ್ಣಯ್ಯ ಬಣ), ಹರಿಹರ ತಾಲೂಕು ಘಟಕ**

ಈ ರೈತ ಸಂಘಟನೆಯು ೧೨–೧೦–೯೮ಳರಂದು ಹರಿಹರದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಇದರ ಕಚೇರಿಯು ಹರಿಹರ ನಗರದ ಗುರುಭವನದ ಬಳಿ ಸಭೆ ಸೇರಿ ತಮ್ಮ ಸಂಘಟನೆಯ ರೂಪರೇಷಗಳನ್ನು ಚರ್ಚಿಸುತ್ತಾರೆ.

**ತಾಲೂಕು ಸಂಘಟನೆಯ ಪದಾದಿಕಾರಿಗಳು**

ಅಧ್ಯಕ್ಷರು–ಹನಗವಾಡಿ ರುದ್ರೇಶ್ (ಹನಗವಾಡಿ ಗ್ರಾಮ, ಹರಿಹರ ತಾ. ದಾವಣಗೆರೆ ಜಿ.), ಪ್ರಧಾನ ಕಾರ್ಯದರ್ಶಿ-ಆಳೂರು ನಾಗರಾಜ ಹೊಳೆ ಸಿರಿಗೆರೆ ಗ್ರಾಮ, ಹರಿಹರ(ತಾ) ದಾವಣಗೆರೆ(ಜಿ), ಕಾರ್ಯದರ್ಶಿ–ಶೇಖರಪ್ಪ ಕುಂಬಳೂರು ಗ್ರಾಮ, ಹರಿಹರ(ತಾ) ದಾವಣಗೆರೆ(ಜಿ), ಕಾರ್ಯಧ್ಯಕ್ಷರು–ಹಲಸಬಾಳು ಬಸವರಾಜಪ್ಪ, ಹಲಸಬಾಳು, ಹರಿಹರ(ತಾ) ದಾವಣಗೆರೆ(ಜಿ), ರಾಜ್ಯ ಸಂಚಾಲಕರು–ಓಂಕಾರಪ್ಪ ಬಿನ್ ನಿಂಗಪ್ಪ, ವಾಸನ ಗ್ರಾಮ, ಹರಿಹರ(ತಾ)ದಾವಣಗೆರೆ (ಜಿ), ಖಜಾಂಚಿ–ಶಂಭುಗೌಡ ತಂದೆ ಭರ್ಮಪ್ಪ, ನಂದಿತಾವರೆ, ಹರಿಹರ(ತಾ) ದಾವಣಗೆರೆ(ಜಿ).

**ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ, ಎಂ.ಡಿ. ನಂಜುಂಡಸ್ವಾಮಿ ಬಣ ದಾವಣಗೆರೆ ಜಿಲ್ಲಾ ಘಟಕ**

ಈ ಸಂಘಟನೆಯು ೧೯೯೫ ಆಗಸ್ಟ್ ೧೫ರಂದು ದಾವಣಗೆರೆ ಜಿಲ್ಲೆ ಅಸ್ತಿತ್ವಕ್ಕೆ ಬಂದಾಗಿನಿಂದ ಅಸ್ತಿತ್ವಕ್ಕೆ ಬಂದಿದೆ. ಇದರ ಕಛೇರಿಯು ಜಿಲ್ಲಾಧಿಕಾರಿಗಳ ಕಛೇರಿಯ ಬಳಿ ಇರುವ ಮಳಿಗೆಯಲ್ಲಿದ್ದು, ಸದರಿ ಸಂಘಟನೆಯು ಯಾವುದೇ ರಾಜಕೀಯ ಪಕ್ಷಗಳ ಜೊತೆ ಗುರುತಿಸಿಕೊಂಡಿರುವುದಿಲ್ಲ.

**ಸಂಘಟನೆಯ ಧ್ಯೇಯ**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆಹಾರದ ಕೊರತೆ ನೀಗಿಸಲು ಎರಡನೇ ಹಸಿರು ಕ್ರಾಂತಿ ಘೋಷಣೆ ಮಾಡಿದ್ದು, ರೈತರಿಗೆ ಯಾವುದೇ ಸೌಲಭ್ಯ ನೀಡಿಲ್ಲ. ರಾಜ್ಯ ಸರ್ಕಾರ ರೈತರ ಗೀತೆಯನ್ನು ನಾಡಗೀತೆಯನ್ನಾಗಿ ಮಾಡಿ, ಸ್ವಾತಂತ್ರ್ಯ ದಿನಾಚರಣೆಯಂದು ಹಾಡಿಸಿ, ಮತ್ತೆ ರೈತರ ಮೇಲೆ ದೌರ್ಜನ್ಯ ನಡೆಸಿ, ಮರಣಗೀತೆ ಹಾಡಿಸುವ ಪ್ರಯತ್ನಕ್ಕೆ ಕೈ ಹಾಕುತ್ತಿದೆ. ಇದನ್ನು ತಡೆಗಟ್ಟಲು ರೈತರು ಸಂಘಟಿತರಾಗಿ ಹೋರಾಟ ಮಾಡಿ, ತಮ್ಮ ನ್ಯಾಯಬದ್ಧ ಹಕ್ಕುಗಳ ಬೇಡಿಕೆಗಳನ್ನು ಮಂಡಿಸಿ, ಬೇಡಿಕೆ ಈಡೇರಿಕೆಗಾಗಿ ಹೋರಾಡುವ ಧ್ಯೇಯವನ್ನಿಟ್ಟುಕೊಂಡಿದೆ.[೨]

**ಜಿಲ್ಲಾ ಸಂಘಟನೆಯ ಪದಾಧಿಕಾರಿಗಳ ಹೆಸರು:**

ಜಿಲ್ಲಾಧ್ಯಕ್ಷರು–ಪೂಜಾರ್ ಆಂಜನೇಯಪ್ಪ ನಿಟುವಳ್ಳಿ, ದಾವಣಗೆರೆ. ಜಿಲ್ಲಾ ಕಾರ್ಯಧ್ಯಕ್ಷ–ಬಿ.ಎಂ. ಬಸವಲಿಂಗಪ್ಪ ವಾಸನ ಹರಿಹರ(ತಾ), ಜಿಲ್ಲಾ ಉಪಾಧ್ಯಕ್ಷ–ಮರಡಿನಾಗಣ್ಣ ದೊಡ್ಡಬಾತಿ, ದಾವಣಗೆರೆ(ತಾ), ಜಿಲ್ಲಾ ಪ್ರಧಾನ ಕಾರ್ಯದರ್ಶಿ–ಜಿ. ಪ್ರಭುಗೌಡ ಕಡರ ನಾಯಕನಹಳ್ಳಿ, ಹರಿಹರ(ತಾ), ಸಂಘಟನಾ ಕಾರ್ಯದರ್ಶಿ–ಮುರಿಗೇಂದ್ರನಾಯ್ಕ್, ಖಜಾಂಚಿ–ಕೆ.ಎಂ. ಕೊಟ್ರಯ್ಯ ನಿವೃತ್ತ ಸಕ್ಕರೆ ಕಂಪನಿಯ ನೌಕರರು ಹರಿಹರ.

**ಹಣದ ಮೂಲ:** ಸದರಿ ರೈತ ಸಂಘದವರು ತಮ್ಮ ಹೋರಾಟದ ಕಾರ್ಯಕ್ರಮಗಳನ್ನು ರೂಪಿಸುವಾಗ ಜಿಲ್ಲಾ, ತಾಲೂಕು, ಗ್ರಾಮ ಘಟಕದ ಕಾರ್ಯಕತ್ರರು ಹಾಗೂ ರೈತರಿಂದ ಹಣ ಸಂಗ್ರಹಿಸುತ್ತಾರೆ. ರೈತ ಸಂಘಟನೆಯ ಸದಸ್ಯತ್ವ ಪಡೆಯಲು ರೈತರಿಂದ ಹಣ ಪಡೆಯಲಾಗುತ್ತದೆ.

**ಸಂಘಟನೆಯಲ್ಲಿರುವ ಪ್ರಮುಖರ ಹೆಸರು**

ಕೆ.ಟಿ. ಗಂಗಾಧರ ರಾಜ್ಯ ರೈತ ಸಂಘದ ಕಾರ್ಯಾಧ್ಯಕ್ಷರು, ತೇಜಸ್ವಿ ವಿ. ಪಾಟೇಲ್ ಪ್ರಧಾನ ಕಾರ್ಯದರ್ಶಿ, ಕಬ್ಬು ಬೆಳೆಗಾರರ ಸಂಘ, ಕಾರಿಗನೂರು, ಚನ್ನಗಿರಿ(ತಾ) ದಾವಣಗೆರೆ(ಜಿ), ರಾಜ್ಯ ಉಪಾಧ್ಯಕ್ಷ–ನಿಟ್ಟುವಳ್ಳಿ ಕೆಂಗಪ್ಪ (೧೯.೦೧.೨೦೧೧)ರಂದು ನಿಧನ, ದಾವಣಗೆರೆ ತಾಲೂಕು ಅಧ್ಯಕ್ಷರು ಗೋಪನಾಳ್ ರಾಜಶೇಖರಪ್ಪ.

**ಕರ್ನಾಟಕ ರಾಜ್ಯ ರೈತ ಸಂಘ (ಎಂ.ಡಿ.ಎನ್. ಬಣ) ದಾವಣಗೆರೆ ತಾಲೂಕು ಸಮಿತಿ**

ಕರ್ನಾಟಕ ರಾಜ್ಯ ರೈತ ಸಂಘ (ಎಂ.ಡಿ.ಎನ್. ಬಣ) ದಾವಣಗೆರೆ ತಾಲೂಕು ಘಟಕವು ೧೯೯೫ರಿಂದಲೂ ಅಸ್ತಿತ್ವಕ್ಕೆ ಬಂದಿದ್ದು, ಕಚೇರಿಯು ಶ್ರೀ ಬೀರಲಿಂಗೇಶ್ವರ ದೇವಸ್ಥಾನ ಪಿ.ಬಿ. ರಸ್ತೆ, ದಾವಣಗೆರೆ ನಗರದಲ್ಲಿದೆ. ಈ ಸಂಘವು ಯಾವುದೇ ರಾಜಕೀಯ ಪಕ್ಷಗಳೊಂದಿಗೆ ಗುರುತಿಸಿಕೊಂಡಿಲ್ಲ.

**ಸಂಘಟನೆಯ ಧ್ಯೇಯ:** ರಾಜ್ಯದ ರೈತರಿಗೆ ಹಾಗೂ ತಾಲೂಕಿನ ರೈತರಿಗೆ ಅನ್ಯಾಯವಾಗಿರುವುದು ಕಂಡುಬಂದರೆ ಮತ್ತು ಜಿಲ್ಲಾ ಹಾಗೂ ರಾಜ್ಯ ರೈತ ಸಂಘದವರು ಯಾವುದಾದರೂ ಬೇಡಿಕೆ ಕುರಿತು ಕರೆ ನೀಡಿದರೆ ಸದರಿ ತಾಲೂಕು ರೈತ ಸಂಘವು ತನ್ನ ಬೆಂಬಲವನ್ನು ನೀಡುತ್ತದೆ.

**ಸಂಘಟನೆಯ ಪದಾಧಿಕಾರಿಗಳ ಹೆಸರು**[೧೩]

ಗೌರವ ಅಧ್ಯಕ್ಷರು–ಚಿಕ್ಕನಹಳ್ಳಿ ಮಲ್ಲೇಶಪ್ಪ, ಅಧ್ಯಕ್ಷರು–ಕೊಗ್ಗನೂರು ಹನುಮಂತಪ್ಪ, ಉಪಾಧ್ಯಕ್ಷ–ಗೋಶಾಲೆ ಭೀಮನಾಯ್ಕ್, ಕಾರ್ಯಾಧ್ಯಕ್ಷ–ಇಟಗಿ ಬಸವರಾಜಪ್ಪ, ಮಹಾ ಪ್ರಧಾನ ಕಾರ್ಯದರ್ಶಿ–ರೇವಣಸಿದ್ದಪ್ಪ, ಪ್ರಧಾನ ಕಾರ್ಯದರ್ಶಿ–ರುದ್ರೇಶ್, ಕಾರ್ಯದರ್ಶಿ–ತಿಮ್ಮೇಗೌಡ

**ಹಣದ ಮೂಲ:** ಸದರಿ ತಾಲೂಕು ಸಂಘಟನೆಯು ತಮ್ಮ ಹೋರಾಟದ ಕಾರ್ಯಕ್ರಮಗಳನ್ನು ರೂಪಿಸುವಾಗ ತಾಲೂಕು, ಗ್ರಾಮ ಘಟಕದ ಕಾರ್ಯಕತ್ರರು ಹಾಗು ರೈತರಿಂದ ಹಣ ಸಂಗ್ರಹಿಸುತ್ತಾರೆ. ರೈತ ಸಂಘಟನೆಯ ಸದಸ್ಯತ್ವ ಪಡೆಯಲು, ತಾಲೂಕಿನ ಪ್ರಮುಖ ರೈತರುಗಳಿಂದ ಇಂತಿಷ್ಟು ಹಣ ಕೊಡಬೇಕೆಂದು ಸದರಿ ರೈತ ಸಂಘದವರು ಹಣ ಪಡೆಯುತ್ತಾರೆ.

**ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಎಂ.ಡಿ.ಎನ್ ಬಣ ಮತ್ತು ಪುಟ್ಟಣ್ಣಯ್ಯ ಬಣ ಸಂಯುಕ್ತ) ಚನ್ನಗಿರಿ ತಾಲೂಕು ಘಟಕ**

ಚನ್ನಗಿರಿ ತಾಲೂಕು ಸಂಘಟನೆಯು ೧೦.೧೧.೯೮೦ರಿಂದ ತನ್ನ ಕಾರ್ಯ ಚಟುವಟಿಕೆಯನ್ನು ಆರಂಭಿಸಿದ್ದು ಇದರ ಪ್ರಮುಖ ಕಚೇರಿಯು, ಕೃಷಿ ಸಮಾಜ, ತಾಲೂಕು ಕಚೇರಿ ಹಿಂಭಾಗ, ಚನ್ನಗಿರಿಯಲ್ಲಿ ಕಂಡುಬರುತ್ತದೆ. ಈ ಸಂಘಟನೆಯು ಜಿಲ್ಲಾ ಘಟಕದ ಧ್ಯೇಯಗಳನ್ನೇ ಅಳವಡಿಸಿಕೊಂಡಿದೆ.

**ಸಂಘಟನೆಯ ಪಧಾದಿಕಾರಿಗಳ ಹೆಸರು**[೧೪]

ತಾಲೂಕು ಅಧ್ಯಕ್ಷ – ತಿಪ್ಪೇಶಪ್ಪ ಬಿನ್ ರುದ್ರಪ್ಪ ಮಲಹಾಳು ಗ್ರಾಮ ಚನ್ನಗಿರಿ ತಾ. ದಾವಣಗೆರೆ, ಗೌರವಾಧ್ಯಕ್ಷ–ಕುಬೇಂದ್ರಪ್ಪ ಬಿನ್ ಬಸವರಾಜಪ್ಪ ನಲ್ಲಿಹಂಕಲು ಗ್ರಾಮ, ಚನ್ನಗಿರಿ ತಾ. ದಾವಣಗೆರೆ, ಉಪಾಧ್ಯಕ್ಷ–ಹನುಮಂತಪ್ಪ ಬಿನ್ ಸಿದ್ದಪ್ಪ, ಗೆದ್ದಲಟ್ಟಿ ಗ್ರಾಮ, ಚನ್ನಗಿರಿ ತಾ. ದಾವಣಗೆರೆ, ಪ್ರಧಾನ ಕಾರ್ಯದರ್ಶಿ–ಓಂಕಾರಪ್ಪ ಬಿನ್ ಸಣ್ಣ ರಂಗಪ್ಪ ಹಿರೇಮಳಲಿ ಗ್ರಾಮ, ಚನ್ನಗಿರಿ ತಾ. ದಾವಣಗೆರೆ, ಖಜಾಂಚಿ–ಕಂಠಪ್ಪ ಮುಗಳಿಹಳ್ಳಿ ಚನ್ನಗಿರಿ ತಾ. ದಾವಣಗೆರೆ.

**ಹಣದ ಮೂಲ:** ತಾಲೂಕು ರೈತ ಸಂಘದ ಕಾರ್ಯಕರ್ತರಿಂದ ಹಾಗೂ ತಾಲೂಕಿನ ಪ್ರಮುಖ ರೈತರಿಂದ ವಂತಿಗೆಯ ರೂಪದಲ್ಲಿ ಹಣವನ್ನು ಸಂಗ್ರಹಿಸುತ್ತಾರೆ.

**ಸಂಘಟನೆಯಲ್ಲಿರುವ ಪ್ರಮುಖ ರೈತ ಮುಖಂಡರು**

ಕುಮಾರಪ್ಪ ಬೆಂಕಿಕೆರೆ ಗ್ರಾಮ, ಚನ್ನಗಿರಿ ತಾ, ಸಿದ್ದಪ್ಪ ಬಿನ್ ಬಸಪ್ಪ ಗೊಳ್ಳಹಳ್ಳಿ ಗ್ರಾಮ, ಚನ್ನಗಿರಿ ತಾ, ಮಹೇಶ್ವರಪ್ಪ ಚಿಕ್ಕಸಂದಿ, ಚನ್ನಗಿರಿ ತಾ, ಕುಮಾರಪ್ಪ ಹಿರೇಮಳಲಿ, ಚನ್ನಗಿರಿ ತಾ, ರಾಜಣ್ಣ ದೋಣಿಹಳ್ಳಿ, ಚನ್ನಗಿರಿ ತಾ, ದೇವೇಂದ್ರಪ್ಪ ಚಟ್ನಿಹಳ್ಳಿ, ಚನ್ನಗಿರಿ ತಾ, ಮಹೇಶ್ವರಪ್ಪ ಗರಗ, ಚನ್ನಗಿರಿ ತಾ.

**ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಎಂ.ಡಿ.ಎನ್. ಬಣ ಹಾಗೂ ಪುಟ್ಟಣ್ಣಯ್ಯ ಬಣ ಸಂಯುಕ್ತ) ಹೊನ್ನಾಳಿ ಘಟಕ**

ಹೊನ್ನಾಳಿ ತಾಲೂಕು ಸಂಘಟನೆಯು ೦೨.೦೮.೧೯೮೦ರಂದು ಹೊನ್ನಾಳಿಯಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಕಚೇರಿಯು ಹೊನ್ನಾಳಿಯ ಪ್ರವಾಸಿ ಮಂದಿರದ ಬಳಿ ಆಗಿಂದಾಗ್ಗೆ ಸಭೆ ಸೇರುತ್ತಾರೆ. ಇದೇ ಅವರ ಕಚೇರಿಯಾಗಿರುತ್ತದೆ.

**ಸಂಘಟನೆಯ ಪದಾಧಿಕಾರಿಗಳ ಹೆಸರು**

ಅಧ್ಯಕ್ಷರು–ಎ.ಜಿ. ಚನ್ನಪ್ಪಗೌಡ್ರು ಬಿನ್ ಲೇಟ್ ಮಹಾದೇವಪ್ಪ ದಿಡಗೂರು, ಹೊನ್ನಾಳಿ ತಾ, ಉಪಾಧ್ಯಕ್ಷರು–ಹೆಚ್.ಈ. ಹಬೀಬುಲ್ಲಾ ಬಿನ್ ಲೇಟ್ ಗೂಡುಸಾಬ್, ಹಿರೇ ಗೋಣಿಗೆರೆ ಗ್ರಾಮ, ಹೊನ್ನಾಳಿ ತಾ, ಪ್ರಧಾನ ಕಾರ್ಯದರ್ಶಿ–ಹೆಚ್.ಜಿ. ಬಸವರಾಜಪ್ಪ ಬಿನ್ ಹೆಚ್.ಜಿ. ಚಂದ್ರಶೇಖರಪ್ಪ ದೊಡ್ಡೇರಿ ಗ್ರಾಮ, ಹೊನ್ನಾಳಿ ತಾ, ಕಾರ್ಯಾಧ್ಯಕ್ಷರು–ಜಿ.ಹೆಚ್. ಶಿವಾನಂದಪ್ಪ ಬಿನ್ ಲೇಟ್ ಹಾಲಪ್ಪ ಚೀಲೂರು ಗ್ರಾಮ, ಹೊನ್ನಾಳಿ ತಾ, ಹಸಿರು ಸೇನೆ ಅಧ್ಯಕ್ಷ–ಬಿ.ಹೆಚ್. ಉಮ್ಮೇಶ್ ಬಿನ್ ಲೇಟ್ ಮಹೇಶ್ವರಪ್ಪ ಬೀರಗೊಂಡನಹಳ್ಳಿ ಹೊನ್ನಾಳಿ ತಾ, ಗೌರವಾಧ್ಯಕ್ಷರು–ಬೆನಕಯ್ಯ ಬಿನ್ ಲೇಟ್ ಜಗವೀರಯ್ಯ ವಿಜಯಪುರ ತಾಂಡ, ಹೊನ್ನಾಳಿ ತಾ, ಸಂಚಾಲಕರು–ಭರಮಪ್ಪ ಮಾಸಡಿ ಗ್ರಾಮ, ಹೊನ್ನಾಳಿ ತಾ.

**ಹಣದ ಮೂಲ:** ಸಂಘಟನೆಯ ಕಾರ್ಯಕ್ರಮಗಳಿಗೆ ಪ್ರತಿಭಟನೆ ಹಾಗೂ ಸಭೆ, ಸಮಾರಂಭಗಳಿಗೆ ಬೇಕಾದ ಹಣವನ್ನು ಸಂಘಟನೆಯ ಪ್ರಮುಖ ರೈತ ಮುಖಂಡರು ಹಾಗೂ ಕಾರ್ಯಕರ್ತರೆ ವೆಚ್ಚ ಮಾಡುತ್ತಾರೆ.

**ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರುಸೇನೆ (ಎಂ.ಡಿ.ಎನ್. ಬಣ ಮತ್ತು ಪುಟ್ಟಣ್ಣಯ್ಯ ಬಣ ಸಂಯುಕ್ತ) ಹರಪನಹಳ್ಳಿ ತಾಲೂಕು ಘಟಕ**

ಹರಪನಹಳ್ಳಿ ತಾಲೂಕು ರೈತ ಸಂಘಟನೆಯು ೦೨.೧೦.೧೯೮೫ರಲ್ಲಿ ಅಸ್ತಿತ್ವಕ್ಕೆ ಬಂದಿದೆ. ಇದರ ಕಛೇರಿಯು ಹರಪನಹಳ್ಳಿ ತಾಲೂಕಿನ ಕೃಷಿ ಇಲಾಖೆಯ ಅವರಣವಾಗಿದ್ದು, ಇಲ್ಲಿ ಸಭೆಯನ್ನು ಸೇರಿ ತಮ್ಮ ಹೋರಾಟದ ಕಾರ್ಯಕ್ರಮಗಳನ್ನು ರೂಪಿಸಿರುತ್ತಾರೆ.

**ಸಂಘಟನೆಯ ಪದಾಧಿಕಾರಿಗಳ ಹೆಸರು**[೨೫]

ಅಧ್ಯಕ್ಷರು–ಸಿದ್ದಪ್ಪ ಬಿನ್ ನಂಜಪ್ಪ ಬೂದಿಹಾಳು, ಹರಪನಹಳ್ಳಿ, ಉಪಾಧ್ಯಕ್ಷರು–ರಾಮಪ್ಪ ಬಿನ್ ಹನುಮಂತಪ್ಪ ಚಿಗಟೇರಿ ಗ್ರಾಮ, ಹರಪನಹಳ್ಳಿ, ಪ್ರಧಾನ ಕಾರ್ಯದರ್ಶಿ–ಕುಮಾರಪ್ಪ

ಬಿನ್ ಹೊನ್ನಪ್ಪ, ಬೂದಿಹಾಳು, ಹರಪನಹಳ್ಳಿ, ಕಾರ್ಯಾಧ್ಯಕ್ಷರು–ನಾರಪ್ಪ ಬಿನ್ ನರಸಿಂಹಪ್ಪ ಮತ್ತಿಹಳ್ಳಿ ಗ್ರಾಮ, ಹರಪನಹಳ್ಳಿ, ಹಸಿರು ಸೇನೆ ಅಧ್ಯಕ್ಷ–ರಮೇಶ್ ಬಿನ್ ಹನುಂತಪ್ಪ ಚಿಕ್ಕಕಬ್ಬಳ್ಳಿ ಗ್ರಾಮ, ಹರಪನಹಳ್ಳಿ, ಸಂಚಾಲಕರು–ಹಾದಿಮನಿ ರುದ್ರಪ್ಪ ಬಿನ್ ಪೋರಪ್ಪ ನಂದಿಬೇವೂರು ಗ್ರಾಮ ಹರಪನಹಳ್ಳಿ.

**ಹಣದ ಮೂಲ:** ಸಂಘಟನೆಯು ತನ್ನ ಪ್ರತಿಭಟನೆಗಳಿಗೆ ಸಭೆ ಸಮಾರಂಭಗಳಿಗೆ ಹಾಗೂ ಮೊದಲಾದ ಕಾರ್ಯಕ್ರಮಗಳನ್ನು ನಡೆಸಲು ತಾವೇ ವೈಯಕ್ತಿಕವಾಗಿ ಹಣವನ್ನು ಖರ್ಚು ಮಾಡುತ್ತಾರೆ.

**ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಎಂ.ಡಿ.ಎನ್. ಬಣ) ಹರಿಹರ ತಾಲೂಕು ಘಟಕ**

ಈ ಸಂಘಟನೆಯು ೨೫.೦೩.೧೯೮೭ರಿಂದ ಅಸ್ತಿತ್ವಕ್ಕೆ ಬಂದಿದ್ದು, ಕಚೇರಿಯು ಹರಿಹರ ನಗರದ ಕುರುಬರಗೇರಿ ಬಡಾವಣೆಯಲ್ಲಿದ್ದು, ತಮ್ಮ ಹೋರಾಟದ ಕಾರ್ಯಕ್ರಮಗಳನ್ನು ರೂಪಿಸಲು ಸಭೆ ಸೇರುತ್ತಾರೆ.

**ಸಂಘಟನೆಯ ಪದಾಧಿಕಾರಿಗಳ ಹೆಸರು**

ಅಧ್ಯಕ್ಷರು-ಕೆ.ಬಿ. ರುದ್ರಮುನಿ ಬಿನ್ ವಿರುಪಾಕ್ಷಪ್ಪ ಹನಗವಾಡಿ, ಹರಪನಹಳ್ಳಿ, ಉಪಾಧ್ಯಕ್ಷರು–ಬೇವಿನಹಳ್ಳಿ ಮಹೇಶ್ ಬಿನ್ ರಾಮಣ್ಣ ನಲವಾಗಲು, ರಾಣೆಬೆನ್ನೂರು, ಪ್ರಧಾನ ಕಾರ್ಯದರ್ಶಿ-ಮಹೇಶ್ವರ ಸ್ವಾಮಿ ಬಿನ್ ಲೋಕಯ್ಯ ಕೆ.ಆರ್. ನಗರ ಹರಿಹರ, ಕಾರ್ಯಾಧ್ಯಕ್ಷರು–ಕೆ.ಎಂ. ಕೊಟ್ರಯ್ಯ ಬಿನ್ ಮಲ್ಲಯ್ಯ ದೇವಸ್ಥಾನದ ರಸ್ತೆ, ಹರಿಹರ, ಸಂಚಾಲಕರು–ಹನುಮಂತಪ್ಪ ಬಿನ್ ಗೋಣಿಬಸಪ್ಪ ದೀಟೂರು, ಹರಿಹರ, ಕಾರ್ಯದರ್ಶಿ–ಶೇಖರಪ್ಪ ಬಿನ್ ರುದ್ರಪ್ಪ ಹನಗವಾಡಿ ಗ್ರಾಮ, ಹರಿಹರ.

**ಕರ್ನಾಟಕ ರಾಜ್ಯ ರೈತ ಮತ್ತು ಸ್ವ ಸಹಾಯ ಸ್ತ್ರೀ ಶಕ್ತಿ ಸೇನೆ ರಾಜ್ಯ ಸಮಿತಿ**

ಕರ್ನಾಟಕ ರಾಜ್ಯ ರೈತ ಮತ್ತು ಸ್ವ ಸಹಾಯ ಸ್ತ್ರೀ ಶಕ್ತಿ ಸೇನೆ ರಾಜ್ಯ ಸಮಿತಿ(ರಿ) ಯನ್ನು ದಿನಾಂಕ ೨೫.೦೬.೨೦೧೦ ರಂದು, ಹರಿಹರದಲ್ಲಿ ಈ ಸಂಘಟನೆಯನ್ನು ಸ್ಥಾಪಿಸಲಾಯಿತು. ೦೬.೦೭.೨೦೧೦ ರಂದು ಸಂಘಟನೆಯನ್ನು ನೋಂದಾವಣಿ ಮಾಡಿದರು. ರಾಜ್ಯಾಧ್ಯಕ್ಷರಾಗಿ ಹೆಚ್.ಎಮ್.ಮಹೇಶ್ವರಸ್ವಾಮಿ, ರಾಜ್ಯ ಖಜಾಂಚಿ ಯಲ್ಲನಾಯ್ಕ, ರಾಜ್ಯ ಉಪಾಧ್ಯಕ್ಷರಾಗಿ ಕೆ.ಎನ್.ಸಿದ್ದೇಶ್, ರಾಜ್ಯ ಪ್ರಧಾನ ಕಾರ್ಯದರ್ಶಿಯಾಗಿ, ಹೆಗಡೆ ಭಾಗೀರಥಿ, ರಾಜ್ಯ ಸಂಘಟನಾ ಕಾರ್ಯದರ್ಶಿಯಾಗಿ ಎಂ.ಚಂದ್ರಶೇಖರ್ ಮುಂತಾದ ಅನೇಕ ಸದಸ್ಯರು ಈ ಸಂಘಟನೆಯಲ್ಲಿ ಕಾರ್ಯ ನಿರ್ವಹಿಸುತ್ತದ್ದಾರೆ. ಉಳುವ ನೇಗಿಲಿನ ಚಿತ್ರವನ್ನು ಹೊಂದಿರುವ ಬಾವುಟವು ಈ ಸಂಘಟನೆಯ ಧ್ವಜವಾಗಿದೆ. ಪ್ರತಿಭಟನೆಯ ಸಂಕೇತವಾಗಿ ಹಸಿರು ಶಾಲನ್ನು ರೈತ ಸಂಘಟನೆಯ ನಾಯಕರು, ಕಾರ್ಯಕತ್ರರು ಹಾಗೂ ರೈತರು ಹಾಕುತ್ತಾರೆ.[೧೬] ರೈತ ಸಂಘಟನೆಯನ್ನು ಮುನ್ನೆಡಸಲು ಮತ್ತು ಪ್ರತಿಭಟನೆ ಮಾಡಲು ಬೇಕಾಗುವ ಹಣವನ್ನು ಜಿಲ್ಲಾ,

ತಾಲೂಕು ಹಾಗೂ ಗ್ರಾಮ ಮಟ್ಟದ ರೈತ ಸಂಘಟನೆಯ ಕಾರ್ಯಕರ್ತರು ಹಾಗೂ ರೈತರಿಂದ ಪಡೆಯಲಾಗುತ್ತದೆ. ಖರ್ಚು ವೆಚ್ಚಕ್ಕೆ ಸಂಬಂಧಿಸಿದಂತೆ ಸರಿಯಾದ ದಾಖಲೆ ಮತ್ತು ರಸೀದಿಗಳನ್ನು ಇಡಲಾಗುತ್ತದೆ.

**ಕರ್ನಾಟಕ ರಾಜ್ಯ ರೈತ ಮತ್ತು ಸ್ವ ಸಹಾಯ ಸ್ತ್ರೀ ಶಕ್ತಿ ಸೇನೆ ರಾಜ್ಯ ಸಮಿತಿಯ ಬೇಡಿಕೆಗಳು:**[೧೭]

೧. ಮಧ್ಯ ಕರ್ನಾಟಕದ ಕೇಂದ್ರ ಬಿಂದು ದಾವಣಗೆರೆಯನ್ನು ಎರಡನೇ ರಾಜಧಾನಿಯನ್ನಾಗಿ ಘೋಷಿಸಬೇಕು.

೨. ಕರ್ನಾಟಕ ರಾಜ್ಯವನ್ನು ಭ್ರಷ್ಟಾಚಾರದಿಂದ ಮುಕ್ತಗೊಳಿಸುವುದು.

೩. ಸಾಲವಿಲ್ಲದ ಹಳ್ಳಿಗಳ ನಿರ್ಮಾಣ. ಮತ್ತೆಂದು ಸಾಲಗಳು ಹಳ್ಳಿಗಳನ್ನು ಪ್ರವೇಶಿಸದಂತೆ ನೋಡಿಕೊಳ್ಳುವುದು.

೪. ರೈತ ಬೆಳೆದ ಬೆಳೆಗಳಿಗೆ ವೈಜ್ಞಾನಿಕ ಬೆಲೆ ಜಾರಿಗೆಗೊಳಿಸಬೇಕು.

೫. ಇಲ್ಲಿಯವರೆಗೆ ಹಾಗಿರುವ ಎಲ್ಲಾ ರೈತರ ಸಾಲಗಳು, ಸರ್ಕಾರದ ನೀತಿಗಳಿಂದ ಆದ ಸಾಲಗಳಾಗಿವೆ. ಕಾರಣ ಎಲ್ಲಾ ಸಾಲಗಳನ್ನು ಸರ್ಕಾರವೇ ತೀರಿಸಬೇಕು.

೬. ದೇಶಕ್ಕಾಗಿ ಆಹಾರ ಉತ್ಪಾದನೆ ಮಾಡುವ ರೈತನಿಗೆ ಬಡ್ಡಿರಹಿತ ಸಾಲ ಒದಗಿಸಬೇಕು.

೭. ಭೂಕಾಯ್ದೆಗೆ ತಿದ್ದುಪಡಿ ತಂದು, ರೈತರ ಮೇಲೆ ಅಪಾಯಕಾರಿ ಕಾನೂನನ್ನು ಜಾರಿಗೆ ಮಾಡಿ, ಸಾಲ ವಸೂಲಾತಿಗೆ ಅನುಮೋದನೆ ನೀಡಿರುವದನ್ನು ಕೂಡಲೇ ರದ್ದುಪಡಿಸಬೇಕು.

೮. ಆಕ್ರಮ ಗಣಿಗಾರಿಕೆ ಹಾಗು ಸಂಪೂರ್ಣ ಗಣಿಗಾರಿಕೆಯನ್ನು ನಿಲ್ಲಿಸುವುದು. ರಾಜ್ಯದ ಜನತೆಗೆ ಬೇಕಾಗುವಷ್ಟು ಮಾತ್ರ ಸರ್ಕಾರವೇ ಗಣಿಗಾರಿಕೆ ನಡೆಸಬೇಕು. ಏಕೆಂದರೆ ಮುಂದಿನ ತಲೆಮಾರುಗಳಿಗೆ ಗಣಿಯ ಅವಶ್ಯಕತೆಯಿದೆ.

೯. ಸ್ವಸಹಾಯ ಸಂಘಗಳ ಅಭಿವೃದ್ಧಿಗೆ ಐದು ಲಕ್ಷ ಸಹಾಯ ಧನ ನೀಡುವುದು.

೧೦. ರಾಜ್ಯಾದ್ಯಾಂತ ಪುನಃ ಸರ್ವೆ ಮಾಡಿ ಬಿ.ಪಿ.ಎಲ್. ಕಾರ್ಡ್ ವಿತರಿಸುವುದು.

೧೧. ಮಹಿಳೆಯರಿಗೆ ಶೇ.೫೦ರಷ್ಟು ಮೀಸಲಾತಿ ಜಾರಿಯಾಗಬೇಕು.

೧೨. ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಕೊಡುವ ಸಾಲಕ್ಕೆ ಶೇ.೨ರಷ್ಟು ಬಡ್ಡಿ ನಿಗದಿ.

೧೩. ಹದಿನೈದು ಎಕರೆ ಒಳಗಿರುವ ರೈತರ ಟ್ರಾಕ್ಟರ್ ಸಾಲ, ಪಂಪಸೆಟ್ ಸಾಲ, ಮತ್ತಿತರ ಕೃಷಿಗೆ ಸಂಬಂಧಪಟ್ಟ ಎಲ್ಲಾ ಸಾಲಗಳನ್ನು ಮಾಡಬೇಕು.

೧೪. ಮೆಕ್ಕೆಜೋಳಕ್ಕೆ ಪ್ರತೀ ಕ್ವಿಂಟಾಲ್‌ಗೆ ೨೦೦೦ ರೂಪಾಯಿಗಳ ಬೆಂಬಲ ಬೆಲೆ ನಿಗಧಿಗೊಳಿಸಿ ಖರೀದಿಸಲು ಆದೇಶಿಸಬೇಕು.

ಈ ರೀತಿಯ ಮುಂತಾದ ಬೇಡಿಕೆಗಳ ಈಡೇರಿಕೆಗಾಗಿ ರೈತ ಸಂಘಟನೆ ೨೦೧೦ ರಿಂದ ಪ್ರಸ್ತುತದವರೆಗೆ, ಅನೇಕ ರೈತಪರ ಪ್ರತಿಭಟನೆಗಳನ್ನು ನಡೆಸುತ್ತಾ ಬಂದಿದೆ.

**ಕರ್ನಾಟಕ ಪ್ರದೇಶ ರೈತ ಸಂಘ**

ಈ ಸಂಘಟನೆಯು ೧೪.೦೯.೧೯೯೪ ರಂದು ಎಂ.ಎಸ್.ಕೆ.ಶಾಸ್ತ್ರಿಯವರು ದಾವಣಗೆರೆ ಜಿಲ್ಲೆಯಲ್ಲಿ ಪ್ರಾರಂಭಿಸಿದರು. ಇದರ ಪ್ರಧಾನ ಕಾರ್ಯಾಲಯ ಆಶೋಕ ರಸ್ತೆ, ದಾವಣಗೆರೆಯಲ್ಲಿದೆ. ನೋಂದಣಿ ಸಂಖ್ಯೆ :ಎಸ್.ಓ.ಆರ್,/೧೭೬/೯೪-೯೫. ಈ ಸಂಘಟನೆಯ ರಾಜ್ಯಾಧ್ಯಕ್ಷರು ಎಂ.ಎಸ್.ಕೆ. ಶಾಸ್ತ್ರಿ. ಉಪಾಧ್ಯಕ್ಷರು ಸುಭಾಷನಗೌಡ ಪಾಟೀಲ್, ಗೌರವ ಅಧ್ಯಕ್ಷರು ಕಳಸವಳ್ಳಿ ಚನ್ನಬಸಪ್ಪ, ಕಾರ್ಯಧ್ಯಕ್ಷರು ಮಹದೇವಪ್ಪ ಬಿ. ತಳವಾರ್, ಪ್ರಧಾನ ಕಾರ್ಯದರ್ಶಿ ಬಿ.ಎಮ್. ಷಣ್ಮುಖಯ್ಯ, ಕಾರ್ಯಧ್ಯಕ್ಷರು ಹೆಚ್.ಎಮ್. ವಿಶ್ವನಾಥ್, ಮಹಿಳಾ ಕಾರ್ಯಧ್ಯಕ್ಷರು ಎಮ್. ಪ್ರೇಮಲತಾ, ಮಹಿಳಾ ಕಾರ್ಯದರ್ಶಿ ಎಲ್.ಎಸ್. ಹೇಮಾವತಿ.

**ಪ್ರಮುಖ ಸದಸ್ಯರು:** ಹಾಸನದ ಮಂಜುನಾಥ ದತ್ತ, ಆಲೂರು ಪಕ್ಕೀರಪ್ಪ ಗೌಡರು, ಕೊಂಡಜ್ಜಿ ಗೌಡರ ಪ್ರಕಾಶಪ್ಪ, ಹಾಲವರ್ತಿ ಪಾಟೀಲ್, ಗೌಡರ ನಿರಂಜನ ಮೂರ್ತಿ ಮುಂತಾದವರು.

ಈ ಸಂಘಟನೆಯು ಹೊಲವನ್ನು ಉಳುಮೆ ಮಾಡುವ ಜೋಡಿ ಎತ್ತುಗಳು ಹೊತ್ತು ನಿಂತಿರುವ ನೇಗಿಲನ್ನು ತನ್ನ ಸಂಘಟನೆಯ ಲಾಂಛನವನ್ನಾಗಿ ಮಾಡಿಕೊಂಡಿದೆ. ಕಾರಣ ರೈತ ಇದರಿಂದ ಭೂಮಿಯನ್ನು ಉತ್ತಿ, ಬಿತ್ತಿ, ಬೆಳೆ ಬೆಳೆಯುವ ಕಾಯಕವನ್ನು ಕೈಗೊಂಡಿದ್ದಾನೆ. ಸಂಘಟನೆಯು ಹಣವನ್ನು ತನ್ನ ಸಂಘಟನೆ ಸದಸ್ಯತ್ವ ಪಡೆಯುವ ರೈತರಿಂದ ಹಾಗೂ ಕಾರ್ಯಕರ್ತರಿಂದ ಪಡೆಯುತ್ತದೆ. ಅಲ್ಲದೆ ಪ್ರತಿಭಟನೆಯ ಸಮಯದಲ್ಲಿ ಖರ್ಚು ವೆಚ್ಚಕ್ಕೆ ಸರಿಯಾಗಿ ಜಿಲ್ಲಾ, ತಾಲೂಕು ಹಾಗೂ ಗ್ರಾಮ ಮಟ್ಟದ ಸಂಘಟನೆಗಳಿಂದ ಹಣವನ್ನು ಪಡೆಯಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ರಶೀದಿ ಮತ್ತು ದಾಖಲೆಗಳನ್ನು ಇಡಲಾಗುತ್ತದೆ.[೧೮]

**೨೨ ಕೆರೆಗಳನ್ನು ಏತ ನೀರಾವರಿ ಹೋರಾಟ ಸಮಿತಿ**

ದಾವಣಗೆರೆ ಜಿಲ್ಲೆಯ ದಾವಣಗೆರೆ ಹಾಗೂ ಜಗಳೂರು ತಾಲ್ಲೂಕಿನ ಗ್ರಾಮಗಳಾದ ಅಣಜಿ, ಕಂದನಕೋವಿ, ತುಪ್ಪದಹಳ್ಳಿಯ ನೂರಾರು ರೈತರು ಸೇರಿಕೊಂಡು, ಈ ಮೂರು ಗ್ರಾಮದ ಕೆರೆಗಳಿಗೆ ನೀರನ್ನು ತುಂಬಿಸುವ ಸಲುವಾಗಿ ೨೦೦೪ ರಂದು ಅಣಜಿ, ಕಂದನಕೋವಿ, ತುಪ್ಪದಹಳ್ಳಿ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿಯನ್ನು ರಚಿಸಿಕೊಂಡರು. ನಂತರ ಈ ಹೋರಾಟ ತೀವ್ರ ಸ್ವರೂಪ ಪಡೆದುಕೊಂಡಾಗ ೨೦೦೬ ರಲ್ಲಿ ದಾವಣಗೆರೆ ಜಿಲ್ಲೆಯ ಜಗಳೂರು, ಹರಪನಹಳ್ಳಿ ತಾಲ್ಲೂಕಿನ ಹದಿನಾರು ಗ್ರಾಮಗಳ ರೈತರು ಸೇರಿಕೊಂಡು, ೧೯ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿ ಹಾಗೂ ರೈತ-ಕೃಷಿ ಕಾರ್ಮಿಕರ ಸಂಘಟನೆಯನ್ನು ಸ್ಥಾಪಿಸಿಕೊಂಡರು. ತುಂಗಾಭದ್ರಾ ನದಿಯಿಂದ ಏತ ನೀರಾವರಿಯ ಮೂಲಕ ದಾವಣಗೆರೆ ಜಿಲ್ಲೆಯ ೧೯ ಕೆರೆಗಳನ್ನು ತುಂಬಿಸಲು ಸರ್ಕಾರವನ್ನು ಆಗ್ರಹಿಸಿ ಪ್ರತಿಭಟನೆ ಮಾಡಿದರು. ಈ ರೈತ ಹೋರಾಟದ ಫಲವಾಗಿ ೨೦೦೭ರಂದು ೧೯ ಕೆರೆಗಳಿಗೆ ನೀರು ತುಂಬಿಸಲು ಯೋಜನೆಯನ್ನು ಸರ್ಕಾರ ಜಾರಿಗೆಗೊಳಿಸಿತು. ಈ ಸಮಯದಲ್ಲಿ ಶ್ರೀಗಳ ಒಪ್ಪಿಗೆ ಪಡೆದು

ಮತ್ತೆ ಮೂರು ಕೆರೆಗಳನ್ನು ಸೇರಿಸಲಾಯಿತು. ಇದರಿಂದಾಗಿ '೨೨ ಕೆರೆಗಳ ಏತ ನೀರಾವರಿ ಹೋರಾಟ ಸಮಿತಿ' ೨೦೦೭ ರಿಂದ ಅಸ್ತಿತ್ವಕ್ಕೆ ಬಂದಿತು. ಇದರ ಕಚೇರಿಯು ಆರ್.ಕೆ.ಎಸ್. ಕಚೇರಿ, ಕನ್ನಿಕಾ ಮಹಲ್, ಪಿ.ಜೆ.ಬಡಾವಣೆ, ದಾವಣಗೆರೆಯಲ್ಲಿದೆ.[೧೯]

**ಸಂಘಟನೆಯ ಪಧಾದಿಕಾರಿಗಳು:** ಅಧ್ಯಕ್ಷರು ಡಾ॥ಜಿ. ಮಂಜುನಾಥ ಗೌಡ, ಗೌರವಾಧ್ಯಕ್ಷರು ಎನ್.ಸಿ. ಪಾಟೀಲ್, ಕಾರ್ಯದರ್ಶಿ ಎಲ್. ಕೊಟ್ರೇಶ್ ನಾಯ್ಕ್, ಜಂಟಿ ಕಾರ್ಯದರ್ಶಿ ಕೆ.ಬಿ. ಶಿವಕುಮಾರ್.

**ಬೇಡಿಕೆ:** ದಾವಣಗೆರೆ ಜಿಲ್ಲೆಯ ಜಗಳೂರು, ಹರಪನಹಳ್ಳಿ ತಾಲ್ಲೂಕಿನ ಭಾಗವು ಬರ ಪೀಡಿತ ಪ್ರದೇಶವಾಗಿರುತ್ತದೆ. ಈ ರೀತಿ ಗುರುತಿಸಲಾಗಿರುವ ಭಾಗದಲ್ಲಿ ಭಾರೀ ಮತ್ತು ಮಧ್ಯಮ ನೀರಾವರಿಯ ಸೌಲಭ್ಯವು ಸಹ ಇಲ್ಲದೆ, ಇಲ್ಲಿ ಕೇವಲ ಸಣ್ಣ ನೀರಾವರಿ ಕೆರೆಗಳು ಮಾತ್ರ ಮುಖ್ಯವಾದ ನೀರಾವರಿ ಮೂಲಗಳಾಗಿರುತ್ತವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಅಸಮರ್ಪಕ ಹಾಗೂ ಅಕಾಲಿಕ ಮಳೆಯಿಂದಾಗಿ ಈ ಕೆರೆಗಳು ಸಹ ತುಂಬುತ್ತಿರಲಿಲ್ಲ. ಇದರಿಂದಾಗಿ, ಈ ಪ್ರದೇಶದ ಬಹುತೇಕ ಕೃಷಿಕರು ನೀರಾವರಿ ಸೌಲಭ್ಯದಿಂದ ವಂಚಿತರಾಗಿ ಬಹಳ ಅನಿಶ್ಚಿತ ಪರಿಸ್ಥಿತಿಗೆ ಒಳಗಾಗಿರುತ್ತಾರೆ. ಅಲ್ಲದೆ ಭೂಮಿಯ ಅಂತರ್ಜಲ ಮಟ್ಟವೂ ಕಡಿಮೆಯಾಗಿ ಕೊಳವೆ ಬಾವಿ ಆಧಾರಿತ ಕೃಷಿಗೆ ಹಾಗೂ ಕುಡಿಯುವ ನೀರಿಗೆ ಬಹಳಷ್ಟು ತೊಂದರೆಯಾಗುತ್ತದೆ. ಈ ಕ್ಲಿಷ್ಟ ಪರಿಸ್ಥಿತಿಯಿಂದ ಹೊರ ಬರಲು ಸ್ಥಳೀಯ ರೈತರು, ದಾವಣಗೆರೆ ಜಿಲ್ಲೆಯ, ಹರಿಹರ ತಾಲ್ಲೂಕಿನ ರಾಜನಹಳ್ಳಿ ಬಳಿ ತುಂಗಾ-ಭದ್ರಾ ನದಿಯಿಂದ ನೀರನ್ನು ಮೇಲೆತ್ತಿ ದಾವಣಗೆರೆ, ಜಗಳೂರು, ಹರಪನಹಳ್ಳಿ ತಾಲ್ಲೂಕಿನ ೨೨ ಕೆರೆಗಳಿಗೆ ನೀರು ತುಂಬಿಸುವುದು.[೨೦]

**ಭಾರತೀಯ ಕಿಸಾನ್ ಸಂಘ**

ಭಾರತೀಯ ಕಿಸಾನ್ ಸಂಘವು ಭಾರತದ ರೈತರ ಸಮಗ್ರ ಬೆಳವಣಿಗೆಯನ್ನು ಗುರಿಯಾಗಿಟ್ಟುಕೊಂಡ ರೈತರ ಸಂಘಟನೆಯಾಗಿದೆ. ಈ ಸಂಘಟನೆಯು ಯಾವುದೇ ರಾಜಕೀಯ ಪಕ್ಷದೊಂದಿಗೆ ಸಂಬಂಧ ಹೊಂದಿಲ್ಲ. ಶ್ರೀ ದತ್ತೋಪಂತ್ ಜಿ ತೆಂಗ್ಡಿ ಯವರು ಮಾರ್ಚ್ ೪, ೧೯೭೯ರಲ್ಲಿ ರಾಜಾ ಕೋಟೆಯಲ್ಲಿ ಭಾರತೀಯ ಕಿಸಾನ್ ಸಂಘವನ್ನು ಸ್ಥಾಪಿಸಿದರು. ದೇಶಾದ್ಯಾಂತ ಪ್ರಯಾಣ ಬೆಳೆಸಿದ ಇವರು, ಸುಮಾರು ೬೫೦ ರೈತ ಪ್ರತಿನಿಧಿಗಳನ್ನು ಸಂಗ್ರಹಿಸಿ, ರೈತ ಸಂಘಟನೆ ಎಂದು ಘೋಷಿಸಿದರು. ಇಂದು ಈ ಸಂಘಟನೆಯು ರಾಷ್ಟ್ರವ್ಯಾಪಿ ಸಂಘಟನೆಯಾಗಿ ಬೆಳೆದಿದೆ.

**ಗುರಿ ಮತ್ತು ಉದ್ದೇಶಗಳು**

೧. ರೈತರು ಉತ್ತಮವಾದ ಜೀವನ ನಡೆಸಲು ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಪರಿಸ್ಥಿತಿಗಳ ಸುಧಾರಣೆ ಮಾಡುವುದು

೨. ಕೃಷಿ ಕ್ಷೇತ್ರದಲ್ಲಿ ಹೊಸ ಸಂಶೋಧನೆಗಳನ್ನು ಹಾಗೂ ಸುಧಾರಣೆಗಳನ್ನು ಜಾರಿಗೆ ತರುವುದರ ಮೂಲಕ ರೈತರು ಅಳವಡಿಸಿಕೊಳ್ಳುವಂತೆ ಪ್ರೋತ್ಸಾಹಿಸುವುದು.

೩. ಹಳೆಯ ಕೃಷಿ ತಂತ್ರ, ವಿಧಾನ, ಬೀಜಗಳು, ಜಾನುವಾರು, ಮುಂತಾದ ಜೀವವೈವಿಧ್ಯದ ಪರಿಸರ ಸುರಕ್ಷತೆಗೆ ಆಧುನಿಕ ಆವಿಷ್ಕಾರಗಳೊಂದಿಗೆ ಸಂಯೋಜಿಸಲು ಒತ್ತು ನೀಡುವುದು.

೪. ಕೃಷಿ ಕ್ಷೇತ್ರದಲ್ಲಾಗುವ ನವೀನ ಪ್ರಯೋಗಗಳನ್ನು ಪ್ರಚಾರ ಮಾಡುವುದು. ಅದಕ್ಕಾಗಿ ಅಧ್ಯಯನ ಪ್ರವಾಸಗಳು, ಪ್ರದರ್ಶನಗಳು, ವಿಚಾರಗೋಷ್ಠಿಗಳು, ಚರ್ಚೆಗಳು, ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವುದು. ಇಂತಹ ಚಟುವಟಿಕೆಗಳನ್ನು ನಿರ್ವಹಿಸಲು ಪ್ರೋತ್ಸಾಹ ಹಾಗೂ ಸಹಾಯ ಮಾಡುವುದು.

೫. ಭಾರತೀಯ ವಿವಿಧ ಹಸುವಿನ ತಳಿಗಳನ್ನು ರಕ್ಷಿಸುವುದು. ಕೃಷಿ ಚಟುವಟಿಕೆಗಳಿಗೆ ಉತ್ತೇಜನ ನೀಡುವುದು.

೬. ರೈತರು ಮತ್ತು ಕೃಷಿ ಕಾರ್ಮಿಕರ ನಡುವೆ ಸಹಕಾರ ಮತ್ತು ಸೌಹಾರ್ದಯುತ ಸಂಬಂಧವನ್ನು ಪ್ರೋತ್ಸಾಹಿಸುವುದು.

೭. ಗ್ರಾಮಗಳಲ್ಲಿ ಆರೋಗ್ಯಕರ ಹಾಗೂ ರಚನಾತ್ಮಕ ವಾತಾವರಣವನ್ನು ಸೃಷ್ಟಿಸುವುದು.

೮. ಸುಧಾರಿತ ನೀರಾವರಿ ತಂತ್ರಗಳನ್ನು ಅಳವಡಿಸಿಕೊಂಡು, ನೀರು ಪೋಲಾಗದಂತೆ ತಡೆದು, ಇದರ ಬಳಕೆಯನ್ನು ಅಭಿವೃದ್ಧಿಪಡಿಸುವುದು ಮತ್ತು ಪ್ರಚಾರ ಮಾಡುವುದು.

೯. ಸಾಮಾಜಿಕ ಪುನರ್‌ನಿರ್ಮಾಣ ಮಾಡುವುದು.

೧೦. ರಾಷ್ಟ್ರದ ಆಂತರಿಕ ಮತ್ತು ಬಾಹ್ಯ ದಾಳಿಗಳ ಕುರಿತು ರೈತರಿಗೆ ಜಾಗೃತಿ ಮೂಡಿಸುವುದು.

೧೧. ಮೇಲಿನ ಎಲ್ಲಾ ಉದ್ದೇಶಗಳನ್ನು ಈಡೇರಿಸುವ ದೃಷ್ಟಿಯಿಂದ ರೈತರಿಗೆ ಉತ್ತೇಜನ ನೀಡಲು ವಿವಿಧ ಚಟುವಟಿಕೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಕೈಗೊಳ್ಳುವುದು.

**ಭಾರತೀಯ ಕಿಸಾನ್ ಸಂಘನೆಯ ವಿಸ್ತರಣೆ ಮತ್ತು ಸದಸ್ಯತ್ವ**

ಕೆಲವೇ ವರ್ಷಗಳಲ್ಲಿ ಈ ಸಂಘಟನೆಯು ದೇಶದ ಎಲ್ಲಾ ರಾಜ್ಯಗಳಲ್ಲಿಯೂ ಹರಡಿತು. ಪ್ರತಿಯೊಂದು ರಾಜ್ಯಗಳಲ್ಲಿ ಜಿಲ್ಲಾ ಸಂಘಟನೆಗಳು ರಚನೆಯಾದವು. ಪ್ರತಿಯೊಂದು ಜಿಲ್ಲೆಗಳಲ್ಲೂ ತಾಲೂಕು ಸಂಘಟನೆಗಳು, ಪ್ರತಿಯೊಂದು ತಾಲೂಕಿನಲ್ಲಿಯು ಗ್ರಾಮ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು.

ಭಾರತೀಯ ಕಿಸಾನ್ ಸಂಘವು ನೋಂದಾಯಿತ ಸಂಘಟನೆಯಾಗಿದೆ. ಇದರ ಸದಸ್ಯತ್ವವು ಮೂರು ವರ್ಷಗಳಾಗಿರುತ್ತದೆ. ಈ ಮೂರು ವರ್ಷಗಳಲ್ಲಿ ರಾಷ್ಟ್ರ ಮಟ್ಟದಿಂದ ಗ್ರಾಮ ಮಟ್ಟದವರೆಗೆ ವಿವಿಧ ಸಮಿತಿಗಳನ್ನು ಆಯ್ಕೆ ಮಾಡಲಾಗುತ್ತದೆ.

ಭಾರತೀಯ ಕಿಸಾನ್ ಸಂಘವು ಕೃಷಿಗಾಗಿ ಬಹಳ ವಿಶಾಲವಾದ ಅರ್ಥವನ್ನು ಅಳವಡಿಸಿಕೊಂಡಿದೆ. ಇದರಲ್ಲಿ ಹೈನುಗಾರಿಕೆ, ತೋಟಗಾರಿಕೆ, ರೇಷ್ಮೆಯ ಕೃಷಿ, ಮೀನುಗಾರಿಕೆ, ಅರಣ್ಯ ಮತ್ತು ಉತ್ಪಾದನೆ, ಕೃಷಿ ಉತ್ಪನ್ನ ವ್ಯವಹಾರಗಳು ಮುಂತಾದುವು. ಮೇಲಿನ

ಚಟುವಟಿಕೆಗಳಲ್ಲಿ ತೊಡಗಿರುವ ಎಲ್ಲಾ ವ್ಯಕ್ತಿಗಳು ಮತ್ತು ಕೃಷಿ ಕಾರ್ಯಕರ್ತರುಗಳನ್ನು ಯಾವುದೇ ಜಾತಿ, ಮತ, ಧರ್ಮ, ಭಾಷೆ ಹಾಗೂ ಪ್ರದೇಶದ ಯಾವುದೇ ತಾರತಮ್ಯವಿಲ್ಲದೆ ಈ ಸಂಘದ ಸದಸ್ಯರಾಗಲು ಅರ್ಹರಾಗಿರುತ್ತಾರೆ.

**ಭಾರತೀಯ ಕಿಸಾನ್ ಸಂಘದ ಧ್ವಜ**

ಈ ಸಂಘದ ಧ್ವಜವು ಅಖಂಡ ಭಾರತದ ಒಳಗೆ ನೇಗಿಲಿನ ಚಿತ್ರ ಹೊಂದಿರುವ ಕೇಸರಿ ಬಣ್ಣ ಅಥವಾ ನಸು ಹಳದಿ ಕೆಂಪು ಬಣ್ಣವನ್ನು ಹೊಂದಿದೆ. ಇದು ಬೆಳಗಿನ ಬೆಳಕನ್ನು, ಸೂರ್ಯನ ಪ್ರಕಾಶಮಾನವನ್ನು, ರಾಷ್ಟ್ರದ ಇತಿಹಾಸ, ಸಂಪ್ರದಾಯ, ಮತ್ತು ರೈತರ ಜೀವನವನ್ನು ಸೂಚಿಸುತ್ತದೆ. ಬೆಂಕಿಯಂತೆ ಶುದ್ಧತೆ, ಶಕ್ತಿ, ಜ್ಞಾನ ಹಾಗೂ ಪ್ರಾಚೀನ ಭಾರತದ ಸಂಸ್ಕೃತಿಯ ಸಂಕೇತವಾಗಿದೆ. ಈ ಧ್ವಜವು ಆಯತಾಕಾರವಾಗಿದ್ದು ಮೂರು ಅಡಿ ಉದ್ದ, ಎರಡು ಅಡಿ ಅಗಲವಿದ್ದು, ಉಬ್ಬುಚಿತ್ರವನ್ನು ಕಾಣಬಹುದು.

ಈ ಸಂಘಟನೆಯ ಮೂಲ ಕುಟುಂಬ. ಕೃಷಿಕನ ಉನ್ನತೀಕರಣ ಮತ್ತು ರಾಷ್ಟ್ರದ ಉನ್ನತೀಕರಣವು ಈ ಸಂಘಟನೆಯ ಕೆಲಸಕ್ಕೆ ಪ್ರೇರಣೆ. ಇದು ರಾಜಕೀಯೇತರ ಸಂಘಟನೆ. ಇಡೀ ರಾಷ್ಟ್ರ ಹಾಗೂ ಗ್ರಾಮವನ್ನು ಒಂದು ಕುಟುಂಬದಂತೆ ಕಾಣುತ್ತದೆ. ದೇಶದ ಪ್ರತಿಯೊಬ್ಬ ರೈತರು ಸಹೋದರರು.

**ಅಖಿಲ ಭಾರತ ಕಿಸಾನ್ ಸಭಾ**

ಅಖಿಲ ಭಾರತ ಕಿಸಾನ್ ಸಭಾ ರೈತ ಸಂಘಟನೆ, ಈ ದೇಶದ ವಿಶಿಷ್ಟ, ವೈವಿಧ್ಯಮಯವಾದ, ಉಜ್ವಲ ಪರಂಪರೆಯುಳ್ಳ ಅತ್ಯಂತ ದೊಡ್ಡ ಸಂಘಟನೆ. ಹಾಗೆಯೇ ಹಿರಿಯ ಸಂಘಟನೆಯೂ ಹೌದು. ಸ್ವಾತಂತ್ರ್ಯ ಪೂರ್ವದಲ್ಲಿಯೇ ದುಡಿಯುವ ಜನರ ವಿಮೋಚನೆಗಾಗಿ, ಸ್ವಾಮಿ ಸಹಜಾನಂದ ಸರಸ್ವತಿ ಎಂಬ ಸಂತ ಹೋರಾಟಗಾರರ ನೇತೃತ್ವದಲ್ಲಿ ಜನ್ಮ ತಳೆದ ಕಿಸಾನ್ ಸಭಾ ಸಹಸ್ರಾರು ರೈತ ಹೋರಾಟಗಳನ್ನು ಕಟ್ಟಿ ಬೆಳೆಸಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಈ ಸಂಘಟನೆ, ಸ್ವಾತಂತ್ರ್ಯ ನಂತರವೂ ಊಳಿಗಮಾನ್ಯ ಪದ್ಧತಿ, ಜೀತ ಪದ್ಧತಿ, ರದ್ದತಿಗಾಗಿ, ಪ್ರಮುಖವಾಗಿ ಭೂಮಿ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಪ್ರತಿಭಟನೆ ಮಾಡಿ ಯಶಸ್ವಿಯಾಗಿದೆ.

ದೇಶದ ನಾನಾ ರಾಜ್ಯಗಳಲ್ಲಿ ಬಲಾಢ್ಯರಾದ ರೆಡ್ಡಿಗಳು, ದೇಸಾಯಿಗಳು, ದೇಶಮುಖ್‌ಗಳು, ನವಾಬರು ಮುಂತಾದವರ ಕಪಿಮುಷ್ಟಿಯಲ್ಲಿದ್ದ ಸಹಸ್ರಾರು ಎಕರೆ ಭೂಮಿಗಳ ಒಡೆಯರಾಗಿದ್ದಾರೆ. ಕಿಸಾನ್ ಸಭಾ ಹೋರಾಟದ ಹಾದಿಯಲ್ಲಿ ಅವರಿಂದ ಭೂಮಿಯನ್ನು ಕಿತ್ತುಕೊಳ್ಳುವ ಮೂಲಕ ಭೂಹೀನ ರೈತರಿಗೆ ಹಂಚಿಕೆ ಮಾಡಿದೆ. ತಮ್ಮ ರಕ್ತ-ಬೆವರುಗಳಿಂದ ಈ ದೇಶವನ್ನು ಕಟ್ಟುವ, ಅಭಿವೃದ್ಧಿಗೊಳಿಸುವ ರೈತ ಸಮೂಹವೇ ಈ ದೇಶದ ಅತ್ಯಮುಲ್ಯ ಆಸ್ತಿ ಎಂದು ನಂಬಿದೆ. ಹಾಗೆಯೇ ರೈತ ಪರ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಕ್ರಿಯಾಶೀಲವಾಗಿ ಮುನ್ನಡೆಯುತ್ತಿದೆ. ಕರ್ನಾಟಕ ರಾಜ್ಯದಲ್ಲಿಯೂ ಬಗರ್ ಹುಕ್ಕುಂ, ಗೇಣಿಸಾಗುವಳಿದಾರರ ಪರವಾಗಿ ನಿರಂತರ

ಹೋರಾಟವನ್ನು ಮುನ್ನೆಡೆಸಿ, ಭೂಹೀನರಿಗೆ ಭೂಮಿ ಕೊಡಿಸುವಲ್ಲಿ ಯಶಸ್ವಿಯಾಗಿದೆ. ನರಗುಂದ, ನವಲಗುಂದ ರೈತ ಬಂಡಾಯದಲ್ಲಿ ಸೇರಿದಂತೆ, ಆಯಾ ಪ್ರದೇಶಗಳಿಗೆ ಅನುಗುಣವಾಗಿ ನೀರಾವರಿ ಹೋರಾಟಗಳಲ್ಲಿಯೂ ತನ್ನನ್ನು ತಾನು ಸಮರ್ಪಕವಾಗಿ ತೊಡಗಿಸಿಕೊಂಡ ರೈತ ಸಮೂಹದ ಪ್ರಾಣ ಸಂಗಾತಿಯಂತೆ ಹೆಗಲಿಗೆ-ಹೆಗಲು ಕೊಟ್ಟು ಮುನ್ನಡೆಯುತ್ತಿದೆ.

**ಅಖಿಲ ಭಾರತ ಕಿಸಾನ್ ಸಭಾದ ಸ್ಥಾಪನೆ:** ೧೯೨೯ ರಲ್ಲಿ ಕಿಸಾನ್ ಸಭಾವನ್ನು ಬಿಹಾರದಲ್ಲಿ ಸಹಜಾನಂದ ಸರಸ್ವತಿಯವರ ನೇತೃತ್ವದಲ್ಲಿ ಆರಂಭವಾಯಿತು. ಅಂದಿನಿಂದ ಜಮೀನ್ದಾರರ ವಿರುದ್ಧ ಭಾರತದಲ್ಲಿ ರೈತ ಚಳುವಳಿಗಳನ್ನು ಚುರುಕುಗೊಳಿಸಿತು. ಏಪ್ರಿಲ್ ೧೧ ೧೯೩೬ ರಂದು ಭಾರತೀಯ ರಾಷ್ಟ್ರೀಯ ಕಾಂಗ್ರೇಸಿನ ಅಧಿವೇಶನ ಲಕ್ನೋದಲ್ಲಿ ನಡೆಯಿತು. ಈ ಸಮಯದಲ್ಲಿ ಅಖಿಲ ಭಾರತ ಕಿಸಾನ್ ಸಭಾವನ್ನು ಸ್ಥಾಪಿಸಲಾಯಿತು. ಇದರ ಮೊದಲ ಅಧ್ಯಕ್ಷರಾಗಿ ಸಹಜಾನಂದ ಸರಸ್ವತಿಯವರನ್ನು ಆಯ್ಕೆ ಮಾಡಿದರು.

**ಅಖಿಲ ಭಾರತ ಕಿಸಾನ್ ಸಭಾದ ಧ್ವಜ:** ಅಕ್ಟೋಬರ್ ೧೯೩೭ ರಂದು ನೇಗಿಲು ಹೊತ್ತ ರೈತ ಮತ್ತು ಕುಡುಗೋಲು ಹಿಡಿದ ರೈತ ಮಹಿಳೆಯನ್ನು ಹೊಂದಿದ ಕೆಂಪು ಧ್ವಜವನ್ನು ಆಯ್ಕೆ ಮಾಡಲಾಯಿತು.

**ಅಖಿಲ ಭಾರತ ಕಿಸಾನ್ ಸಭಾದ ವಿಸ್ತರಣೆ:** ಸಂಘಟನೆಯು ಭಾರತೀಯ ಕಮ್ಯುನಿಸ್ಟ್ ಪಕ್ಷದಲ್ಲಿ ಒಂದು ಅಂಗ ಸಂಸ್ಥೆಯಾಗಿ ಗುರುತಿಸಿಕೊಂಡಿದ್ದು ಕಾರ್ಯನಿರ್ವಹಿಸುತ್ತದೆ. ದೇಶದ ಎಲ್ಲಾ ರಾಜ್ಯಗಳಲ್ಲಿಯೂ ರಾಜ್ಯ ಸಂಘಟನೆ, ಪ್ರತಿಯೊಂದು ರಾಜ್ಯಗಳಲ್ಲಿ ಜಿಲ್ಲಾ ಸಂಘಟನೆಗಳು ರಚನೆಯಾದವು. ಪ್ರತಿಯೊಂದು ಜಿಲ್ಲೆಗಳಲ್ಲೂ ತಾಲೂಕು ಸಂಘಟನೆಗಳು, ಪ್ರತಿಯೊಂದು ತಾಲೂಕಿನಲ್ಲಿಯು ಗ್ರಾಮ ಸಂಘಟನೆಗಳು ಅಸ್ಥಿತ್ವಕ್ಕೆ ಬಂದವು.

**ಅಖಿಲ ಭಾರತ ಕಿಸಾನ್ ಸಭಾ( ದಾವಣಗೆರೆ ಜಿಲ್ಲಾ ಘಟಕ):** ದಾವಣಗೆರೆ ಜಿಲ್ಲೆಯಲ್ಲಿ ಈ ಸಂಘಟನೆ ಆನಗೋಡು ರಾಮಚಂದ್ರಪ್ಪರವರ ನೇತೃತ್ವದಲ್ಲಿ ೧೯೮೦ ರಂದು ಸ್ಥಾಪನೆಯಾಯಿತು.[೨೧] ಅ ಸಮಯದಲ್ಲಿದ್ದ ಪ್ರಮುಖ ರೈತ ನಾಯಕರೆಂದರೆ, ಹನುಮಂತಪ್ಪ ಕುಂದುವಾಡ, ಅವರಗೆರೆ ರುದ್ರಮುನಿ, ಹೊಸಹಳ್ಳಿ ಮಲ್ಲೇಶ್ ಮುಂತಾದವರು.

**ಸಂಘಟನೆಯ ಪಧಾದಿಕಾರಿಗಳು ಮತ್ತು ಸದಸ್ಯತ್ವ:** ಈ ಸಂಘಟನೆಯ ಅಧ್ಯಕ್ಷರಾಗಿ- ಅವರಗೆರೆ ಉಮ್ಮೇಶ್, ಪ್ರಧಾನ ಕಾರ್ಯದರ್ಶಿಯಾಗಿ- ಹೊಸಹಳ್ಳಿ ಮಲ್ಲೇಶ್, ಖಜಾಂಚಿಯಾಗಿ- ಟಿ.ಎಸ್. ನಾಗರಾಜ್, ಗೌರವ ಸದಸ್ಯರಾಗಿ- ಕುಂದುವಾಡ ಚಂದ್ರಪ್ಪ, ಕಾರ್ಯಕಾರಿ ಸಮಿತಿ ಸದಸ್ಯರಾಗಿ ಎಮ್.ಡಿ.ಹನುಮಂತಪ್ಪ, ಎಮ್.ಇ.ರುದ್ರಮುನಿ, ಸುರೇಶ್, ಲಕ್ಷ್ಮಣ, ಪಿ.ಕೆ.ಲಿಂಗರಾಜು ಮುಂತಾದವರು.

ಈ ಸಂಘಟನೆಯ ಸದಸ್ಯತ್ವ ಪಡೆಯಲು ಹತ್ತು ರೂಪಾಯಿಯನ್ನು ಶುಲ್ಕವಾಗಿ ಪಡೆಯಲಾಗುತ್ತದೆ. ಸದಸ್ಯತ್ವದ ಅವಧಿ ಒಂದು ವರ್ಷ ಮಾತ್ರ. ಪ್ರತಿಭಟನೆಗೆ ಬೇಕಾದ ಹಣವನ್ನು ಹಾಗೂ ಕಾರ್ಯಕ್ರಮಕ್ಕೆ ಬೇಕಾದ ವೆಚ್ಚವನ್ನು ಪೂರ್ವಭಾವಿಯಾಗಿ ನಡೆಸಿ, ಅದರಲ್ಲಿ

ಭಾಗವಹಿಸಿರುವ ಪ್ರಭಾವಿ ರೈತ ನಾಯಕರು ಮತ್ತು ಪ್ರಬಲ ರೈತರೆ ಒಂದೊಂದು ಖರ್ಚನ್ನು ವಹಿಸಿಕೊಳ್ಳುತ್ತಾರೆ.

**ಅಖಿಲ ಭಾರತ ಕಿಸಾನ್ ಸಭಾದ ಬೇಡಿಕೆಗಳು:**[೨]

೧. ಭೂಹೀನ ಕೃಷಿಕರು ಸಾಗುವಳಿ ಮಾಡಿರುವ ಅಕ್ರಮ ಬಗರ್ ಹುಕ್ಕುಂ ಭೂಮಿಯನ್ನು ಶೀಘ್ರವಾಗಿ ಸಕ್ರಮಗೊಳಿಸಬೇಕು, ಕಾಲಮಿತಿಯೊಳಗೆ ತುರ್ತಾಗಿ ಹಕ್ಕು ಪತ್ರ ನೀಡಬೇಕು.

೨. ಬಗರ್ ಹುಕ್ಕುಂ ಸಾಗುವಳಿದಾರರಿಗೆ ಹಕ್ಕುಪತ್ರ ಕೊಡುವವರೆಗೂ ಅವರನ್ನು ಒಕ್ಕಲೆಬ್ಬಿಸಬಾರದು ಹಾಗೆಯೇ ಬಗರ್ ಹುಕ್ಕುಂ ಸಾಗುವಳಿದಾರರ ಮೇಲಿರುವ ಸುಳ್ಳು ಕೇಸುಗಳನ್ನು ತಕ್ಷಣ ವಜಾಗೊಳಿಸಬೇಕು.

೩. ಪ್ರತಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿರುವ ಸರ್ಕಾರಿ ಭೂಮಿಯನ್ನು ಸರ್ವೇ ಮಾಡಿಸಬೇಕು, ಹಾಗೆಯೇ ಭೂಗಳ್ಳರ ಅತಿಕ್ರಮವನ್ನು ಕಟ್ಟುನಿಟ್ಟಾಗಿ ತಡೆಯಬೇಕು.

೪. ನೂರಾರು ಎಕರೆ ಭೂಕಬಳಿಕೆ ಮಾಡಿರುವ ಬಲಾಡ್ಯರ ಭೂಮಿಯನ್ನು ವಶಪಡಿಸಿಕೊಂಡು, ಆ ಭೂಮಿಯನ್ನು ಭೂಹೀನರಿಗೆ ವಿತರಿಸಬೇಕು.

೫. ಹಳ್ಳಿ–ಹಳ್ಳಿಗಳಲ್ಲಿ ಜಾನುವಾರುಗಳಿಗಾಗಿ ಮೀಸಲಿಟ್ಟಿರುವ ಗೋಮಾಳ, ಮುಫತ್, ಖರಾಬು ಮತ್ತಿತರ ಸರ್ಕಾರಿ ಭೂಮಿಯನ್ನು ಸಂರಕ್ಷಿಸಬೇಕು. ಈ ಭೂಮಿಯನ್ನು ಯಾವುದೇ ಕಾರ್ಪೊರೇಟ್ ಕಂಪನಿಗಳಿಗಾಗಲಿ ಅಥವಾ ಗಣಿಗಾರಿಕೆಗಾಗಲಿ ಗುತ್ತಿಗೆ ಕೊಡಬಾರದು.

೬. ಪಟ್ಟಭದ್ರ ಭೂಮಾಲೀಕರು ಮತ್ತು ಭ್ರಷ್ಟ ಅಧಿಕಾರಿಗಳ ಹೊಂದಾಣಿಕೆಯಿಂದ ಅಲ್ಲಲ್ಲಿ ಕಬಳಿಕೆ ಆಗಿರುವ ಭೂಮಿಯ ಬಗ್ಗೆ ತನಿಖೆ ನಡೆದು ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕು. ಹಾಗೆಯೇ ಕಾನೂನು ಬಾಹಿರ ಕಬಳಿಕೆ ಭೂಮಿಯನ್ನು ಭೂಹೀನರಿಗೆ ಹಂಚಬೇಕು.

೭. ಕೇಂದ್ರ ಸರ್ಕಾರದ ಅರಣ್ಯ ಸಾಗುವಳಿ ಹಕ್ಕು ಮಾನ್ಯತೆ ಕಾನೂನಿನಂತೆ ಅರಣ್ಯ ಹಕ್ಕು ಮಾನ್ಯತೆ ಸಮಿತಿಗಳನ್ನು ಸಕ್ರಿಯಗೊಳಿಸಿ, ಅರಣ್ಯ ಸಾಗುವಳಿ ಭೂಮಿಯ ಒಡೆತನ ನೀಡಲು ವಿಶೇಷ ತುರ್ತುಕ್ರಮ ಕೈಗೊಳ್ಳಬೇಕು.

೮. ಸದ್ಯದಲ್ಲೆ ಜಾರಿಗೆ ಬರಲಿರುವ ಸರ್ಕಾರಿ ಭೂಕಬಳಿಕೆ ನಿಷೇಧದ ಕಾನೂನಿನ ವ್ಯಾಪ್ತಿಯಿಂದ ಬಗರ್‌ಹುಕುಂ ಸಾಗುವಳಿದಾರರು ಮತ್ತು ಸರ್ಕಾರಿ ಜಾಗದಲ್ಲಿ ವಾಸವಿರುವ ಬಡ ನಿವೇಶನ ರೈತರನ್ನು ಕೈಬಿಟ್ಟು ಅವರಿಗೆ ನೀಡಲಾದ ನೋಟಿಸ್‌ಗಳನ್ನು ಹಿಂತೆಗೆದುಕೊಳ್ಳಬೇಕು.

೯. ಸುಪ್ರೀಕೋರ್ಟ್, ಹೈಕೋರ್ಟ್ ತೀರ್ಪುಗಳ ಸಮಸ್ಯೆ ನಿವಾರಿಸಲು ಅಗತ್ಯವಿರುವ ಬಡವರ ಪರವಾದ ಕಾನೂನು ತಿದ್ದುಪಡಿ ಅಥವಾ ಹೊಸ ಕಾನೂನು ರಚನೆಗೆ ರಾಜ್ಯ, ಕೇಂದ್ರ ಸರ್ಕಾರಗಳು ತಮ್ಮ ಪರಮಾಧಿಕಾರ ಬಳಸಿಕೊಳ್ಳಬೇಕು.

೧೦. ರೈತರ ಎಲ್ಲಾ ಬೆಳೆಗಳಿಗೂ ವೈಜ್ಞಾನಿಕ ಬೆಲೆಯನ್ನು ಘೋಷಿಸಬೇಕು. ಸ್ವಾಮಿನಾಥನ್

ವರದಿಯನ್ನು ಜಾರಿಗೆ ತರಬೇಕು.

೧೧. ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಘಗಳ ರೈತರ ಸಾಲವನ್ನು ಮನ್ನಾ ಮಾಡಬೇಕು,

೧೨. ಅತೀವೃಷ್ಠಿ, ಅನಾವೃಷ್ಠಿ ಹಾಗೂ ಬೆಳೆಗಳು ವಿಫಲವಾದಾಗ ರೈತ ಸಾಲಗಳನ್ನು ದೀರ್ಘವಧಿಯ ಸಾಲಗಳಾಗಿ ವಿಸ್ತರಿಸಬೇಕು. ಹಾಗೂ ಸಾಲಗಳ ಮೇಲಿನ ಬಡ್ಡಿಯನ್ನು ರದ್ದುಗೊಳಿಸಬೇಕು.

೧೩. ರೈತರ ಬೆಳೆಗಳಿಗೆ ಕಡಿಮೆ ಕಂತಿನಲ್ಲಿ ಬೆಳೆ ವಿಮೆ ಜಾರಿಗೊಳಿಸಬೇಕು.

೧೪. ಕೃಷಿಗೆ ಪೂರಕವಾಗಿರುವ ವಿದ್ಯುತ್‌ನ್ನು ೨೪ ಗಂಟೆಗಳ ಕಾಲ ಉಚಿತ ವಿದ್ಯುತ್ ವಿತರಣೆ ಮಾಡಬೇಕು.

೧೫. ಕೃಷಿಗೆ ಬೇಕಾದ ಬಿತ್ತನೆ ಬೀಜ, ಗೊಬ್ಬರ ಹಾಗೂ ಕೃಷಿ ಸಲಕರಣೆಗಳಿಗೆ ಸರ್ಕಾರದಿಂದ ಸಬ್ಸಿಡಿ ನೀಡಬೇಕು.

ಇನ್ನೂ ಮುಂತಾದ ಬೇಡಿಕೆಗಳನ್ನು ಇಟ್ಟುಕೊಂಡು ಅಖಿಲ ಭಾರತ ಕಿಸಾನ್ ಸಭಾ ಪ್ರತಿಭಟನೆಗಳನ್ನು ಮಾಡುತ್ತ ಬಂದಿದೆ.

ರೈತ ಹೋರಾಟಕ್ಕೊಂದು ಹೊಸ ಭಾಷ್ಯ ಬರೆದ ನಂಜುಡಸ್ವಾಮಿಯವರು ರೈತ ರಾಜ್ಯದ ಕನಸನ್ನು ನನಸನ್ನಾಗಿ ಮಾಡಲು ಕರ್ನಾಟಕ ರಾಜ್ಯ ರೈತ ಸಂಘವನ್ನು ಹುಟ್ಟು ಹಾಕಿದರು. ಆದರೆ ಅದು ನನಸಾಗುವ ಮೊದಲೇ ಫೆಬ್ರವರಿ ೩ ೨೦೦೪ ರಂದು ಚಿರನಿದ್ರೆಗೆ ಜಾರಿದರು. ಅವರು ಹಾಕಿಕೊಟ್ಟ ಹೋರಾಟದ ಮಾರ್ಗದಲ್ಲಿಯೇ ಸಾಗಿದ್ದರೆ ರೈತ ಪ್ರತಿಭಟನೆಗಳು ಮತ್ತಷ್ಟು ಬಲಿಷ್ಟವಾಗಿತ್ತಿದ್ದವು. ಆದರೆ ಈ ಸಂಘಟನೆಯಲ್ಲಿ ಆಂತರಿಕ ಕಲಹಗಳು ಏರ್ಪಟ್ಟು ಈ ಸಂಘಟನೆ ಹೊಡೆದು ಹೋಳಾಯಿತು. ನಂತರ ಈ ಭಾಗದಲ್ಲಿ ಹುಟ್ಟಿಕೊಂಡ ಕೆಲ ರೈತ ಸಂಘಟನೆಗಳು ತನ್ನ ಅಡಿಯಲ್ಲಿ ರೈತರನ್ನು ಸಂಘಟಿಸಿ, ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಬಂದಿರುವುದನ್ನು ಕಾಣಬಹುದು.

## ಕೊನೆ ಟಿಪ್ಪಣಿಗಳು

೦೧. ವೀರಭದ್ರಪ್ಪ ಬಿಸ್ಲಳ್ಳಿ(ಸಂ)., ಪ್ರೊಫೆಸರ್ ಎಂ,ಡಿ,ಎನ್, ೨೦೦೮,ಪುಟ ೮೭

೦೨. ಅದೇ, ಪುಟ ೮೯

೦೩. ಧನಂಜಯ್ ಬಿ.ಜಿ., ಕರ್ನಾಟಕ ರಾಜ್ಯ ರೈತ ಸಂಘ – ಎ ಸೋಶಿಯಾಲಾಜಿಕಲ್ ಸ್ಪಡಿ ಆಫ್ ಫೀಝೆಂಟಾ ಆರ್ಗನೈಝೇಶನ್,೧೯೯೮,ಪುಟ ೭೬

೦೪. ವೀರಭದ್ರಪ್ಪ ಬಿಸ್ಲಳ್ಳಿ (ಸಂ)., ಪೂರ್ವೋಕ್ತ,ಪುಟ ೮೮

೦೫. ಏಮ್ಸ್ ಅಂಡ್ ಆಸ್ಪಿರೇಷನ್ ಆಫ್ ಕರ್ನಾಟಕ ಫಾರ್ಮರ್ಸ್ ಮೂವ್ಮೆಂಟ್, ೧೯೮೪, ಕರ್ನಾಟಕ ರಾಜ್ಯ ರೈತ ಸಂಘ, ಪುಟ ೦೩

೦೬. ಅದೇ, ಪುಟ ೦೩

೦೭. ಧನಂಜಯ್ ಬಿ.ಜಿ., ಪೂರ್ವೋಕ್ತ, ಪುಟ ೮೪

೦೮. ಅದೇ, ಪುಟ ೮೫

೦೯. ಸಂದರ್ಶನ ಮಾಹಿತಿ, ಕೆ.ಪಿ. ಭೂತಯ್ಯ, ರಾಜ್ಯಾ ಹಿರಿಯ ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ರೈತ ಸಂಘ, ಚಿತ್ರದುರ್ಗ.ದಿ.೨೮.೦೬.೨೦೧೮

೧೦. ಸಂದರ್ಶನ ಮಾಹಿತಿ, ಹೊನ್ನೂರು ಮುನಿಯಪ್ಪ, ಜಿಲ್ಲಾಧ್ಯಕ್ಷರು, ಹೊನ್ನೂರು ಗ್ರಾಮ, ದಾವಣಗೆರೆ,ದಿ.೦೩.೦೬.೨೦೧೭

೧೧. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ,ದಿ.೨೧.೦೫.೨೦೧೬

೧೨. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ,ದಿ.೨೧.೦೫.೨೦೧೬

೧೩. ಸಂದರ್ಶನ ಮಾಹಿತಿ, ಮಲ್ಲೇಶಪ್ಪ, ಜಿಲ್ಲಾಧ್ಯಕ್ಷರು, ಚಿಕ್ಕನಹಳ್ಳಿ ಗ್ರಾಮ, ದಾವಣಗೆರೆ, ದಿ.೧೯.೦೦೯.೨೦೧೭

೧೪. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ,ದಿ.೨೧.೦೫.೨೦೧೬

೧೫. ದಾವಣಗೆರೆ ಎಸ್.ಪಿ ಕಚೇರಿಯಿಂದ ಪಡೆದ ದಾಖಲೆ, ದಿ.೨೧.೦೫.೨೦೧೬

೧೬. ಸಂದರ್ಶನ ಮಾಹಿತಿ, ಹೆಚ್. ಮಹೇಶ್ವರಸ್ವಾಮಿ, ಹರಪನಹಳ್ಳಿ.ದಿ.೦೮.೦೪.೨೦೧೮

೧೭. ಕರ್ನಾಟಕ ರಾಜ್ಯ ರೈತ ಮತ್ತು ಸ್ವ ಸಹಾಯ ಸ್ತ್ರೀ ಶಕ್ತಿ ಸೇನೆ ರಾಜ್ಯ ಸಮಿತಿಯ ದಾಖಲಾತಿ ಪುಸ್ತಕದಿಂದ ಪಡೆದ ಮಾಹಿತಿ. ದಿ.೦೮.೦೪.೨೦೧೮

೧೮. ಸಂದರ್ಶನ ಮಾಹಿತಿ, ಎಮ್.ಎಸ್.ಕೆ. ಶಾಸ್ತ್ರೀ, ರಾಜ್ಯಾಧ್ಯಕ್ಷರು, ಕರ್ನಾಟಕ ಪ್ರದೇಶ ರೈತ ಸಂಘ, ದಾವಣಗೆರೆ, ದಿ.೧೦.೦೫.೨೦೧೮

೧೯. ಸಂದರ್ಶನ ಮಾಹಿತಿ, ಎಲ್. ಕೊಟ್ರೇಶ್ ನಾಯ್ಕ್, ೨೨ ಕೆರೆಗಳನ್ನು ಏತ ನೀರಾವರಿ ಹೋರಾಟ ಸಮಿತಿಯ ಕಾರ್ಯದರ್ಶಿ, ದಿ.೨೬.೦೧.೨೦೧೬

೨೦. ಸಂದರ್ಶನ ಮಾಹಿತಿ, ಮಂಜುನಾಥ್ ಗೌಡ, ೨೨ ಕೆರೆಗಳನ್ನು ಏತ ನೀರಾವರಿ ಹೋರಾಟ ಸಮಿತಿಯ ಅಧ್ಯಕ್ಷರು, ದಿ.೨೬.೦೧.೨೦೧೬

೨೧. ಸಂದರ್ಶನ ಮಾಹಿತಿ, ಅವರಗೆರೆ ಉಮ್ಮೇಶ್, ಅಖಿಲ ಭಾರತ ಕಿಸಾನ್ ಸಭಾದ ಜಿಲ್ಲಾಧ್ಯಕ್ಷರು, ದಾವಣಗೆರೆ, ದಿ.೨೬.೧೨.೨೦೧೮

೨೨. ಅಖಿಲ ಭಾರತ ಕಿಸಾನ್ ಸಭಾದ ಭಿತ್ತ ಪತ್ರ, ದಿ.೧೩.೦೭.೨೦೧೭

## ಅಧ್ಯಾಯ – ೮

# ರೈತ ಪ್ರತಿಭಟನೆಗಳ ಮುಖಂಡರು, ನಾಯಕರು ಮತ್ತು ಚಳವಳಿಕಾರರು

ಗತಕಾಲದಿಂದಲೂ ಮಾನವನ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜ, ಮುಖಂಡ, ನಾಯಕನಿಗೆ ತನ್ನದೇಯಾದಂತಹ ಮಹತ್ವವಿದೆ. ನಾಗರೀಕತೆಗಳ ಕಾಲದಿಂದ ಆರಂಭವಾದ ಈ ನಾಯಕತ್ವವು ಹಂತ ಹಂತವಾಗಿ ಸಾಮ್ರಾಜ್ಯ ಸ್ಥಾಪನೆಗೆ ಕಾರಣವಾಯಿತು. ಅಂದಿನಿಂದ ಇಂದಿನವರೆಗೆ ಯಾವುದೇ ಘಟನೆಗಳು, ಸಾಧನೆಗಳು ಯಾವುದೇ ಕ್ಷೇತ್ರದಲ್ಲಿ ಸಂಭವಿಸಿದರೂ ಅದಕ್ಕೆ ಕಾರಣ ಈ ನಾಯಕತ್ವ, ರಾಮಾಯಣ, ಮಹಾಭಾರತದಂತಹ ಐತಿಹಾಸಿಕ ಘಟನೆಗಳು ನಡೆಯಲು ಕಾರಣ ಈ ನಾಯಕತ್ವ, ಮೌರ್ಯ ಸಾಮ್ರಾಜ್ಯದಂತಹ ಮಹಾನ್ ಸಾಮ್ರಾಜ್ಯ ಸ್ಥಾಪನೆಯಾಗಲು ಕಾರಣ ಚಂದ್ರಗುಪ್ತ ಮೌರ್ಯನ ನಾಯಕತ್ವದ ಗುಣ. ಬೌದ್ಧ ಧರ್ಮ ಮತ್ತು ಜೈನ ಧರ್ಮ ಹುಟ್ಟಿ ಪ್ರಬಲ ಧರ್ಮಗಳಾಗಿ ಬೆಳವಣಿಗೆಯಾಗಲು ನಾಯಕತ್ವವೇ ಅಡಿಪಾಯ. ಅಷ್ಟೇ ಏಕೆ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕವಾಗಿ ಸಾಧನೆಗಳನ್ನು ಮಾಡುತ್ತಿದ್ದಾರೆ ಎಂದರೆ ಅದಕ್ಕೆ ನಾಯಕತ್ವವೇ ಬಹು ದೊಡ್ಡ ಅಡಿಪಾಯವಾಗಿದೆ.

ಒಬ್ಬ ವ್ಯಕ್ತಿಯು ನಾಯಕ ಅಥವಾ ಮುಖಂಡನೆನಿಸಿಕೊಳ್ಳಬೇಕಾದರೆ ಅವನಲ್ಲಿ ಸಂಘಟನಾ ಶಕ್ತಿ ಇರಬೇಕು, ಸಾಮಾಜಿಕ ವ್ಯವಸ್ಥೆಯ ಬಗ್ಗೆ ಕಾಳಜಿಯನ್ನು ಹೊಂದಿರಬೇಕು, ಪ್ರಾಮಾಣಿಕನಾಗಿರಬೇಕು, ಸಂವಹನ ಶಕ್ತಿ ಅಂತರ್ಗತ ಮಾಡಿಕೊಂಡಿರಬೇಕು, ಧೃಡ ವಿಶ್ವಾಸ ಮತ್ತು ನಂಬಿಕೆಯನ್ನು ಹೊಂದಿರಬೇಕು. ಸಮಸ್ಯೆಗೆ ತಕ್ಕಂತೆ ಪ್ರತಿಭಟನಾಕಾರರನ್ನು ಸಂಘಟಿಸಿ ಕರೆ ತರುವ ಪ್ರತಿಭೆ, ತಾಳ್ಮೆ, ಪ್ರೀತಿ, ವ್ಯವಹಾರ ಚತುರತೆ, ಮಾನವೀಯ ಮೌಲ್ಯಗಳನ್ನು ಮೈಗೂಡಿಸಿಕೊಂಡಿರಬೇಕು. ನಿರ್ದಿಷ್ಟ ಗುರಿ ಇರಬೇಕು. ಆತನಿಗೆ ದೂರದೃಷ್ಟಿ ಗುರಿಯೊಂದೇ ಇದ್ದರೆ ಸಾಲದು, ಅದನ್ನು ತಲುಪಲು ಬೇಕಾದ ಕಾರ್ಯಸೂಚಿ ಮತ್ತು ಕಾರ್ಯತಂತ್ರ ಸಿದ್ಧವಾಗಬೇಕು. ತಾನ್ನ ಮುಂದಾಳತ್ವದಲ್ಲಿ ನಡೆಸುತ್ತಿರುವ ಸಂಘ ಸಂಸ್ಥೆಯ ಬಗ್ಗೆ ಸಂಪೂರ್ಣ

ಮಾಹಿತಿ ಮತ್ತು ಜ್ಞಾನವಿರಬೇಕು. ತನ್ನ ನಂತರ ನಾಯಕರನ್ನು ತಯಾರು ಮಾಡುವ ಉದಾರ ಮನಸ್ಸು ಹೊಂದಿರಬೇಕು.

ನಾಯಕತ್ವ ಎಂದರೇ, ಅಂದುಕೊಂಡದ್ದನ್ನು ಕಾರ್ಯರೂಪಕ್ಕಿಳಿಸುವ ಸಾಮರ್ಥ್ಯ. ಇದು ವಿಮರ್ಶಾತ್ಮಕ, ಸೃಜನಶೀಲ ಧನಾತ್ಮಕ ಚಿಂತನೆಗಳನ್ನು ಒಳಗೊಂಡಿರುತ್ತದೆ. ಒಬ್ಬ ನಿಜವಾದ ನಾಯಕ ನಾನು ಎಂಬ ವ್ಯಕ್ತಿ ಕೇಂದ್ರಿತ ಪರಿಕಲ್ಪನೆಯನ್ನು ಮೀರಿ, ನಾವು ಎಂಬ ವ್ಯಕ್ತಿ ಕೇಂದ್ರಿತ ಪರಿಕಲ್ಪನೆಯನ್ನು ಹೊಂದಿರುತ್ತಾನೆ. ನಾಯಕತ್ವ/ಮುಖಂಡತ್ವ ಎಂಬುದು ಒಂದು ಪದವಿಯೂ ಅಲ್ಲ, ಅಧಿಕಾರವೂ ಅಲ್ಲ, ಅದು ಒಂದು ಜವಬ್ದಾರಿ. ನಾಯಕತ್ವವೆಂದರೆ ಒಂದು ಪದವಿ ಎಂದು ತಿಳಿದುಕೊಂಡವರು ಅಧಿಕಾರ ಚಲಾಯಿಸುತ್ತಾರೆ. ಅದೊಂದು ಜವಬ್ದಾರಿ ಎಂದು ಅರಿತವರು ಜನರ ಸೇವೆ ಮಾಡುತ್ತಾರೆ. ಅಪೇಕ್ಷಿಸಿದ ಫಲಿತಾಂಶವನ್ನು ತನ್ನ ಜೊತೆ ಕೆಲಸ ಮಾಡುವವರ ಮೂಲಕ ಪಡೆದುಕೊಳ್ಳುವ ಸಾಮರ್ಥ್ಯವೇ ನಾಯಕತ್ವ, ಅದು ನಿಗದಿತ ಗುರಿ ತಲುಪವಲ್ಲಿ ಜನರನ್ನು ಸೇರಿಸಿಕೊಂಡು ಸಂಭಾವಿಸಿಕೊಂಡು ಹೋಗುವ ಚಾಕಚಕ್ಯತೆ. ಒಬ್ಬ ನಾಯಕನನ್ನು ಒಂದು ಗುಂಪಿನ, ಇಲ್ಲವೇ ಚಟುವಟಿಕೆಯ ಮಾರ್ಗದರ್ಶಕನಂತೆ, ಅಜ್ಞಾಪಿಸುವವನಂತೆ, ಇಲ್ಲವೇ ಮುನ್ನಡಿಸುವ ಮುಖ್ಯಸ್ಥನಂತೆ, ಇರುವ ವ್ಯಕ್ತಿಯೆಂದು ನಿರೂಪಿಸುತ್ತದೆ.

ನಾಯಕ ಅಥವಾ ಮುಖಂಡರ ಬಗ್ಗೆ ಯೋಚಿಸುವಾಗ ಜಾರ್ಜ್ ವಾಷಿಂಗ್ಟನ್, ಗಾಂಧೀಜಿ, ಅಬ್ರಹಾಂ ಲಿಂಕನ್, ಫ್ರಾಂಕ್ಲಿನ್ ಡಿ ರೂಸ್ವೆಲ್ಟ್, ವಿನ್‌ಸ್ಟನ್ ಚರ್ಚಿಲ್‌ರಂತಹ ಪ್ರಮುಖ ಮಹಾಮುತ್ಸದಿಗಳನ್ನು ಕಾಣಬಹುದು. ನಾಯಕರಾದವರು ಒಳ್ಳೆಯ, ಇಲ್ಲವೇ ಕೆಟ್ಟ ಮಾರ್ಗಗಳಲ್ಲಿ ನಡೆಸಬಹುದು. ಕೆಟ್ಟ ಮಾರ್ಗಗಳನ್ನು ಅನುಸರಿಸಿ ಸರ್ವಾಧಿಕಾರಿಗಳಾಗಿ ಮೆರೆದ ಹಿಟ್ಲರ್, ಮುಸಲೋನಿ, ಟೋಜೋರಂತಹ ನಾಯಕರು ಆಳ್ವಿಕೆ ಮಾಡಿದ್ದಾರೆ.

ಹಾಗೆಯೇ ಭೂಸುಧಾರಣೆಗಳು, ಕೃಷಿ ನೀತಿ, ಜಾಗತೀಕರಣ, ಮಾರುಕಟ್ಟೆಯ ನೀತಿಗಳಿಂದಾಗಿ ರೈತರಿಗೆ ಅನೇಕ ಸಮಸ್ಯೆಗಳು ಬಂದೊದಗಿದವು. ಈ ಸಮಸ್ಯೆಗಳಿಂದ ರೈತರನ್ನು ಮುಕ್ತಗೊಳಿಸಲು ದೇಶಾದಾಂತ್ಯ ಅನೇಕ ರೈತ ನಾಯಕರು/ಮುಖಂಡರು ಹುಟ್ಟಿಕೊಂಡರು. ಅಂತಹವರಲ್ಲಿ ಪ್ರಮುಖರೆಂದರೆ ಮಹಾತ್ಮ ಗಾಂಧೀಜಿಯವರು, ಇವರು ಬ್ರಿಟೀಷರ ವಸಾಹತುಶಾಹಿ ನೀತಿಯಿಂದ ರೈತರನ್ನು ಶೋಷಣೆಯಿಂದ ಮುಕ್ತಗೊಳಿಸಲು ಯತ್ನಿಸಿದರು. ೧೯೮೦ರ ನಂತರ ಕರ್ನಾಟಕದಲ್ಲಾದ ಬದಲಾವಣೆಗಳಿಂದ ರೈತರ ಶೋಷಣೆ, ಸಮಸ್ಯೆಗಳು ಹೆಚ್ಚುತ್ತಾ ಹೋದವು. ಆಗ ರೈತರನ್ನು ಶೋಷಣೆಯಿಂದ ವಿಮುಕ್ತಗೊಳಿಸಲು ೧೯೮೦ರ ನಂತರ ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಸುಂದರೇಶ್, ಪುಟ್ಟಣ್ಣಯ್ಯ, ಕೋಡಿಹಳ್ಳಿ ಚಂದ್ರಶೇಖರ್‌ನಂತಹ ರೈತ ನಾಯಕರು ಹೋರಾಟದ ಮನೋಭಾವನೆ ಬೆಳಸಿಕೊಂಡು ರೈತ ನಾಯಕರಾದರು. ಕರ್ನಾಟಕದ ದಾವಣಗೆರೆ, ಚಿತ್ರದುರ್ಗ ಮತ್ತು ಬಳ್ಳಾರಿಗಳಲ್ಲಿಯೂ ಅನೇಕ ರೈತ ನಾಯಕರು/ಮುಖಂಡರಿದ್ದು ರೈತರನ್ನು ಸಮಸ್ಯೆಗಳಿಂದ ಹೊರ ತರಲು ಅನೇಕ ಪ್ರತಿಭಟನೆಗಳನ್ನು ನಡೆಸಿ, ರೈತರ ಸ್ಥಿತಿ–ಗತಿಗಳನ್ನು ಸುಧಾರಿಸುವ ಪ್ರಯತ್ನ ಮಾಡಿದ್ದಾರೆ. ಅವರುಗಳಲ್ಲಿ ಪ್ರಮುಖರಾದವರೆಂದರೆ ಕೆ.ಪಿ. ಬೋಪಯ್ಯ, ಎಂ.ಎಸ್.ಕೆ.ಶಾಸ್ತ್ರಿ,

ಹೆಚ್.ಎಂ.ಮಹೇಶ್ವರಸ್ವಾಮಿ, ಹುಚ್ಚವನಹಳ್ಳಿ ಮಂಜುನಾಥ್, ಟಿ.ನುಲೇನೂರು ಎಂ.ಶಂಕ್ರಪ್ಪ, ರವಿಕುಮಾರ್ ಬಲ್ಲೂರು, ಹೊನ್ನೂರು ಮುನಿಯಪ್ಪ, ಅರುಣ್ ಕುಮಾರ್ ಕುರುಡಿ, ಮುಂತಾದವರು.

ಈ ರೈತ ಮುಖಂಡರು/ನಾಯಕರು ತಮ್ಮನ್ನು ರೈತ ಪ್ರತಿಭಟನೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಉಂಟಾದ ಪ್ರೇರಣೆ, ಪ್ರಭಾವ, ಹೋರಾಟದ ವಿವಿಧ ಹಂತಗಳನ್ನು ಚರ್ಚಿಸಲಾಗಿದೆ.

**ರೈತ ಮುಖಂಡರ/ನಾಯಕರು**

**ಎಂ.ಎಸ್.ಕೆ. ಶಾಸ್ತ್ರಿ**

ಕರ್ನಾಟಕದ ರೈತ ಮುಖಂಡರಾಗಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದ್ದಾರೆ. ರೈತರ ಧೀಮಂತ ನಾಯಕ, ಸರಳ ಜೀವಿ, ಸರಳವಾದ ವ್ಯಕ್ತಿತ್ವವಿದೆ. ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಯ ರೈತ ಚಳವಳಿಯ ರೂವಾರಿಗಳಲ್ಲಿ ಗಣನೀಯ ಸ್ಥಾನ ಪಡೆದುಕೊಂಡಿದ್ದಾರೆ. ೧೯೭೫ರ ನಂತರ ಚಿತ್ರದುರ್ಗ ಮತ್ತು ದಾವಣಗೆರೆ ಸುತ್ತಮುತ್ತಲಿನ ರೈತರನ್ನು ಸಂಘಟಿಸಿ, ಪ್ರತಿಭಟನೆಗೆ ಕರೆ ತರಲು ಕ್ರಿಯಾಶೀಲರಾಗಿ ದಿಟ್ಟ ಹೆಜ್ಜೆಯನ್ನಿಟ್ಟವರು. ಶೋಷಣೆ ಮತ್ತು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ ರೈತರ ಬದುಕಿನಲ್ಲಿ ಆಶಾಕಿರಣವಾಗಿ ಮೂಡಿಸುವ ಎದೆಗಾರಿಕೆಯಿಂದ ನಿಂತವರಲ್ಲಿ ಪ್ರಮುಖರು. ಅನುಭವದ ಮೂಲಕ ರೂಪಗೊಂಡ ಪ್ರತಿಭಟನೆಯ ರುವಾರಿ. ಇವರು ಕೇವಲ ರೈತ ಸಂಘದ ಅಧ್ಯಕ್ಷರಾಗಿರದೆ ವಿವಿಧ ಸಂಘಟನೆಗಳ ಅಧ್ಯಕ್ಷರಾಗಿ ತಮ್ಮದೇ ಆದ ಸಾಮಾಜಿಕ ಸೇವೆಯನ್ನು ಸಲ್ಲಿಸಿದ್ದಾರೆ. ಇವರ ಸೇವೆಯೆ ರಾಷ್ಟ್ರಮಟ್ಟ ಹಾಗೂ ರಾಜ್ಯಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದೆ. ಅನೇಕ ಗೌರವಗಳು, ಸನ್ಮಾನ, ಪ್ರಶಂಸೆಗಳು, ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಇವರು ತಮ್ಮನ್ನು ನಂಬಿರುವ ರೈತ ಬಾಂದವರನ್ನು ಜಾಗೃತಗೊಳಿಸಿ, ಸಮಸ್ಯೆಗಳಿಂದ ಮುಕ್ತಗೊಳಿಸಿ, ಆರ್ಥಿಕವಾಗಿ ಸಬಲಗೊಳಿಸಲು ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದಾರೆ.

ಎಮ್.ಎಸ್.ಕೆ. ಶಾಸ್ತ್ರೀಯವರು ದಾವಣಗೆರೆ ಜಿಲ್ಲೆಯ ಮಾಯಕೊಂಡ ಗ್ರಾಮದಲ್ಲಿ ೨೫ ಮೇ ೧೯೪೦ರಂದು ಸುಬ್ರಮಣ್ಯ ಶಾಸ್ತ್ರಿ ಹಾಗೂ ಶಾಸ್ತ್ರಿ ಗೌರಮ್ಮ ದಂಪತಿಗಳಿಗೆ ಒಟ್ಟು ಒಂಬತ್ತು ಮಕ್ಕಳಿದ್ದು, ನಾಲ್ಕನೇಯ ಮಗನಾಗಿ ಜನಿಸಿದರು.[೧] ಇವರು ಮೂಲ ವೃತ್ತಿಯನ್ನಾಗಿ ಕೃಷಿಯನ್ನು ಅವಲಂಬಿಸಿದ್ದರು. ಮೂಲತಃ ಕಡುಬಡತನದಲ್ಲಿದ್ದು ಅನಕ್ಷರಸ್ಥರಾಗಿದ್ದರು ಕೂಡ, ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸಿದರು. ಎಮ್.ಎಸ್.ಕೆ. ಶಾಸ್ತ್ರೀಯವರು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮಾಯಕೊಂಡದಲ್ಲಿ ಪಡೆದು, ದಾವಣಗೆರೆಯ ಧ.ರಾ.ಮ. ಕಾಲೇಜಿನ ವಿಜ್ಞಾನ ವಿಭಾಗದಲ್ಲಿ ಪಿ.ಯು.ಸಿ. ಮುಗಿಸಿದರು. ಅ ಸಮಯದಲ್ಲಿ ಅವರ ತಂದೆಯು ಅಕಾಲಿಕ ಮರಣ ಹೊಂದಿದ್ದರಿಂದ, ಕುಟುಂಬದ ಜವಬ್ದಾರಿಯು ಇವರ ಮೇಲೆ ಬಿದ್ದಿತು. ಹಾಗಾಗಿ

ಮಧ್ಯಪ್ರದೇಶದ ರಾಯಪುರದ ಎಲೆಕ್ಟ್ರಿಕ್ ಬೋರ್ಡ್‌ನಲ್ಲಿ ಹದಿನಾರು ವರ್ಷಗಳ ಕಾಲ ಕೆಲಸ ನಿರ್ವಹಿಸಿದರು. ಅನಿವಾರ್ಯ ಕಾರಣದಿಂದ ಕೆಲಸಕ್ಕೆ ರಾಜೀನಾಮೆ ನೀಡಿ ಹುಟ್ಟೂರಿಗೆ ಹಿಂದುರುಗಿದರು. ಒಂದು ದಿನ ಗಾಂಧೀಜಿಯವರ ಆತ್ಮ ಚರಿತ್ರೆಯನ್ನು ಓದುತ್ತಿರುವಾಗ ಎಲ್ಲಾ ದಿಕ್ಕಿನಿಂದಲೂ ರೈತ ವರ್ಗ ಶೋಷಣೆಗೆ ಒಳಗಾಗುತ್ತಿದೆ ಎಂಬುದು ಅರಿವಿಗೆ ಬಂದಿತು. ರೈತರನ್ನು ಶೋಷಣೆಯಿಂದ ತಪ್ಪಿಸಲು ಪ್ರಜ್ಞಾವಂತ ಯುವಕರು ಪ್ರಯತ್ನಪಟ್ಟರೆ ಶೋಷಣೆಯಿಂದ ತಡೆಯಲು ಸಾಧ್ಯ ಎಂಬ ಹೇಳಿಕೆಯು ಇವರ ಮೇಲೆ ಆಗಾಧವಾದ ಪರಿಣಾಮ ಬೀರಿತು. ಆ ದಿನದಿಂದಲೇ ಎಂ.ಎಸ್. ಶಾಸ್ತ್ರಿಯವರು ತನ್ನ ಜೀವನವನ್ನು ರೈತರಿಗಾಗಿ ಮುಡುಪಾಗಿಟ್ಟರು. ಇದೇ ಸಿದ್ಧಾಂತದಲ್ಲಿ ನಂಬಿಕೆಯನ್ನಿಟ್ಟಿದ್ದ ರೈತ ನೇತರರಾದ ಹೆಚ್.ಎಸ್. ರುದ್ರಪ್ಪನವರ ಪರಿಚಯವಾಗಿ, ಇವರ ಜೊತೆಯಲ್ಲಿದ್ದುಕೊಂಡು ೧೯೭೬ರಿಂದ ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಬಂದರು. ನಂತರ ೧೯೮೦ರಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾ ಘಟಕದ ಅಧ್ಯಕ್ಷರಾಗಿ ನೇಮಕವಾದರು. ಎಂ.ಡಿ. ನಂಜುಂಡಸ್ವಾಮಿ ಮತ್ತು ಇವರ ನಡುವೆ ವೈಮನಸ್ಸು ಉಂಟಾಗಿದ್ದರಿಂದ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯನ್ನು ತ್ಯಜಿಸಿದರು. ೧೯೮೩ರಲ್ಲಿ ಕರ್ನಾಟಕ ಪ್ರದೇಶದ ರೈತ ಸಂಘವನ್ನು ಸ್ಥಾಪಿಸಿ, ಹೊಲ ಉಳುಮೆ ಮಾಡುವ ನೇಗಿಲ ಹೊತ್ತ ಜೋಡಿ ಎತ್ತನ್ನು ತಮ್ಮ ಸಂಘಟನೆಯ ಚಿಹ್ನೆಯನ್ನಾಗಿ ಮಾಡಿಕೊಂಡರು. ಈ ಸಂಘವನ್ನು ೧೪.೦೯.೧೯೯೪ರಂದು ದಾವಣಗೆರೆಯಲ್ಲಿ ನೋಂದಣಿ ಮಾಡಿಸಲಾಯಿತು. ಅಂದಿನಿಂದ ಪ್ರಸ್ತುತದವರೆಗೂ ಕರ್ನಾಟಕ ಪ್ರದೇಶ ರೈತ ಸಂಘದ ಸ್ಥಾಪಕರಾಗಿ, ರಾಜ್ಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.[೨]

೧೯೮೦ರಲ್ಲಿ ಗುಂಡೂರಾವ್‌ರವರ ಸರ್ಕಾರ ೧೩೯ ರೈತರನ್ನು ಗುಂಡಿಕ್ಕಿ ಕೊಲ್ಲಿಸಿದ ಸಂದರ್ಭದಲ್ಲಿ, ಜಿಲ್ಲೆಯ ರೈತರೊಡನೆ ಮುಂಚೂಣೆಯಲ್ಲಿ ನಿಂತುಕೊಂಡು ಸರ್ಕಾರದ ಈ ನೀತಿಯನ್ನು ವಿರೋಧಿಸಿ ಜಿಲ್ಲೆಯಾದ್ಯಂತ ಪ್ರತಿಭಟನೆ ಮಾಡಿದರು.

೧೯೮೩ ಮಾರ್ಚ್ ೦೭ರಲ್ಲಿ ಉಂಟಾದ ಭೀಕರ ಬರಗಾಲದಿಂದ ರೈತರು ಸಾಲ ತೀರಿಸಲಾಗದೆ ಆತ್ಮಹತ್ಯೆಯ ದಾರಿ ಹಿಡಿದಿದ್ದರು. ಆ ಸಮಯದಲ್ಲಿ ಸಾವಿರಾರು ರೈತರು ನಾಯಕತ್ವ ವಹಿಸಿಕೊಂಡು, ಮುಖ್ಯಮಂತ್ರಿಯಾಗಿದ್ದ ರಾಮಕೃಷ್ಣ ಹೆಗಡೆಯವರನ್ನು ಭೇಟಿ ಮಾಡಿ ರೈತರ ಸಮ್ಮುಖದಲ್ಲಿಯೇ ವಿಫಲ ಬಾವಿಗಳ ಮೇಲಿರುವ ಸಾಲದ ಬಗ್ಗೆ ಚರ್ಚಿಸಿದರು. ರೈತರು ಪಿ.ಎಲ್.ಡಿ. ಬ್ಯಾಂಕ್ ಮತ್ತು ಇತರೆ ಬ್ಯಾಂಕ್‌ಗಳಿಂದ ಪಡೆದುಕೊಂಡಿದ್ದ ಒಟ್ಟು ೧೮೫ ಕೋಟಿ ರೂಗಳ ಸಾಲದ ಹಣವನ್ನು ಮನ್ನಾ ಮಾಡಿಸುವಲ್ಲಿ ಶಾಸ್ತ್ರಿಯವರು ಯಶಸ್ವಿಯಾದರು.[೩] ಅಲ್ಲದೆ ಆ ಸಮಯದಲ್ಲಿಯೇ ರೈತರಿಗೆ ಕ್ಲಿಯರೆನ್ಸ್ ಪತ್ರಗಳನ್ನು ರೈತರಿಗೆ ಕೊಡಿಸಿ ನೆಮ್ಮದಿಯ ಜೀವನವನ್ನು ಕಲ್ಪಿಸಿಕೊಟ್ಟರು. ಅದೇ ಸಮಯದಲ್ಲಿ ಸಹಕಾರಿ ಸಚಿವರಾಗಿದ್ದ ಹೆಚ್. ಏಕಾಂತಯ್ಯರವರ ಜೊತೆ ಚರ್ಚಿಸಿ ಬರಗಾಲದಿಂದ ರೈತರಿಗಾದ ನಷ್ಟವನ್ನು ವಿವರಿಸಿ. ಸಹಕಾರಿ ಸಂಘಗಳ ಸಾಲದ ಮೇಲಿನ ೨೬೦ ಕೋಟಿ ರೂಪಾಯಿಗಳ ಬಡ್ಡಿಯನ್ನು ಮನ್ನಾ ಮಾಡಿಸಿದರು.

ದಾವಣಗೆರೆಯಲ್ಲಿರುವ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಅನಾದಿಕಾಲದಿಂದ ಒಂದು ಪಿಡುಗು ಜಾರಿಯಲ್ಲಿತ್ತು. ಅದೇನೆಂದರೆ ತಳಗಾಯಿ, ತಳಗಾಳು, ಸ್ಯಾಂಪಲ್ ಎಂಬ ಮೂರು ಹೆಸರುಗಳನ್ನು ಹೇಳಿಕೊಂಡು ಮಾರುಕಟ್ಟೆಯಲ್ಲಿರುವ ಅಮಾಲರು ರೈತರು ತಂದಂತಹ ಧಾನ್ಯಗಳನ್ನು ಹಗಲು ದರೋಡೆ ಹಾಗೂ ಲೂಟಿ ಮಾಡುತ್ತಿದ್ದರು. ಇಂತಹ ಪಿಡುಗನ್ನು ಸುಮಾರು ಇಪ್ಪತ್ತು ಸಾವಿರ ರೈತರುಗಳ ನೆರವಿನೊಡನೆ ಪ್ರತಿಭಟನೆ ಮಾಡಿ ನಿಲ್ಲಿಸುವ ಪ್ರಯತ್ನ ಮಾಡಿದರು.

ಕರ್ನಾಟಕ ಸರ್ಕಾರ ಭಾರತದಲ್ಲಿಯ ಉನ್ನತ ಮಟ್ಟದ ಪ್ರಮುಖ ಕೃಷಿ ಉತ್ಪನ್ನ ಮಾರುಕಟ್ಟೆಗಳನ್ನು ಸಂದರ್ಶಿಸಿ ಅಲ್ಲಿರುವ ವಿದ್ಯಾಮಾನಗಳನ್ನು ಹಾಗೂ ಕಾನೂನಿನ ರೂಪಗಳನ್ನು ತಿಳಿದುಕೊಂಡು ಬರಲು ೧೪ ಸದಸ್ಯರ ನಿಯೋಗವನ್ನು ನೇಮಕ ಮಾಡಿತು. ಈ ನಿಯೋಗದ ಅಧ್ಯಕ್ಷರಾಗಿ ಅಫೆಕ್ಸ್ ಬ್ಯಾಂಕಿನ ಅಧ್ಯಕ್ಷರಾದ ಅಜ್ಜಿಬಾಳ ಹೆಗ್ಗಡೆಯವರನ್ನು ನೇಮಿಸಿತು. ಆಗ ರೈತ ಪರ ಹೋರಾಟ ಮಾಡುತ್ತಾ ಬಂದಿದ್ದ ಎಂ.ಎಸ್.ಕೆ. ಶಾಸ್ತ್ರಿಯವರನ್ನು ಗಮನಿಸಿದ್ದ ಮುಖ್ಯಮಂತ್ರಿಗಳು ಇವರನ್ನು ನಿಯೋಗದ ಸದಸ್ಯರನ್ನಾಗಿ ನೇಮಕ ಮಾಡಿತ್ತು. ನಿಯೋಗ ಒಟ್ಟು ೧೬ ದಿನಗಳ ಕಾಲ ದೇಶಾದ್ಯಾಂತ ಪ್ರವಾಸ ಕೈಗೊಂಡು ಕೃಷಿ ಉತ್ಪನ್ನ ಮಾರುಕಟ್ಟೆಗಳನ್ನು ಸಂದರ್ಶಿಸಿ ಕಾನೂನು ತಿದ್ದುಪಡಿಗೆ ಸಹಕಾರ ನೀಡಿದರು.

೧೯೮೦-೯೦ರಲ್ಲಿ ದಾವಣಗೆರೆ, ಚಿತ್ರದುರ್ಗ, ಚನ್ನಗಿರಿ, ಹೊನ್ನಾಳಿ ತಾಲೂಕುಗಳಲ್ಲಿ ಮೈಸೂರು ಟೊಬ್ಯಾಕೊ ಕಂಪನಿ ದಿವಾಳಿಯಾಯಿತು. ಆಗ ರೈತರ ನೆರವಿಗೆ ಧಾವಿಸಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ, ಕೆನರಾ ಬ್ಯಾಂಕ್ ಮುಂತಾದ ರಾಷ್ಟ್ರೀಕೃತ ಬ್ಯಾಂಕ್‌ಗಳ ಸಾಲದ ಹೊರೆಯನ್ನು ಹಾಗೂ ವಾರ್ಷಿಕ ಬಡ್ಡಿ ಶೇ.೧೮ ರಿಂದ ಶೇ.೪ಕ್ಕೆ ಇಳಿಸುವಲ್ಲಿ ಯಶಸ್ವಿಯಾಗಿದ್ದರು.

೧೯೮೪ರಲ್ಲಿ ಚಿತ್ರದುರ್ಗ ಜಿಲ್ಲೆಯಾದ್ಯಂತ ಭೀಕರ ಬರಗಾಲ ಆರಂಭವಾಗಿತ್ತು. ಆಗಿನ ಪ್ರಧಾನಿ ರಾಜೀವ್‌ಗಾಂಧೀಯವರು ಮಾಜಿ ಮುಖ್ಯಮಂತ್ರಿ ಎಸ್.ಆರ್. ಬೊಮ್ಮಾಯಿಯವರೊಡನೆ ಚಳ್ಳಕೆರೆ ತಾಲೂಕಿನ ಮೀರ ಸಾಬಹಳ್ಳಿ ಎಂಬ ಗ್ರಾಮ ವೀಕ್ಷಿಸಲು ಬಂದಾಗ, ಭದ್ರಾ ಮೇಲ್ದಂಡೆ ಯೋಜನೆಯು ಇದಕ್ಕೆ ಶಾಶ್ವತ ಪರಿಹಾರ ಎಂದು ಅವರುಗಳಿಗೆ ಮನವರಿಕೆ ಮಾಡಿ ಈ ಯೋಜನೆಗೆ ಅಸ್ತಿಭಾರ ಹಾಕಿದರು.

೧೯೯೩ ಅಕ್ಟೋಬರ್ ತಿಂಗಳಲ್ಲಿ ಆಗಿನ ಪ್ರಧಾನಿಯಾಗಿದ್ದ ಪಿ.ವಿ. ನರಸಿಂಹರಾವ್ ಹಾಗೂ ಹಣಕಾಸು ಸಚಿವರಾದ ಮನಮೋಹನ್ ಸಿಂಗ್‌ರವರು ರಸಗೊಬ್ಬರಕ್ಕೆ ನೀಡುತ್ತಿದ್ದ ೧೬,೮೫೦/- ಕೋಟಿ ರೂಗಳಷ್ಟು ಸಬ್ಸಿಡಿ ಹಣವನ್ನು ಹಿಂತೆಗೆದುಕೊಂಡರು. ಇದರಿಂದ ರಸಗೊಬ್ಬರದ ಬೆಲೆ ಗಗನಕ್ಕೇರಿತು. ರೈತರೆಲ್ಲರೂ ಕಂಗಾಲಾದರು. ಇಂತಹ ಪರಿಸ್ಥಿತಿ ಮನಗಂಡ ಎಂ.ಎಸ್.ಕೆ. ಶಾಸ್ತ್ರಿಯವರು ಕರ್ನಾಟಕ ಪ್ರದೇಶ ರೈತ ಸಂಘದ ನೇತೃತ್ವದಲ್ಲಿ ಸಹಸ್ರಾರು ರೈತರನ್ನು ಒಗ್ಗೂಡಿಸಿ ರಾಷ್ಟ್ರೀಯ ಹೆದ್ದಾರಿ ಬಂದ್ ಮಾಡಿ, ನಿರಂತರ ರಸ್ತೆ ಚಳವಳಿ ನಡೆಸಿದರು.[೪] ೧೯೯೩

ಅಕ್ಟೋಬರ್ ೧೦ರಂದು ಪ್ರಧಾನಿಯವರು ಎಂ.ಎಸ್.ಕೆ ಶಾಸ್ತ್ರೀಯವರನ್ನು ತಮ್ಮ ನಿವಾಸಕ್ಕೆ ಕರೆಸಿಕೊಂಡಿದ್ದರು. ಡಾ.ಮನಮೋಹನ್ ಸಿಂಗ್ ರವರ ಸಮ್ಮುಖದಲ್ಲಿ ಮಾತನಾಡಿದ ಶಾಸ್ತ್ರೀಯವರು, ರಸಗೊಬ್ಬರದ ಮೇಲೆ ಹಾಕಿರುವ ಸಬ್ಸಿಸಿಡಿ ಹಣವನ್ನು ವಾಪಸ್ಸು ಪಡೆಯದಿದ್ದರೆ ನಿಸ್ಸಾಯಕರಾದ ರೈತರು ಬೆಳೆ ಬೆಳೆಯಲು ಸಾಧ್ಯವಿಲ್ಲ. ಇದರಿಂದ ಭಾರಿ ಹಾನಿಯುಂಟಾಗುತ್ತದೆ. ರಾಷ್ಟ್ರದ ಸಂಪತ್ತಿಗೂ ಭಾರೀ ಹೊಡೆತ ಬೀಳುತ್ತದೆ ಎಂದು ಮನವರಿಕೆ ಮಾಡಿಕೊಟ್ಟರು. ನಂತರ ಪ್ರಧಾನಿಯವರು ಸಬ್ಸಿಡಿ ನೀಡುವುದನ್ನು ಮುಂದುವರೆಸಿದ್ದರಿಂದ ಗೊಬ್ಬರದ ಬೆಲೆ ಯಥಾ ಸ್ಥಿತಿಗೆ ಬಂದಿತು.

ದಾವಣಗೆರೆಯು ಮಧ್ಯ ಕರ್ನಾಟಕದಲ್ಲಿದ್ದು ೧೯೪೭ರಿಂದಲೂ ಕರ್ನಾಟಕದ ರಾಜಧಾನಿಯನ್ನಾಗಿ ಮಾಡಬೇಕೆಂಬ ಹೋರಾಟ ನಡೆಯುತ್ತಲೇ ಬಂದಿದೆ. ಆದರೆ ಇದನ್ನು ೧೯೯೭ರವರೆಗೆ ಒಂದು ಜಿಲ್ಲಾ ಕೇಂದ್ರವನ್ನಾಗಿ ಮಾಡಲು ರಾಜಕಾರಣಿಗಳು ಸುಳ್ಳಿನ ಸರಮಾಲೆಯನ್ನೇ ಹೇಳುತ್ತಾ ಬಂದಿದ್ದರು. ಎಂ.ಎಸ್.ಕೆ. ಶಾಸ್ತ್ರೀಯವರು ದಾವಣಗೆರೆ ಜಿಲ್ಲೆ ರಚನಾ ಸಮಿತಿ ಹೋರಾಟಗಾರರ ಸಂಘಟನೆಯನ್ನು ಸ್ಥಾಪಿಸಿ, ನಿರಂತರವಾಗಿ ಹೋರಾಟ ಮಾಡಿದ ಫಲವಾಗಿ ಮುಖ್ಯ ಮಂತ್ರಿಗಳಾದ ದಿ: ಜೆ.ಹೆಚ್. ಪಟೇಲ್‌ರವರು ದಾವಣಗೆರೆಯನ್ನು ಆಗಸ್ಟ್ ೧೫ ೧೯೯೭ರಂದು ಜಿಲ್ಲಾ ಕೇಂದ್ರವನ್ನಾಗಿ ವಿಧ್ಯುಕ್ತವಾಗಿ ಘೋಷಣೆ ಮಾಡಿದರು.

ಎಂ.ಎಸ್.ಕೆ. ಶಾಸ್ತ್ರೀಯವರು ಜನವರಿ ೨೭ ೨೦೦೧ರಂದು ಪ್ರಧಾನಮಂತ್ರಿಗಳಾದ ಅಟಲ್ ಬಿಹಾರಿ ವಾಜಪೇಯಿರವರನ್ನು ಹಾಗೂ ಪ್ರಮೋದ್ ಮಹಾಜನ್‌ರವರನ್ನು ದೆಹಲಿಯಲ್ಲಿ ಭೇಟಿಯಾದರು. ಆಗ ದಕ್ಷಿಣ ಭಾರತದ ಪ್ರದೇಶಗಳು ನೀರಾವರಿಗೆ ಒಳಪಡಬೇಕಾದರೆ ಗಂಗಾನದಿಯನ್ನು ಮಹಾನದಿ ಗೋದಾವರಿಗೆ ಹಾಗೂ ಕಾವೇರಿ ನದಿಗೆ ಜೋಡಿಸಬೇಕಾಗಿ, ಈ ಬಗ್ಗೆ ತಮ್ಮ ಇಚ್ಛಾ ಶಕ್ತಿಯನ್ನು ತೋರಿಸಬೇಕಾಗಿ ವಿನಂತಿಸಿಕೊಂಡರು.[೫] ಆ ಸಮಯದಲ್ಲಿ ಮಾತನಾಡಿದ ಶಾಸ್ತ್ರೀಯವರು ಈ ಉದ್ದೇಶಕ್ಕಾಗಿಯೇ ಬ್ರಿಟೀಷ್ ರಾಣಿ ಎಲಿಜೆಬತ್ ೧೮೫೮ರಲ್ಲಿ ಕೆಂಟ್ ಅಂಡ್ ಬ್ರದರ್ಸ್ ಎಂಬ ಪ್ರಸಿದ್ಧ ನೀರಾವರಿ ಇಂಜಿನಿಯರ್ ತಜ್ಞರುಗಳಿಗೆ ಭೂಮಿಯ ಸರ್ವೆ ಕಾರ್ಯ ಮಾಡಲು ಆದೇಶ ನೀಡಿದ್ದರು. ಈ ಇಂಜಿನಿಯರ್‌ಗಳ ಯೋಜನೆ ಮತ್ತು ಎಸ್ಟಿಮೇಟ್ ಪ್ರಕಾರ ಕೇವಲ ೮೫೦ ಕೋಟಿ ರೂಪಾಯಿಗಳು ಮಾತ್ರ ಖರ್ಚಾಗುತ್ತಿತ್ತು. ಯೋಜನೆಯು ಆಗಲೇ ಕಾರ್ಯಗತವಾಗಿದ್ದರೆ ಉತ್ತರ ಭಾರತದಲ್ಲಿ ಪ್ರವಾಹ, ದಕ್ಷಿಣ ಭಾರತದಲ್ಲಿ ಬರಗಾಲದ ಬವಣೆ ಎರಡೂ ಕೂಡ ಶಾಶ್ವತವಾಗಿ ತೊಲಗಿ ಹೋಗುತ್ತಿದ್ದವು. ಸುಮಾರು ೭೮ ದಶಲಕ್ಷ ಮೆಗಾವ್ಯಾಟ್ ವಿದ್ಯುತ್ ಉತ್ಪಾದನೆಯಾಗುತ್ತಿತ್ತು. ಅಲ್ಲಿಂದ ಇಲ್ಲಿಯವರೆಗೆ ಸಾಕಷ್ಟು ಅರಣ್ಯ ಅಭಿವೃದ್ಧಿಯಾಗುತ್ತಿತ್ತು. ದಕ್ಷಿಣ ಭಾರತದಲ್ಲಿ ೧೪.೫೦ ಕೋಟಿ ಹೆಕ್ಟೇರ್ ಭೂಮಿ ನೀರಾವರಿಯಾಗಿ ಪರಿವರ್ತನೆಯಾಗುತ್ತಿತ್ತು. ಹಾಗೂ ರಾಜ್ಯಗಳ ನಡುವೆ ನದಿ ನೀರಿನ ಹಂಚಿಕೆ ಬಗ್ಗೆ ಎದ್ದಿರುವ ವೈಮನಸ್ಸುಗಳು ತಪ್ಪಿ ಹೋಗುತ್ತವೆ ಎಂದು ಹೇಳಿದರು.

ದಾವಣಗೆರೆ ವಿಶ್ವವಿದ್ಯಾಲಯದ ಸ್ಥಾಪನೆಗಾಗಿ ಹೋರಾಟ ಸಮಿತಿಯ ಅಧ್ಯಕ್ಷರಾಗಿ ಹಲವು ದಶಕಗಳ ಕಾಲ ಹೋರಾಟ ನಡೆಸಿದ ಪ್ರತಿಫಲವಾಗಿ ೨೦೦೯ರಲ್ಲಿ ಮುಖ್ಯಮಂತ್ರಿಯಾಗಿದ್ದ ಬಿ.ಎಸ್. ಯಡಿಯೂರಪ್ಪರವರು. ದಾವಣಗೆರೆ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಘೋಷಣೆ ಮಾಡಿದರು.

ಯಶವಂತಪುರದಿಂದ ತುಮಕೂರು, ಹುಬ್ಬಳ್ಳಿ, ಬೆಳಗಾಂ ಪೂನಾ ಮೂಲಕ ನವದೆಹಲಿಗೆ ಸಂಪರ್ಕ ಕ್ರಾಂತಿವೆಂಬ ಎಕ್ಸ್‌ಪ್ರೆಸ್ ರೈಲು ದಾವಣಗೆರೆ ನಿಲ್ದಾಣದಲ್ಲಿ ನಿಲ್ಲದೆ, ಹಾಗೆಯೇ ಒಂದು ವರ್ಷದಿಂದಲೂ ಓಡಾಡುತ್ತಿತ್ತು (೨೦೦೮ ರಿಂದ ೨೦೦೯). ಈ ಅಂಶವನ್ನು ದಾವಣಗೆರೆ ಜಿಲ್ಲೆಯ ಜನಪ್ರತಿನಿಧಿಗಳಾಗಲಿ ಯಾವುದೇ ಹೋರಾಟಗಾರರಾಗಲಿ ಗಮನಿಸಿಯೇ ಇರಲಿಲ್ಲ. ಇದನ್ನು ಗಮನಿಸಿದ ಎಂ.ಎಸ್.ಕೆ. ಶಾಸ್ತ್ರಿಯವರು ನೈಋತ್ಯ ರೈಲ್ವೆವಲಯ ಪ್ರಯಾಣಿಕರ ಕುಂದುಕೊರತೆ ನಿವಾರಣೆ ಕ್ಷೇಮಾಭಿವೃದ್ಧಿ ಸಂಘಟನೆಯನ್ನು ಸ್ಥಾಪಿಸಿದರು. ಈ ಸಂಘಟನೆಯ ಮೂಲಕ ಸಂಪರ್ಕ ಕ್ರಾಂತಿ ರೈಲನ್ನು ದಾವಣಗೆರೆ ರೈಲ್ವೆ ನಿಲ್ದಾಣದಲ್ಲಿ ನಿಲ್ಲಿಸಲು ಹಲವು ಬಾರಿ ರಸ್ತೆ ತಡೆ, ರೈಲ್ವೆ ತಡೆ ಮಾಡಿ ಸೆರೆಮನೆ ವಾಸ ಅನುಭವಿಸಿದರು. ಅಂದಿನ ರೈಲ್ವೆ ಮಂತ್ರಿಯಾದ ಲಾಲೂ ಪ್ರಸಾದ್ ಯಾದವ್‌ರವರನ್ನು ನೇರವಾಗಿ ಭೇಟಿಯಾಗಿ ಹಾಗೂ ಪೋನಿನ ಮೂಲಕ ನಿಷ್ಠೂರ ಪದಗಳಿಂದ ಮಾತನಾಡಿದ್ದರು. ಕಾರಣವೇನೆಂದರೆ ದಾವಣಗೆರೆ ರೈಲ್ವೆ ನಿಲ್ದಾಣದ ವಾರ್ಷಿಕ ಆದಾಯ ೧೮,೬೫ ಕೋಟಿ ರೂಪಾಯಿಗಳಿಷ್ಟಿರುತ್ತದೆ. ಕೊನೆಗೆ ಕೇಂದ್ರದ ಮಾಜಿ ಸಚಿವರಾದ ರಾಜಶೇಖರ್ ಮೂರ್ತಿಯವರ ನೆರವನ್ನು ಪಡೆದು ಈ ರೈಲನ್ನು ಆಗಸ್ಟ್ ೦೨ ೨೦೦೯ರಿಂದ ದಾವಣಗೆರೆಯಲ್ಲಿ ನಿಲ್ಲಿಸಲಾಯಿತು.[೬]

ದಾವಣಗೆರೆ ಜಿಲ್ಲೆ ಕಬ್ಬು ಬೆಳೆಗಾರರ ರೈತರ ಹಿತ ರಕ್ಷಣಾ ಸಂಘಟನೆಯನ್ನು ಕಟ್ಟಿಕೊಂಡು ಸಹಕಾರಿ ರಂಗದ ತತ್ವದ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ ದೊಡ್ಡಬಾತಿ ಭದ್ರಾ ಸಕ್ಕರೆ ಕಂಪನಿಯ ಅವ್ಯವಹಾರವನ್ನು ಬಯಲಿಗೆಳೆದರು. ಲೋಕಯುಕ್ತ ನ್ಯಾಯಾಧೀಶರಿಗೆ ದೂರನ್ನು ಸಲ್ಲಿಸಿ, ಸೂಪರ್ ಸೀಡ್ ಮಾಡಿ ಜಿಲ್ಲಾಧಿಕಾರಿಯವರಿಗೆ ಕಂಪನಿ ವಹಿಸಿಕೊಟ್ಟು, ಈ ಕಂಪನಿಯ ಚಾಲನೆಗಾಗಿ ಅವಕಾಶ ಕಲ್ಪಿಸಿಕೊಟ್ಟರು.

ಮಧ್ಯೆ ಕರ್ನಾಟಕ ನಮ್ಮದು, ದಾವಣಗೆರೆ ನಗರವು ನಮ್ಮದು, ಬಹುಭಾಗ ಬರಪೀಡಿತ ಜಿಲ್ಲೆಯಾಗಿದೆ. ಭಾರೀ ಪ್ರಮಾಣದಲ್ಲಿ ಪ್ರಗತಿಯಾಗಬೇಕಾಗಿದೆ. ಎಲ್ಲಾ ಕಾರ್ಯಗಳು ಅವರವರ ಸ್ವಾರ್ಥಕ್ಕಾಗಿ ನಡೆಯುತ್ತಿವೆ. ಭ್ರಷ್ಟಾಚಾರವು ಆಕಾಶದವರೆಗೂ ಹಾರಿ ಹೋಗಿದೆ. ಬಡವರ ರೈತರ ಕಷ್ಟ ನಷ್ಟಗಳಿಗೆ ಮತ್ತು ಅವರ ಕೋರಿಕೆಗಳಿಗೆ ಸ್ಪಂದಿಸುವ ಭಾವನೆ ಇಲ್ಲದಂತಾಗಿದೆ ಎಂಬುದು ಅವರ ನಿಲುವಾಗಿದೆ.

ದಾವಣಗೆರೆಯು ಎರಡನೇ ರಾಜಧಾನಿಯಾದರೆ ಮಾತ್ರ ಅಭಿವೃದ್ಧಿ ಸಾಧ್ಯವೆಂಬುದು ಅವರ ಅಂತಿಮ ನಿರ್ಣಯವಾಗಿದೆ. ಹಾಗಾಗಿ ದಾವಣಗೆರೆ ಎರಡನೇ ರಾಜಧಾನಿ ಹೋರಾಟ ಸಮಿತಿ ಎಂಬ ಸಂಘಟನೆ ಸ್ಥಾಪಿಸಿ ರೈತ ಸಂಘದ ಅಡಿಯಲ್ಲಿ ಹೋರಾಟ ಮಾಡುತ್ತ ಬಂದಿದ್ದಾರೆ. ಫಲ ದೊರಕುವವರೆಗೂ ಹೋರಾಟ ನಿಲ್ಲುವುದಿಲ್ಲ. ಕೊಡಗಿನವರಂತೆ, ಉತ್ತರ ಕರ್ನಾಟಕದವರಂತೆ

ನಮಗೇನು ಪ್ರತ್ಯೇಕ ರಾಜ್ಯ ಬೇಡ. ಪ್ರತ್ಯೇಕ ಬಾವುಟವು ಬೇಡ. ಕರ್ನಾಟಕದ ಭೂಪಟದಲ್ಲಿ ದಾವಣಗೆರೆ ಮತ್ತು ಪಕ್ಕದ ಜಿಲ್ಲೆಗಳು ಪ್ರಖರವಾಗಿ ಬೆಳಕು ಚೆಲ್ಲುತ್ತಿರಬೇಕೆಂದು ಇವರ ಆಶಯವಾಗಿದೆ. ಮೇಲಿನ ಎಲ್ಲಾ ಅಂಶಗಳಿಂದ ಎರಡನೇ ರಾಜಧಾನಿಯಾಗಬೇಕೆಂದು ಇವರ ನೇತೃತ್ವದಲ್ಲಿ ಹೋರಾಟಗಳು ನಡೆಯುತ್ತಾ ಬಂದಿವೆ.

ಮಧ್ಯ ಕರ್ನಾಟಕದ ದಾವಣಗೆರೆ ಜಿಲ್ಲೆಯು ಅಭಿವೃದ್ಧಿಯಾಗಬೇಕೆಂದು ಹಾಗಾಗಿ ದಾವಣಗೆರೆ ಜಿಲ್ಲೆಯ ಕೊಂಡಜ್ಜಿಯಲ್ಲಿ IIT (Indian Institute of Technology) ಎಂಬ ಶೈಕ್ಷಣಿಕ ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಆಶೋತ್ತರದಲ್ಲಿ, ರೈತ ಸಂಘಟನೆಯ ನೇತೃತ್ವದಲ್ಲಿ ಹೋರಾಟ ನಡೆಸಿ ವಿಫಲರಾಗಿದ್ದಾರೆ. ಪ್ರಸ್ತುತವಾಗಿ ದಾವಣಗೆರೆ ಜಿಲ್ಲೆಯ ಹುಚ್ಚವನಹಳ್ಳಿ ಹಾಗೂ ರಾಂಪುರದಲ್ಲಿ ೧೦೦೦ ಎಕರೆಯ ಗುಡ್ಡಗಾಡು ಪ್ರದೇಶವಿದೆ. ಈ ಸ್ಥಳದಲ್ಲಿ AIMSU (All India Medical Science University)ನ್ನು ಸ್ಥಾಪನೆ ಮಾಡಬೇಕೆಂದು ರೈತ ಸಂಘದ ಅಡಿಯಲ್ಲಿ ಹೋರಾಟ ಮಾಡುತ್ತ ಕೇಂದ್ರ ಸರ್ಕಾರವನ್ನು ಒತ್ತಾಯ ಪಡಿಸುತ್ತಿದ್ದಾರೆ.[೭]

ಯಾವುದೇ ಪ್ರತಿಫಲದ ಅಪೇಕ್ಷೆ ಪಡದೆ ನಿಸ್ವಾರ್ಥ ಸೇವೆಯನ್ನು ಮಾಡುತ್ತಾ ರೈತ ನಾಯಕರಾಗಿ ದಾವಣಗೆರೆ ಜಿಲ್ಲೆಯ ವಿವಿಧ ಕ್ಷೇತ್ರಗಳಿಗೆ ತಮ್ಮದೇಯಾದ ಅಲ್ಪ ಸೇವೆಯನ್ನು ಮಾಡಿದ್ದಾರೆ. ಇವರ ವ್ಯಕ್ತಿತ್ವವನ್ನು ಆರ್ಥಿಕ ಹಿನ್ನೆಲೆಯಲ್ಲಿ ವಿಮರ್ಶಿಸಲು ಯತ್ನಿಸಿದರೆ ಆಶ್ಚರ್ಯವಾಗುತ್ತದೆ. ರೈತ ನಾಯಕರಾಗಿ ಸುಮಾರು ೪೩ ವರ್ಷಗಳ ಕಾಲ ಹೋರಾಟವನ್ನೇ ತಮ್ಮ ಧ್ಯೇಯವನ್ನಾಗಿರಿಸಿಕೊಂಡು ಯಾರಿಂದಲೂ ಪ್ರತಿಫಲ ಪಡೆಯದೇ, ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಬಂದಿದ್ದಾರೆ. ಹಾಗಾಗಿ ತಂದೆಯೇ ನೀಡಿದ ಜಮೀನನ್ನು ಉಳಿಸಿಕೊಂಡು (೨.೫ ಎಕರೆ) ಸಣ್ಣ ಪುಟ್ಟ ವ್ಯಾಪಾರ ಮಾಡುತ್ತ ಚಿಕ್ಕದಾದ ಮನೆಯೊಂದನ್ನು ನಿರ್ಮಿಸಿಕೊಂಡು, ಯಾವುದೇ ಆಸ್ತಿಯನ್ನು ಮಾಡದೆ ಈಗಲೂ ಒಂದು ಸೈಕಲ್ಲಿನಲ್ಲಿ ಹೋಡಾಡುವ ಸರಳ ಸಜ್ಜನಿಕೆಯ ರೈತ ಮುಖಂಡರಾಗಿದ್ದಾರೆ. ಇಂತಹವರನ್ನು ಆದರ್ಶವಾಗಿಟ್ಟುಕೊಳ್ಳುವುದು. ಇಂದಿನ ಯುವಕರಿಗೆ ದಾರಿ ದೀಪವಾಗುತ್ತದೆ.

**ಪ್ರಶಸ್ತಿ ಮತ್ತು ಪುರಸ್ಕಾರಗಳು**

- ೧೯೭೫ ರಿಂದ ಪ್ರಸ್ತುತದವರೆಗೆ ಕರ್ನಾಟಕ ರಾಜ್ಯ ರೈತ ಸಂಘದ ಅಧ್ಯಕ್ಷರಾಗಿ ಗಣನೀಯ ಸೇವೆ ಸಲ್ಲಿಸಿರುವುದನ್ನು ಗುರುತಿಸಿ ಮೇ ೦೨ ೧೯೮೮, ೧೯೯೮ ಹಾಗೂ ೧೯೯೯ರಲ್ಲಿ ಪ್ರಶಂಸಾ ಪತ್ರವನ್ನು ನೀಡಿ ಗೌರವಿಸಿರುತ್ತಾರೆ.[೮]
- ದಾವಣಗೆರೆ ಜಿಲ್ಲೆಯಾಗಿ ರೂಪಗೊಳ್ಳುವಲ್ಲಿ ಹಲವು ದಶಕಗಳ ಕಾಲ, ಹೋರಾಟ ಸಮಿತಿಯ ಅಧ್ಯಕ್ಷನಾಗಿ ಸೇವೆ ಸಲ್ಲಿಸಿದ್ದಕ್ಕಾಗಿ ಆಗಸ್ಟ್ ೧೫ ೧೯೯೭ರಂದು ಶ್ರೀ ಜೆ.ಹೆಚ್. ಪಾಟೇಲ್ ಸ್ಮಾರಕ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.[೯]
- ರೈತರ ಸಮಸ್ಯೆಗಳಿಗೆ ಸ್ಪಂದಿಸಿ ೩೦ ವರ್ಷಗಳ ಕಾಲ ಗಣನೀಯ ಹೋರಾಟ ಮಾಡುತ್ತಿರುವುದನ್ನು ಗುರುತಿಸಿ 'ದಿ ಅಮೇರಿಕನ್ ಬಯೋಗ್ರಾಫಿಕಲ್ ಇನ್ಸಿಟ್ಯೂಟ್ ರಿಸರ್ಚ್

ಬೋರ್ಡ್ ಆಫ್ ದಿ ಡೈರೆಕ್ಟರ್ ಕಮಿಟಿಯಿಂದ, ೨೦೦೫ನೇ ಸಾಲಿನ ಶ್ರೇಷ್ಠ ವ್ಯಕ್ತಿಯೆಂದು ಗೌರವಿಸಿ, ಚೆನ್ನೈನಲ್ಲಿನ ಅಮೇರಿಕನ್ ಆಫೀಸ್‌ನಲ್ಲಿ ಕರೆಯಿಸಿಕೊಂಡು ಅಕ್ಟೋಬರ್ ೨೦ ೨೦೦೫ರಂದು ಸನ್ಮಾನಿಸಿ ಪ್ರಶಸ್ತಿ ಪತ್ರವನ್ನು ನೀಡಿರುತ್ತಾರೆ.[೧೦]

• ದಾವಣಗೆರೆ ಜಿಲ್ಲೆಗೆ ನೀಡಿರುವ ವಿವಿಧ ಸೇವೆಗಳನ್ನು ಪರಿಗಣಿಸಿ, ದಾವಣಗೆರೆ ಜಿಲ್ಲಾ ಮಟ್ಟದ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯ(೨೦೧೪)ನ್ನು ನವಂಬರ್ ೦೧ ೨೦೧೪ರಂದು ನೀಡಿ ಸನ್ಮಾನಿಸಲಾಯಿತು.[೧೧]

**ಕೆ.ಪಿ. ಭೂತಯ್ಯ**

ಜಿಲ್ಲಾ ಮಟ್ಟದ ರೈತ ನಾಯಕರುಗಳಲ್ಲಿಯೇ ಅಗ್ರಗಣ್ಯ ಹಾಗೂ ಹಿರಿಯ ನಾಯಕರಾಗಿದ್ದಾರೆ. ೧೯೮೦ರ ನಂತರದ ದಿನಗಳಲ್ಲಿ ಚಿತ್ರದುರ್ಗದ ವಿವಿಧ ತಾಲೂಕುಗಳಲ್ಲಿ ಮತ್ತು ಹಳ್ಳಿಗಳಲ್ಲಿರುವ ಸಮಸ್ಯೆಗಳನ್ನು ನಿವಾರಿಸಲು, ರೈತರನ್ನು ಸಂಘಟಿಸಿ ಪ್ರತಿಭಟನೆಗೆ ಕರೆ ತರಲು ಕ್ರಿಯಾಶೀಲರಾಗಿ ದಿಟ್ಟ ಹೆಜ್ಜೆಯನ್ನಿಟ್ಟವರು. ಶೋಷಣೆಗೆ ಒಳಗಾದ ರೈತರ ಬದುಕಿನಲ್ಲಿ ಆಶಾಕಿರಣ ಮೂಡಿಸಿದ ಪ್ರಮುಖ ವ್ಯಕ್ತಿಯಾಗಿದ್ದ ಇವರು. ರಾಜಕೀಯ ಪ್ರವೇಶಿಸಿ ಎ.ಪಿ.ಎಂ.ಸಿ. ಅಧ್ಯಕ್ಷರಾಗಿದ್ದರು. ತಮ್ಮ ಹೋರಾಟದ ಫಲವಾಗಿಯೇ ಚಳ್ಳಕೆರೆಗೆ ಸರ್ಕಾರಿ ಬಸ್ಸುಗಳ ಸಂಪರ್ಕ ಕಲ್ಪಿಸಲಾಯಿತು. ಇದರಿಂದಾಗಿ ಈ ಸರ್ಕಾರಿ ಬಸ್ಸುಗಳನ್ನು ಭೂತಯ್ಯನ ಬಸ್ಸುಗಳೆಂದೇ ಕರೆಯುತ್ತಿದ್ದಾರೆ.

ಕೆ.ಪಿ. ಭೂತಯ್ಯರವರು ಚಿತ್ರದುರ್ಗ ಜಿಲ್ಲೆಯ, ಚಳ್ಳಕೆರೆ ತಾಲೂಕಿನ ಕಾಲುವೆಹಳ್ಳಿಯಲ್ಲಿ ಜನವರಿ ೦೧ ೧೯೫೦ರಂದು ಕುಂಟಪಯ್ಯ ಹಾಗೂ ಗಂಗಮ್ಮ ದಂಪತಿಗಳ ೨ನೇ ಮಗನಾಗಿ ಜನಿಸಿದರು. ತಮ್ಮ ಮಕ್ಕಳ ಪೋಷಣೆಗಾಗಿ ದಂಪತಿಗಳಿಬ್ಬರು ವ್ಯವಸಾಯವನ್ನೇ ತಮ್ಮ ವೃತ್ತಿಯನ್ನಾಗಿ ಅವಲಂಬಿಸಿದ್ದು ಕಡುಬಡುತನದ ಜೀವನ ನಡೆಸುತ್ತಿದ್ದರು. ಇದರಿಂದಾಗಿ ಭೂತಯ್ಯರವರು ಉತ್ತಮ ಶಿಕ್ಷಣ ಪಡೆಯದೆ ಕೇವಲ ಐದನೇ ತರಗತಿಗೆ ಶಾಲೆಯನ್ನು ತೊರೆದು ಕೃಷಿ ಕೆಲಸದಲ್ಲಿ ತೊಡಗಿದರು. ಈ ವೃತ್ತಿಯು ಲಾಭದಾಯಕವಾಗಿಲ್ಲವಾದ್ದರಿಂದ ಅವರ ಜೀವನ ಮಟ್ಟ ಸುಧಾರಣೆಯಾಗಲಿಲ್ಲ. ಇವರಿಗೆ ೨೨ ವರ್ಷ ವಯಸ್ಸಾದಾಗ ಮದುವೆಯಾಗಿ ಮೂರು ಮಕ್ಕಳು ಜನಿಸಿದರು. ಕೃಷಿಯಲ್ಲಿ ತೊಡಗಿದ್ದರೂ ಸಹ ಇವರನ್ನು ರೈತ ಸಂಘದತ್ತ ಹಾಗೂ ಪ್ರತಿಭಟನೆಯನ್ನು ಮಾಡುವಂತೆ ಪ್ರೇರೇಪಿಸಿದ ಸಂದರ್ಭಗಳೇನು? ಎಂದು ನೋಡಿದಾಗ, ಅವರಿಗಾದ ಶೋಷಣೆಯ ವಿಷಯ ತಿಳಿಯಿತು. ಬ್ಯಾಂಕ್‌ನವರಿಂದ ಬಾವಿ ಸಾಲವಾಗಿ ಸುಮಾರು ೭೦,೦೦೦/- ರೂ ಸಾಲ ಪಡೆದಿದ್ದು, ಅದನ್ನು ತೀರಿಸಲಾಗದಿದ್ದಾಗ ಮನೆ ಜಪ್ತಿ ಮಾಡಿ ಅವಮಾನಗೊಳಿಸಿದರು. ಈ ಘಟನೆಯಿಂದ ಮನನೊಂದು ಭೂತಯ್ಯರವರು ರೈತ ಮುಖಂಡರಾದ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರ ಜೊತೆ ಸೇರಿಕೊಂಡು ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ೧೯೮೪ರಿಂದ ೧೯೮೮ರವರೆಗೆ ರೈತರ ಪ್ರತಿಭಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.[೧೨] ನಂತರ ತಮ್ಮ ಹಳ್ಳಿಗೆ ಹಿಂತಿರುಗಿದ ಇವರು, ೧೯೮೮ ರಿಂದ ೧೯೯೦ ರವರೆಗೆ ಕರ್ನಾಟಕ ರಾಜ್ಯ ರೈತ ಸಂಘದ ಕಾಲುವೆಹಳ್ಳಿ ಗ್ರಾಮ ಘಟಕದ ಅಧ್ಯಕ್ಷರಾಗಿ,

ಗ್ರಾಮ ಮಟ್ಟದ ರೈತರ ಸಮಸ್ಯೆಗಳಿಗೆ ಸ್ಪಂಧಿಸಿ ನ್ಯಾಯ ದೊರಕಿಸಿ ಕೊಡಲು ಪ್ರತಿಭಟನೆಯಲ್ಲಿ ತೊಡಗಿದರು., ೧೯೯೦ ರಿಂದ ೧೯೯೩ ರವರೆಗೆ ಮೊಳಕಾಲ್ಮೂರು ತಾಲೂಕು ರೈತ ಸಂಘದ ಅಧ್ಯಕ್ಷರಾಗಿ, ರೈತರನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು. ೧೯೯೩ ರಿಂದ ೧೯೯೮ ರವರೆಗೆ ಚಳ್ಳಕೆರೆ ತಾಲೂಕಿನ ರೈತ ಸಂಘದ ಅಧ್ಯಕ್ಷರಾಗಿ, ಚಳ್ಳಕೆರೆ ತಾಲೂಕಿಗೆ ಬಸ್ಸಿನ ಸೌಲಭ್ಯ ಕಲ್ಪಿಸುವಲ್ಲಿ ಅನೇಕ ಪ್ರತಿಭಟನೆಗಳನ್ನು ಮಾಡಿದ್ದಾರೆ. ೧೯೯೮ ರಿಂದ ೨೦೦೨ ರವರೆಗೆ ಚಿತ್ರದುರ್ಗ ಜಿಲ್ಲಾ ಸಂಘಟನೆಯ ಕಾರ್ಯದರ್ಶಿಯಾಗಿ, ಪ್ರತಿಭಟನೆಯ ಸಮಯದಲ್ಲಿ ರೈತರನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ೨೦೦೨ರಿಂದ ೨೦೦೯ ರವರೆಗೆ ಚಿತ್ರದುರ್ಗ ಜಿಲ್ಲೆಯ ಕಾರ್ಯಧ್ಯಕ್ಷರಾಗಿ, ೨೦೦೯ರಿಂದ ಪ್ರಸ್ತುತದವರೆಗೂ ಕರ್ನಾಟಕ ರಾಜ್ಯ ರೈತ ಸಂಘದ ಹಿರಿಯ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.[೧೩]

ಭೂತಯ್ಯರವರು ರೈತರ ಸಮಸ್ಯೆಗಳನ್ನು ಪ್ರತಿಭಟನೆಯ ಮೂಲಕ ಎದುರಿಸವಂತೆ ಪ್ರಭಾವ ಬೀರಿದವರು ಯಾರು? ಎಂದು ನೋಡಿದಾಗ, ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ಇವರಿಂದ ಪ್ರಭಾವಿತರಾಗಿ, ರೈತ ಮುಖಂಡರಾಗಿ, ತಾಲೂಕು ಅಧ್ಯಕ್ಷರಾಗಿ, ಜಿಲ್ಲಾ ಕಾರ್ಯದರ್ಶಿಯಾಗಿ, ರಾಜ್ಯ ಹಿರಿಯ ಉಪಾಧ್ಯಕ್ಷರಾಗಿ ಅನೇಕ ಪ್ರತಿಭಟನೆಗಳನ್ನು ಮಾಡಿದ್ದಾರೆ. ಚಳ್ಳಕೆರೆ ಸರ್ಕಾರಿ ಆಸ್ಪತ್ರೆಯನ್ನು ೧೦೦ ಹಾಸಿಗೆಯ ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸಲು ಒತ್ತಾಯಿಸಿ. ೧೯೯೬ ರಿಂದ ೨೦೦೬ರವರೆಗೆ ಹಲವಾರು ಬಾರಿ ಅಮರಣಾಂತರ ಉಪವಾಸ ಸತ್ಯಾಗ್ರಹ ಹಾಗೂ ಪ್ರತಿಭಟನೆ ಮಾಡಿದ್ದರ ಫಲವಾಗಿ ೨೦೦೬ ಆಗಸ್ಟ್ ತಿಂಗಳಲ್ಲಿ, ೧೦೦ ಹಾಸಿಗೆಗಳ ಆಸ್ಪತ್ರೆಯನ್ನು ಮಂಜೂರು ಮಾಡಲಾಯಿತು.[೧೪] ಮಾರ್ಚ್ ೧೨ ೧೯೯೭ ಮತ್ತು ಜೂನ್ ೧೨ ೨೦೦೧ರಂದು ಚಳ್ಳಕೆರೆಯ ಬೀದಿ ಬೀದಿಗಳಿಗೆ ಪಾದಯಾತ್ರೆ ಮಾಡಿ, ಮಧ್ಯಪಾನದಿಂದಾದ ಅನಾಹುತಗಳನ್ನು ನಾಟಕ ರೂಪದಲ್ಲಿ ಪ್ರದರ್ಶಿಸಿ, ಅರಿವು ಮೂಡಿಸಿ, ಮಧ್ಯ ಮಾರಾಟ ನಿಷೇಧ ಮಾಡುವಂತೆ ಸರ್ಕಾರಕ್ಕೆ ಎಚ್ಚರಿಕೆಯನ್ನು ನೀಡಿರುತ್ತಾರೆ. ೨೦೦೩ ರಿಂದ ೨೦೧೮ರವರೆಗೆ ಚಿತ್ರದುರ್ಗ ಜಿಲ್ಲೆಯ ಹಾಗೂ ಚಳ್ಳಕೆರೆ ತಾಲೂಕಿನಲ್ಲಿ ಶೇಂಗಾ ಬೆಳೆ ಮಳೆಯ ಅಭಾವದಿಂದ, ಸಂಪೂರ್ಣವಾಗಿ ನಷ್ಟವಾಗಿದ್ದು ರೈತರು ಸಂಕಷ್ಟಕ್ಕೆ ಒಳಗಾಗಿದ್ದರು. ಈ ಸಮಯದಲ್ಲಿ ಭೂಪಯ್ಯರವರ ನಾಯಕತ್ವದಲ್ಲಿ ಬೆಳೆ ನಷ್ಟ ಪರಿಹಾರಕ್ಕೆ ಒತ್ತಾಯಿಸಿ ರೈತರೊಂದಿಗೆ ಪ್ರತಿಭಟನೆ ಮಾಡಿ, ಜಿಲ್ಲಾಧಿಕಾರಿಗಳು ಹಾಗೂ ಕೃಷಿ ಇಲಾಖೆಯ ಮುಖಾಂತರ ೨೨೫ ಕೋಟಿ ರೂಪಾಯಿಯನ್ನು ಬೆಳೆ ನಷ್ಟವಾಗಿ ನೀಡಬೇಕೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸುಮಾರು ವರ್ಷಗಳಿಂದ ಚಳ್ಳಕೆರೆ ತಾಲೂಕಿನಲ್ಲಿ ಖಾಸಗಿ ಬಸ್ಸುಗಳ ಕಾರ್ಯಚರಣೆಯಿಂದ ಪ್ರಯಾಣಿಕರನ್ನು ಬಸ್ಸುಗಳ ಟಾಪ್ ಮೇಲೆ ಕುರಿಗಳಂತೆ ತುಂಬುತ್ತಿದ್ದರು. ಗರ್ಭಿಣಿಯರಿಗೆ, ವಿದ್ಯಾರ್ಥಿಗಳಿಗೆ ತುಂಬಾ ತೊಂದರೆಯಾಗುತ್ತಿದ್ದು, ಸರ್ಕಾರಿ ಬಸ್ಸುಗಳನ್ನು ಬಿಡುವಂತೆ ಒತ್ತಾಯಿಸಿ ೨೦೦೫ರಲ್ಲಿ ಚಿತ್ರದುರ್ಗ ಜಿಲ್ಲಾಧಿಕಾರಿಗಳಿಗೆ ಹಾಗೂ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ

ನಿಯಂತ್ರಾಣಾಧಿಕಾರಿಗಳಿಗೆ ಪತ್ರ ಬರೆದು ಪ್ರತಿಭಟನೆ ಮಾಡಿದರು. ಇದರ ಪ್ರತಿಫಲವಾಗಿಯೇ ಸರ್ಕಾರವು ಸರ್ಕಾರಿ ಸಾರಿಗೆ ಸೌಲಭ್ಯ ಒದಗಿಸಿಕೊಟ್ಟು ಪ್ರಯಾಣಿಕರಿಗೆ ಅನುಕೂಲ ಮಾಡಿಕೊಟ್ಟಿತು.[೧೫]

ಆಗಸ್ಟ್ ೦೪ ೨೦೦೮ರಂದು ರಾಜ್ಯ ರಸ್ತೆ ಸಾರಿಗೆ ಘಟಕ ಸ್ಥಾಪಿಸಲು ಚಳ್ಳಕೆರೆ ರಿ.ಸಂ. ನಂ. ೫೭ರಲ್ಲಿ ಸರ್ಕಾರಿ ೧೦ ಎಕರೆ ಜಮೀನನ್ನು ಮಂಜುರಾತಿ ಮಾಡಲು ಹಾಗೂ ೧೦ ಸರ್ಕಾರಿ ಬಸ್ಸುಗಳ ಕಾರ್ಯಚರಣೆಗೊಳಿಸಲು ಸರ್ಕಾರಕ್ಕೆ ಒತ್ತಾಯಿಸಿ ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ನೂರಾರು ರೈತರು ಪ್ರತಿಭಟನೆ ಮಾಡಿದರು.[೧೬] ನಂತರ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರಿಗೆ ಪತ್ರದ ಮೂಲಕ ಒತ್ತಾಯಿಸಿ ಜಮೀನು ಮಂಜುರಾತಿ ಮಾಡುವಂತೆ ಮಾಡಿ, ಬಸ್ಸುಗಳ ಸೌಲಭ್ಯ ಒದಗಿಸುವಂತೆ ಮಾಡಿದ್ದಾರೆ.

ಜನವರಿ ೩೧ ೨೦೦೫, ಫೆಬ್ರವರಿ ೧೦ ೨೦೦೯, ಆಗಸ್ಟ್ ೦೨ ೨೦೧೦ನೇ ಸಾಲಿನಲ್ಲಿ ಜಾಜೂರು ಔಟ್ ಪೋಲಿಸ್ ಠಾಣೆಯನ್ನು, ಪೋಲಿಸ್ ಠಾಣೆಯನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರಕ್ಕೆ ಒತ್ತಾಯಿಸಿ ಅಮಾರಣಂತರ ಉಪವಾಸ ಸತ್ಯಾಗ್ರಹ ಹಾಗೂ ಪ್ರತಿಭಟನೆ ಮಾಡಿ ಸರ್ಕಾರದಿಂದ ಮಂಜೂರಾತಿಗೆ ಅನುಮೋದನೆ ಪಡೆದರು.[೧೭]

೨೦೦೫ರಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಅಧ್ಯಕ್ಷರಾಗಿ ಆಯ್ಕೆಯಾಗಿ ವರ್ತಕರಿಂದ ಮತ್ತು ದಲ್ಲಾಳಿಗಳಿಂದ ರೈತರಿಗೆ ಆಗುವ ಮೋಸ ಹಾಗೂ ಕಿರುಕುಳವನ್ನು ಮಾರುಕಟ್ಟೆ ಸಮಿತಿಯ ಗಮನಕ್ಕೆ ತಂದು, ತೂಕ ಮಾಡಲು ವೇ-ಬ್ರಿಡ್ಜ್ ಮತ್ತು ಇ-ಟೆಂಡರ್‌ನ್ನು ಜಾರಿಗೊಳಿಸಿರುತ್ತಾರೆ. ಏಪ್ರಿಲ್ ೨೮ ೨೦೦೮ರಂದು ಚಳ್ಳಕೆರೆ ತಾಲೂಕಿನ ವಿವಿಧ ಗ್ರಾಮಗಳಲ್ಲಿ ಪ್ಲೋರೈಡ್ ನೀರು ಸೇವನೆಯಿಂದ ಅನೇಕ ಸಾರ್ವಜನಿಕರು ಅನಾರೋಗ್ಯಕ್ಕೆ ತುತ್ತಾಗಿದ್ದು, ಶುದ್ಧ ಕುಡಿಯುವ ನೀರಿಗಾಗಿ ವಿವಿಧ ಗ್ರಾಮಗಳ ಗ್ರಾಮ ಪಂಚಾಯ್ತಿಯ ಮುಂದೆ ಪ್ರತಿಭಟನೆ ಮಾಡಿ ಕುಡಿಯುವ ನೀರಿನ ಸೌಲಭ್ಯ ಒದಗುವಂತೆ ಮಾಡಿದ್ದಾರೆ.

೨೦೦೫ ರಿಂದ ೨೦೧೫ರವರೆಗೆ ಚಳ್ಳಕೆರೆ ತಾಲೂಕಿನ ರೈತರು ಬೆಳೆದ ಈರುಳ್ಳಿಯನ್ನು ಕಲ್ಕತ್ತಾ ನಗರಕ್ಕೆ ಸಾಗಿಸುವಂತೆ ಒತ್ತಾಯಿಸಿ ರೈಲು ತಡೆದು ಪ್ರತಿಭಟನೆಗಳನ್ನು ಮಾಡಿದ್ದಾರೆ. ೨೦೦೧ ರಿಂದ ೨೦೦೮ರವರೆಗೆ ಚಿತ್ರದುರ್ಗ ಜಿಲ್ಲೆಗೆ ಭದ್ರ ಮೇಲ್ದಂಡೆ ಯೋಜನೆ ಜಾರಿಗೆ ತರಲು ಶ್ರೀಶ್ರೀಶ್ರೀ ಮುರುಘ ರಾಜೇಂದ್ರ ಶಿವಮೂರ್ತಿ ಶರಣ ಸ್ವಾಮೀಜಿಯ ನೇತೃತ್ವದಲ್ಲಿ ರೈತರ ಪ್ರತಿಭಟನೆಗಳನ್ನು ಮಾಡಿದ್ದು, ಭದ್ರಾ ಮೇಲ್ದಂಡೆ ಮಂಜೂರಾತಿಯನ್ನು ಮಾಡಿಸಿದರು. ೨೦೦೫ ರಿಂದ ೨೦೧೦ರವರೆಗೆ ನದಿ ಭಾಗದಲ್ಲಿ ಮರಳು ಸಾಗಾಣಿಕೆಯಿಂದ ಅಂತರ್ಜಲ ಮಟ್ಟ ಕುಸಿದಿದ್ದು ರೈತರಿಗೆ ತೊಂದರೆಯಾಗಿರುತ್ತದೆ. ಇದರಿಂದ ಸಾವಿರಾರು ರೈತರೊಂದಿಗೆ ಬೃಹತ್ ಪ್ರತಿಭಟನೆ ಮಾಡಿ ಮರಳು ಹರಾಜ್‌ನ್ನು ರದ್ದುಗೊಳಿಸಿದರು. ಮಾರ್ಚ್ ೧೨ ೧೯೯೭ ರಿಂದ ಪ್ರಸ್ತುದವರೆಗೆ ಚಿತ್ರದುರ್ಗ ಜಿಲ್ಲೆಯಾದ್ಯಾಂತ ಶ್ರೀ ಮುರುಘರಾಜೇಂದ್ರ ಶಿವಮೂರ್ತಿ ಸ್ವಾಮೀಜಿಗಳು ಚಿತ್ರದುರ್ಗ ಬೃಹನ್ಮಠ, ಇವರ ನೇತೃತ್ವದಲ್ಲಿ ಬೀದಿ ಬೀದಿಗಳಿಗೆ ಪಾದಯಾತ್ರೆ

ಮಾಡಿ, ಜನರಿಗೆ ಮದ್ಯಪಾನದಿಂದಾಗುವ ಅನಾಹುತಗಳನ್ನು ನಾಟಕ ರೂಪದಲ್ಲಿ ಪ್ರದರ್ಶಿಸಿ ಅರಿವು ಮೂಡಿಸಿರುತ್ತಾರೆ. ಜಿಲ್ಲೆಯಾದ್ಯಾಂತ ರೈತ ಸಂಘ ಹಾಗೂ ಮೈರಾಡ ಮಹಿಳಾ ಸಂಘಗಳ ೫೦೦೦ ಮಹಿಳೆಯನ್ನು ಒಳಗೊಂಡಂತೆ ಪ್ರತಿಭಟನೆಯ ಮೂಲಕ ಸಾರಾಯಿ ಮಾರಾಟವನ್ನು ಗ್ರಾಮಗಳಲ್ಲಿ ನಿಷೇಧಿಸಲು ಸರ್ಕಾರವನ್ನು ಒತ್ತಾಯಪಡಿಸಿದ್ದಾರೆ.

೨೦೦೩ ರಿಂದ ೨೦೦೫ರವರೆಗೆ ಚಳ್ಳಕೆರೆಯಿಂದ ಮೊಳಕಾಲ್ಮೂರಿಗೆ, ೪೦ ಗ್ರಾಮಗಳ ರೈತರು ಹೋಗಿ ಬರಲು ಬಸ್ಸಿನ ಚಾರ್ಜ್ ೧೫೦ ರೂಪಾಯಿ ದುಬಾರಿಯಾಗಿತ್ತು. ರೈತರಿಗೆ ಅನುಕೂಲವಾಗಲು ಪರುಶುರಾಂಪುರ, ಪಗಡಲಬಂಡೆ, ಜಾಜುರು, ಕಾಲುವೇಹಳ್ಳಿ, ಚಿತ್ರನಾಯಕನಹಳ್ಳಿ, ಗೌರಸಮುದ್ರ, ಕೊಂಡ್ಲಹಳ್ಳಿ, ಕೋನಸಾಗರ, ಮೊಳಕಾಲ್ಲೂರು ಈ ಮಾರ್ಗದಲ್ಲಿ ಸರ್ಕಾರಿ ಬಸ್ಸನ್ನು ಕಾರ್ಯಚರಣೆಗೊಳಿಸಲು ಪ್ರತಿಭಟನೆ ಮಾಡಿ ಬಸ್ಸಿನ ಸೌಲಭ್ಯವನ್ನು ಕಲ್ಪಿಸಿರುತ್ತಾರೆ.

**ಪ್ರಶಸ್ತಿ ಮತ್ತು ಪುರಸ್ಕಾರಗಳು**

ಚಿತ್ರದುರ್ಗ ಜಿಲ್ಲೆಯ ರೈತರ ಸಮಸ್ಯೆಗಳಿಗೆ ಸ್ಪಂದಿಸಿ ೩೫ ವರ್ಷಗಳ ಕಾಲ ಗಣನೀಯ ಹೋರಾಟ ಮಾಡುತ್ತಿರುವುದನ್ನು ಗುರುತಿಸಿ, ಕರ್ನಾಟಕ ಸಾಂಸ್ಕೃತಿಕ ಅಕಾಡೆಮಿ(ರಿ) ಇವರಿಂದ 'ಸಮಾಜ ಸೇವೆ ರತ್ನ' ರಾಜ್ಯ ಪ್ರಶಸ್ತಿ ನೀಡಲಾಗಿದೆ.[೧೮]

ಚಿತ್ರದುರ್ಗ ಜಿಲ್ಲೆಗೆ ನೀಡಿರುವ ವಿವಿಧ ಸೇವೆಗಳನ್ನು ಪರಿಗಣಿಸಿ, ಚಿತ್ರದುರ್ಗ ಜಿಲ್ಲಾ ಮಟ್ಟದ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯ(೨೦೧೬)ನ್ನು ನವಂಬರ್ ೦೧ ೨೦೧೬ರಂದು ನೀಡಿ ಸನ್ಮಾನಿಸಲಾಯಿತು.[೧೯]

ಭೂತಯ್ಯರವರ ಸಾಮಾಜಿಕ ಸೇವೆಯನ್ನು ಪರಿಗಣಿಸಿ ಆಗಸ್ಟ್ ೧೫ ೨೦೦೬ರ ಮಂಗಳವಾರದಂದು ಚಿತ್ರದುರ್ಗ ನಗರದ ವೀರವನಿತೆ ಒನಕೆ ಓಬವ್ವ ಕ್ರೀಡಾಂಗಣದಲ್ಲಿ ನಡೆದ, ೫೯ನೇ ಭಾರತ ಸ್ವಾತಂತ್ರ್ಯೋತ್ಸವದ ಸಾರ್ವಜನಿಕ ಸಮಾರಂಭದಲ್ಲಿ ಗೌರವಿಸಿ ಸನ್ಮಾನ ಮಾಡಿರುತ್ತಾರೆ.

**ಹುಚ್ಚವನಹಳ್ಳಿ ಮಂಜುನಾಥ್**

ಕರ್ನಾಟಕ ರಾಜ್ಯದ ಯುವ ರೈತ ನಾಯಕರಲ್ಲಿ ಅಗ್ರಗಣ್ಯ ನಾಯಕರಾಗಿದ್ದಾರೆ. ರೈತ ಚಳವಳಿಯನ್ನು ಕೇವಲ ಆರ್ಥಿಕ ಕ್ಷೇತ್ರಕ್ಕೆ ಮೀಸಲಾಗಿರಿಸದೆ, ಸಾಮಾಜಿಕ ಚಳವಳಿಯಾಗಿ ಮಾರ್ಪಡಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರು ರೈತ ಸಂಘದ ಜಿಲ್ಲಾಧ್ಯಕ್ಷರಾಗಿ, ರೈತ ಸಂಘದ ಸ್ಥಾಪಕರಾಗಿ, ರಾಜ್ಯ ಅಧ್ಯಕ್ಷರಾಗಿ ತಮ್ಮದೇಯಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

ರೈತ ಸಂಘದ ಯುವ ನಾಯಕರಾಗಿರುವ ಹುಚ್ಚವನಹಳ್ಳಿ ಮಂಜುನಾಥ್‌ರವರು ಮೇ ೦೩ ೧೯೭೧ರಂದು ದಾವಣಗೆರೆ ನಗರದ ಕೆ.ಟಿ.ಜೆ. ಬಡವಾಣೆಯಲ್ಲಿ ಜನಿಸಿದರು. ತಂದೆ ಕರಿಯಪ್ಪ ತಾಯಿ ಲಲಿತಮ್ಮರವರು, ನಾಲ್ಕು ಜನ ಮಕ್ಕಳಲ್ಲಿ ಹಿರಿಯ ಮಗನಾಗಿ ಜನಿಸಿದರು. ಇವರ ತಂದೆ ವೃತ್ತಿಯಲ್ಲಿ ಲಾರಿ ಡ್ರೈವರ್ ಆಗಿದ್ದರು. ಇದರಿಂದ ಕಡುಬಡತನದ ಜೀವನ

ನಡೆಸುತ್ತಿದ್ದರು. ಪ್ರಾಥಮಿಕ ಶಿಕ್ಷಣವನ್ನು ಕೆ.ಟಿ.ಜೆ. ನಗರ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಪಡೆದರು. ಆಗ ಇವರ ತಂದೆಯ ಅಕಾಲಿಕ ಮರಣವಾಯಿತು. ಮನೆಯ ಹಿರಿಯ ಮಗ ಆಗಿದ್ದರಿಂದ ಕುಟುಂಬದ ಜವಬ್ದಾರಿ ಇವರ ಮೇಲೆ ಬಿದ್ದಿತು. ಇವರ ಕಷ್ಟವನ್ನು ನೋಡದೆ ಇವರ ಅಜ್ಜಿಯು ಪಾಲನೆ ಪೋಷಣೆ ಮಾಡಿದರು. ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಜೀವನ ನಿರ್ವಹಣೆಗೆ ಪಶುಸಂಗೋಪನೆ ಮಾಡಿಕೊಂಡು ಮನೆ ಮನೆಗೂ ಹಾಲನ್ನು ಹಾಕಿ ಜೀವನವನ್ನು ನಡೆಸುತ್ತಿದ್ದರು. ತಮ್ಮ ಪ್ರೌಢ ಶಿಕ್ಷಣವನ್ನು ಸರ್ಕಾರಿ ಬಾಲಕರ ಪ್ರೌಢ ಶಾಲೆಯಲ್ಲಿ ಮುಗಿಸಿ, ಡಿ.ಆರ್.ಆರ್. ಕಾಲೇಜಿನಲ್ಲಿ ಡಿಪ್ಲೋಮಾ ಇನ್ ಎಲೆಕ್ಟ್ರೀಕ್ ಇಂಜಿನಿಯರಿಂಗ್ ಪದವಿ ಪಡೆಯುತ್ತಿರುವಾಗ, ಕುಟುಂಬದ ಪರಿಸ್ಥಿತಿ ತುಂಬ ಹದಗೆಟ್ಟಿದ್ದರಿಂದ ಶಿಕ್ಷಣವನ್ನು ಮೊಟಕುಗೊಳಿಸಿ ಕೆಲಸಕ್ಕೆ ಸೇರಲು ಮುಂದಾದರು. ಆದರೆ ಅವರಿಗೆ ಸೂಕ್ತವಾದ ಯಾವುದೇ ಕೆಲಸಗಳು ಸಿಗಲಿಲ್ಲ. ಹಾಗಾಗಿ ಸ್ವಯಂ ಉದ್ಯೋಗಿಯಾಗಬೇಕೆಂದು ಬೀಡ ಸ್ಟಾಲ್ ಹಾಕಿದರು. ಅದು ಯಶಸ್ಸು ಕಾಣದಿದ್ದಾಗ ಕಲ್ಲಿನ ವ್ಯಾಪಾರಿ ಕಮೀಷನ್ ಏಜೆಂಟ್ ಆಗಿ ಕಾರ್ಯನಿರ್ವಹಿಸಿದರು. ಇದರಿಂದ ಬಂದ ಲಾಭದಿಂದ ಒಂದು ಟ್ರಾಕ್ಟರ್‌ನ್ನು ಖರೀದಿಸಿ ೧.೧/೨ ಎಕರೆ ಗೋಮಾಳವನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಮಾಡಿಕೊಂಡು ತಮ್ಮನ್ನು ಕೃಷಿ ಕೆಲಸದಲ್ಲಿ ತೊಡಗಿಸಿಕೊಂಡರು.[೨೦] ಅ ಸಮಯದಲ್ಲಿ ಉಂಟಾದ ಸಮಸ್ಯೆಗಳಿಂದ ರೈತರ ಪರಿಸ್ಥಿತಿ ಅರಿವಿಗೆ ಬಂದಿತು. ೧೯೯೬ರಲ್ಲಿ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಿ ನೂರಾರು ರೈತರು ದೆಹಲಿ ಮುತ್ತಿಗೆ ಹೋದಾಗ, ಇವರು ಅದರಲ್ಲಿ ಭಾಗವಹಿಸುವುದರ ಮೂಲಕ ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆಗೆ ಪಾದಾರ್ಪಣೆ ಮಾಡಿದರು. ಅಂದಿನಿಂದ ಮಂಜುನಾಥ್‌ರವರ ಹೋರಾಟ ಆರಂಭವಾಯಿತು. ಇದಕ್ಕೆ ಪ್ರೇರಣೆಯಾದವರೆ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು. ಪ್ರೊ. ಎಂ.ಡಿ.ಎನ್.ರವರ ವಿಚಾರಗಳು, ಉದ್ದೇಶ, ಭಾಷಣಗಳಿಂದ ಪ್ರೇರಿತಗೊಂಡು ಈ ಸಂಘಟನೆಯಲ್ಲಿಯೇ ಮುಂದುವರೆಯಲು ತೀರ್ಮಾನಿಸಿದರು.

ಮೆಕ್ಕೆಜೋಳ ಖರೀದಿ ಕೇಂದ್ರವನ್ನು ಆರಂಭಿಸಬೇಕೆಂದು ಒತ್ತಾಯಿಸಿ ೧೯೯೮ರಲ್ಲಿ ನೂರಾರು ರೈತರನ್ನು ಒಟ್ಟುಗೂಡಿಸಿ ಕೊಗ್ಗನೂರಿನ ರಾಷ್ಟ್ರೀಯ ಹೆದ್ದಾರಿಯನ್ನು ತಡೆದು ಪ್ರತಿಭಟನೆ ಮಾಡಿ ಸೆರೆಮನೆ ವಾಸ ಅನುಭವಿಸಿದರು. ಇದರ ಪ್ರತಿಫಲವಾಗಿ ಸರ್ಕಾರ ಮೆಕ್ಕೆಜೋಳ ಖರೀದಿ ಕೇಂದ್ರ ಆರಂಭಿಸಿತು. ಇದು ಅವರ ಮೊದಲ ಯಶಸ್ಸು. ಈ ಯಶಸ್ಸಿನ ಸ್ಫೂರ್ತಿಯೇ ಮುಂದೆ ಹಲವಾರು ಸಮಸ್ಯೆಗಳನ್ನು ವಿರೋಧಿಸಿ ಪ್ರತಿಭಟನೆ ಮಾಡಲು ಪ್ರೇರಣೆಯಾಯಿತು.

ಪ್ರೊ. ಎಂ.ಡಿ.ಎನ್‌ರವರ ಮರಣದ ನಂತರ ನಾಯಕತ್ವಕ್ಕಾಗಿ ಹಾಗೂ ಸ್ವಹಿತಾಸಕ್ತಿ ಬೆಳೆಸಿಕೊಳ್ಳಲು ಕರ್ನಾಟಕ ರಾಜ್ಯ ರೈತ ಸಂಘಟನೆಯಲ್ಲಿ ಗುಂಪುಗಾರಿಕೆಯನ್ನು ಹುಟ್ಟುಹಾಕಿದರು. ಇದರಿಂದ ಬೇಸೆತ್ತ ಹುಚ್ಚವನಹಳ್ಳಿ ಮಂಜುನಾಥ್ ೨೦೧೦ರಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯಿಂದ ಹೊರಬಂದು, ಪ್ರೊ. ಎಂ.ಡಿ.ಎನ್‌ರವರ ಸಿದ್ದಾಂತ ವಿಚಾರಗಳನ್ನು

ಮುಂದಿಟ್ಟುಕೊಂಡು ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಹುಚ್ಚವನಹಳ್ಳಿ ಮಂಜುನಾಥ್ ಬಣ) ಎಂಬ ರಾಜ್ಯ ರೈತ ಸಂಘವನ್ನು ಸ್ಥಾಪಿಸಿ ರಾಜ್ಯಾಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಅರೆ ಬಯಲು ಸೀಮೆಯಾಗಿರುವ ದಾವಣಗೆರೆ ರೈತರು ಅನೇಕ ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಇದರಿಂದ ರಾಜ್ಯ ಸರ್ಕಾರ ರೈತರ ನೆರವಿಗೆ ದಾವಿಸದೇ ಕಿವುಡ, ಮೂಕ, ಜಾಣತನದ ನಟನೆಯನ್ನು ಮಾಡುತ್ತಿದೆ. ಒಂದು ಕಡೆ ರೈತರ ಬಲವಂತದ ಸಾಲ ವಸೂಲಾತಿ ಮಾಡಬೇಡಿ ಎಂದು ಹೇಳಿದ್ದಾರೆ. ಆದರೂ ಅಧಿಕಾರಿಗಳು ಕಾನೂನಾಗಿ ಜಾರಿಗೆ ತರದೆ, ಖಾಸಗಿ ಬ್ಯಾಂಕ್‌ಗಳು, ರಾಷ್ಟ್ರೀಕೃತ ಬ್ಯಾಂಕ್‌ಗಳು ಬಲವಂತದಿಂದ ಬೆಳೆ ಸಾಲ, ಟ್ರಾಕ್ಟರ್ ಸಾಲ ವಸೂಲತಿಗೆ ಮುಂದಾಗಿದ್ದಾರೆ. ಇದರಿಂದ ರೈತ ಆತ್ಮಹತ್ಯೆ ಹೆಚ್ಚಾಗುತ್ತಿವೆ. ಹಾಗಾಗಿ ರೈತರ ಸಾಲ ಮನ್ನಾ ಮಾಡಿ ಬಲವಂತದ ಸಾಲ ವಸೂಲಾತಿಯನ್ನು ನಿಲ್ಲಿಸಬೇಕೆಂದು ಇವರ ನಾಯಕತ್ವದಲ್ಲಿ ೨೦೧೦ರಿಂದ ಪ್ರಸ್ತುತದವರೆಗೆ ಹಲವಾರು ರೈತ ಪ್ರತಿಭಟನೆಗಳು ನಡೆಯುತ್ತಾ ಬಂದಿವೆ.

ಭಾಗ್ಯಜ್ಯೋತಿ, ಕುಟೀರ ಜ್ಯೋತಿ, ಉಚಿತ ವಿದ್ಯುತ್‌ಚ್ಛಕ್ತಿ ನೀಡಲು, ಭಾಗ್ಯ ಜ್ಯೋತಿ ವಿದ್ಯುತ್ ಕಡಿತಗೊಳಿಸಿರುವುದನ್ನು ವಿರೋಧಿಸಿ, ನಿರಂತರ ವಿದ್ಯುತ್‌ಗಾಗಿ, ಕೃಷಿ ಪಂಪ್‌ಸೆಟ್‌ಗಳ ಸುಟ್ಟ ವಿದ್ಯುತ್ ಪರಿಕರಗಳನ್ನು ಶೀಘ್ರ ಬದಲಾಯಿಸುವಂತೆ ಒತ್ತಾಯಿಸಿ, ಕೃಷಿ ಪಂಪ್‌ಸೆಟ್‌ಗಳಿಗೆ ಮೀಟರ್ ಅಳವಡಿಕೆಯನ್ನು ವಿರೋಧಿಸಿ ಇವರ ನಾಯಕತ್ವದಲ್ಲಿ ರೈತ ಪ್ರತಿಭಟನೆಗಳು ನಡೆದುಕೊಂಡು ಬರುತ್ತಿವೆ.

೧೯೯೨ ರಿಂದ ೧೯೯೮ರವರೆಗೆ ಅರ್ಜಿ ಸಲ್ಲಿಸಿದ ಬಗರ್ ಹುಕುಂ ಸಾಗುವಳಿದಾರರ ಅರ್ಜಿಗಳನ್ನು ವಿಲೇವಾರಿ ಮಾಡಿ ಹಕ್ಕುಪತ್ರಗಳನ್ನು ವಿತರಿಸಬೇಕು. ೧೯೯೨ರಿಂದ ೨೦೧೭ರವರೆಗೂ ಈ ಹಕ್ಕುಪತ್ರಗಳನ್ನು ವಿತರಿಸುವ ಕುರಿತು ಕಂದಾಯ ಸಚಿವರು ನಿರ್ಲಕ್ಷ್ಯ ಧೋರಣೆ ಅನುಸರಿಸುತ್ತಿದ್ದಾರೆ. ಯಾವುದೇ ಕ್ರಮಗಳನ್ನು ಕೈಗೊಂಡಿಲ್ಲ. ಹಕ್ಕು ಪತ್ರ ನೀಡಲು ವಿವಿಧ ಕಾರಣಗಳನ್ನು ನೀಡುತ್ತಿರುವುದು ಸರಿಯೆಲ್ಲವೆಂದು ಆಗ್ರಹಿಸಿ ಇವರ ನಾಯಕತ್ವದಲ್ಲಿ ೧೦೨ ದಿನಗಳ ಕಾಲ ದಾವಣಗೆರೆ ತಹಶೀಲ್ದಾರ್ ಕಚೇರಿಯ ಮುಂದೆ ಪ್ರತಿಭಟನೆ ಮಾಡಿ, ಬಗರ್ ಹುಕುಂ ಸಾಗುವಳಿದಾರರ ಸಮಸ್ಯೆಗಳಿಗೆ ಸ್ಪಂದಿಸಿದ್ದಾರೆ.

ಜಿಲ್ಲಾಯಾದ್ಯಂತ ಹಲವು ಬಾರಿ ಬರ ಅವರಿಸಿದ್ದು, ಜಿಲ್ಲೆಯ ಜಗಳೂರು, ದಾವಣಗೆರೆ, ಹರಪನಹಳ್ಳಿ ತಾಲೂಕುಗಳನ್ನು ಬರಗಾಲ ಪೀಡಿತ ಪ್ರದೇಶವೆಂದು ಘೋಷಿಸಬೇಕು. ಬೆಳೆನಷ್ಟ ಪರಿಹಾರ ನೀಡಬೇಕು. ಬಯಲು ಸೀಮೆಯ ಪ್ರಮುಖ ಬೆಳೆಯಾದ ಈರುಳ್ಳಿ ಬೆಳೆಗೆ, ಕ್ವಿಂಟಾಲ್‌ಗೆ ಹತ್ತು ಸಾವಿರ ರೂ ಬೆಂಬಲ ಬೆಲೆ ನಿಗದಿ ಪಡಿಸಬೇಕೆಂದು, ಬೈಕ್ ರ್‍ಯಾಲಿ ಹಾಗೂ ನಗರಾದಾದ್ಯಂತ ಜಾಥಾ ಮಾಡುವುದರ ಮೂಲಕ ಇವರ ನಾಯಕತ್ವದಲ್ಲಿ ಪ್ರತಿಭಟನೆಗಳು ನಡೆದಿವೆ.

ದಾವಣಗೆರೆ ಜಿಲ್ಲೆಯ ರೈತರ ಪ್ರಮುಖ ಬೆಳೆ ಮೆಕ್ಕೆಜೋಳ. ಈ ಬೆಳೆಯನ್ನು ಬೆಳೆದ ರೈತರು ಬೆಂಬಲ ಬೆಲೆ ಸಿಗದೆ ನಷ್ಟವನ್ನು ಅನುಭವಿಸುತ್ತಿದ್ದಾರೆ. ಈ ಸಮಯದಲ್ಲಿ ಹುಚ್ಚವನಹಳ್ಳಿ ಮಂಜುನಾಥ್‌ರವರು ಮೆಕ್ಕೆಜೋಳ ಬೆಳೆದ ರೈತರ ಸಮಸ್ಯೆಗಳಿಗೆ ಸ್ಪಂದಿಸಿ ಮೆಕ್ಕೆಜೋಳಕ್ಕೆ ೨೦೦೦/- ರೂಪಾಯಿ ಬೆಂಬಲ ಬೆಲೆ ನಿಗದಿ ಮಾಡಬೇಕು ಹಾಗೂ ಜಿಲ್ಲೆಯಾದ್ಯಂತ ಮೆಕ್ಕೆಜೋಳ ಖರೀದಿ ಕೇಂದ್ರವನ್ನು ಆರಂಭಿಸಬೇಕೆಂದು ಒತ್ತಾಯಿಸಿ ಪ್ರತಿ ವರ್ಷವು ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ಪ್ರತಿಭಟನೆ ಮಾಡುತ್ತಾ ಯಶಸ್ಸನ್ನು ಕಂಡಿದ್ದಾರೆ. ಹುಚ್ಚವನಹಳ್ಳಿ ಮಂಜುನಾಥ್‌ರವರು ರೈತರ ಸಮಸ್ಯೆಗಳಿಗೆ ಸ್ಪಂದಿಸಿ ರೈತ ಪ್ರತಿಭಟನೆಗಳನ್ನು ಮಾಡಿರುವ ವಿವರವನ್ನು ಅಧ್ಯಾಯ-೦೬ರಲ್ಲಿ ಚರ್ಚಿಸಲಾಗಿದೆ

ಇವರ ಪ್ರತಿಭಟನೆಗಳು ಕೇವಲ ರೈತರಿಗಷ್ಟೇ ಸೀಮಿತವಾಗದೆ ವಿದ್ಯಾರ್ಥಿಗಳಿಗೆ ಬಸ್ ಸೌಕರ್ಯ ಕಲ್ಪಿಸಲು, ಉಚಿತ ಪಾಸ್ ವಿತರಣೆ, ಸಾಮಾಜಿಕ ಸಮಾನತೆಗಾಗಿ, ಶೋಷಿತ ವರ್ಗಕ್ಕೆ ನ್ಯಾಯ ಒದಗಿಸುವುದು, ಮದ್ಯಪಾನ ನಿಷೇಧ, ಆನ್‌ಲೈನ್ ಲಾಟರಿ ವಿರೋಧಿಸಿ ಪ್ರತಿಭಟನೆಗಳನ್ನು ನಡೆಸುತ್ತಾ ಬಂದಿದ್ದಾರೆ. ಕಾರಣ ರೈತ ಸಂಘ ಮೇಲ್ವರ್ಗಗಳ ಸಂಘಟನೆ ಎಂಬ ಆರೋಪವಿದೆ. ಈ ಸಂಘಟನೆ ನಡೆಸುವ ಚಳವಳಿಗಳು ಕೇವಲ ಆರ್ಥಿಕ ಕ್ಷೇತ್ರಕ್ಕೆ ಸೀಮಿತವಾಗಿದೆ ಎಂಬ ಮಾತುಗಳು ಕೇಳಿಬರುತ್ತಿವೆ. ಹಾಗಾಗಿ ಈ ಚಳವಳಿಗಳನ್ನು ಸಾಮಾಜಿಕ ಚಳವಳಿಗಳಾಗಿ ಪರಿವರ್ತಿಸಿ, ಎಲ್ಲಾ ವರ್ಗದ ರೈತರ, ಜನರ, ವಿದ್ಯಾರ್ಥಿಗಳ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಪ್ರತಿಭಟನೆಗಳನ್ನು ನಡೆಸಿ ನ್ಯಾಯ ಒದಗಿಸುವ ಕೆಲಸ ಮಾಡುತ್ತಿದ್ದಾರೆ.

**ಹೆಚ್.ಎಂ. ಮಹೇಶ್ವರಸ್ವಾಮಿ**

ಬಯಲು ಸೀಮೆಯ ಅಗ್ರಗಣ್ಯ ನಾಯಕರು ಹುಟ್ಟು ಹೋರಾಟಗಾರ ಸರಳ ವ್ಯಕ್ತಿತ್ವ ಗಂಭೀರ ಸ್ವರೂಪದವರು. ಪ್ರತಿಭಟನೆಯ ಸಮಯದಲ್ಲಿ ಇವರ ಕ್ರಾಂತಿಕಾರಕ ಭಾಷಣ ಜನ ಸಾಮಾನ್ಯರನ್ನು ಮೂಕ ವಿಸ್ಮಿತರಾಗುವಂತೆ ಮಾಡುತ್ತದೆ. ಮಾತುಗಳು ನಿಕರ, ನೇರ, ನಿಷ್ಠುರವಾಗಿರುತ್ತದೆ. ಸಮಸ್ಯೆಗಳು ಹಾಗೂ ದುರಾಡಳಿತದ ವಿರುದ್ಧ ತೊಡೆತಟ್ಟಿ ನಿಂತು ನಿರರ್ಗಳವಾಗಿ ಚರ್ಚೆಗೆ ನಿಲ್ಲುತ್ತಾರೆ. ದರ್ಪಿಷ್ಠ ಅಧಿಕಾರಿಗಳು ಹಾಗೂ ರಾಜಕಾರಣಿಗಳಿಗೆ ಬಹಿರಂಗ ಸವಾಲು ಹಾಕುತ್ತಾರೆ. ಪ್ರತಿಭಟನೆಗೆ ಮುಂದಾದರೆ ಸಾವಿರಾರು ರೈತರನ್ನು ಸಂಘಟನೆ ಮಾಡುವ ಸಮರ್ಥ್ಯವಿದೆ. ಅಧಿಕಾರಿಗಳಿಗೆ ಸಿಂಹ ಸ್ವಪ್ನರಾಗಿದ್ದಾರೆ. ಹಾಗೂ ಯಾರೇ ಬರಲಿ ಅವರ ಜೊತೆ ರೈತರ ಸಮಸ್ಯೆಗಳ ಹಾಗೂ ಪ್ರತಿಭಟನೆಗಳ ಬಗ್ಗೆ ವಿಸ್ತುತ ಚರ್ಚೆ ನಡೆಸುವ ಸ್ವಭಾವದವರಾಗಿದ್ದಾರೆ.

ಹೆಚ್.ಎಂ. ಮಹೇಶ್ವರಸ್ವಾಮಿಯವರು ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, ನಿಟ್ಟೂರು ಬಸಾಪುರ ಗ್ರಾಮದಲ್ಲಿ ಜೂನ್ ೦೧ ೧೯೭೧ರಂದು ಜನಿಸಿದರು. ತಂದೆ ಹೆಚ್.ಎಂ. ಲೋಕಯ್ಯ, ತಾಯಿ ಮಲ್ಲಮ್ಮರವರ ೮ನೇ ಮಗನಾಗಿ ಕಡುಬಡತನದಲ್ಲಿ ಜೀವನ ನಡೆಸುತ್ತಿದ್ದರು. ಪ್ರಾಥಮಿಕ ಶಿಕ್ಷಣವನ್ನು ನಿಟ್ಟೂರು ಬಸಾಪುರದಲ್ಲಿ ಮಾಧ್ಯಮಿಕ ಶಿಕ್ಷಣವನ್ನು ತಾವರಗುಂದಿ

ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಪಡೆದರು. ನಂತರ ಪ್ರೌಢ ಶಿಕ್ಷಣವನ್ನು ಶ್ರೀ ಶಿವಾನಂದ ಪ್ರೌಢ ಶಾಲೆ ಶಿಕಾರಿಪುರ ತಾಲೂಕಿನಲ್ಲಿ ಪಡೆದರು. ಇವರು ವಿದ್ಯಾರ್ಥಿಯಾಗಿದ್ದಾಗ ಶಾಲೆ ಮತ್ತು ಹಾಸ್ಟೆಲ್‌ನಲ್ಲಿದ್ದ ಮೂಲಭೂತ ಸಮಸ್ಯೆಗಳ ವಿರುದ್ಧ ಪ್ರತಿಭಟನೆ ಮಾಡಿದ್ದರು. ಪರಿಣಾಮವಾಗಿ ಶಿಕ್ಷಣ ಅಪೂರ್ಣಗೊಂಡಿತು. ಈ ರೀತಿ ವಿದ್ಯಾರ್ಥಿಯಾಗಿದ್ದನಿಂದ ಸಮಸ್ಯೆಗಳ ವಿರುದ್ಧ ಹೋರಾಡುವ ಮನೋಭಾವನೆಯನ್ನು ಬೆಳೆಸಿಕೊಂಡು ಬಂದರು.

ಹುಟ್ಟೂರಿಗೆ ಮರಳಿದ ನಂತರ ವೃತ್ತಿಯಾಗಿ ವ್ಯವಸಾಯವನ್ನು ಅವಲಂಬಿಸಿದರು. ಇದರ ಜೊತೆ ಜೊತೆಗೆ ವ್ಯವಸಾಯದ ಸಮಸ್ಯೆಗಳನ್ನು ತಾವೇ ಪ್ರಯೋಗಿಕವಾಗಿ ಅನುಭವಿಸಿದರು. ಈ ಸಮಯದಲ್ಲಿ ಪ್ರೊ. ಎಂ.ಡಿ. ನಂಜುಂಡಸ್ವಾಮಿಯ ಪ್ರಭಾವಕ್ಕೆ ಒಳಗಾಗಿ ೧೯೯೦ರಲ್ಲಿ ಕರ್ನಾಟಕ ರಾಜ್ಯ ರೈತ ಸಂಘಕ್ಕೆ ಸೇರ್ಪಡೆಯಾದರು. ಇಲ್ಲಿಂದ ಇವರು ತಮ್ಮ ಜೀವನವನ್ನೇ ಹೋರಾಟಕ್ಕೆ ಮುಡುಪಾಗಿಟ್ಟಿದ್ದಾರೆ. ಫೆಬ್ರವರಿ ೧೦ ೧೯೯೦ರಂದು ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ ನಿಟ್ಟೂರು ಬಸಾಪುರ ಗ್ರಾಮ ಘಟಕದ ಕಾರ್ಯದರ್ಶಿಯಾಗಿ ರೈತರ ಸಮಸ್ಯೆಗಳಿಗೆ ಸ್ಪಂದಿಸಿದರು. ಏಪ್ರಿಲ್ ೧೫ ೧೯೯೧ ರಿಂದ ಫೆಬ್ರವರಿ ೧೯೯೨ರವರೆಗೆ ಕ.ರಾ.ರೈ.ಸ.ಹ.ಸೇ. ಹರಪನಹಳ್ಳಿ ತಾಲೂಕು ಸಂಘಟನಾ ಕಾರ್ಯದರ್ಶಿಯಾಗಿ ಪ್ರತಿಭಟನೆಗಳ ಮೂಲಕ ತಾಲೂಕಿನಾದ್ಯಂತ ರೈತರ ಜೊತೆ ಉತ್ತಮ ಒಡನಾಟವನ್ನು ಇಟ್ಟುಕೊಂಡರು. ಫೆಬ್ರವರಿ ೧೮ ೧೯೯೨ ರಿಂದ ಜೂನ್ ೧೫ ೧೯೯೭ರವರೆಗೆ ಕ.ರಾ.ರೈ.ಸ.ಹ.ಸೇ. ಹರಪನಹಳ್ಳಿ ತಾಲೂಕಿನ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಈ ಸಂದರ್ಭದಲ್ಲಿ ಬಸವಾಪುರ ಗ್ರಾಮ ನೆರೆ ಹಾವಳಿಗೆ ತುತ್ತಾಗಿತ್ತು. ಇಲ್ಲಿನ ರೈತರು ತಮ್ಮ ಮನೆ ಜಮೀನು ಬೆಳೆ ಹಾಗೂ ಮೂಲಭೂತ ಸೌಲಭ್ಯವನ್ನು ಕಳೆದುಕೊಂಡಿದ್ದರು. ಆಗ ಹೆಚ್.ಎಂ. ಮಹೇಶ್ವರಸ್ವಾಮಿಯವರು ಬಂಗಾರಪ್ಪರವರು ಮುಖ್ಯಮಂತ್ರಿಯಾಗಿದ್ದಾಗ ನೆರೆ ಹಾವಳಿಯಿಂದ ಉಂಟಾದ ರೈತರ ಸಮಸ್ಯೆಯನ್ನು ಸರ್ಕಾರದ ಮುಂದಿಟ್ಟರು. ಸರ್ಕಾರ ಸ್ಪಂದಿಸಿ ಮನೆಗಳನ್ನು ಕಳೆದುಕೊಂಡ ರೈತರಿಗೆ ತಲಾ ಒಬ್ಬೊಬ್ಬ ರೈತರಿಗೆ ೫೦೦೦ ರೂಪಾಯಿಗಳ ಚೆಕ್‌ನ್ನು ೨೪ ಕ್ವಿಂಟಾಲ್ ಹಕ್ಕಿ ಮತ್ತು ಬಟ್ಟೆಗಳನ್ನು ವಿತರಿಸಿತು.[೨೧]

ಜೂನ್ ೧೬ ೧೯೯೭ ರಿಂದ ಆಗಸ್ಟ್ ೧೮ ೨೦೦೩ ರವರೆಗೆ ರೈತ ಸಂಘದ ಹರಪನಹಳ್ಳಿ ತಾಲೂಕಿನ ಅಧ್ಯಕ್ಷರಾಗಿ ರೈತರ ಸಮಸ್ಯೆಗಳಿಗೆ ಸ್ಪಂದಿಸಿ ಪ್ರತಿಭಟನೆಗಳ ಮೂಲಕ ಪರಿಹಾರ ದೊರಕಿಸಿಕೊಟ್ಟಿದ್ದಾರೆ. ಇದಕ್ಕೆ ನಿದರ್ಶನವೆಂಬಂತೆ ೧೯೯೬–೯೭ರಲ್ಲಿ ಹರಪನಹಳ್ಳಿಯಲ್ಲಿ ಬೀಕರ ಬರಗಾಲ ಆವರಿಸಿತ್ತು. ಇದರಿಂದ ರೈತರು ದಿನನಿತ್ಯದ ಜೀವನವನ್ನು ನಡೆಸುವುದು ದುಸ್ತರವಾಗಿತ್ತು. ಅಗ ರೈತರ ಸಮಸ್ಯೆಗೆ ಸ್ಪಂದಿಸಿವುದರ ಮೂಲಕ ೧೯೯೭ರಲ್ಲಿ ಜಿಲ್ಲೆಯಾದ್ಯಂತ ಸುಮಾರು ೩೦೦೦ಕ್ಕೂ ಹೆಚ್ಚು ರೈತರು ಹಾಗೂ ರೈತ ಮಹಿಳೆಯರನ್ನು ಒಗ್ಗೂಡಿಸಿ ದಾವಣಗೆರೆಯಲ್ಲಿ ಬೃಹತ್ ಪ್ರತಿಭಟನೆ ಮಾಡಿದರು.[೨೨] ಹರಪನಹಳ್ಳಿ ಬೀಕರ ಬರಗಾಲಕ್ಕೆ ತುತ್ತಾಗಿದ್ದು ರೈತರಿಗೆ ಸರ್ಕಾರದಿಂದ ಪ್ರತಿ ನಿತ್ಯ ಕೂಲಿಯ ಕೆಲಸವನ್ನು ನೀಡುವುದರ ಮೂಲಕ

ದಿನನಿತ್ಯದ ಜೀವನ ನಿರ್ವಹಣೆಗೆ ಮುಂದಾಗಿ ಕೂಲಿಗಾಗಿ ಕಾಳು ಜಾರಿಗೆ ತರಬೇಕೆಂದು ಜಿಲ್ಲಾಧಿಕಾರಿಗಳಿಗೆ ಮನವಿ ನೀಡಿ ಪ್ರತಿಭಟಿಸಿದರು. ಇದರ ಫಲವಾಗಿ ೧೯೯೭ರಂದು ಕರ್ನಾಟಕದಾದ್ಯಂತ ಕೂಲಿಗಾಗಿ ಕಾಳು ಯೋಜನೆ ಜಾರಿಗೆ ಬಂದಿತು. ಇದು ಹೆಚ್.ಎಂ. ಮಹೇಶ್ವರಸ್ವಾಮಿಯವರ ಹೋರಾಟದ ಪ್ರಮುಖ ಫಲ ಇದರಿಂದಾಗಿ ಹರಪನಹಳ್ಳಿಯಲ್ಲಿ ಒಂದು ದಿನಕ್ಕೆ ೨೦೦೦೦ ರೈತರಿಗೆ ಉದ್ಯೋಗ ದೊರೆಯಿತು. ಈ ರೀತಿಯ ಪ್ರತಿಭಟನೆಗಳಿಗೆ ಮೂಲ ಪ್ರೇರಣೆ ಪ್ರೊ. ಎಂ.ಡಿ. ಎನ್‌ರವರ ಜೊತೆ ಹೊಂದಿದ್ದ ಅವಿನಾಭವ ಸಂಬಂಧ.

೨೦೦೩-೦೪ರಲ್ಲಿ ಬಡ ರೈತರಿಗೆ ನೀಡುವ ನ್ಯಾಯ ಬೆಲೆ ಅಂಗಡಿಯ ಹಕ್ಕಿಯನ್ನು ಕದ್ದು, ಪೆಡಂಬೂರ್ ಬಂದರಿನ ಮೂಲಕ (ಸುಮಾರು ೪೬೦೦೦ ಮೆಟ್ರಿಕ್ ಟನ್) ದಕ್ಷಿಣ ಆಫ್ರಿಕಾಕ್ಕೆ ಕಳುಹಿಸಲು ಮುಂದಾದಾಗ ಇವರ ನಾಯಕತ್ವದಲ್ಲಿ ನೂರಾರು ರೈತರು ಮುತ್ತಿಗೆ ಹಾಕಿ ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದರು.

ಜೂನ್ ೨೦೦೫ ರಿಂದ ಜೂನ್ ೧೦ ೨೦೧೧ರವರೆಗೆ ಕ.ರಾ.ರೈ.ಸ.ಹ.ಸೇನೆಯ ರಾಜ್ಯ ಪ್ರಧಾನ ಕಾರ್ಯದರ್ಶಿಯಾಗಿ ರಾಜ್ಯಾದ್ಯಾಂತ ರೈಲ್ವೆ ತಡೆ ಚಳವಳಿ, ಮೀಟರ್ ಬಾಡಿಗೆ ವಿರೋದಿಸಿ, ಕರನಿರಾಕರಣೆ ಚಳುವಳಿ. ಸಮರ್ಪಕ ವಿದ್ಯುತ್ ಕಲ್ಪಿಸುವಂತೆ ಒತ್ತಾಯ ಹಲವಾರು ಪ್ರತಿಭಟನೆಗಳನ್ನು ಮಾಡಿ ರಾಜ್ಯಾದಾದ್ಯಂತ ಪ್ರಮುಖ ನಾಯಕರಾಗಿ ಹೊರಹೊಮ್ಮಿದರು. ಪ್ರೊ. ಎಂ.ಡಿ. ಎನ್.ರವರ ಮರಣದ ನಂತರ ರೈತ ಸಂಘದ ನಾಯಕತ್ವಕ್ಕಾಗಿ ಉಂಟಾದ ಅಂತರಿಕ ಕಲಹಗಳಿಂದ ಬೇಸತ್ತು. ರೈತ ಸಂಘದಿಂದ ಹೊರ ಬಂದರು. ಆದರೆ ಪ್ರೊ. ಎಂ.ಡಿ. ಎನ್‌ರವರ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದರು. ಅದರ ಫಲವಾಗಿಯೇ ಹೊಸ ರೈತ ಸಂಘ ಉದಯವಾಯಿತು.

ದಿನಾಂಕ ೨೫/೦೬/೨೦೧೧ರಂದು ಕರ್ನಾಟಕ ರಾಜ್ಯ ರೈತ ಮತ್ತು ಸ್ವ-ಸಹಾಯ ಸ್ತ್ರೀ ಶಕ್ತಿ ಸಂಘವನ್ನು ಸ್ಥಾಪಿಸಿ ರಾಜ್ಯಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಾ ಸಾಮಾಜಿಕ ವ್ಯವಸ್ಥೆಯಲ್ಲಿರುವ ಎಲ್ಲಾ ಸಮಸ್ಯೆಗಳನ್ನು ತೊಡೆದು ಹಾಕಲು ತಮ್ಮನ್ನು ತಾವು ಹಲವಾರು ಪ್ರತಿಭಟನೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ರಾಜ್ಯಾಧ್ಯಕ್ಷರಾಗಿ ಪ್ರತಿಭಟನೆಗಳನ್ನು ಮಾಡಿರುವ ವಿವರವನ್ನು ಅಧ್ಯಾಯ ೬ರಲ್ಲಿ ಚರ್ಚಿಸಲಾಗಿದೆ.

ಹೀಗೆ ರೈತರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ರೈತರ ಬದುಕಿಗೆ ನೆಮ್ಮದಿಯನ್ನು ಶಾಶ್ವತ ಪರಿಹಾರವನ್ನು ಕಂಡುಕೊಳ್ಳುವಲ್ಲಿ ತಮ್ಮದೇ ಸಿದ್ಧಾಂತ ಹಾಗೂ ದೂರದೃಷ್ಟಿಯನ್ನು ಇಟ್ಟುಕೊಂಡಿದ್ದಾರೆ. ಇವರ ಸಂಘಟನೆಯನ್ನು ತಮ್ಮ ಲಾಭ ಮತ್ತು ಸ್ವಾರ್ಥಕ್ಕಾಗಿ ಬಳಸಿಕೊಂಡವರಲ್ಲ. ಹತ್ತಾರು ಬಾರಿ ತಮ್ಮ ಬದುಕಿಗೆ ಕುಟುಂಬಕ್ಕೆ ಕಂಟಕ ತಂದುಕೊಂಡು ಅನೇಕ ಉದಾಹರಣೆಗಳಿವೆ. ಇವುಗಳನ್ನು ಸಂದರ್ಶನ ಸಂದರ್ಭದಲ್ಲಿ ಕಂಡುಕೊಂಡಿರುತ್ತೇನೆ. ಇವರು ಹೋರಾಟದ ಜೊತೆ ಜೊತೆ ಪುಸ್ತಕ ಪ್ರೇಮಿ ಬರಹಗಾರರಾಗಿದ್ದಾರೆ.

**ಟಿ. ನುಲೇನೂರು ಶಂಕ್ರಪ್ಪ**

ಚಿತ್ರದುರ್ಗ ಜಿಲ್ಲೆಯ ಪ್ರಮುಖ ರೈತ ನಾಯಕರಾಗಿದ್ದಾರೆ. ಇವರು ಆಗಸ್ಟ್ ೨೦ ೧೯೫೪ರಂದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ಟಿ. ನುಲೇನೂರಿನಲ್ಲಿ ಮಹೇಶ್ವರಪ್ಪ ಮತ್ತು ಸುಭದ್ರಮ್ಮರವರ ಮೊದಲನೆಯ ಮಗನಾಗಿ ಜನಿಸಿದರು. ಮಧ್ಯಮ ವರ್ಗದವರಾಗಿದ್ದು, ತಂದೆಯವರ ಪ್ರೋತ್ಸಹದ ಫಲವಾಗಿ ಉತ್ತಮ ಶಿಕ್ಷಣ ಪಡೆದುಕೊಂಡರು. ತಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಹುಟ್ಟೂರಿನಲ್ಲಿಯೇ ಮುಗಿಸಿದರು. ಪಿ.ಯು.ಸಿ ಮತ್ತು ಬಿ.ಎಸ್ಸಿ. ಪದವಿಯನ್ನು ಚಿತ್ರದುರ್ಗದ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಪಡೆದುಕೊಂಡರು. ಪದವಿ ಪಡೆದರೂ ಯಾವುದೇ ಸರ್ಕಾರಿ ಹಾಗೂ ಖಾಸಗಿ ಕೆಲಸಕ್ಕೆ ಹೋಗದೆ. ಕೃಷಿಯನ್ನು ಅವಲಂಬಿಸಿದರು ಹಾಗಾಗಿ ಸ್ವತಃ ಕೃಷಿ ಸಮಸ್ಯೆಗಳು ಅರಿವಿಗೆ ಬಂದವು. ಈ ಸಮಯದಲ್ಲಿ ರೈತ ಮುಖಂಡರಾದ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರ ರೈತ ಪರ ಹೋರಟಗಳು, ಅವರ ಆದರ್ಶ, ಚಿಂತನೆಗಳು ಇವರನ್ನು ರೈತ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಿದವು. ಅಂದಿನಿಂದ ಟಿ. ನುಲೇನೂರು ಶಂಕ್ರಪ್ಪರವರು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.[೨೩]

ರೈತ ನಾಯಕರಾಗಿ ರೈತರ ಎಲ್ಲಾ ಸಮಸ್ಯೆಗಳಿಗೂ ಸ್ಪಂದಿಸುತ್ತಾ ಪ್ರತಿಭಟನೆಯನ್ನೇ ತಮ್ಮ ಧ್ಯೇಯವನ್ನಾಗಿಸಿಕೊಂಡಿದ್ದಾರೆ. ಚಿತ್ರದುರ್ಗ ಜಿಲ್ಲೆಯನ್ನು ಶಾಶ್ವತ ಬರಗಾಲ ಪೀಡಿತ ಪ್ರದೇಶವೆಂದು ಘೋಷಿಸಬೇಕು. ಮಾರುಕಟ್ಟೆಗಳಲ್ಲಿ ಮೆಕ್ಕೆಜೋಳ ಖರೀದಿ ಕೇಂದ್ರವನ್ನು ಆರಂಭಿಸಬೇಕು. ರೈತರ ಸಾಲವನ್ನು ಸಂಪೂರ್ಣವಾಗಿ ಮನ್ನಾ ಮಾಡಬೇಕು. ಜಾನುವಾರುಗಳಿಗೆ ಮೇವನ್ನು ಒದಗಿಸಲು ಗೋಶಾಲೆಯನ್ನು ತೆರೆಯಬೇಕು. ಬೆಳೆನಷ್ಟವಾದಾಗ ಆಯಾ ಬೆಳೆಗೆ ತಕ್ಕಂತೆ ಎಕರೆವಾರು ಕನಿಷ್ಟ ೧೦,೦೦೦/-ರೂ ವಿತರಿಸಿಬೇಕು. ವೇದಾವತಿಯಲ್ಲಿ ನಡೆಯುವ ಅಕ್ರಮ ಮರಳು ಗಣಿಗಾರಿಕೆ ನಿಲ್ಲಿಸಬೇಕು. ಮುಂತಾದ ಬೇಡಿಕೆಗಳಿಗೆ ಒತ್ತಾಯಿಸಿ ಜಿಲ್ಲೆಯಾದ್ಯಂತ ರೈತರನ್ನು ಸಂಘಟಿಸುವ ಮೂಲಕ ಪ್ರತಿಭಟನೆಗಳನ್ನು ಮಾಡುತ್ತಾ ಬಂದಿದ್ದಾರೆ. (ಟಿ. ನುಲೇನೂರು ಶಂಕ್ರಪ್ಪರವರು ರೈತರ ಸಮಸ್ಯೆಗಳಿಗೆ ಸ್ಪಂದಿಸಿ ಮಾಡಿರುವ ರೈತ ಪ್ರತಿಭಟನೆಗಳ ವಿವರವನ್ನು ಅಧ್ಯಾಯ-೦೬ರಲ್ಲಿ ಚರ್ಚಿಸಲಾಗಿದೆ.)

ರೈತ ನಾಯಕರು ಮತ್ತು ಮುಖಂಡರುಗಳು ಪ್ರತಿಭಟನೆಗಳಿಗೆ ರೈತರನ್ನು ಸಂಘಟಿಸುವ ಮೂಲಕ ಹಾಗೂ ತಮ್ಮನ್ನು ತಾವು ತೊಡಗಿಸಿಕೊಳ್ಳುವಂತೆ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತ ರೈತ ಪ್ರತಿಭಟನೆಗಳನ್ನು ಸಾಮಾಜಿಕ ಪ್ರತಿಭಟನೆಗಳಾಗಿ ಮಾರ್ಪಡಿಸಿ ಯಶಸ್ಸನ್ನು ಕಂಡು, ಮುಂದಿನ ಯುವ ಪೀಳಿಗೆಗೆ ಆದರ್ಶವಾಗಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ಸಂದರ್ಶನ ಮಾಹಿತಿ, ಎಮ್.ಎಸ್.ಕೆ. ಶಾಸ್ತ್ರೀ, ರಾಜ್ಯಾಧ್ಯಕ್ಷರು, ಕರ್ನಾಟಕ ಪ್ರದೇಶ ರೈತ ಸಂಘ, ದಾವಣಗೆರೆ.ದಿ.೧೦.೦೫.೨೦೧೮
೨. ಕರ್ನಾಟಕ ಪ್ರದೇಶ ರೈತ ಸಂಘದ ನೋಂದಣಿ ಪತ್ರ, ದಾವಣಗೆರೆ.
೩. ಜನತಾವಾಣಿ ದಿನ ಪತ್ರಿಕೆ, ೨೬ ಮಾರ್ಚ್ ೧೯೮೩
೪. ಜನತಾವಾಣಿ ದಿನ ಪತ್ರಿಕೆ, ೨೯ ಅಕ್ಟೋಬರ್ ೧೯೯೩
೫. ಛಾಯಾಚಿತ್ರ, ಜನವರಿ ೨೭ ೨೦೦೧
೬. ಕರ್ನಾಟಕ ಪ್ರದೇಶ ರೈತ ಸಂಘದ ಕರಾ ಪತ್ರಗಳು ೦೨ ಜುಲೈ ೨೦೦೯
೭. ಸಂದರ್ಶನ ಮಾಹಿತಿ, ಎಮ್.ಎಸ್.ಕೆ. ಶಾಸ್ತ್ರೀ, ರಾಜ್ಯಾಧ್ಯಕ್ಷರು, ಕರ್ನಾಟಕ ಪ್ರದೇಶ ರೈತ ಸಂಘ, ದಾವಣಗೆರೆ, ದಿ.೧೦.೦೫.೨೦೧೮
೮. ೧೯೮೮, ೧೯೯೮ ಹಾಗೂ ೧೯೯೯ರ ಪ್ರಶಂಸಾ ಪತ್ರಗಳು
೯. ಶ್ರೀ ಜೆ.ಹೆಚ್. ಪಾಟೇಲ್ ಸ್ಮಾರಕ ಪ್ರಶಸ್ತಿ ಪತ್ರ, ಆಗಸ್ಟ್ ೧೫ ೧೯೯೭
೧೦. ೨೦೦೫ನೇ ಸಾಲಿನ ಶ್ರೇಷ್ಠ ವ್ಯಕ್ತಿ, ಪ್ರಶಸ್ತಿ ಪತ್ರ ಅಕ್ಟೋಬರ್ ೨೦ ೨೦೦೫
೧೧. ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪತ್ರ, ನವಂಬರ್ ೦೧ ೨೦೧೪
೧೨. ಸಂದರ್ಶನ ಮಾಹಿತಿ, ಕೆ.ಪಿ. ಭೂತಯ್ಯ, ರಾಜ್ಯಾ ಹಿರಿಯ ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ರೈತ ಸಂಘ, ಚಿತ್ರದುರ್ಗ. ದಿ.೨೮.೦೬.೨೦೧೮
೧೩. ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ, ದಾಖಲಾತಿ ಪುಸ್ತಕ
೧೪. ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಕರ ಪತ್ರ, ಜೂನ್ ೨೨ ೨೦೦೬
೧೫. ಕ.ರಾ.ರ.ಸಾ.ಸಂಸ್ಥೆ. ದಾವಣಗೆರೆ ವಿಭಾಗದ ಆದೇಶ ಪತ್ರ, ಜುಲೈ ೧೬ ೨೦೦೮
೧೬. ಜಿಲ್ಲಾಧಿಕಾರಿಗಳ ಕಚೇರಿಗೆ ನೀಡಿದ ಮನವಿ ಪತ್ರ, ಆಗಸ್ಟ್ ೦೪ ೨೦೦೮
೧೭. ಸರ್ಕಾರದಿಂದ ಮಂಜೂರಾತಿಗೆ ಅನುಮೋದನೆ ಪಡೆದ ಪತ್ರ: ಸಂಖ್ಯೆ: ಸಿಎಂ/೭೮೯/ವಿಕ/೨೦೧೨
೧೮. ಕರ್ನಾಟಕ ಸಾಂಸ್ಕೃತಿಕ ಅಕಾಡೆಮಿ(ರಿ), 'ಸಮಾಜ ಸೇವೆ ರತ್ನ' ರಾಜ್ಯ ಪ್ರಶಸ್ತಿ ಪತ್ರ
೧೯. ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪತ್ರ, ನವಂಬರ್ ೦೧ ೨೦೧೬
೨೦. ಸಂದರ್ಶನ ಮಾಹಿತಿ, ಹುಚ್ಚವನಹಳ್ಳಿ ಮಂಜುನಾಥ್, ರಾಜ್ಯಾಧ್ಯಕ್ಷರು, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ, ದಾವಣಗೆರೆ. ದಿ.೨೧.೦೭.೨೦೧೮
೨೧. ಸಂದರ್ಶನ ಮಾಹಿತಿ, ಹೆಚ್.ಎಂ. ಮಹೇಶ್ವರಸ್ವಾಮಿ, ರಾಜ್ಯಾಧ್ಯಕ್ಷರು,ಕರ್ನಾಟಕ ರಾಜ್ಯ ರೈತ ಮತ್ತು ಸ್ವ-ಸಹಾಯ ಸ್ತ್ರೀ ಶಕ್ತಿ ಸಂಘ,ದಿ.೦೮.೦೪.೨೦೧೮
೨೨. ವೀಡಿಯೋ ಚಿತ್ರ, ಜೂನ್ ೧೬ ೧೯೯೭
೨೩. ಸಂದರ್ಶನ ಮಾಹಿತಿ, ಟಿ. ನುಲೇನೂರು ಶಂಕ್ರಪ್ಪ, ಜಿಲ್ಲಾಧ್ಯಕ್ಷರು, ಕ.ರಾ,ರೈ.ಸ, ಚಿತ್ರದುರ್ಗ, ದಿ.೨೯.೦೬.೨೦೧೮

ಅಧ್ಯಾಯ – ೯

# ಸಮಕಾಲೀನ ಸಂದರ್ಭದಲ್ಲಿ ರೈತರ ಸಮಸ್ಯೆ ಮತ್ತು ಸವಾಲುಗಳು

ಭಾರತವು ಕೃಷಿಯಾಧಾರಿತ ದೇಶ. ರೈತನೇ ದೇಶದ ಬೆನ್ನೆಲುಬು. ಆ ಕಾರಣಕ್ಕೆ ಭೂಮಿ ನಮ್ಮ ತಾಯಿ ಎಂದೆಲ್ಲಾ ಭಾವುಕರಾಗಿ ಬೊಬ್ಬೆ ಹೊಡೆದು ಚಪ್ಪಾಳೆ ಗಿಟ್ಟಿಸುವ ಮಂದಿಯ ನಡುವೆಯೇ ರೈತನ ಸರಣಿ ಆತ್ಮಹತ್ಯೆ ನಡೆಯುತ್ತಿದೆ. ರೈತರ ಮೇಲೆ ಅಧಿಕಾರದ ದಾಳಿಯಾಗುತ್ತಿದೆ. ಭೂಮಿಯ ಒಡಲು ಬಗೆದವರು ದೊಡ್ಡವರಾಗುತ್ತಾರೆ. ಭೂಮಿಯನ್ನು ಇಂಚಿಂಚು ಅಳೆದು ಮಾರಾಟ ಮಾಡಿದವರು ಆದರ್ಶವಾಗುತ್ತಾರೆ. "ಜೈ ಜವಾನ್ ಜೈ ಕಿಸಾನ್" ಎಂದ ಈ ನಾಡಿನಲ್ಲಿ ಇಬ್ಬರು ನಿರ್ಲಕ್ಷಕ್ಕೆ ಒಳಗಾಗುವ ಸ್ಥಿತಿ ಬಂದೊದಗಿದೆ. 'ನೇಗಿಲು' ಎನ್ನುವುದು ಒಂದು ದುಡಿಮೆಯ ವಸ್ತು ಮಾತ್ರವಲ್ಲ. "ಬಾಳಿತು ನಮ್ಮೀ ನಾಗರೀಕತೆ ಸಿರಿ ಮಣ್ಣುಣಿ ನೇಗಿಲಿನಾಶ್ರಯದಿ" ಎನ್ನುವ ಮೂಲಕ, ಭಾರತದಂತಹ ಕೃಷಿಯಾಧರಿತ ದೇಶಕ್ಕೆ ಸಂಸ್ಕೃತಿ, ಪರಂಪರೆ, ನಾಗರೀಕತೆ, ರಾಜಕಾರಣ ಮುಂತಾದ ಎಲ್ಲಾ ಕ್ಷೇತ್ರಗಳ ಮೂಲಾಧಾರ ರೈತ ಮತ್ತು ನೇಗಿಲು. ಭೂಮಿಯೆನ್ನುವುದು ಅಸ್ತಿತ್ವದ ಅರ್ಥ. ಅದಿಲ್ಲವಾದರೆ ಅದರಾಚೆಗೆ ಬೇರಾವುದೇ ಸತ್ಯವೂ ಇಲ್ಲ. ಭೂಮಿ ಜೀವಕ್ಕಾಧಾರ, ಜೀವನಕ್ಕಾಧಾರ, ಹೊಟ್ಟೆ–ಬಟ್ಟೆಗಾಧಾರ, ಹಾಗಾಗಿ ಅದನ್ನು ಉಳುವಾತನೇ, ಈ ನೆಲದ ಉಳಿದೆಲ್ಲ ನಂಬಿಕೆ ಮತ್ತು ಬದುಕಿನ ಬಗೆಗೆ ವಾರಸುದಾರ. ಪ್ರಪಂಚದಲ್ಲಿ ಪ್ರತಿಯೊಬ್ಬರು ಆಸೆ, ಕೀರ್ತಿ, ಹೆಸರು ಎಂದೆಲ್ಲಾ ವಿಚಿತ್ರವಾದ ನಶ್ವರಗಳ ಬೆನ್ನು ಬೀಳುವ ಹೊತ್ತಿನಲ್ಲಿ, ತನ್ನ ಪಾಡಿಗೆ ತಾನು ಬದುಕುತ್ತಲೇ, ಇತರರ ಬದುಕಿನ ಹಸಿವಿಗೆ ಉತ್ತರವಾಗುವ ರೈತ, ಉರಿದು ಬೆಳಕು ನೀಡುವ ದೀಪವಲ್ಲದೆ ಬೇರೇನು? ಇಂತಹ ಬೆಳಕಿಗೆ ಯಾವ ಬಗೆಯ ಆಧಾರ–ಆಶ್ರಯ. ನಿರಾಳತೆ ನೀಡುವುದು ನಮ್ಮಿಂದ ಆಗಿದೆಯೇ? ಎನ್ನುವುದನ್ನು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

ರೈತನ ಮೂಲ ಉದ್ಯೋಗವೇ ಕೃಷಿ. ರೈತ ಭೂಮಿಯನ್ನು ಉತ್ತಿ, ಬಿತ್ತಿ, ಬೆಳೆ ತೆಗೆಯಲು, ಹಲವಾರು ಸಮಸ್ಯೆಗಳನ್ನು ಅನುಭವಿಸುತ್ತಿದ್ದಾನೆ. ಅವುಗಳಲ್ಲಿ ಕೃಷಿ ಕಾರ್ಮಿಕರ ಸಮಸ್ಯೆಯು ಒಂದಾಗಿದೆ. ಕೃಷಿಯಲ್ಲಿ ನಿರತನಾಗಿರುವಾಗ ರೈತನಿಗೆ, ಭೂಮಿಯಲ್ಲಿ ಬೀಜ ಬಿತ್ತನೆಯಿಂದ ಹಿಡಿದು ಬೆಳೆ ಕಟಾವು ಮಾಡುವವರೆಗೂ ಎಲ್ಲಾ ಕೆಲಸಗಳಿಗು ಕೃಷಿ ಕಾರ್ಮಿಕರು ಅತ್ಯಂತ ಅವಶ್ಯಕ. ಇಂತಹ ಸಂದರ್ಭದಲ್ಲಿ ಕೃಷಿ ಕಾರ್ಮಿಕರ ಸಮಸ್ಯೆ ತಲೆದೋರುತ್ತಿದೆ. ಇದಕ್ಕೆ ಕಾರಣವೇನು?, ಎಂದು ಅಲೋಚಿಸಿದಾಗ, ನಗರೀಕರಣ ಮತ್ತು ಕೈಗಾರೀಕರಣ ನಮ್ಮ ಕಣ್ಮುಂದೆ ಬರುತ್ತದೆ. ಹಳ್ಳಿಯ ಕೃಷಿ ಕಾರ್ಮಿಕರು ಹಣಕ್ಕಾಗಿ ಕೃಷಿ ಕೆಲಸಗಳನ್ನು ಬಿಟ್ಟು, ಶ್ರಮ ಪಡದೆ ಹೆಚ್ಚು ಹಣ ಸಿಗುವ ಕೆಲಸಗಳನ್ನು ಹುಡುಕಿ ನಗರದ ಕಡೆ ಮುಖ ಮಾಡಿದ್ದಾನೆ. ಇದರಿಂದಾಗಿ ಹಳ್ಳಿಯಲ್ಲಿ ಕೃಷಿ ಕಾರ್ಮಿಕರ ಸಮಸ್ಯೆ ಉಂಟಾಗುತ್ತಿದೆ. ರೈತ ಈ ಸಮಸ್ಯೆಗಳಿಂದ ಹೊರಬರಬೇಕಾದರೆ ಆಧುನಿಕ ಯಂತ್ರಗಳ ಬಳಕೆ ಮಾಡುವುದು ಅತ್ಯಂತ ಅವಶ್ಯಕ. ಇದರಿಂದಾಗಿ ಮಾನವಶಕ್ತಿ ಮತ್ತು ಹಣ ಅಪಾರವಾಗಿ ಉಳಿತಾಯವಾಗುವುದು. ಆದರೆ ಸಣ್ಣ ಹಿಡುವಳಿದಾರರು ಆಧುನಿಕ ಯಂತ್ರಗಳನ್ನು ಕೃಷಿಗೆ ಅಳವಡಿಸಿಕೊಳ್ಳುವಲ್ಲಿ ಆರ್ಥಿಕ ಅಂಶ ಸವಾಲಾಗಿ ಪರಿಣಮಿಸುತ್ತಿದೆ. ಇದನ್ನು ಸವಾಲಾಗಿ ಸ್ವೀಕರಿಸಿ ರೈತ ಸರ್ಕಾರದ ಯೋಜನೆಗಳನ್ನು ಹಾಗು ಬ್ಯಾಂಕ್‌ನಿಂದ ಕೃಷಿ ಸಾಲಗಳನ್ನು ಪಡೆದು ಆಧುನಿಕ ಯಂತ್ರಗಳನ್ನು ಖರೀದಿಸಬಹುದು. ಇದರಿಂದ ರೈತ ಕೃಷಿ ಕಾರ್ಮಿಕರ ಸಮಸ್ಯೆಯಿಂದ ಹೊರ ಬರಬಹುದು.[೧]

ಪ್ರಕೃತಿಯ ವಿಕೋಪಗಳು ರೈತನ ಆರ್ಥಿಕ ಸ್ಥಿತಿಯನ್ನು ಬುಡಮೇಲು ಮಾಡುತ್ತವೆ. ವರ್ಷದಿಂದ ವರ್ಷಕ್ಕೆ ಈ ಪ್ರಕೃತಿಯ ವಿಕೋಪಗಳು ಹೆಚ್ಚುತ್ತಿವೆ. ಅತಿವೃಷ್ಟಿ, ಅನಾವೃಷ್ಟಿ, ಭೂಕುಸಿತ ಮುಂತಾದುವುಗಳಿಂದ ರೈತ ತಾನು ಬೆಳೆದ ಬೆಳೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಿದ್ದಾನೆ. ಪ್ರಕೃತಿಯ ವಿಕೋಪಗಳು ಮಾನವನ ಹಿಡಿತದಲ್ಲಿಲ್ಲ. ಅವುಗಳನ್ನು ನಿಯಂತ್ರಸಲು ಸಾಧ್ಯವಿಲ್ಲ. ಈ ಹಿಂದೆ ಇಂತಹ ಪ್ರಕೃತಿಯ ವಿಕೋಪಗಳು ಸಂಭವಿಸುವುದು ಅಪರೂಪವಾಗಿತ್ತು. ಆದರೆ ಪ್ರಕೃತಿಯ ನಾಶದಿಂದಾಗಿ ಇವುಗಳು ನಡೆಯತ್ತಿವೆ. ಈ ಸಮಸ್ಯೆಯಿಂದ ರೈತನಿಗೆ ನಷ್ಟವಾಗಬಾರದೆಂದರೆ, ಬೆಳೆ ವಿಮೆ ಮಾತ್ರ ಸೂಕ್ತ ಮಾರ್ಗ. ಹಾಗಾಗಿ ಪ್ರತಿಯೊಬ್ಬ ರೈತರು ತಾವು ಬೆಳೆಯುವ ಪ್ರತಿಯೊಂದು ಬೆಳೆಗಳಿಗೆ ಬೆಳೆ ವಿಮೆ ಮಾಡಿಸುವುದು ಅತ್ಯಗತ್ಯ.[೨] ರೈತ ಪ್ರಕೃತಿಯ ವಿಕೋಪಗಳಿಂದ ಬೆಳೆ ನಷ್ಟ ಅನುಭವಿಸಿದರೆ, ತಾನು ಬೆಳೆದ ಬೆಳೆಗೆ ಸರ್ಕಾರದಿಂದ ಬೆಳೆ ಪರಿಹಾರ ಪಡೆಯಬಹುದು.

ರೈತ ತಾನು ಕಷ್ಟ ಪಟ್ಟು ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋದಾಗ, ತಾನೇ ಬೆಳೆದ ಬೆಳೆಗೆ ಬೆಲೆ ನಿಗದಿ ಪಡಿಸಲು ಸಾಧ್ಯವಿಲ್ಲ. ಕಾರಣ ಮಾರುಕಟ್ಟೆಗಳಲ್ಲಿರುವ ಮಧ್ಯವರ್ತಿಗಳು, ಇವರು ಕೃಷಿ ಲಾಭದಲ್ಲಿ ರೈತರಿಗಿಂತ ದುಪ್ಪಟ್ಟು ಪಾಲುದಾರರಾಗಿದ್ದಾರೆ. ರೈತ ಬೆಳೆದ ಬೆಳೆಗಳಿಗೆ ಬೇಕಾಬಿಟ್ಟಿಯಾಗಿ ಬೆಲೆ ನಿಗದಿ ಮಾಡಿ ರೈತರನ್ನು ಆರ್ಥಿಕ ಸಂಕಷ್ಟಕ್ಕೆ ಸಿಲುಕಿಸುತ್ತಿದ್ದಾರೆ. ಇನ್ನೊಂದು ಕಡೆ ಮಾರುಕಟ್ಟೆಗೆ ಸಾಗಿಸುವ ಸರಕು ಸಾಗಾಟ ವೆಚ್ಚ

ಅಧಿಕವಾಗುತ್ತಿದೆ. ವಾಹನದ ವೆಚ್ಚ ದುಬಾರಿಯಾಗುತ್ತಿವೆ. ರೈತ ಮಾರುಕಟ್ಟೆಗೆ ತಾವು ಬೆಳೆದ ಧಾನ್ಯಗಳನ್ನು ಮಾರಾಟ ಮಾಡಲು ಬಂದಾಗ, ಅಮಾಲರು ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಹೆಚ್ಚು ಕಾಳುಗಳನ್ನು ನೀಡಲಾಗುತ್ತಿದೆ ಹಾಗು ಅದರ ಜೊತೆಗೆ ಅಮಾಲಿ ವೆಚ್ಚವನ್ನು ಹಾಕಲಾಗುತ್ತದೆ. ಮಧ್ಯವರ್ತಿಗಳು ರೈತರ ಧಾನ್ಯಗಳನ್ನು ಮಾರಾಟ ಮಾಡಿದಕ್ಕಾಗಿ, ಒಟ್ಟು ಹಣದಲ್ಲಿ ನೂರು ರೂಪಾಯಿಗೆ ಮೂರು ರೂಪಾಯಿಯಂತೆ ವಸೂಲಿ ಮಾಡುತ್ತಾರೆ. ಇದರಿಂದ ರೈತ ಸಂಕಷ್ಟಕ್ಕೆ ಸಿಲುಕುತ್ತಿದ್ದಾನೆ.[೩] ಮಾರುಕಟ್ಟೆಯ ಈ ಎಲ್ಲಾ ಸಮಸ್ಯೆಗಳಿಂದ ರೈತ ಹೊರ ಬರಬೇಕಾದರೆ ಸರ್ಕಾರ ಆನ್‌ಲೈನ್ ಮಾರುಕಟ್ಟೆಯನ್ನು ಜಾರಿಗೆ ತಂದು, ಸಂಪೂರ್ಣ ಲಾಭ ರೈತರಿಗೆ ದೊರಕುವಂತೆ ಮಾಡಬೇಕು. ಇದರಿಂದ ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸಬಹುದು. ಆದರೆ ಆನ್‌ಲೈನ್ ಮಾರುಕಟ್ಟೆಯಲ್ಲಿ ಅನೇಕ ಸಮಸ್ಯೆಗಳಿದ್ದು ಸರ್ಕಾರ ಮುಂಜಾಗ್ರತ ಕ್ರಮ ಅನುಸರಿಸಿದರೆ ಸಂಪೂರ್ಣ ಲಾಭ ರೈತರಿಗೆ ದೊರೆಯುತ್ತದೆ.

ಬಯಲುಸೀಮೆಯ ಕೃಷಿಗೆ ನಿಜವಾಗಿಯೂ ಆಧ್ಯತೆ ನೀಡುವುದೇ ಆಗಿದ್ದರೆ, ಅದು ನೀರಾವರಿ ಸೌಲಭ್ಯವನ್ನು ಕಲ್ಪಿಸುವುದು. ಕೃಷಿಯೇತರ ಅಗತ್ಯಕ್ಕೆ ನೀರಿನ ಬಳಕೆ ತೀವ್ರವಾಗಿ ನಡೆಯುತ್ತಿದೆ. ಅಂತರ್ಜಲದ ವಿಪರೀತ ಬಳಕೆ, ಅಂತರ್ಜಲದ ಮರು ಪೂರಣದ ವಿಳಂಬ, ಇತ್ಯಾದಿಗಳಿಂದಾಗಿ ನಮ್ಮ ಕೃಷಿ ಬಳಕೆಗೆ ನೀರಿನ ಕೊರತೆ ಹೆಚ್ಚು ಹೆಚ್ಚು ಕಾಣಬಹುದು. ಬರುವ ಮುಂದಿನ ದಿನಗಳಲ್ಲಿ ಇದು ಮತ್ತಷ್ಟು ಹೆಚ್ಚಿ, ಗ್ರಾಮೀಣ ಬದುಕಿಗೆ ಹಾಗೂ ಕೃಷಿ ಕಸುಬಿಗೆ ತೀರ ಮಾರಕವಾಗಬಹುದು. ಆದರೆ ಮುಂದಿನ ದಿನಗಳಲ್ಲಿ ಸೂಕ್ತ ಜಲ ನೀತಿಯನ್ನು ರೂಪಿಸಿದರೆ, ನೀರಿನ ಕೊರತೆಯ ಸಮಸ್ಯೆಗಳನ್ನು ಹಾಗೂ ಪರಿಣಾಮಗಳನ್ನು ತಡೆಗಟ್ಟಬಹುದು. ನಮ್ಮ ಸರ್ಕಾರಗಳು ನೀರಾವರಿಗಾಗಿ ಪಂಚವಾರ್ಷಿಕ ಯೋಜನೆಗಳ ಮೂಲಕ ದೊಡ್ಡ ದೊಡ್ಡ ಅಣೆಕಟ್ಟುಗಳನ್ನು ನಿರ್ಮಿಸಲು ಮುಂದಾದರು. ಕಾರಣ ಈ ಯೋಜನೆಗಳು ತಂದು ಕೊಡುವ ಲಾಭದ ಪ್ರಮಾಣದ ಮುಂದೆ ಸಣ್ಣಪುಟ್ಟ ಯೋಜನೆಗಳಾದ ಚೆಕ್‌ಡ್ಯಾಂ ನಿರ್ಮಾಣ, ಹನಿನೀರಾವರಿ, ಏತನೀರಾವರಿ, ಕೆರೆಗಳ ನಿರ್ಮಾಣ ಮುಂತಾದವು ನಿರುಪಯುಕ್ತವೆನಿಸಿದವು. ಇದರಿಂದಾಗಿ ಶೇ. ೬೦ಕ್ಕಿಂತ ಹೆಚ್ಚು ಕೃಷಿ ಭೂಮಿ ಮಳೆಯನ್ನೇ ಅವಲಂಬಿಸಿವೆ. ಕಳೆದ ೪೦-೫೦ ವರ್ಷಗಳಿಂದ ಮಳೆಯೆನ್ನುವುದು ಅದೃಷ್ಟದ ಆಟದಂತಾಗಿದೆ. ಬದಲಾಗುತ್ತಿರುವ ವಾತಾವರಣ, ಉಷ್ಣಾಂಶ ಹಾಗೂ ಪರಿಸರದಲ್ಲಾಗುತ್ತಿರುವ ಏರುಪೇರುಗಳು, ಮಳೆ ಬರುವ ಸಮಯ ಮತ್ತು ಪ್ರಮಾಣವನ್ನು ನಿಶ್ಚಿಯಿಸುವಂತಾಗಿದೆ. ಒಂದು ವರ್ಷ ಅತೀ ಹೆಚ್ಚು ಮಳೆಯಾಗಿ ಅತೀವೃಷ್ಠಿಯಾದರೆ ಮತ್ತೊಂದು ವರ್ಷ ಮಳೆಯಾಗದೆ ಬರಗಾಲ ಅವರಿಸಿ ತೀವ್ರವಾದ ಅನಾವೃಷ್ಠಿ ತಲೆದೋರುತ್ತದೆ. ಇದರಿಂದಾಗಿ ಮಳೆಯನ್ನೇ ಅವಲಂಬಿಸಿ ಕೃಷಿಯನ್ನು ಮಾಡುತ್ತಿರುವ ರೈತನಿಗೆ ಇದೊಂದು ಬಹುದೊಡ್ಡ ಸಮಸ್ಯೆಯಾಗಿದೆ. ಅದರಲ್ಲೂ ಕೃಷಿಯೇ ಬಹುಮುಖ್ಯವಾಗಿರುವ ಈ ಪ್ರದೇಶದಲ್ಲಿ ನೀರಾವರಿ ಸಮಸ್ಯೆಯು ತೀವ್ರವಾಗಿದೆ. ಇದರಿಂದ ನಿಗದಿತ ಸಮಯದಲ್ಲಿ ಬಿತ್ತನೆ ಮಾಡದೆ ಸರಿಯಾದ ಸಮಯದಲ್ಲಿ ಕಟಾವು ಮಡಲಾಗದೆ

ರೈತ ತೀವ್ರ ಸಂಕಷ್ಟಕ್ಕೀಡಾಗುತ್ತಿದ್ದಾನೆ. ನೂರಾರು ನೀರಾವರಿ ಯೋಜನೆಗಳನ್ನು ಪೂರೈಸಲು ಬಂಡವಾಳ ಬಹಳ ಬೇಕಾಗುತ್ತದೆ. ಅದರ ಕೊರತೆಯಿಂದಾಗಿ ಹಲವಾರು ಯೋಜನೆಗಳು ಜಾರಿಗೆ ಬಂದಿಲ್ಲ ಹಾಗೂ ಕೆಲವೊಂದು ಅಪೂರ್ಣಗೊಂಡಿವೆ.[೪]

ರೈತನು ಮಳೆಯ ವಿಚಾರದಲ್ಲಿ ತುಂಬಾ ಅಸಹಾಯಕನಾಗಿದ್ದಾನೆ. ಮಳೆಯ ನೀರನ್ನು ಸಂಗ್ರಹಿಸಿ ಬೇಕಾದಾಗ ಕೃಷಿ ಭೂಮಿಗೆ ಬಳಸಿಕೊಳ್ಳಬಹುದು. ಬಾರೀ ನೀರಾವರಿ ಯೋಜನೆಗಳಿಂದ ನೀರು ಕಾಲುವೆಗಳ ಮೂಲಕ ಕೊನೆಯವರೆಗೂ ತಲುಪದಿರುವದನ್ನು ಗಮನಿಸಬಹುದು. ಹಾಗಾಗಿ ಸಣ್ಣ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಉತ್ತಮ. ನದಿಗಳಿಗೆ ಸಣ್ಣಸಣ್ಣ ಚೆಕ್‌ಡ್ಯಾಂಗಳನ್ನು ಕಟ್ಟುವುದು, ಏತ ನೀರಾವರಿ, ಹನಿ ನೀರಾವರಿ, ಕೆರೆಗಳನ್ನು ಹೂಳು ತೆಗೆಯುವುದು. ಕೆರೆ ಅಚ್ಚುಕಟ್ಟು ಪ್ರದೇಶಗಳನ್ನು ಗುರುತಿಸಿ ಅವುಗಳನ್ನು ಒತ್ತುವರಿಯಾಗದಂತೆ ನೋಡಿಕೊಳ್ಳುವುದು. ಮಳೆ ನೀರನ್ನು ಸಂಗ್ರಹಿಸುವ ವೈಜ್ಞಾನಿಕ ವಿಧಾನಗಳ ಬಗ್ಗೆ ರೈತರಿಗೆ ಶಿಕ್ಷಣ ನೀಡಬೇಕಾಗಿದೆ. ನೀರಿನ ದಕ್ಷ ನಿರ್ವಹಣೆಯಿಂದ ಗೃಹ ಹಾಗೂ ಔದ್ಯೋಗಿಕ ಕ್ಷೇತ್ರದಲ್ಲಿನ ನೀರಿನ ಅಗತ್ಯವನ್ನು ಸುಧಾರಿಸಬಹುದು. ಕೃಷಿ ಕ್ಷೇತ್ರಕ್ಕೆ ಮೀಸಲಾದ ನೀರನ್ನು ಕೃಷಿಯೇತರ ಬಳಕೆಗೆ ಉಪಯೋಗಿಸುವಲ್ಲಿ ಒದಗುವ ಬಿಕ್ಕಟ್ಟನ್ನು ತೆಳುಗೊಳಿಸುವುದು, ಔದ್ಯೋಗಿಕ ಜಲ ಸಬ್ಸಿಡಿಗಳನ್ನು ನಿಲ್ಲಿಸಿ ರೈತರಿಗೆ ನೀರಿನ ಸಬ್ಸಿಡಿ ಕೊಡುವುದು, ಕೃಷಿ ಕ್ಷೇತ್ರದ ಜಲನೀತಿ, ಹೊಸ ಕೃಷಿ ತಂತ್ರಜ್ಞಾನದಿಂದ ನಿಗದಿತ ಜಲ ಪ್ರಮಾಣದಲ್ಲಿ ಧಾನ್ಯಗಳಿಗಿಂತ ಹೆಚ್ಚು ಮೌಲ್ಯ ತರುವ ಬೆಳೆಗಳನ್ನು ಬೆಳೆದು, ಸುಧಾರಿಸಿದ ತಂತ್ರಜ್ಞಾನ, ನೀರಿನ ಸಂಗ್ರಹಣೆಗೆ ಅನುಕೂಲವಾಗುವಂತೆ ರೂಪಿಸಬೇಕು.

ಬಯಲುಸೀಮೆಯ ರೈತರ ಪ್ರಮುಖ ಸಮಸ್ಯೆಯೆಂದರೆ ಉತ್ತಮ ಗುಣಮಟ್ಟದ ಬೀಜ ಮತ್ತು ಗೊಬ್ಬರಗಳು ನಿಗದಿತ ಸಮಯಕ್ಕೆ ಸರಿಯಾಗಿ ದೊರೆಯುತ್ತಿಲ್ಲ. ದೇಶದಲ್ಲಿ ಹಲವಾರು ಬೀಜ ಉತ್ಪಾದನೆಯನ್ನು ಮಾಡುವ ಕಂಪನಿಗಳಿದ್ದು, ಕಳಪೆ ಮಟ್ಟದಿಂದ ಕೂಡಿವೆ. ಬಯಲುಸೀಮೆಯ ರೈತರು ಇಂತಹ ಕಳಪೆ ಬೀಜಗಳಿಂದ ಪ್ರತಿ ವರ್ಷ ಸಾವಿರಾರು ಎಕರೆಯಲ್ಲಿ ಬೆಳೆ ನಷ್ಟವನ್ನು ಅನುಭವಿಸಿ ಸಾಲಗಾರರಾಗುತ್ತಿದ್ದಾರೆ.[೫] ಇಂತಹ ಕಂಪನಿಗಳ ವಿರುದ್ಧ ಸರ್ಕಾರವು ಯಾವುದೇ ರೀತಿಯ ಕ್ರಮಗಳನ್ನು ಹಾಗೂ ನಿಯಂತ್ರಣಗಳನ್ನು ಹಾಕುತ್ತಿಲ್ಲ. ಸರ್ಕಾರದ ಈ ನೀತಿಯನ್ನು ದುರುಪಯೋಗಪಡಿಸಿಕೊಂಡ ಅನುಭವವಿಲ್ಲದ ಹಲವಾರು ಕಂಪನಿಗಳು ಬಿತ್ತನೆ ಬೀಜಗಳನ್ನು ತಯಾರಿಸಿ ಭಾರಿ ಜಾಹಿರಾತುಗಳೊಂದಿಗೆ ಮಾರುಕಟ್ಟೆಗೆ ಬಿಡುತ್ತವೆ. ರೈತರು ಯಾವುದೇ ಮಾಹಿತಿ ಇಲ್ಲದೆ ಇಂತಹ ಬೀಜಗಳನ್ನು ಅಧಿಕ ಹಣವನ್ನು ನೀಡಿ ಖರೀದಿಸಿ ಬಿತ್ತನೆಮಾಡಿ ಅಧಿಕ ನಷ್ಟಕ್ಕೆ ಒಳಗಾಗುತ್ತಿದ್ದಾರೆ. ಇದೇ ರೀತಿಯಾಗಿ ಗೊಬ್ಬರದ ಗುಣಮಟ್ಟದಲ್ಲಿ ಕಡಿಮೆಯಾಗುತ್ತಿದ್ದು, ಅಲ್ಲದೆ ರೈತರು ಭೂಮಿಯನ್ನು ಉಳುಮೆ ಮಾಡಿ, ಮಧ್ಯವರ್ತಿಗಳು ಹಾಗೂ ಗೊಬ್ಬರ ವ್ಯಾಪರಿಗಳು ಬಿತ್ತನೆಗೆ ಸರಿಯಾದ ಸಮಯದಲ್ಲಿ ಬಿತ್ತನೆ ಬೀಜ ಮತ್ತು ಗೊಬ್ಬರದ ಅಭಾವವನ್ನು ಮಾರುಕಟ್ಟೆಯಲ್ಲಿ ಸೃಷ್ಟಿಸುತ್ತಾರೆ. ಇದರಿಂದ ಪ್ರತಿಯೊಬ್ಬ ರೈತರು

ದಿನಗಟ್ಟಲೆ ಗೊಬ್ಬರ ಮತ್ತು ಬಿತ್ತನೆ ಬೀಜಗಳಿಗೆ ಅಲೆಯುವ ಸ್ಥಿತಿ ಉಂಟಾಗಿದೆ. ಇಂತಹ ಸಂದರ್ಭದಲ್ಲಿ ಗೊಬ್ಬರ ವ್ಯಾಪಾರಿಗಳು ಒಂದಕ್ಕೆರಡು ಬೆಲೆ ಹೆಚ್ಚಿಸಿ ರೈತರನ್ನು ಶೋಷಣೆಗೆ, ಸಾಲದ ಸುಳಿಗೆ ಸಿಕ್ಕಿಸಿ ಅಧಿಕ ಲಾಭ ಪಡೆಯುತ್ತಿದ್ದಾರೆ. ಇದು ರೈತರಿಗಿರುವ ಬಹುದೊಡ್ಡ ಸಮಸ್ಯೆಯಾಗಿದೆ. ೧೯೯೨ರಂದು ದಾವಣಗೆರೆ ಜಿಲ್ಲೆಯಲ್ಲಿ ಗೊಬ್ಬರದ ಸಮಸ್ಯೆಯುಂಟಾಗಿ ಎರಡು ತಿಂಗಳುಗಳ ಕಾಲ ಪ್ರತಿಭಟನೆಯಾಗಿ ಇಬ್ಬರು ರೈತರು ಪೊಲೀಸರ ಗೋಲಿಬಾರ್‌ಗೆ ತುತ್ತಾಗಿ ಪ್ರಾಣ ಬಿಟ್ಟಿರುವ ಘಟನೆಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಕೇಂದ್ರ ಸರ್ಕಾರಗಳು ಮತ್ತು ರಾಜ್ಯ ಸರ್ಕಾರಗಳು ಕಳಪೆ ಗುಣಮಟ್ಟದ ಕಂಪನಿಗಳ ಮೇಲೆ ನಿಯಂತ್ರಣವಿಟ್ಟು ಅವುಗಳ ಮೇಲೆ ಕಠಿಣವಾದ ಕಾನೂನುಗಳನ್ನು ಜಾರಿಗೆ ತರಬೇಕು. ಕಳಪೆ ಗುಣಮಟ್ಟದ ಬಿತ್ತನೆ ಬೀಜ ಮತ್ತು ಗೊಬ್ಬರಗಳನ್ನು ನೀಡಿ ಬೆಳೆ ನಷ್ಟ ಉಂಟಾದರೆ ಅಂತಹ ಕಂಪನಿಗಳು ರೈತರಿಗೆ ಪರಿಹಾರ ನೀಡಬೇಕೆಂದು ಸರ್ಕಾರ ಕಾನೂನುಗಳನ್ನು ಜಾರಿಗೆಗೊಳಿಸಬೇಕು. ರೈತರಿಗೆ ಉಪಯೋಗವಾಗುವಂತೆ ಬೀಜ ಮತ್ತು ಗೊಬ್ಬರ ತಯಾರಿಕೆಯನ್ನು ರಾಷ್ಟ್ರೀಕರಣಗೊಳಿಸಿ, ರೈತರಿಗೆ ಕಡಿಮೆ ದರದಲ್ಲಿ ಸಿಗುವಂತೆ ಸರ್ಕಾರ ಹೊಸ ಯೋಜನೆ ರೂಪಿಸಬೇಕು. ಭೂಮಿಯ ಗುಣಕ್ಕೆ ತಕ್ಕಂತೆ ಬೆಳೆ ಬೆಳೆಯಲು ಯಾವ ಪ್ರದೇಶ ಉತ್ತಮವಾಗಿದೆಯೋ, ಅಂತಹ ಬಿತ್ತನೆ ಬೀಜಗಳನ್ನು ಸರ್ಕಾರವೇ ನೀಡುವ ವ್ಯವಸ್ಥೆಯನ್ನು ಜಾರಿಗೆ ತರಬೇಕು. ರೈತರು ತಮ್ಮ ಭೂಮಿಗೆ ಹೆಚ್ಚು ಹೆಚ್ಚು ರಸಗೊಬ್ಬರಗಳನ್ನು ಹಾಕಿ ಬೆಳೆ ಬೆಳೆಯುತ್ತಿದ್ದಾರೆ. ಇದರಿಂದಾಗಿ ಭೂಮಿಯ ಫಲವತ್ತತೆ ಕಡಿಮೆಯಾಗಿದೆ. ಬೆಳೆಗಳನ್ನು ಬೆಳೆಯುತ್ತಾ ಹೋದಂತೆ, ನೈಟ್ರೋಜನ್, ಫಾಸ್ಫಾರಿಕ್ ಆಸಿಡ್, ಪೊಟ್ಯಾಶ್ ಕಡಿಮೆಯಾಗುತ್ತಿದ್ದು, ಇವುಗಳು ವಿವಿಧ ಬೆಳೆಗಳನ್ನು ಅವಲಂಬಿಸಿವೆ. ರೈತರು ಬೆಳೆ ಬೆಳೆಯುವಾಗ ಭೂಮಿಯಿಂದ ಬೆಳೆಯ ಮೂಲಕ ಹೊರ ತೆಗೆದ ಅಂಶಗಳನ್ನು ಮತ್ತೆ ಭೂಮಿಗೆ ತಿರುಗಿ ಕೊಡಬೇಕಾಗುತ್ತದೆ. ಇಲ್ಲದೇ ಹೋದಲ್ಲಿ ಭೂಮಿಯ ಫಲವತ್ತತೆ ಕಡಿಮೆಯಾಗುತ್ತದೆ. ಆದರೆ ರೈತರು ಈ ಗೊಬ್ಬರವನ್ನು ಉಪಯೋಗಿಸದೆ ಹಣಕ್ಕಾಗಿ ಮಾರಾಟ ಮಾಡುತ್ತಿದ್ದಾರೆ. ಸಗಣಿ ಗೊಬ್ಬರದಲ್ಲಿ ಬೆಳೆಗಳಿಗೆ ಬೇಕಾದ ಎಲ್ಲಾ ಅಂಶಗಳು ದೊರೆಯುತ್ತವೆ. ಆದರೆ ನಮ್ಮ ರೈತರು ಪ್ರತೀ ವರ್ಷ ಸುಮಾರು ೨೦ ಕೋಟಿ ಟನ್ ಸಗಣಿಯನ್ನು ಸುಡುತ್ತಾ ದುರ್ಬಳಕೆಯನ್ನು ಮಾಡುತ್ತಿದ್ದಾರೆ.

ಬಯಲುಸೀಮೆಯ ಕೆಲಭಾಗದಲ್ಲಿ ರೈತರು ಭೂಮಿಯನ್ನು ಭಿತ್ತನೆ ಮಾಡುವಾಗ ಸುಧಾರಿತ ಬೀಜಗಳನ್ನು ಉಪಯೋಗಿಸದೆ ತಾವೇ ಬೆಳೆದ ಬೀಜಗಳನ್ನು ಹಾಗೂ ಹಳ್ಳಿಯಲ್ಲಿ ದೊರೆಯುವ ಬೀಜಗಳನ್ನು ಉಪಯೋಗಿಸುತ್ತಿದ್ದಾರೆ. ಇದರಿಂದಾಗಿ ಬೆಳೆಯ ಇಳುವರಿ ಕುಂಠಿತವಾಗುತ್ತಿದ್ದು, ರೈತರು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದಾರೆ. ಹಾಗಾಗಿ ನಮ್ಮ ರೈತರು ಸುಧಾರಿತ ಬೀಜಗಳನ್ನು ಭಿತ್ತನೆಗೆ ಬಳಸಿದರೆ, ಬೆಳೆಯ ಇಳುವರಿ ದುಪ್ಪಟ್ಟಾಗಿ, ಆರ್ಥಿಕವಾಗಿ ಸಬಲರಾಗಬಹುದು.[೬]

ಬಯಲುಸೀಮೆಯ ರೈತರು ಎದುರಿಸುತ್ತಿರುವ ಭೀಕರ ಸಮಸ್ಯೆ ಎಂದರೆ ತಾವು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ಸಿಗದೇ ಇರುವುದು. ಒಬ್ಬ ಸಣ್ಣ ಉದ್ಯಮಿ ಕೂಡ ತಾನು ಉತ್ಪಾದಿಸಿದ

ಉತ್ಪನ್ನಕ್ಕೆ ತಾನೇ ಬೆಲೆ ನಿರ್ಧರಿಸುವ ಕಾನೂನು ಬದ್ಧ ಅಧಿಕಾರ ಹೊಂದಿದ್ದಾನೆ. ಆದರೆ ಭಾರತ ದೇಶದಲ್ಲಿ ದೇಶದ ಬೆನ್ನೆಲುಬೆಂದು ಕರೆಯುವ ರೈತನಿಗೆ ಮಾತ್ರ ತಾನು ಬೆಳೆದ ಬೆಳೆಗೆ, ತಾನು ಖರ್ಚು ಮಾಡಿರುವ ಹಣವನ್ನು, ತಾನು ನೀಡಿದ ಶ್ರಮವನ್ನು ಲೆಕ್ಕ ಹಾಕಿ ಬೆಲೆ ನಿಗದಿಪಡಿಸುವಷ್ಟು ಅಧಿಕಾರವಿಲ್ಲ. ಅಯಾ ಪ್ರದೇಶದ ಕೃಷಿ ಅಧಿಕಾರಿಗಳಾದರು ನಿಗದಿಪಡಿಸುತ್ತಾರೆಯೇ? ಅದು ಇಲ್ಲ. ಹಾಗಾದರೆ ರೈತ ಬೆಳೆದ ಶೇಂಗಾ, ಮೆಕ್ಕೆಜೋಳ, ರಾಗಿ, ಭತ್ತ, ಈರುಳ್ಳಿ ಮುಂತಾದ ಧಾನ್ಯಗಳಿಗೆ ಬೆಲೆ ನಿಗದಿ ಮಾಡುವವರು, ದಲ್ಲಾಳಿಗಳು ಹಾಗೂ ವರ್ತಕರು. ಈ ರೀತಿಯಾಗಿ ಏನು ಪರಿಶ್ರಮವನ್ನು ಪಡದೆ, ರೈತ ಬೆಳೆದ ಎಲ್ಲಾ ಬೆಳೆಗಳಿಗೂ ವ್ಯಾಪಾರಿಗಳು ಬೆಲೆ ನಿಗದಿ ಮಾಡುವುದರಿಂದ, ರೈತನಿಗೆ ನ್ಯಾಯಯುತ ಬೆಲೆ ಸಿಗದೆ ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಿದ್ದಾನೆ. ರೈತ ಮಾರುಕಟ್ಟೆಗೆ ತಂದ ಧಾನ್ಯಗಳ ಮೇಲೆ ಒಬ್ಬ ದಲ್ಲಾಳಿ ಕಟ್ಟಿದ ಬೆಲೆಯನ್ನು ಮೀರಿ, ಇನ್ನೊಬ್ಬ ದಲ್ಲಾಳಿ ಬೆಲೆ ಕಟ್ಟುವುದಿಲ್ಲ. ಇಂತಹದೊಂದು ಮಾಫಿಯಾ ರಚಿಸಿಕೊಂಡಿರುವ ವರ್ತಕರು ಮತ್ತು ದಲ್ಲಾಳಿಗಳು ರೈತರನ್ನು ನಿರಂತರವಾಗಿ ಸುಲಿಗೆಗೆ ಒಳಪಡಿಸುತ್ತಿದ್ದಾರೆ.

ಈ ಬೆಂಬಲ ಬೆಲೆಯು ರೈತರನ್ನು ಮೋಸ ಮಾಡುವ ಒಂದು ಅಸ್ತ್ರವಾಗಿದೆ. ಕೇಂದ್ರ ಸರ್ಕಾರ ರೈತರು ಬೆಳೆದ ಬೆಳೆಗೆ ಎಷ್ಟು ವೆಚ್ಚವಾಗುತ್ತದೆ ಎಂಬುದನ್ನು ನಿಗದಿ ಮಾಡಲು ಹಾಗೂ ಅದಕ್ಕೆ ಒಂದಷ್ಟು ಲಾಭವನ್ನು ಸೇರಿಸಿ ಬೆಂಬಲ ಬೆಲೆಯನ್ನು ಘೋಷಿಸುವ ಅಧಿಕಾರವನ್ನು ಕೃಷಿ ಇಲಾಖೆಗೆ ನೀಡಿದೆ. ಆದರೆ ಈ ಬೆಂಬಲ ಬೆಲೆಗಳು ಎಂದಿಗೂ ರೈತನು ಮಾಡಿದ ವೆಚ್ಚವನ್ನು ಸರಿದೂಗಿಸುವಷ್ಟು ಇರುವುದಿಲ್ಲ.[೭] ಹಾಗಾಗಿ ಕೆಲವು ಕಡೆ ಜಾರಿಗೆ ತಂದಿರುವ ಆನ್‌ಲೈನ್ ಮಾರುಕಟ್ಟೆ ವ್ಯವಸ್ಥೆಯನ್ನು ರೂಪಿಸಬೇಕಾಗಿದೆ.

ಬೆಂಬಲ ಬೆಲೆ ನೀತಿ ಎಂದರೆ ಕೃಷಿ ಉತ್ಪನ್ನಗಳ ಬೆಲೆಗಳು ಒಂದು ಕನಿಷ್ಠ ಮಟ್ಟಕ್ಕಿಂತ ಕೆಳಗಿಳಿಯದಂತೆ ಗಮನಿಸಬೇಕಾಗುತ್ತದೆ. ಅಂದರೆ ಶಾಸನಾತ್ಮಕವಾಗಿ ಒಂದು ಕನಿಷ್ಟ ಅಥವಾ ಗರಿಷ್ಠ ಬೆಲೆಯನ್ನು, ಈ ರೀತಿ ನಿರ್ಧರಿಸುವ ಮೂಲಕ ಉತ್ಪಾದಕ ಮತ್ತು ಅನುಭೋಗಿಗಳ ಹಿತ್ತಾಸಕ್ತಿಯು ಈಡೇರಿದಂತಾಗುತ್ತದೆ. ಉತ್ಪಾದಕರಿಗೆ ಪ್ರೇರಕವಾಗಿರುವಂತೆ ಸರ್ಕಾರವೇ ಬೆಂಬಲ ಬೆಲೆ ನಿಗದಿಗೊಳಿಸಬೇಕು. ಒಂದು ಕನಿಷ್ಠ ಮಟ್ಟಕ್ಕಿಂತ ಬೆಲೆಗಳು ಕೆಳಗಿಳಿದರೆ ಸರ್ಕಾರವೇ ಧಾನ್ಯಗಳನ್ನು ಖರೀದಿಸಿ, ಕನಿಷ್ಠ ಪ್ರತಿ ಫಲ ದೊರೆಯುವಂತೆ ಗಮನ ವಹಿಸಬೇಕು. ರಾಜ್ಯದಲ್ಲಿ ಪ್ರಸ್ತುತವಾಗಿ ೫೫ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಆನ್‌ಲೈನ್ ಮಾರಾಟ ವ್ಯವಸ್ಥೆಗೆ ಒಳಪಡಿಸಲಾಗುತ್ತದೆ. ಗ್ರಾಮೀಣ ಭಾಗದ ರೈತರಿಗೆ ಕೃಷಿ ಉತ್ಪನ್ನಗಳ ಬೆಲೆ ಬಗ್ಗೆ ಮಾಹಿತಿ ನೀಡುವ ಸಲುವಾಗಿ ೨೦೦ ಕೋಟಿ ವೆಚ್ಚದಲ್ಲಿ ರಾಷ್ಟ್ರೀಯ ಆನ್‌ಲೈನ್ ಕೃಷಿ ಮಾರುಕಟ್ಟೆಯನ್ನು ಆರಂಭಿಸಲಾಗುತ್ತಿದೆ. ಮೊದಲ ಹಂತದಲ್ಲಿ ದೇಶಾದಾದ್ಯಂತ ೫೮೫ ಮಾರುಕಟ್ಟೆಗಳನ್ನು ಆನ್‌ಲೈನ್‌ಗೆ ತರಲು ನಿರ್ಧರಿಸಲಾಗಿದೆ. ಈ ಆರ್ಥಿಕ ವರ್ಷದಲ್ಲಿ ೨೫೦ ಮಂಡಿ. ೨೦೧೬–೧೭ರಲ್ಲಿ ೨೦೦ ಮಂಡಿ, ೨೦೧೭–೧೮ರಲ್ಲಿ ೧೩೫ ಮಂಡಿಗಳನ್ನು, ಈ ಯೋಜನೆಯಡಿ

ತರಲು ಕೇಂದ್ರ ನಿರ್ಧರಿಸಿದ್ದು, ಇದರಿಂದ ಇಡೀ ರಾಜ್ಯವೇ ಒಂದು ಮಾರುಕಟ್ಟೆಯಾಗಿ ಬದಲಾಗಿದೆ. ರೈತರಿಗೆ ದಲ್ಲಾಳಿಗಳ ಕಾಟವೂ ತಪ್ಪಲಿದ್ದು ಅವರ ಬೆಳೆಗಳಿಗೆ ಸರಿಯಾದ ಬೆಲೆ ಲಭ್ಯವಾಗಲಿದೆ.

ರೈತರು ಬೆಳೆದ ಬೆಳೆಗಳು ಹೆಚ್ಚು ಹೆಚ್ಚು ಉತ್ಪಾದನೆಯಾದಾಗ ಮಾರುಕಟ್ಟೆಗಳಲ್ಲಿ ಆ ಕೃಷಿ ಉತ್ಪನ್ನಗಳ ಬೆಲೆಗಳು ಇದ್ದಕ್ಕಿದಂತೆ ಕಡಿಮೆಯಾಗುತ್ತವೆ. ಹಾಗಾಗಿ ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ ಒದಗಿಸಿ. ರೈತರಿಗೆ ಸಹಾಯ ಮಾಡಲು ಸರ್ಕಾರವು ಪ್ಲೋರ್ ಪ್ರೈಸ್ ಯೋಜನೆಯನ್ನು ಸರ್ಕಾರದ ಆದೇಶದ ಸಂ: ಸಿ.ಎಂ.ಡಬ್ಲೂ ೨೩೯ಎಂಆರ್‌೯೭, ದಿನಾಂಕ ೨೪-೧೧-೧೯೯೯ರಿಂದ ಜಾರಿಗೆ ಬಂದಿದೆ. ಈ ಯೋಜನೆಯು ಯಶಸ್ವಿಯಾಗುವಂತೆ ಮಾಡಲು ಆವರ್ತ ನಿಧಿಯನ್ನು ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯಲ್ಲಿ ಸ್ಥಾಪಿಸಲಾಗಿದೆ. ೧೯೯೯ ರಿಂದ ೨೦೧೮ರವರೆಗೆ ಈ ಯೋಜನೆಯಿಂದ ೭,೩೫,೮೦೪ ರೈತರು ಇದರ ಸದುಪಯೋಗ ಪಡೆದುಕೊಂಡಿದ್ದಾರೆ.

ರೈತರಿಗೆ ಪೂರಕವಾದ ಸಾಲ, ಕಡಿಮೆ ಬಡ್ಡಿ ದರದಲ್ಲಿ ದೊರಕದೆ ಇರುವುದು ಪ್ರಮುಖ ಸಮಸ್ಯೆಯಾಗಿದೆ. ಸಹಕಾರಿ ಬ್ಯಾಂಕುಗಳಿಂದ ಸಾಲ ಪಡೆಯುವ ರೈತ ಇವರೆಗೆ ಶೇ.೬ ರಷ್ಟು ಮಾತ್ರ ಬಡ್ಡಿ ಪಾವತಿಸುತ್ತಿದ್ದು, ಅದನ್ನು ಸರ್ಕಾರಗಳು ಶೇ.೪ಕ್ಕೆ ಇಳಿಸಲಾಗಿದೆ. ಅಂದರೆ ಇದರ ಅರ್ಥ ರೈತ ಸಾಲ ತೀರಿಸುವವರೆಗೂ ಶೇ.೪ರಷ್ಟು ಬಡ್ಡಿ ದರವೇ ಇರುತ್ತದೆ ಎಂದರ್ಥವಲ್ಲ. ಸಹಕಾರಿ ಬ್ಯಾಂಕುಗಳು ಸಾಲದ ಬಡ್ಡಿಯ ದರವು, ಮೊದಲನೇ ವರ್ಷದ ನಂತರ ತಾನೇ ತಾನಾಗಿ ಶೇ.೧೨ರಷ್ಟಾಗುತ್ತದೆ. ಅಂದರೆ ಸರ್ಕಾರವು ಒಂದು ವರ್ಷದ ಒಳಗಾಗಿ ರೈತರು ಸರ್ಕಾರಿ ಸಾಲ ತೀರಿಸಿದವರಿಗೆ ಮಾತ್ರ ಶೇ.೪ರ ಬಡ್ಡಿ ದರವನ್ನು ನೀಡುತ್ತದೆ. ಸಹಕಾರಿ ಬ್ಯಾಂಕ್‌ಗಳ ಸಾಲ ಪಡೆದುಕೊಳ್ಳುವ ರೈತರಲ್ಲಿ ಶೇ.೯೦ರಷ್ಟು ರೈತರು, ಒಂದು ವರ್ಷದ ಒಳಗೆ ಸಾಲ ತೀರಿಸಲು ಶಕ್ತವಾಗಿರುವದಿಲ್ಲ. ರೈತರು ಪ್ರತೀ ವರ್ಷ ಸಾಲ ಮರುಪವಾತಿ ಮಾಡಿ, ಹೊಸ ಸಾಲಕ್ಕೆ ಅರ್ಹರಾದವರು ತೀರ ಕಡಿಮೆ. ಹೀಗಾಗಿ ಸರ್ಕಾರದ ಅಗ್ಗದ ಬಡ್ಡಿಯ ಕೃಷಿ ಸಾಲವೆಂಬುದು ಅತ್ಯಂತ ವಂಚಕ ಹಾಗೂ ರೈತ ವಿರೋಧಿ ನೀತಿಯಾಗಿದೆ. ಕೃಷಿ ಸಾಲ ನೀಡುವ ರಾಷ್ಟ್ರೀಕೃತ ಬ್ಯಾಂಕುಗಳು ರೈತರಿಗೆ ನೀಡುವ ಸಾಲಕ್ಕೆ ಹಾಕುವ ಬಡ್ಡಿ ಶೇ.೧೪ರಷ್ಟಿದ್ದು ಅವಧಿಯೊಳಗೆ ಸಾಲ ತೀರಿಸದಿದ್ದರೆ ಅವರ ಜಮೀನುಗಳನ್ನು ಹರಾಜು ಹಾಕಲು ಮುಂದಾಗುತ್ತವೆ.

ಬಯಲುಸೀಮೆಯ ರೈತರು ಆರ್ಥಿಕ ಸ್ವಾವಲಂಬನೆಗಾಗಿ, ವ್ಯವಸಾಯವನ್ನು ಮುಖ್ಯ ಕಸುಬನ್ನಾಗಿ ಮಾಡುತ್ತಿದ್ದು, ಹೈನುಗಾರಿಕೆ ಕುರಿ, ಮೇಕೆ, ಕೋಳಿ ಸಾಕಾಣಿಗೆ ಹಾಗೂ ಹಂದಿ ಸಾಕಾಣಿಕೆಗಳನ್ನು ಉಪಕಸುಬನ್ನಾಗಿ ಅಳವಡಿಸಿಕೊಳ್ಳಬೇಕು. ಪ್ರಾಣಿ ಉತ್ಪನ್ನಗಳಾದ ಹಾಲು, ಮೊಟ್ಟೆ ಮತ್ತು ಮಾಂಸಕ್ಕೆ ಬೇಡಿಕೆಯು ಅತಿಯಾಗಿರುವುದರಿಂದ, ಇದನ್ನು ಗಮನಿಸಿ ರೈತರು ಪ್ರಾಣಿ ಸಾಕಾಣಿಕೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ಬೆಳೆಸಿಕೊಳ್ಳುವುದು ಉತ್ತಮ. ಪ್ರಾಣಿ ಸಾಕಾಣಿಕೆಯ

ಉತ್ಪನ್ನಗಳನ್ನು ಹೆಚ್ಚಿಸುವ ಹಿನ್ನಲೆಯಲ್ಲಿ, ಮಿಶ್ರತಳಿ ಹಸುಗಳ ಸಾಕಾಣಿಕೆ ಹಾಗೂ ಕುರಿ ಮತ್ತು ಮೇಕೆ ಸಾಕಾಣಿಕೆಯ ಬಗ್ಗೆ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಅರಿವು ಮೂಡಿಸುವ ಪ್ರಯತ್ನವನ್ನು ಕೃಷಿ ಇಲಾಖೆಯ ಅಧಿಕಾರಿಗಳು ಮಾಡಬೇಕು.

ಮಾನವನಿಗೆ ಮಾಂಸ ಹಾಗೂ ಹಾಲು ಒದಗಿಸುವಲ್ಲಿ ಕುರಿ ಮತ್ತು ಮೇಕೆಗಳು ಮಹತ್ತರ ಪಾತ್ರವನ್ನು ವಹಿಸುತ್ತವೆ. ಯಾವುದೇ ತರಹದ ಹವಾಗುಣವಿದ್ದರೂ ಕುರಿ ಮತ್ತು ಮೇಕೆಗಳು ಚೆನ್ನಾಗಿ ಹೊಂದಿಕೊಂಡು, ಒಂದು ಸೂಲಿನಲ್ಲಿ ಸುಮಾರು ೬೦ ಲೀ.ನಷ್ಟು ಹಾಲನ್ನು ನೀಡಿ ಬಡವನ ಕಾಮಧೇನು ಎನಿಸಿಕೊಂಡ ಪ್ರಾಣಿಯಾಗಿದೆ. ಇದು ಕಡಿಮೆ ವೆಚ್ಚದಲ್ಲಿ ಸುಲಭವಾಗಿ ಸಾಕಬಹುದಾದ ಪ್ರಾಣಿ. ಹೆಣ್ಣು ಕುರಿ/ಮೇಕೆಯು ಒಂದು ಬಾರಿ ೨ ರಿಂದ ೩ ಮರಿಗಳನ್ನು ಹಾಕುವದರಿಂದ ರೈತರಿಗೆ ಲಾಭದಾಯಕವಾಗಿರುತ್ತದೆ. ಈ ಪ್ರಾಣಿಯ ಹಾಲಿನಲ್ಲಿ 'ಬಿ' ವಿಟಮಿನ್ ಅಂಶ ಅಧಿಕವಾಗಿರುವದರಿಂದ ಔಷಧ ರೂಪದಲ್ಲಿ ಹಾಗೂ ಚರ್ಮದಿಂದ ಉತ್ತಮ ಉಡುಪು ತಯಾರಿಸುವುದು. ಉಣ್ಣೆಯಿಂದ ಬೆಲೆ ಬಾಳುವ ಕಾರ್ಪೇಟ್ ಮತ್ತು ಶಾಲುಗಳನ್ನು ಉತ್ಪಾದಿಸಬಹುದು. ಕುರಿ ಅಥವಾ ಮೇಕೆ ಸಾಕಾಣಿಕೆಯನ್ನು ವೃತ್ತಿಯನ್ನಾಗಿ ಅವಲಂಬಿಸಲು ಇಚ್ಛಿಸುವ ರೈತರು, ಕನಿಷ್ಠ ೫೦೦ ಮೇಕೆಗಳನ್ನು ಸಾಕಾಣಿಕೆ ಮಾಡಿ, ವೈಜ್ಞಾನಿಕ ರೀತಿಯಲ್ಲಿ ಶೆಡ್‌ಗಳನ್ನು ನಿರ್ಮಿಸಿ, ಹಸಿರು ಮೇವನ್ನು ಬೆಳೆದು, ಸೈಲೋಫಿಟ್‌ಗಳನ್ನು ನಿರ್ಮಿಸಿಕೊಂಡು ಹೊರಗಡೆ ಮೇಯಿಸಲು ಬಿಡದೆ. ಜೀರೋ ಗ್ರೇಜಿಮಗ್ ಎಂಬ ಸಾಕಾಣಿಕ ಪದ್ಧತಿಯನ್ನು ಅನುಸರಿಸಿ, ದೊಡ್ಡ ಪ್ರಮಾಣದ ವೃತ್ತಿಯನ್ನಾಗಿ ಬೆಳಸಿಕೊಳ್ಳಬಹುದು. ಬಯಲು ಸೀಮೆಯ ರೈತರು ಮೇಕೆ ಸಾಕಾಣಿಕೆಯನ್ನುಅವಲಂಬಿಸಿ ಹೆಚ್ಚಿನ ಲಾಭ ಪಡೆದುಕೊಂಡು ಜೀವನ ಶೈಲಿಯನ್ನು ಬದಲಿಸಿಕೊಳ್ಳಲು ಸಾಧ್ಯವಿರುತ್ತದೆ.

ರೈತ ಮಿತ್ರನೆಂದೇ ಹೆಸರು ಪಡೆದಿರುವ ಎರೆಹುಳು ಉಂಗುರುಂಗುರಾದ ರಚನೆಯನ್ನು ಹೊಂದಿದ್ದು ತೆಳ್ಳಗಿನ ಮಣ್ಣು ಪ್ರಿಯ. ಒಂದು ಎಕರೆ ಪ್ರದೇಶದಲ್ಲಿ ೫೦ ಸಾವಿರ ಹುಳುಗಳಿರುತ್ತವೆ ಎಂಬ ಅಂದಾಜಿದೆ. ಒಳ್ಳೆಯ ಮಣ್ಣಿನಲ್ಲಿ ಅವುಗಳ ಸಂಖ್ಯೆ ಎರಡು ಪಟ್ಟು ಹೆಚ್ಚಿರುತ್ತದೆ. ಈ ಹುಳುಗಳು ಒಂದು ವರ್ಷದಲ್ಲಿ ಒಂದು ಎಕರೆಯಲ್ಲಿ ೧೦ ಟನ್‌ಗಳಷ್ಟು ಮಣ್ಣನ್ನು ತಿಂದು ಹೊರ ಹಾಕುತ್ತವೆ. ಅಂದರೆ ಭೂಮಿಯ ಮೇಲೆ ಒಂದು ಅಂಗುಲದಷ್ಟು ಹೊಸ ಮಣ್ಣನ್ನು ಹರಡುತ್ತವೆ. ಇವುಗಳು ಮಣ್ಣನ್ನು ತಿಂದು ಅದರೊಳಗಿನ ಪ್ರಾಣಿ ಮತ್ತು ಸಸ್ಯ ಜನ್ಯವಾದ ಅಂಶಗಳನ್ನು ಅರಗಿಸಿಕೊಂಡು ಉಳಿದಿದ್ದನ್ನು ಮತ್ತೆ ಮಣ್ಣಿಗೆ ಹಾಕುತ್ತವೆ. ಹೀಗೆ ಅದು ವಿಸರ್ಜಿಸಿದ ಮಣ್ಣು ಒಳ್ಳೆಯ ಗೊಬ್ಬರವಾಗಿ ಮಾರ್ಪಡುತ್ತದೆ. ಹಾಗಾಗಿ ಹೊಲ ಉಳುವ ಕ್ರಿಯೆಯಿಂದಾಗಿ ಭೂಮಿಯ ಖನಿಜ ಸಂಪತ್ತು ಮೇಲ್ಮೈಗೆ ಬರುವುದರಿಂದ ಎಲ್ಲಾ ಮಣ್ಣನ್ನು ಒಂದು ಮಾಡಿ, ಭೂಮಿಯ ಒಳಗಡೆ ಗಾಳಿ ಸಂಚಾರಕ್ಕೆ ಅನುಕೂಲವಾಗಿ, ನೀರು ಹಿಡಿದಿಟ್ಟುಕೊಳ್ಳುವ ಕ್ರಿಯೆ ಅಧಿಕವಾಗಿ, ಭೂಮಿಯ ಫಲವತ್ತತೆ ಸಾಮಾನ್ಯವಾಗಿ ವೃದ್ಧಿ ಹೊಂದುತ್ತದೆ. ಈ ಹುಳುವಿನ ಬದುಕು ಬಾಳು ಅಪಾಯದಿಂದ ಕೂಡಿದೆ. ಕಾರಣ ಇಲಿ,

ಹೆಗ್ಗಣ, ಜರಿ, ಹಕ್ಕಿಗಳು ಕೀಟನಾಶಕಗಳು ಹಾಗೂ ರಾಸಾಯನಿಕ ಗೊಬ್ಬರಗಳು ಮುಂತಾದವು. ಈ ಯಾವ ಅಪಾಯಗಳಿಲ್ಲದಿದ್ದರು ಎರೆಹುಳು ೧೫ ವರ್ಷ ಬದುಕಬಲ್ಲದು. ಭೂಮಿಯ ಫಲವತ್ತತೆಯನ್ನು ಸ್ವಾಭಾವಿಕವಾಗಿ ಮತ್ತು ದೈವದತ್ತವಾಗಿ ಕಾಪಾಡಿಕೊಂಡು ಬರುವುದರಲ್ಲಿ ಎರೆಹುಳುವಿನ ಕೊಡುಗೆ ಅಪಾರ ಮತ್ತು ಅವರ್ಣನೀಯ. ಇವುಗಳು ಉತ್ತಮವಾಗಿ ಕಾರ್ಯನಿರ್ವಹಿಸಲು ಮಣ್ಣನ್ನು ಅನುಕೂಲವಾಗುವಂತೆ ನೋಡಿಕೊಳ್ಳುವುದು ರೈತನ ಕರ್ತವ್ಯ. ಅಂದರೆ ಮಣ್ಣಿನಲ್ಲಿ ಪ್ರಾಣಿಜನ್ಯ ಮತ್ತು ಸಸ್ಯ ಜನ್ಯ ಸಾವಯವ ಪದಾರ್ಥಗಳು ಅಂದರೆ ಕಾಂಪೋಸ್ಟ್, ಹಸಿರೆಲೆ ಗೊಬ್ಬರ ಮುಂತಾದುವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಪ್ರತೀ ವರ್ಷ ಸೇರಿಸುವುದು, ಮಣ್ಣು ಸಂರಕ್ಷಣೆಯ ಕಾರ್ಯಗಳನ್ನು ಕೈಗೊಳ್ಳುವತ್ತ ರೈತ ಗಮನ ಹರಿಸುವುದು ಅತ್ಯಗತ್ಯ. ಇದರಿಂದ ಎರೆ ಹುಳುವಿನ ಕಾಯಕ ದ್ವಿಗುಣವಾಗಿ ಭೂಮಿಯ ಫಲವತ್ತತೆ ಇಮ್ಮಡಿಯಾಗಿ ಹೆಚ್ಚು ಉತ್ಪಾದನೆಯ ಶಕ್ತಿ ಹೊಂದುವುದರಲ್ಲಿ ಸಂದೇಹವಿಲ್ಲ.[೮] ಹಾಗಾಗಿ ರೈತರು ಈ ಬಗ್ಗೆ ಕೃಷಿ ಇಲಾಖೆಯನ್ನು ಸಂಪರ್ಕಿಸಿ ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳುವುದು ಅಗತ್ಯ.

ಬಯಲುಸೀಮೆಯಾಗಿರುವ ಈ ಪ್ರದೇಶಗಳಲ್ಲಿ ಕೃಷಿ ಕೈಗೊಳ್ಳಲು ಹಾಗೂ ಅತ್ಯಧಿಕ ಇಳುವರಿ ಪಡೆಯಲು ಅನೇಕ ಸಮಸ್ಯೆಗಳಿವೆ. ಈ ಎಲ್ಲಾ ಸಮಸ್ಯೆಗಳನ್ನು ಹೋಗಲಾಡಿಸಿ ಅತ್ಯಧಿಕ ಇಳುವರಿ ಪಡೆಯಲು ಬಯಲು ಸೀಮೆಯ ರೈತರು ಹೈಡ್ರೋಪೋನಿಕ್ಸ್ ಪದ್ಧತಿಯ ಮೂಲಕ ಕೃಷಿ ಮಾಡುವುದು ಅಗತ್ಯವಾಗಿದೆ. ಈ ಪದ್ಧತಿಯಲ್ಲಿ ಸಸ್ಯಗಳನ್ನು ಮಣ್ಣು ಇಲ್ಲದೇ ಪೋಷಕಾಂಶ ತುಂಬಿದ ನೀರಿನಲ್ಲಿ ಬೆಳೆಸಲಾಗುತ್ತದೆ. ಇದು ಉತ್ತಮ ಸ್ವಚ್ಛ ಪಾರದರ್ಶಕವಾದ ಉತ್ಪನ್ನಕ್ಕೆ ಕಾರಣವಾಗುತ್ತದೆ. ಈ ಪೋಷಕಾಂಶ ಮತ್ತು ಲವಣಾಂಶಗಳನ್ನು ನೀರಿನಲ್ಲಿ ಮಿಶ್ರಣ ಮಾಡಿ ಸಂಪದ್ಭರಿತವಾದ ದ್ರಾವಣವನ್ನು ತಯಾರಿಸಲಾಗುತ್ತದೆ. ಬರಗಾಲ ಪೀಡಿತ ಪ್ರದೇಶಗಳಲ್ಲಿ ಸ್ವಲ್ಪವೇ ಪ್ರಮಾಣದಲ್ಲಿ ನೀರು ಹಾವಿಯಾಗಿ ಹೋಗುವುದರಿಂದ ನೀರಿನ ಉಳಿಕೆ ಹೆಚ್ಚು, ಇದರಿಂದ ವಿವಿಧ ತರಕಾರಿಗಳನ್ನು ಹೂವಿನ ಗಿಡಗಳನ್ನು ಹಾಗೂ ಔಷಧೀಯ ಸಸ್ಯಗಳನ್ನು ಬೆಳೆಯಬಹುದು. ಈ ಪದ್ಧತಿಯಿಂದ ಮರುಸಂಸ್ಕರಣೆಯ ವತುಗಳ ಬಳಕೆಯನ್ನು ಮಾಡಬಹುದು. ಈ ಮಣ್ಣು ರಹಿತ ಕೃಷಿಯನ್ನು ವ್ಯಾಪಾರಿ ದೃಷ್ಟಿಯಲ್ಲಿ ಪ್ರಾರಂಭಿಸದಿದ್ದರೂ ಭವಿಷ್ಯದಲ್ಲಿ ರೈತರಿಗೆ ಈ ಪದ್ಧತಿ ಅನುಕೂಲವಾಗಲಿದೆ. ಅದು ಮಳೆಗಾಲದಲ್ಲಿ ವಿಶೇಷವಾಗಿ ತರಕಾರಿ ಬೆಳೆಗಳ ಉತ್ಪನ್ನ ಕಡಿಮೆಯಾಗಿ ಬೇಡಿಕೆ ಜಾಸ್ತಿಯಾಗಿ ಬೆಲೆ ಏರಿಕೆಯಾಗುವುದರಿಂದ, ಆಗ ಈ ಪದ್ಧತಿ ಉಪಯೋಗಿಸಿ ಒಳ್ಳೆಯ ಗುಣಮಟ್ಟದ ತರಕಾರಿ ಬೆಳೆ ಬೆಳೆದು ಅಧಿಕ ಇಳುವರಿ ಪಡೆಯಬಹುದು. ಕೀಟನಾಶಕವಾಗಿ ಬೇವು, ಬೆಳ್ಳುಳ್ಳಿಯ ದ್ರಾವಣ ಉಪಯೋಗಿಸುವುದು ಅವಶ್ಯ. ಈ ಪದ್ಧತಿಯನ್ನು ಹೊಸ ಯುಗದ ಕೃಷಿ ಎಂದೇ ಹೇಳಬಹುದು. ಇದರಿಂದ ಆಹಾರದ ವಿಷಯದಲ್ಲಿ ಸ್ವಾವಲಂಬಿಯಾಗಬಹುದು. ಅಲ್ಲದೇ ಕೃಷಿ ಭೂಮಿಯ ಮೇಲಿನ ಒತ್ತಡ ತಗ್ಗಿ, ಕೃಷಿ ಭೂಮಿಯ ಸಾರ. ಫಲವತ್ತತೆ ಜಾಸ್ತಿಯಾಗಬಹುದು. ಆಹಾರದ ಸಮಸ್ಯೆ ತೀವ್ರವಾಗಿ

ಇರುವ ಸಂದರ್ಭದಲ್ಲಿ ಬರಗಾಲ ಮತ್ತು ನೆರೆಹಾವಳಿಯಿಂದ ಆಹಾರ-ಬೆಳೆ ಎಲ್ಲಾ ನಾಶವಾದ ಪರಿಸ್ಥಿತಿಯಲ್ಲಿ ಜಾಗತಿಕ ತಾಪಮಾನ ಹೆಚ್ಚಳದ ಹಿನ್ನೆಲೆಯಲ್ಲಿ ಹೈಡ್ರೋಪೋನಿಕ್ಸ್ ಪದ್ಧತಿಯೇ ಸೂಕ್ತ ಪರಿಹಾರ.[೯]

ಬಯಲುಸೀಮೆಯ ರೈತರ ಪ್ರಮುಖ ಸಮಸ್ಯೆಯೆಂದರೆ ಕೃಷಿ ಭೂಮಿಯ ಫಲವತ್ತತೆ. ಭೂಮಿಯ ಫಲವತ್ತತೆಯನ್ನು ಹೆಚ್ಚಿಸಬೇಕೆಂದರೆ ಬಹಳ ಮುಖ್ಯವಾಗಿ ಆಚರಣೆಗೆ ಬರಬೇಕಾಗಿರುವುದು ಬೆಳೆ ವೈವಿಧ್ಯತೆ. ಕೃಷಿ ಕಳೆಗಳನ್ನು, ಕೃಷಿ ತ್ಯಾಜ್ಯಗಳನ್ನು ನಿರಂತರವಾಗಿ ಮಣ್ಣಿಗೆ ಸೇರಿಸುತ್ತಾ ಹೋಗಬೇಕು. ಪ್ರಧಾನವಾಗಿ ಸಾವಯವ ಪದಾರ್ಥಗಳ ಭೂ ಮುಚ್ಚಿಗೆ ಮಾಡಿ. ಸೂಕ್ಷ್ಮ ಜೀವಿಗಳ ಕ್ರಿಯಾಶೀಲತೆಯನ್ನು ವರ್ಧಿಸುವ ಕೆಲಸವಾಗಬೇಕು. ಏಕೆಂದರೆ ಸೂಕ್ಷ್ಮ ಜೀವಿಗಳು ಮಾತ್ರ ಕೃಷಿ ತ್ಯಾಜ್ಯಗಳನ್ನು ಕಿತ್ತು ಹಾಕಲ್ಪಟ್ಟ ಕಳೆಗಳನ್ನು, ಪೋಷಕಾಂಶಗಳನ್ನಾಗಿ ಪರಿವರ್ತಿಸುವ ಪ್ರಬಲ ಸಾಧನಗಳಾಗಿವೆ. ಗ್ರಾಮೀಣ ಭಾಗಗಳಲ್ಲಿ ದೇಸಿ ದನಕರುಗಳ ಸಂಖ್ಯೆ ಅಪಾರವಾಗಿ ಕುಸಿದಿದೆ. ಈ ಸಮಯದಲ್ಲಿ ಹೆಚ್ಚಿನ ಪ್ರಮಾಣದ ಸಾವಯವ ಗೊಬ್ಬರ ಸಿಗುತ್ತಿರುವುದು. ಕೃತಕ ಹಿಂಡಿ, ಭೂಸಾ, ಮತ್ತಿತರ ರಾಸಾಯನಿಕಗಳಿಂದ ಬದುಕುತ್ತಿರುವ ಸೀಮೆ ಹಸುಗಳಿಂದ. ಇಲ್ಲವೇ ಮಿಶ್ರತಳಿ ಹಸುಗಳಿಂದ. ಇವುಗಳನ್ನು ನಮ್ಮ ಮಣ್ಣಿಗೆ ಸೇರಿಸುವುದು ಸಂಪೂರ್ಣ ಸಾವಯುವ ಸೇರ್ಪಡೆಗಳಲ್ಲ. ಅವುಗಳಿಗೆ ಕೃತಕವಾಗಿ ನೀಡುತ್ತಿರುವ ಸಂಸ್ಕರಿಸಿರುವ ಆಹಾರ ಮತ್ತು ಔಷಧಿಯುಕ್ತ ಸಗಣಿ ಮೂಲಕ ಪರೋಕ್ಷವಾಗಿ ರಾಸಾಯನಿಕಗಳು ಭೂಮಿಗೆ ಸೇರ್ಪಡೆಗೊಳ್ಳುತ್ತಿವೆ. ಇಂತಹ ಸೀಮೆ ಹಸುಗಳ ಸಗಣಿಯು ಕೂಡ ಪ್ರಸ್ತುತವಾಗಿ ಅಗತ್ಯ ಪ್ರಮಾಣದಲ್ಲಿ ಸಿಗುತ್ತಿಲ್ಲ. ಕೋಳಿ ಗೊಬ್ಬರವು ಇದೇ ರೀತಿಯದಾಗಿದೆ.[೧೦] ಸಾವಯುವ ಕೃಷಿ ಪದ್ಧತಿಯನ್ನು ಯಶಸ್ವಿಯಾಗಿ ಅಳವಡಿಸಿಕೊಳ್ಳಲು ಇಲ್ಲವೆ ಬದಲಾಯಿಸಿಕೊಳ್ಳಲು ಇರುವ ಅಡಚಣೆಗಳಾಗಿವೆ.

ಹಸಿರೆಲೆ ಗೊಬ್ಬರವನ್ನು ಅಗತ್ಯ ಪ್ರಮಾಣದಲ್ಲಿ ಭೂಮಿಗೆ ಸೇರಿಸಲು ರೈತರಿಂದ ಸಾಧ್ಯವಾಗದಿರಲು ಪ್ರಮುಖ ಕಾರಣ, ನಮ್ಮ ಹೊಲಗದ್ದೆಗಳಲ್ಲಿ ಬೆಳೆಯುತ್ತಿದ್ದ ಅತ್ಯಂತ ವೈವಿಧ್ಯಮಯವಾದ ಮರಗಿಡಗಳನ್ನು, ಬೇಲಿಗಳನ್ನು, ಬಳ್ಳಿ, ಪೊದೆಗಳನ್ನು ನಾವಿಂದು ಹಾಳು ಮಾಡಿರುವುದೇ ಪ್ರಧಾನ ಅಂಶವಾಗಿದೆ. ಇದರಿಂದಾಗಿ ನಿಜವಾದ ಭೂ ಚೇತನವಾಗಬೇಕಾದರೆ ನಾವು ಇವೆಲ್ಲವುಗಳನ್ನು ನಮ್ಮ ಹೊಲಗದ್ದೆ ತೋಟಗಳಲ್ಲಿ ಮರುಸ್ಥಾಪಿಸಿ ವಿಜೃಂಭಿಸಬೇಕಾಗಿದೆ. ಈ ಶ್ರೀಮಂತಿಕೆಯನ್ನು ಹೆಚ್ಚಿಸದೇ ಹೋದಲ್ಲಿ ವೈವಿಧ್ಯಮಯ ಸೂಕ್ಷ್ಮ ಜೀವಿ ಶ್ರೀಮಂತಿಕೆ ಕೂಡ ಹೆಚ್ಚಾಗುವದಿಲ್ಲ. ಇವುಗಳ ಕೊರತೆಯಿಂದ ನರಳುವ ಭೂಮಿ ಬರಡಾಗುವುದಲ್ಲದೆ ಅಲ್ಲಿ ಬೆಳೆಯುವ ಯಾವುದೇ ಬೆಳೆಗೆ ನೈಸರ್ಗಿಕ ರಕ್ಷಣೆ ಇಲ್ಲದೆ ರೋಗರುಜಿನಿಗಳಿಗೆ ಬಹಳ ಸುಲಭವಾಗಿ ತುತ್ತಾಗುತ್ತವೆ. ಬರಡಾದ ಭೂಮಿ ತನ್ನ ಗುಣಮಟ್ಟ ಕಳೆದುಕೊಂಡು ಅಪಾರ ನೀರನ್ನು ಬೇಡುವ ಬಾಯಾರಿದ ಭೂಮಿಯಾಗಿ ಮಾರ್ಪಡುತ್ತದೆ. ಹಾಗಾಗಿ ಇಂದು ಅತ್ಯುತ್ತಮ ಸಹಜವಾಗಿ ಏಕ ಬೆಳೆಗಳು ರೋಗ ರುಜಿನಿಗಳು ಮತ್ತು ಪೋಷಕಾಂಶಗಳ ಅಭಾವಕ್ಕೀಡಾಗಿ

ಹಾಳಾಗುತ್ತಿವೆ. ಇದರಿಂದ ಇಳುವರಿ ಇಳಿಮುಖವಾಗಿರುವದನ್ನು ಕಾಣುತ್ತಿದ್ದು, ಇದನ್ನು ಸರಿಪಡಿಸುವ ಏಕೈಕ ಮಾರ್ಗವೆಂದರೆ ಕಾಡು ಕೃಷಿ.

ಕಾಡು ಕೃಷಿಯ ಪ್ರಧಾನ ಆಧಾರ ಸ್ತಂಭ ಜೀವ ವೈವಿಧ್ಯದ ಮರು ಸ್ಥಾಪನೆ. ಇದು ಕೇವಲ ಸಸ್ಯ ವೈವಿಧ್ಯತೆಗೆ ಬೆಳೆ ವೈವಿಧ್ಯತೆಗೆ ಮಾತ್ರ ಸೀಮಿತವಾಗಿಲ್ಲ. ಅದರ ಗರ್ಭದಲ್ಲಿ ಸೂಕ್ಷ್ಮ ಜೀವಿ ವೈವಿಧ್ಯತೆಯನ್ನು ಪ್ರಧಾನವಾಗಿ ಹೊಂದಿದೆ. ಕಾಡು ಕೃಷಿಯಲ್ಲಿ ಮಣ್ಣು ನಿರವಯವ ಪದಾರ್ಥವಲ್ಲ. ಅದು ನೈಸರ್ಗಿಕವಾಗಿ ವೈವಿಧ್ಯಮಯವಾದ ಸೂಕ್ಷ್ಮ ಜೀವಿಗಳ ಪರಿಶ್ರಮದಿಂದ ತಯಾರಿಸಲ್ಪಟ್ಟು ಅಲ್ಲಿಯ ಜೀವವಾಸದಲ್ಲೇ ರೂಪಿತವಾಗಿ ಮಣ್ಣಿಗೆ ಸೇರ್ಪಡೆಗೊಳ್ಳುವ ಪೋಷಕಾಂಶಗಳ ಮಹಾಕಾರ್ಯಾಗಾರ. ಈ ಸೂಕ್ಷ್ಮ ಜೀವಿಗಳು ಅಲ್ಲಿಯ ಲವಣ ನೀರನ್ನು ಸಸ್ಯಗಳ ಎಲೆ ಕಾಂಡಗಳನ್ನು ಬಳಸಿಕೊಂಡು ಫಲವತ್ತಾದ ಮಣ್ಣನ್ನು ಸೃಷ್ಟಿಸುತ್ತವೆ. ಇಂತಹ ಮಣ್ಣು ಮಾತ್ರ ಅಲ್ಲಿಯ ಬೆಳೆ ಸಮುಚ್ಚಯಕ್ಕೆ ಅತ್ಯಗತ್ಯವಾದ ಕಿರು ಸೂಕ್ಷ್ಮ ಮತ್ತು ಪ್ರಧಾನ ಪೋಷಕಾಂಶಗಳನ್ನು ಅಗತ್ಯ ಪ್ರಮಾಣದಲ್ಲಿ ಒದಗಿಸಿ ಅಲ್ಲಿಯ ನೈಸರ್ಗಿಕ ಒತ್ತಡಗಳನ್ನು ತಾಳಿಕೊಂಡು ಬೆಳೆಯ ಬಲ ಸಾಮರ್ಥವ್ಯನ್ನು ಬೆಳೆಗಳಿಗೆ ನೀಡುತ್ತದೆ. ಹೀಗೆ ಸಶಕ್ತಗೊಂಡ ಬೆಳೆಗಳು ಮಾತ್ರ ಅತ್ಯಂತ ಪರಿಣಾಮಕಾರಿಯಾಗಿ ತಮಗೆ ಬರುವ ರೋಗಗಳನ್ನು ನಿವಾರಿಸಿಕೊಳ್ಳುವ ಸಾಮರ್ಥ್ಯವನ್ನು ಗಳಿಸಿಕೊಳ್ಳುತ್ತವೆ. ಇಂತಹ ವೈವಿಧ್ಯಮಯ ಕೃಷಿ ವ್ಯವಸ್ಥೆಯಲ್ಲಿ ಅನೇಕ ರೋಗ ನಿವಾರಕ ಸೂಕ್ಷ್ಮ ಜೀವಿಗಳು, ಕೀಟಗಳು, ಪಕ್ಷಿಗಳು ನೆಲೆಗೊಂಡು ಅದಕ್ಕೆ ಸುಸ್ಥಿರತೆಯನ್ನು ತಂದು ಕೊಡುತ್ತವೆ. ಇಂತಹ ಸಹಜ ನೈಸರ್ಗಿಕ ಪ್ರಕ್ರಿಯೆಗಳಿಂದೊಡಗೂಡಿದ ಕಾಡು ಕೃಷಿ ಪದ್ಧತಿಯಿಂದ ಮಾತ್ರ ರೈತರು ಬೆಳೆಗಳಿಗೆ ತಗುಲುವ ರೋಗಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಅತ್ಯಂತ ಕಡಿಮೆ ವೆಚ್ಚ ಮತ್ತು ಪರಿಶ್ರಮದಿಂದ ನಿವಾರಿಸಿಕೊಳ್ಳಲು ಸಾಧ್ಯ.

ಕಾಡಿನಲ್ಲಿ ವೈವಿಧ್ಯಮಯವಾದ ಮರ, ಗಿಡ, ಬಳ್ಳಿ, ಪೊದೆ, ಗಿಡಗಂಟೆ, ಹುಲ್ಲು ಮುಂತಾದವು. ಒಂದಕ್ಕೊಂದು ಪರಸ್ಪರ ಪೂರಕ ಹೊಂದಾಣಿಕೆಯೊಂದಿಗೆ ಸಹಬಾಳ್ವೆ ನಡೆಸುತ್ತವೆ. ಹೊಂದಾಣಿಕೆಯಿಂದ ಬದುಕುತ್ತವೆ. ಇಂತಹ ವ್ಯವಸ್ಥೆಯಲ್ಲಿ ಅದಕ್ಕೆ ವಿಶಿಷ್ಟವಾದ ಆಹಾರ ಜಾಲವನ್ನು ಪರಸ್ಪರ ಪೂರಕವಾಗಿ ರೂಪಿಸಿಕೊಂಡು ಚೆನ್ನಾಗಿ ಬೆಳೆಯುತ್ತವೆ. ಇಲ್ಲಿ ವಿನಾಶಕಾರಿ ಸ್ಪರ್ಧೆಗೆ ಬದಲಾಗಿ ಸಹಜೀವನವಿರುತ್ತದೆ. ನಮ್ಮ ಹೊಲಗಳು ಗದ್ದೆ ತೋಟಗಳೂ ಇಂತಹ ಪರಸ್ಪರ ಪೂರಕವಾದ ಬೆಳೆ ವಿನ್ಯಾಸಗಳನ್ನು ಸಂಯೋಜಿಸಿಕೊಂಡಾಗ ಅದು ನಿಸರ್ಗ ಸಹಜ ಕೃಷಿಗೆ ಸಮೀಪವಾದ ಕೃಷಿಯಾಗುತ್ತದೆ. ಬೆಳೆ ವಿನ್ಯಾಸಗಳನ್ನು ರೂಪಿಸುವಾಗ ಅಲ್ಲಿಯ ಜೀವವಾಸಗಳೊಂದಿಗೆ ಅತ್ಯಂತ ಚೆನ್ನಾಗಿ ಹೊಂದಿಕೊಂಡು ಬೆಳೆಯಬಲ್ಲ ಬೆಳೆಗಳ ಸಂಕೀರ್ಣವನ್ನು ರೂಪಿಸುವ ಅಗತ್ಯವಿದೆ.[77]

ರಸಗೊಬ್ಬರಗಳ ಬಳಕೆಯಿಂದ ಭೂಮಿಯು ಫಲವತ್ತತೆಯನ್ನು ಕಳೆದುಕೊಂಡು ಬರಡಾಗಿ ಆಹಾರದ ಸಮಸ್ಯೆ ಉಂಟಾಗುತ್ತದೆ. ಅದರೂ ರೈತರು ರಾಸಾಯನಿಕ ಗೊಬ್ಬರಗಳನ್ನು ಏಕೆ ಬಳಸುತ್ತಿದ್ದಾರೆ? ಎಂದರೆ ಸಸ್ಯಗಳ ಬೆಳವಣಿಗೆಗೆ ಅನೇಕ ಪೋಷಕಾಂಶಗಳ ಅಗತ್ಯವಿದೆ. ಈ

ಪೋಷಕಾಂಶಗಳು ಸಹಜವಾಗಿ ಮಣ್ಣಿನಲ್ಲಿರುತ್ತವೆ. ಮಣ್ಣಿನಲ್ಲಿರುವ ಸೂಕ್ಷ್ಮಾಣು ಜೀವಿಗಳು ಆ ಪೋಷಕಾಂಶಗಳನ್ನು ಸಸ್ಯಗಳಿಗೆ ಒದಗಿಸುತ್ತವೆ. ಆದರೆ ಏಕಬೆಳೆ ಪದ್ಧತಿ ಅನುಸರಿಸುವ ಕಾರಣ ಕೃಷಿ ಭೂಮಿಯಲ್ಲಿ ಪೋಷಕಾಂಶಗಳ ಕೊರತೆ ಕಂಡುಬರುತ್ತದೆ. ಹಾಗಾಗಿ ಇಳುವರಿ ಕುಂಠಿತವಾಗುತ್ತದೆ. ಹಾಗಾಗಿ ಹೆಚ್ಚುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರದ ಬೇಡಿಕೆಯನ್ನು ಪೂರೈಸಲು ಕೃಷಿ ಭೂಮಿಗೆ ಕೃತಕವಾಗಿ ಪೋಷಕಾಂಶಗಳನ್ನು ಸೇರಿಸಲಾಗುತ್ತಿದೆ. ಪೋಷಕಾಂಶಗಳನ್ನು ಒದಗಿಸುವ ಈ ಪದಾರ್ಥಗಳೇ ಗೊಬ್ಬರಗಳು. ಈ ಗೊಬ್ಬರಗಳು ಉದಾಹಣೆಗೆ ಯುರಿಯಾ, ಡಿಎಪಿ, ಮಂಗಳ, ಎನ್‌ಪಿಕೆ ಇತ್ಯಾದಿ.

ಗೊಬ್ಬರಗಳ ಸತತ ಬಳಕೆಯಿಂದ ಅಮೋನಿಯಂ ಫಾಸ್ಫೇಟ್, ಅಮೋನಿಯಂ ಸಲ್ಫೇಟ್‌ಗಳಂತ ರಸಗೊಬ್ಬರಗಳು ಮಣ್ಣಿಗೆ ಸತತವಾಗಿ ಸೇರುತ್ತಿದ್ದರೆ ಮಣ್ಣಿನಲ್ಲಿ ಅಮ್ಲೀಯತೆ ಪ್ರಮಾಣ ಹೆಚ್ಚುತ್ತದೆ. ಸೋಡಿಯಂ ನೈಟ್ರೇಟ್ ನಂತಹ ಗೊಬ್ಬರಗಳನ್ನು ಬಳಸುತ್ತಾ ಬಂದಲ್ಲಿ ಕ್ಷಾರತೆಯ ಪ್ರಮಾಣ ಏರುತ್ತದೆ. ಒಟ್ಟಾರೆ ಮಣ್ಣಿನ ಆಮ್ಲಕ್ಷಾರತೆ ಮಟ್ಟದಲ್ಲಿ ಏರುಪೇರು ಉಂಟಾಗುತ್ತದೆ. ಪಾಸ್ಫೇಟ್ ಗೊಬ್ಬರಗಳಿಂದಾಗಿ ವಿಷಕಾರಿ ಆರ್ಸೆನಿಕ್, ಕ್ಯಾಡ್ಮಿಯಂ ನಂತಹ ಭಾರ ಲೋಹಗಳು, ಯುರೇನಿಯ, ಪುಲೋನಿಯಂನಂತಹ ವಿಕಿರಣ ಶೀಲ ಧಾತುಗಳು ಮಣ್ಣಿಗೆ ಸೇರ್ಪಡೆಯಾಗುತ್ತಿವೆ. ಆ ಮೂಲಕ ಸಸ್ಯ ಅಂಗಾಂಶಗಳಲ್ಲೂ ಸೇರ್ಪಡೆಯಾಗುತ್ತಿವೆ. ಇದರಿಂದಾಗಿ ಮಣ್ಣಿನ ಸಂರಚನೆ ಕ್ಷೀಣಿಸಿ, ಮಣ್ಣಿನ ಸಾರ ಕಳೆದುಕೊಳ್ಳುವಂತೆ ಮಾಡುತ್ತಿವೆ. ಅಮೋನಿಯಂ ನೈಟ್ರೇಟ್ ಗೊಬ್ಬರ ಬಳಸಿದಾಗ ಸಸ್ಯಗಳು ಅಮೋನಿಯಂ ಅಯಾನುಗಳನ್ನು ಹೆಚ್ಚಾಗಿ ತೆಗೆದುಕೊಳ್ಳುತ್ತವೆ. ಆದರೆ ನೈಟ್ರೇಟ್ ಅಯಾನುಗಳು ಹೀರಲ್ಪಡುವುದಿಲ್ಲ. ಇವುಗಳು (ನೈಟ್ರೇಟ್ ಅಯಾನುಗಳು) ಅಂತರ್ಜಲವನ್ನು ಸೇರಿ ನೀರನ್ನು ವಿಷವನ್ನಾಗಿ ಮಾಡುತ್ತವೆ. ಹಾಗೂ ನೀರಿನಲ್ಲಿ ಆಮ್ಲಜನಕವಿಲ್ಲದಂತೆ ಮಾಡುತ್ತದೆ. ಆಹಾರದಲ್ಲಿ ಪೋಷಕಾಂಶಗಳ ಕೊರತೆಯನ್ನುಂಟು ಮಾಡಿ, ಸದ್ದಿಲ್ಲದೆ ರೋಗಗಳನ್ನು ತಂದು, ಸಾವಿನ ದವಡಿಗೆ ನೂಕುತ್ತಿವೆ.

ಜಾಗತೀಕರಣದ ಪ್ರಭಾವದಿಂದ ವಿಶ್ವದಲ್ಲಿರುವ ಬಹುತೇಕ ರಾಷ್ಟ್ರಗಳು "ಏಕರೂಪ ಕೃಷಿಗೆ" ಒಳಪಟ್ಟಿರುವುದರಿಂದ ಮತ್ತು ಕಂಪನಿಯ ಲಾಭದ ಲೆಕ್ಕಾಚಾರದ ಮೇಲೆ ನಿರ್ಧರಿಸಲ್ಪಟ್ಟಿದ್ದು, ಪ್ರಕೃತಿ ನಿರ್ದೇಶಿತ ಬಹು ಬೆಳೆಗಳ ವೈವಿಧ್ಯತೆ ನಾಶವಾಗಿವೆ. ಈಗಾಗಲೇ ಜಲಾಶಯಗಳ ಆಶ್ರಯದಲ್ಲಿ "ಜಲ ಮರು ಭೂಮಿ" ಮತ್ತು ಏಕ ಬೆಳೆ ಪದ್ಧತಿಗೆ ಒಳಪಟ್ಟಿರುವ ಪ್ರದೇಶದಲ್ಲಿ 'ನೆಲ ಮರುಭೂಮಿ' ಸೃಷ್ಟಿಯಾಗುವ ಪ್ರಕ್ರಿಯೆ ನಡೆಯುತ್ತಿದೆ. ಆಧುನಿಕ ಕೃಷಿಯಿಂದ ಮರಗಳ ನಾಶ, ಮಣ್ಣು ಮತ್ತು ನೀರು ವಿಪರೀತ ಮಲೀನಗೊಂಡು ಜೀವಿಗಳಿಗೆ ಸಹಜ ಉಸಿರಾಟಕ್ಕೆ ತೊಂದರೆಯಾಗುತ್ತದೆ. ಅಂತರ್ಜಲಮಟ್ಟ ಕಡಿಮೆಯಾಗಿ, ಬೆಳೆಗಳ ಸಂಯೋಜನೆ ಇಲ್ಲದಿರುವುದರಿಂದ ಬೆಳೆಗಳ ನಡುವೆ ಇರುವ ಅಂತರ್ ಸಂಬಂಧ ಕಡಿದುಕೊಳ್ಳುವುದು. ಈ ಎಲ್ಲಾ ಅಂಶಗಳಿಂದ "ಆಧುನಿಕ ಕೃಷಿಯ ಏಕದಳ ಪದ್ಧತಿ" ನಿಸರ್ಗ ಸಹಜ ಕ್ರಿಯೆಗಳಿಗೆ ಅಡ್ಡಿ ಮಾಡುತ್ತಿರುವದರಿಂದ, ಪರಿಸರಕ್ಕೂ ಹಾನಿ ಮಾಡಿ ರೈತ ತಾನೂ ಸಂಕಷ್ಟದಲ್ಲಿದ್ದು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ.

ಆಧುನಿಕ ಕೃಷಿ ಸೃಷ್ಟಿಸಿರುವ ಈ ಅವಾಂತರವನ್ನು ಸರಿಗಟ್ಟುವುದು ಹೇಗೆ? ಎಂಬುದೇ ಮುಖ್ಯವಾದ ಪ್ರಶ್ನೆ. ಈ ಪ್ರಶ್ನೆಗೆ ಹಲವು ಸಾವಯವ ವಿಧಾನಗಳು ಪರ್ಯಾಯವಾಗಿ ಕಾಣಸಿಗುತ್ತವೆ. ಮತ್ತು ಪ್ರಯೋಗಿಸಲ್ಪಟ್ಟಿದೆ. ಆದರೂ ಯಾವ ಮಾದರಿಯೂ ಆಧುನಿಕ ಕೃಷಿ ಪದ್ಧತಿಯು ಸೃಷ್ಟಿಸಿರುವ ಅವಗಡದಿಂದ ಬಿಡುಗಡೆ ಪಡೆಯುವಷ್ಟು ಸಶಕ್ತವಾಗಿಲ್ಲ. ಮತ್ತು ಎಲ್ಲಾ ರೈತರ ಹಿತವನ್ನು ಕಾಯುವಂತಿಲ್ಲ.[೨]

ಬಹು ಬೆಳೆ ಪದ್ಧತಿಯಲ್ಲಿ ದ್ವಿದಳ ಮತ್ತು ಏಕದಳ ಬೆಳೆಗಳನ್ನು ಅಳವಡಿಸಲಾಗುವುದು. ದ್ವಿದಳ ಮತ್ತು ಏಕದಳ ಬೆಳೆಗಳ ಸಂಯೋಜನೆಯು, ನಿಸರ್ಗವು ನಿರ್ಧರಿಸುವಂತಹ ಮಾದರಿಯಲ್ಲಿಯೇ ದೊಡ್ಡದಾಗಿ ಕೃಷಿ ಭೂಮಿಯ ಎಲ್ಲಾ ಬೆಳೆಗಳ ನಡುವೆ ಪರಸ್ಪರ ಅಂತರ್ ಸಂಬಂಧ ಏರ್ಪಟ್ಟು, ಸುಸ್ಥಿತರ ಕೃಷಿಗೆ ನೆಲೆಯಾಗುವುದು ಮುಖ್ಯ. ಅಲ್ಲದೆ ಕಳೆ ಸಸ್ಯಗಳನ್ನು ಅನಗತ್ಯವಾಗಿ ತೆಗೆಯದೆ ಉಳಿಸಿಕೊಳ್ಳಲಾಗುವುದು. ಇದರಿಂದ ಮಣ್ಣಿನಲ್ಲಿ ಗೊಬ್ಬರ ಸೃಷ್ಟಿಯಾಗುವ ಕೀಟಗಳ ನಿಯಂತ್ರಣಗಳ ಸಹಜ ಕ್ರಿಯೆಯು ಆಸ್ತಿತ್ವ ಪಡೆಯುವುದು.

ಬಯಲುಸೀಮೆ ಪ್ರದೇಶವಾಗಿರುವುದರಿಂದ ನೀರಿನ ಅಲಭ್ಯತೆ ಹೆಚ್ಚಾಗಿರುತ್ತದೆ. ಇದರಿಂದಾಗಿ ರೈತರು ಈ ಭಾಗದಲ್ಲಿ ಸಾಂಪ್ರದಾಯಿಕ ನೀರಾವರಿ ಪದ್ದತಿಯನ್ನು ಅಳವಡಿಸಕೊಳ್ಳಬಾರದು. ಇದರಿಂದಾಗಿ ನೀರು ಅನಾವಶ್ಯಕವಾಗಿ ಪೋಲಾಗುತ್ತದೆ. ಬೆಳೆಗಳ ಇಳುವರಿ ಕಡಿಮೆಯಾಗಿ ಉತ್ಪನ್ನಗಳ ಕಡಿಮೆ ಗುಣಮಟ್ಟವನ್ನು ಹೊಂದಿರುತ್ತವೆ. ಹೆಚ್ಚು ಕಳೆಗಳು ಬೆಳೆಯುತ್ತವೆ. ಭೂಮಿಯ ಸವಳಿಕೆಯಾಗುತ್ತದೆ. ಅನಿಯಮಿತ ವಿದ್ಯುತ್ ಬಳಕೆ. ಇಳಿಜಾರು ಪ್ರದೇಶದಲ್ಲಿ ಈ ಪದ್ಧತಿ ಬಳಕೆಯಾಗುವುದಿಲ್ಲ. ಪೋಷಕಾಂಶಗಳ ಸದ್ಬಳಕೆ ಕಡಿಮೆಯಾಗುತ್ತದೆ ಮುಂತಾದ ಸಮಸ್ಯೆಗಳನ್ನು ರೈತರು ಎದುರಿಸಬೇಕಾಗುತ್ತದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ನಮಗೆ ಕಂಡು ಬರುವ ಪ್ರಮುಖ ಅಂಶವೆಂದರೆ ಕೃಷಿ ಬಳಕೆಗೆ ಲಭ್ಯವಿರುವ ನೀರಿನ ಪ್ರಮಾಣ ಕೇವಲ ಅತ್ಯಲ್ಪವಾಗಿದ್ದು, ಇದನ್ನು ಬಹಳ ಮಿತವಾಗಿ ಬಳಸಬೇಕಾಗುತ್ತದೆ. ಬಯಲುಸೀಮೆಯಲ್ಲಿ ಶೇ.೮೦ ರಿಂದ ೯೦ ಭಾಗದಷ್ಟು ಭೂಮಿಯು ನೀರಾವರಿಯಲ್ಲದ ಪ್ರದೇಶವಾಗಿರುತ್ತದೆ. ಹಾಗಾಗಿ ಅತ್ಯಲ್ಪ ನೀರಿನ ಬಳಕೆಯನ್ನು ಬೆಳೆಗಳಿಗೆ ಪೋಲಾಗದಂತೆ ಮಿತವಾಗಿ ಬಳಸಿ ರೈತರ ಆರ್ಥಿಕ ಮಟ್ಟವನ್ನು ಸುಧಾರಿಸಿ ಪ್ರದೇಶವನ್ನು ೪೦ ರಿಂದ ೫೦ ರಷ್ಟು ನೀರಾವರಿಗೆ ಒಳಪಡಿಸಬಹುದು. ಇದಕ್ಕೆ ಐಕ್ಯಕ ಮಾರ್ಗವೆಂದರೆ ಅಂತರ್ಜಲ ಮಟ್ಟಕ್ಕೆ ಧಕ್ಕೆಯಾಗದಂತೆ ಸೂಕ್ಷ್ಮ ನೀರಾವರಿ ಪದ್ಧತಿ ಅಳವಡಿಸಿಕೊಳ್ಳುವುದು. ಇದರಿಂದಾಗಿ ನೀರಿನ ಉಳಿತಾಯ ಹಾಗೂ ಅಧಿಕ ಇಳುವರಿ ಪಡೆಯುವ ದೃಷ್ಟಿಯಿಂದ ನೇರವಾಗಿ ನೀರನ್ನು ಸಣ್ಣ ಪೈಪುಗಳ ಮೂಲಕ ಗಿಡಗಳ ಬುಡಕ್ಕೆ ಅಂದರೆ ಬೇರಿನ ವಲಯಕ್ಕೆ ಪೂರ್ಣ ಪ್ರಮಾಣದಲ್ಲಿ ಕೊಡಲಾಗುತ್ತದೆ. ಈ ಪದ್ಧತಿಯಲ್ಲಿ ೨ ವಿಧಗಳಿವೆ. ಅವುಗಳೆಂದರೆ ಹನಿ ನೀರಾವರಿ ಮತ್ತು ತುಂತರು ನೀರಾವರಿ. ಈ ಪದ್ಧತಿಯನ್ನು ರೈತರು ಅಳವಡಿಸಿಕೊಳ್ಳುವುದರಿಂದ ಶೇ.೫೦ ರಷ್ಟು ನೀರಿನ ಉಳಿತಾಯವಾಗುತ್ತದೆ. ಬೆಳೆಗಳಲ್ಲಿ

ಹೆಚ್ಚು ಇಳುವರಿ ಉತ್ಪನ್ನ ಗುಣಮಟ್ಟದ್ದಾಗಿರುತ್ತದೆ. ಕಡಿಮೆ ಕಳೆ ಭೂಮಿಯ ಸವಕಳಿ ತಡೆಯಬಹುದು. ಕಡಿಮೆ ಪ್ರಮಾಣದ ವಿದ್ಯುತ್ ಬಳಕೆ, ಇಳಿಜಾರು ಪ್ರದೇಶಗಳಲ್ಲಿ ಬಳಕೆ ಗೊಬ್ಬರಗಳ ಬಳಕೆಯ ಮೂಲಕ ಪೋಷಕಾಂಶಗಳ ಪೂರೈಕೆ ಮತ್ತು ಸದ್ಬಳಕೆ ಮುಂತಾದ ಅನುಕೂಲಗಳನ್ನು ಪಡೆಯಬಹುದಾಗಿದೆ.

ಕೃಷಿ ನಿರತ ರೈತರು ಉಪಕಸುಬನ್ನಾಗಿ ಮಾಡಿಕೊಂಡಿರುವ ದನಕರುಗಳ ಉಪಯುಕ್ತತೆಯ ಬಗ್ಗೆ ಒತ್ತಿ ಹೇಳಬೇಕಾಗಿಲ್ಲ. ಹಳ್ಳಿಗಳಲ್ಲಿ ರಾಸುಗಳ ಸಗಣಿ ಮತ್ತು ಗಂಜಳ ಹೆಚ್ಚಾಗಿ ಪೋಲಾಗುತ್ತಿದೆ. ಸಗಣಿಯನ್ನು ಬರಣಿಯಾಗಿ ಉಪಯೋಗಿಸಿ ಪ್ರಕೃತಿಯ ಸಸ್ಯ ಆಹಾರಂಶವನ್ನು ಸುಡುತ್ತಿದ್ದಾರೆ. ಈ ಸಗಣಿ ಮತ್ತು ಗಂಜಳವನ್ನು ಧನದ ಕೊಟ್ಟಿಗೆಗಳಲ್ಲಿ ಪೋಲಾಗದಂತೆ ತಡೆಯಲು ಧನದ ಕೊಟ್ಟಿಗೆಯನ್ನು ಸಿಮೆಂಟಿನಲ್ಲಿ ಮಾಡಿಸಿದರೆ ಮಣ್ಣಿನಲ್ಲಿ ಗಂಜಲ ಇಂಗದೆ. ಅದನ್ನು ಶೇಖರಿಸಲು ಅನುಕೂಲವಾಗುತ್ತದೆ. ಇದಲ್ಲದೆ ವೈಯಕ್ತಿಕ ಅಥವಾ ಸಾಮೂಹಿಕ ಗೋಬರ್ ಗ್ಯಾಸ್ ಎಂಬ ಅನಿಲವನ್ನು ಉತ್ಪತ್ತಿ ಮಾಡುವ ಯಂತ್ರಗಳನ್ನು ಹಳ್ಳಿಗಳಲ್ಲಿ ಉಪಯೋಗಕ್ಕೆ ತರಬೇಕು. ಸಗಣಿಯನ್ನು ಈ ಯಂತ್ರಗಳಲ್ಲಿ ಉಪಯೋಗಿಸುವುದರಿಂದ ಸಸ್ಯ ಆಹಾರಂಶವನ್ನು ಹೆಚ್ಚಿಸುವುದಲ್ಲದೆ, ಅಡಿಗೆ ಮಾಡುವುದಕ್ಕೆ ಬೇಕಾದ ಒಲೆಯ ಉರಿಯನ್ನು ಕೂಡ ಉತ್ಪಾದಿಸಬಹುದು. ಇದರಿಂದಾಗಿ ಅರಣ್ಯ ಸಂಪತ್ತನ್ನು ಹಳ್ಳಿಗಳ ಭಾಗದಲ್ಲಿ ಕಾಪಾಡಬಹುದು. ಅದರಲ್ಲೂ ಚೀನಾ ಮಾದರಿಯ ಗೋಬರ್ ಯಂತ್ರಗಳನ್ನು ಬಳಕೆಗೆ ತಂದರೆ. ಈಗಿರುವ ಗೋಬರ್ ಯಂತ್ರಗಳ ಖರ್ಚಿಗಿಂತ ಅರ್ಧ ಖರ್ಚಿನಲ್ಲಿಯೇ ಈ ಯಂತ್ರಗಳನ್ನು ರೂಪಿಸಿಕೊಳ್ಳಬಹುದು. ಈಗ ರೂಡಿಯಲ್ಲಿರುವ ತಿಪ್ಪೆಗೊಬ್ಬರಗಳನ್ನು ಶೇಖರಿಸುವ ಕ್ರಮ ತಾಂತ್ರಿಕ ದೃಷ್ಟಿಯಿಂದ ಅತೀ ಕೀಳುಮಟ್ಟದಲ್ಲಿದೆ. ಇದರಿಂದ ತಿಪ್ಪೆ ಗೊಬ್ಬರದಲ್ಲಿರುವ ಸಸ್ಯ ಆಹಾರಾಂಶವು ಪೋಲಾಗುತ್ತಿದೆ. ತಾಂತ್ರಿಕವಾಗಿ ತಿಪ್ಪೆಗೊಬ್ಬರವನ್ನು ರೂಡಿಸಬೇಕಾದರೆ ೩ ಅಡಿ ಅಗಲ, ೬ ಅಡಿ ಉದ್ದ ಮತ್ತು ೩ ಅಡಿ ಆಳದ ಒಂದು ಹಳ್ಳವನ್ನು ತೋಡಬೇಕು. ಈ ಹಳ್ಳದ ಒಂದು ತುದಿಯಿಂದ ೩ ಅಡಿ ಉದ್ದದಲ್ಲಿ ಮಾತ್ರ ಗಂಜಳ, ಸಗಣಿ ಮತ್ತು ಹುಲ್ಲು ಇವುಗಳನ್ನು ಮಿಶ್ರಣ ಮಾಡಿ, ಕೇವಲ ೨ ರಿಂದ ೩ ದಿವಸಗಳಲ್ಲಿ ೩ ಅಡಿ ಆಳವಿರುವ ಈ ಹಳ್ಳದ ಮೇಲ್ಭಾಗಕ್ಕೆ ಬರುವವರೆಗೂ ತುಂಬಬೇಕು. ಈ ರೀತಿ ಗೊಬ್ಬರದ ಗುಂಡಿಯು ಪೂರ್ತಿಯಾಗಿ ತುಂಬಿದ ಮೇಲೆ ಮೇಲ್ಭಾಗವನ್ನು ಮಣ್ಣಿನಿಂದ ಸಾರಿಸಿ ಜೋಪಾನ ಮಾಡಿದರೆ ೩ ತಿಂಗಳಲ್ಲಿ ಅತ್ಯುತ್ತಮ ಗೊಬ್ಬರವಾಗುವುದು. ಇದರಿಂದ ಉತ್ಪತ್ತಿಯಾದ ಗೊಬ್ಬರವನ್ನು ಹೊಲ ಉಳುಮೆ ಮಾಡುವ ೨-೩ ದಿವಸಗಳ ಮುಂಚಿತವಾಗಿ ಹರಡಬೇಕು. ತಿಂಗಳಿಗಿಂತ ಮುಂಚಿತವಾಗಿಯೇ ಗೊಬ್ಬರವನ್ನು ಹರಡಿದರೆ, ಅದರಲ್ಲಿರುವ ಅಂಶವು ವ್ಯರ್ಥವಾಗುತ್ತದೆ.

ಬಯಲುಸೀಮೆ ಪ್ರದೇಶದಲ್ಲಿರುವ ಬ್ಯಾಂಕುಗಳು ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಕೃಷಿ ಮತ್ತು ಕೃಷಿ ಪೂರಕ ಸಾಲಗಳನ್ನು ನೀಡುವುದರ ಮೂಲಕ ಹಣಕಾಸಿನ ನೆರವನ್ನು ನೀಡುತ್ತಿವೆ. ಈ ಬ್ಯಾಂಕುಗಳು ಬಡತನ ನಿರ್ಮೂಲನೆ ಯೋಜನೆ ಅಡಿಯಲ್ಲಿ ಬರಪೀಡಿತ

ಪ್ರದೇಶಗಳಿಗೆ ಹಣಕಾಸು ನೆರವು ನೀಡುವಂತಹ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರಿಯವಾಗಿವೆ. ಶೇ.೭೦ರಷ್ಟು ಆದ್ಯತಾ ಕ್ಷೇತ್ರಗಳಲ್ಲಿ ಸಾಲ ನೀಡುವ ಈ ಬ್ಯಾಂಕುಗಳು ನಿರ್ದಿಷ್ಟವಾಗಿ ಕೃಷಿ ಕ್ಷೇತ್ರಕ್ಕೆ ಶೇ.೫೦ರಷ್ಟು ಸಾಲ ನೀಡುತ್ತಿವೆ. ಪ್ರಮುಖ ಕೃಷಿ ಮತ್ತು ಕೃಷಿ ಪೂರಕ ಸಾಲಗಳೆಂದರೆ ಬೆಳೆ ಸಾಲ, ಕಿಸಾನ್ ಕ್ರೆಡಿಟ್ ಕಾರ್ಡ್ ಯೋಜನೆ, ವ್ಯವಸಾಯ ಅಭಿವೃದ್ಧಿಗಾಗಿ ಸಾಲಗಳು. ಕೃಷಿ ಯಂತ್ರಗಳಿಗೆ ಸಾಲ, ಪಂಪ್‌ಸೆಟ್ ಸಾಲ, ಹನಿ ಮತ್ತು ತುಂತುರು ನೀರಾವರಿ ಸಾಲ, ರೈತರಿಗೆ ಭೂಮಿ ಖರೀದಿಸಲು ಸಾಲ. ವಾಹನ ಖರೀದಿಸಲು ಸಾಲ, ಉತ್ಪಾದನಾ ಸಾಲ, ರೇಷ್ಮೆ ಕೃಷಿಗಾಗಿ ಸಾಲ, ಸರಳ ಕೃಷಿಕ ಸಾಲ, ಕೃಷಿಗಾಗಿ ಬಂಗಾರದ ಒಡವೆಗಳ ಮೇಲೆ ಸಾಲ, ಎತ್ತುಗಾಡಿ ಸಾಲ, ಡೈರಿ ಸಾಲ, ಪಶುಸಂಗೋಪನೆ ಹಾಗೂ ಕೋಳಿ ಸಾಕಾಣಿಕೆ ಸಾಲ ಮುಂತಾದವು. ಒಟ್ಟಾರೆಯಾಗಿ ಬ್ಯಾಂಕಿನ ಸಾಲ ನೀತಿಗಳನ್ನು ಗಮನಿಸಿದಾಗ ಗ್ರಾಮೀಣ ಅಭಿವೃದ್ಧಿಗಾಗಿ ಬ್ಯಾಂಕ್‌ಗಳು ಹಾಕಿಕೊಂಡಿರುವ ಯೋಜನೆಗಳು ಮಹತ್ವವೆನಿಸುತ್ತವೆ. ಅಲ್ಪಾವಧಿ ಸಾಲಗಳು, ಮಧ್ಯಮಾವಧಿ ಸಾಲಗಳು, ದೀರ್ಘಾವಧಿ ಸಾಲಗಳು ಅದ್ಯತವಲಯ ಮತ್ತು ಆಧ್ಯತೇತರ ವಲಯಗಳ ಅಡಿಯಲ್ಲಿ ದೊರೆಯಲು ಅನುಕೂಲವಾಗುವಂತೆ ಉತ್ತಮ ರೀತಿಯ ಸಾಲ ನೀತಿಯನ್ನು ಅಳವಡಿಸಿಕೊಂಡಿದೆ. ಬ್ಯಾಂಕಿನ ಸಾಲ ನೀಡಿ, ಕಾಲ ಕಾಲಕ್ಕೆ ನಿರ್ಧಾರವಾಗುವ ಬಡ್ಡಿದರಗಳು ಮುಂತಾದ ವಿಷಯಗಳ ಬಗ್ಗೆ ರೈತರಿಗೆ ಖಚಿತ ಮಾಹಿತಿ ಸಿಗದೆ, ಇಂತಹ ಅನುಕೂಲಗಳಿಂದ ವಂಚಿತರಾಗುತ್ತಿದ್ದಾರೆ. ಇದಕ್ಕೆ ಮೂಲ ಕಾರಣ ಸಾಲ ಯೋಜನೆಗಳ ಬಗ್ಗೆ ಯಾವುದೇ ಪ್ರಕಟಣೆಗಳು ಇರುವುದಿಲ್ಲ. ಈ ನಿಟ್ಟಿನಲ್ಲಿ ಎಲ್ಲಾ ಬ್ಯಾಂಕ್‌ಗಳು ಗ್ರಾಮೀಣ ಪ್ರದೇಶಗಳ ರೈತರಿಗೆ ತಮ್ಮಲ್ಲಿ ದೊರೆಯುವ ಸಾಲ ಸೌಲಭ್ಯಗಳ ಕುರಿತಂತೆ ಪತ್ರಿಕೆಗಳಲ್ಲಿ ಟಿ.ವಿ. ರೇಡಿಯೋ ಮಾಧ್ಯಮಗಳ ಮೂಲಕ ಪ್ರಸಾರ ಮಾಡುವ ಅಗತ್ಯತೆ ಇದೆ.[೧೩] ಈ ಮೂಲಕ ರೈತರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವ ಪ್ರಯತ್ನ ಮಾಡಬಹುದು.

ಈ ಭಾಗದಲ್ಲಿ ಮಳೆಯು ರೈತರೊಂದಿಗೆ ಜೂಜಾಟವಾಡುವುದು ಸರ್ವಕಾಲಿಕ ಸತ್ಯವಾಗಿದೆ. ಇದರಿಂದಾಗಿ ರೈತ ಸಾಲದಲ್ಲಿ ಹುಟ್ಟಿ ಸಾಲದಲ್ಲಿಯೇ ಬೆಳೆದು ಸಾಲದಲ್ಲಿಯೇ ಸಾಯುತ್ತಿದ್ದಾನೆ. ಇದು ಬಯಲು ಸೀಮೆಯ ಜಿಲ್ಲೆಗಳಾದ ದಾವಣಗೆರೆ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಕಾಣಬಹುದು. ರೈತರು ಮೊದಲಿನಿಂದಲೂ ಅತೀವೃಷ್ಠಿ ಅನಾವೃಷ್ಠಿಯಿಂದ ಉಂಟಾಗುವ ಬೆಳೆ ನಷ್ಠ ಬ್ಯಾಂಕ್‌ಗಳಿಂದ ಮತ್ತು ದಲ್ಲಾಳಿಗಳಿಂದ ಪಡೆದ ಬೆಳೆ ಸಾಲ, ಕೊಳವೆ ಬಾವಿ ಕೊರೆಸಿದ ಸಾಲ, ಆಧುನಿಕ ಯಂತ್ರೋಪಕರಣಗಳನ್ನು ತೆಗೆದುಕೊಳ್ಳಲು ಸಾಲ, ಆಧುನಿಕ ಕೃಷಿ ಪದ್ಧತಿ ಆಳವಡಿಸಿಕೊಳ್ಳಲು ಸಾಲ, ವೈಜ್ಞಾನಿಕ ಅಥವಾ ಬೆಂಬಲ ಬೆಲೆ ಸಿಗದೆ ಇರುವುದು ಮಾರುಕಟ್ಟೆಗಳಲ್ಲಿ ದಲ್ಲಾಳಿಗಳ ಹಾವಳಿ ಚಿನ್ನಾಭರಣದ ಸಾಲ, ಕುಟುಂಬ ನಿರ್ವಹಣೆಗೆ ಮಾಡಿದ ಸಾಲ, (ಮಕ್ಕಳ ಶಿಕ್ಷಣ, ಹೆಣ್ಣು ಮಕ್ಕಳನ್ನು ವಿವಾಹ ಮಾಡಲು, ಬಾಣಂತನ, ಕುಟುಂಬದ ಆರೋಗ್ಯ, ಕೌಟುಂಬಿಕ ಕಲಹಗಳು) ಮುಂತಾದುವುಗಳಿಂದ ರೈತ ದಿನದಿಂದ ದಿನಕ್ಕೆ

ಸಾಲಗಾರನಾಗುತ್ತಾ ಆತ್ಮಹತ್ಯೆಗೆ ಮುಂದಾಗುತ್ತಿದ್ದಾನೆ. ಇವುಗಳ ಜೊತೆಗೆ ಕೆಲ ರೈತರು ಕುಡಿತ, ಜೂಜಾಟ, ಮುಂತಾದ ಕೆಟ್ಟ ಕೆಲಸಗಳಿಗಾಗಿ ಸಾಲ ಮಾಡಿ ಅಧಿಕ ನಷ್ಟ ಅನುಭವಿಸುತ್ತಿದ್ದಾರೆ. ಇದರಿಂದ ರೈತ ಆತ್ಮಹತ್ಯೆಗೆ ಶರಣಾಗಿ ತನ್ನ ಇಡೀಕುಟುಂಬವನ್ನು ಆರ್ಥಿಕ ಸಂಕಷ್ಟಕ್ಕೆ ಸಿಲುಕಿಸುತ್ತಾನೆ. ಹಾಗಾದರೆ ರೈತನಿಗೆ ಸಾಲದ ಅಂತ್ಯ ಇಲ್ಲವೇ? ರೈತ ಸಾಲದಿಂದ ಯಾವಾಗ ಮುಕ್ತನಾಗುತ್ತಾನೆ? ಎಂಬ ಪ್ರಶ್ನೆಗಳು ಹಾಗೆಯೇ ಮುಂದುವರೆದುಕೊಂಡು ಬರುತ್ತಿವೆ.

ಸಾಲದಿಂದ ರೈತ ವಿಮುಕ್ತಿ ಹೊಂದಬೇಕಾದರೆ ರೈತ ಬೆಳೆದ ಬೆಳೆಗಳಿಗೆ ರಕ್ಷಣೆ ಒದಗಿಸುವುದು ಸೂಕ್ತ. ಅತೀವೃಷ್ಟಿ, ಅನಾವೃಷ್ಟಿಯಾದಾಗ ಕೃಷಿ ನೀತಿ ಜಾರಿಗೆಯಾಗಬೇಕು. ಕೈಗಾರಿಕಾ ವಸ್ತುಗಳಿಗೆ ಬೆಲೆ ನಿಗದಿ ಪಡಿಸಿದಂತೆ, ರೈತ ಬೆಳೆದ ಬೆಳೆಗಳಿಗೆ ತಾನು ವೆಚ್ಚ ಮಾಡಿದ್ದಕ್ಕಿಂತ ಅರ್ಧ ಭಾಗದಷ್ಟನ್ನು ಸೇರಿಸಿ ಬೆಲೆ ನಿಗದಿ ಮಾಡಬೇಕು. ಬೆಂಬಲ ಬೆಲೆ ಘೋಷಿಸಬೇಕು. ದಲ್ಲಾಳಿಗಳ ಶೋಷಣೆಯಿಂದ ಮುಕ್ತರಾಗಿಸಬೇಕು. ಪ್ರದೇಶಕ್ಕೆ ತಕ್ಕಂತೆ ಸೂಕ್ತ ಬೆಳೆ ಪದ್ಧತಿ ಘೋಷಿಸಬೇಕು. ಬಿತ್ತನೆಗೆ ಅವಶ್ಯಕವಾದ ಬಿತ್ತನೆ ಬೀಜ ಗೊಬ್ಬರಗಳನ್ನು ಸಬ್ಸಿಡಿ ದರದಲ್ಲಿ ಸರ್ಕಾರ ಸಕಾಲದಲ್ಲಿ ಒದಗಿಸಬೇಕು. ಬೆಳೆ ವಿಮಾ ಯೋಜನಾ ಜಾರಿಗೆ ಆರೋಗ್ಯ ವಿಮಾ ಯೋಜನೆ, ರೈತರ ಮಕ್ಕಳಿಗೆ ಉಚಿತ ಶಿಕ್ಷಣ, ಹಾಗೂ ರೈತರು ದುಶ್ಚಟಗಳಿಂದ ದೂರವಿಡುವಂತೆ ಮಾಡಲು ಜಾಗೃತಿ ಕಾರ್ಯಕ್ರಮ ಹಾಗೂ ಕಟ್ಟುನಿಟ್ಟಿನ ಕಾನೂನು ಕ್ರಮ ತೆಗೆದುಕೊಳ್ಳುವುದು ಅವಶ್ಯ.

ಭಾರತ ಹಳ್ಳಿಗಳ ದೇಶ. ಹಳ್ಳಿಗಳಲ್ಲಿರುವ ರೈತರ ಮುಖ್ಯ ಕಸುಬು ಕೃಷಿ. ಇದನ್ನು ಲಾಭದಾಯಕ ಕಸುಬನ್ನಾಗಿ ಮಾಡುವುದರೊಂದಿಗೆ ಸ್ವಾವಲಂಬಿ ಗ್ರಾಮ ಸ್ಥಾಪನೆ ಮಾಡುವುದರ ಮೂಲಕ ದೇಶದ ಅಭಿವೃದ್ಧಿ ಸಾಧ್ಯ. ಸ್ವಾತಂತ್ರ್ಯ ನಂತರ ಕೃಷಿಯನ್ನು ಕಡೆಗಾಣಿಸಿದರ ಫಲವಾಗಿ ರೈತರು ಮತ್ತು ದೇಶ ಆರ್ಥಿಕ ಸಂಕಷ್ಟವನ್ನು ಎದುರಿಸುತ್ತಿದ್ದಾರೆ. ಈ ಹಿಂದೆ ರೈತ ಕೃಷಿಯನ್ನು ಮಾಡುವಾಗ ಸಾಲದ ಅವಶ್ಯಕತೆ ಇರಲಿಲ್ಲ ಯಾರನ್ನು ಅವಲಂಬಿಸರಲಿಲ್ಲ. ಸಗಣಿ ಗೊಬ್ಬರ. ಮನೆ ಬಿತ್ತನೆ ಬೀಜ. ಗ್ರಾಮದಲ್ಲಿ ಬಡಗಿ, ಕಮ್ಮಾರ, ಚಮ್ಮಾರರು ತಯಾರಿಸಿದ ವ್ಯವಸಾಯದ ಉಪಕರಣಗಳನ್ನು ಉಪಯೋಗಿಸಿಕೊಂಡು ಬೆಳೆ ಬೆಳೆದು ಅವರಿಗೂ ಹಂಚಿ ತಾನು ಊಟ ಮಾಡಿ ನೆಮ್ಮದಿಯ ಜೀವನ ಕಂಡುಕೊಂಡಿದ್ದರು. ಆದರೆ ಪ್ರಸ್ತುತವಾಗಿ ಅನ್ನ ನೀಡುವ ರೈತ ರೇಷನ್ ಕಾರ್ಡಿಗೆ ಕೈಚಾಚುವಷ್ಟು ಅಸಹಾಯಕನಾಗಿದ್ದಾನೆ.

ಅಧಿಕಾರಕ್ಕೆ ಬಂದ ಯಾವುದೇ ಸರ್ಕಾರಗಳು ಇಲ್ಲಿಯವರೆಗೆ ರೈತರ ಬಂಡವಾಳವನ್ನು ಲೆಕ್ಕ ಹಾಕಲೇ ಇಲ್ಲ. ಕರ್ನಾಟಕ ರಾಜ್ಯ ಒಂದರಲ್ಲಿಯೇ ೧೩ಲಕ್ಷ ನೀರಾವರಿ ಪಂಪ್‌ಸೆಟ್ಟುಗಳಿದ್ದು, ೫೦ ಲಕ್ಷ ಎಕರೆಗೆ ನೀರಾವರಿ ಸೌಲಭ್ಯ ಒದಗಿದೆ. ಸರ್ಕಾರ ಬೃಹತ್ ನೀರಾವರಿ ಯೋಜನೆಯಿಂದ ೧ ಎಕರೆಗೆ ನೀರುಣಿಸಲು ೧.೨೫ ಲಕ್ಷರೂ ಖರ್ಚು ಮಾಡುತ್ತಿದೆ. ಈ ಪ್ರಕಾರ ರೈತರು ೬ ಲಕ್ಷ ಕೋಟಿ ರೂ. ಬಂಡವಾಳ ಹಾಕಿದ್ದಾರೆ. ಕರ್ನಾಟಕದಲ್ಲಿ ಎರಡುವರೆ ಕೋಟಿ ದನಗಳಿವೆ. ಇದಕ್ಕೆ ಬಂಡವಾಳ ೧ ಲಕ್ಷ ಕೋಟಿ ರೂ. ಮೇವಿಗೆ ೨೭ ಸಾವಿರ

ಕೋಟಿ ರೂ. ದನಕಟ್ಟಲು ಜಾಗ ಮತ್ತು ಮನೆಗೆ ೧೦ ಸಾವಿರ ಕೋಟಿ ರೂ. ೧ ಕೋಟಿ ರೂ. ಮರದ ಗಾಡಿಗಳಿಗೆ ಎತ್ತುಗಳಿಗೆ ಹದಿನೈದು ಸಾವಿರ ಕೋಟಿ ರೂ. ಎಲ್ಲಾ ಎತ್ತುಗಳಿಗೆ ಒಂದು ಸಾರಿ ಮೂಗು ದಾರ ಹಾಕಲು ೨೨ ಕೋಟಿ ರೂ. ಹಲ್ಲೆ ಕಟ್ಟಲು ಇಪ್ಪತ್ತೈದು ಸಾವಿರ ಕೋಟಿ ರೂ. ಖರ್ಚಾಗುತ್ತದೆ. ನೇಗಿಲಕುಳ ಕಟ್ಟಲು ಒಂದು ಬಾರಿ ೫೦ ಕೋಟಿ ಹೀಗೆ ದೇಶದ ಬೇರೆಲ್ಲಾ ಕ್ಷೇತ್ರಕ್ಕಿಂತ ಹೆಚ್ಚಿನ ಬಂಡವಾಳವನ್ನು ರೈತರು ಬೇಸಾಯಕ್ಕೆ ತೊಡಗಿಸಿದ್ದಾರೆ. ಆದರೆ ಆದಾಯವಿಲ್ಲದೆ ರೈತರು ಬೇಸಾಯ ಮಾಡುತ್ತಿದ್ದಾರೆ. ಈ ದೇಶದ ಪ್ರತಿಯೊಬ್ಬ ವ್ಯಕ್ತಿಗೂ ಪುಕ್ಕಟೆಯಾಗಿ ಆಹಾರ ಒದಗಿಸಿದರು ಸರ್ಕಾರಗಳು ಏಕೆ ಇಲ್ಲಿಯವರೆಗೆ ಕೃಷಿಯ ಮೇಲಿನ ಬಂಡವಾಳವನ್ನು ಬರೆದಿಟ್ಟಿಲ್ಲ. ರೈತರ ಪರವಾದ ಕೃಷಿ ನೀತಿಯೇ ಇಲ್ಲ. ರೈತರ ಧಾನ್ಯಗಳ ಬೆಲೆ ೬ ಪಟ್ಟು ಜಾಸ್ತಿಯಾದರೆ ಕೈಗಾರಿಕೆ ವಸ್ತುಗಳ ಬೆಲೆ ೨೦ ಪಟ್ಟು ಜಾಸ್ತಿಯಾಗುತ್ತದೆ. ಈ ತರಹದ ತಾರತಮ್ಯ ನೀತಿಯಿಂದ ರೈತ ಸಾಲದಿಂದ ಮುಕ್ತನಾಗಲು ಸಾಧ್ಯವಾಗುತ್ತಿಲ್ಲ.

ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರದ ಉದ್ಯಮಿಗಳಿಗೆ ಸಾಲ ಹೇಗೆ ಅವಶ್ಯಕವೋ, ಬೇಸಾಯಗಾರನಿಗೂ ಸಾಲದ ಅವಶ್ಯಕತೆಯಿದೆ. ಸ್ವಂತ ಬಂಡವಾಳದ ಅಭಾವವಿರುವ ಕಡೆ ಸಾಲದ ಅಗತ್ಯವಿರುತ್ತದೆ. ರೈತರು ಸಾಮಾನ್ಯವಾಗಿ ಸಣ್ಣ ಹಿಡುವಳಿಗಳಲ್ಲಿ ಕೃಷಿ ಮಾಡುವುದರಿಂದ ಉತ್ಪನ್ನದ ಪ್ರಮಾಣ ಕಡಿಮೆ ಇರುತ್ತದೆ. ಬಂದ ಆದಾಯ ಸಂಪೂರ್ಣವಾಗಿ ಕುಟುಂಬದ ವಾರ್ಷಿಕ ಖರ್ಚಿಗೆ ವೆಚ್ಚವಾಗುತ್ತದೆ. ಆದ್ದುದರಿಂದ ಅವರಲ್ಲಿ ಹಣವನ್ನು ಉಳಿಸಿ ಬಂಡಾವಳವನ್ನು ಕೂಡಿಡುವ ಸಾಮರ್ಥ್ಯ ಕಡಿಮೆವಿರುತ್ತದೆ. ಅದರಲ್ಲೂ ಬಯಲು ಸೀಮೆಯ ಪ್ರದೇಶಗಳಲ್ಲಿ ಈ ಸಮಸ್ಯೆ ಹೆಚ್ಚಾಗಿರುತ್ತದೆ. ಕೃಷಿಗೆ ಸಾಕಷ್ಟು ಬಂಡವಾಳ ಹೂಡದ ಹೊರತು ಉತ್ಪನ್ನ ಹೆಚ್ಚುವದಿಲ್ಲ. ಉತ್ಪನ್ನ ಹೆಚ್ಚಾಗದೆ ರೈತನ ಬಂಡವಾಳ ಹೆಚ್ಚುವುದಿಲ್ಲ. ಸ್ವಂತ ಪಡೆದು ಉತ್ತಮ ಬೀಜ, ಗೊಬ್ಬರಗಳು, ನೀರಾವರಿ ಸೌಲಭ್ಯ ತಾಂತ್ರಿಕ ಸಹಾಯ ಮುಂತಾದವುಗಳನ್ನು ಉಪಯೋಗಿಸಿ ಕೃಷಿಯನ್ನು ಅಭಿವೃದ್ಧಿಪಡಿಸಬಹುದು. ಇದರಿಂದ ವರಮಾನ ಹೆಚ್ಚುತ್ತದೆ. ರೈತರಿಗೆ ಮೂರು ರೀತಿಯ ಸಾಲ ಬೇಕಾಗುತ್ತದೆ. ಅವುಗಳೆಂದರೆ ಅಲ್ಪಾವಧಿ ಸಾಲ, ಮಧ್ಯಾಮಾವಧಿ ಸಾಲ, ಮತ್ತು ದೀರ್ಘಾವಧಿ ಸಾಲಗಳು. ವರ್ಷದ ಸಾಗುವಳಿಯ ಚಾಲ್ತಿ ಖರ್ಚಿನ ಪೂರೈಕೆಗೆ ಅಲ್ಪಾವಧಿ ಸಾಲ, ಯಂತ್ರೋಪಕರಣಗಳು, ಬೇಸಾಯದ ಎತ್ತುಗಳು ಹಾಗೂ ಇನ್ನಿತರ ಕೆಲಸಗಳಿಗೆ ಮಧ್ಯಮಾವದಿ ಸಾಲ ಬೇಕಾಗುತ್ತದೆ. ದೀರ್ಘವಧಿಯ ಸಾಲಗಳು ಜಮೀನು ಕೊಳ್ಳಲು ಕಟ್ಟಡಗಳನ್ನು ಕಟ್ಟಲು ಮುಂತಾದವುಗಳಿಗೆ ಬೇಕಾಗುತ್ತದೆ.

ರೈತರು ತನ್ನ ಕೃಷಿಯ ಉದ್ಯಮದಲ್ಲಿ ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಎದುರಿಸಬೇಕಾದ ಅಪಾಯಗಳು ಹಲವಾರು, ಇದನ್ನು ಎದುರಿಸಬೇಕಾದರೆ ವಿಮಾ ಸೌಲಭ್ಯಗಳು ಅತ್ಯಂತ ಅವಶ್ಯಕ. ಕೃಷಿ ಉದ್ಯಮದಲ್ಲಿ ಸರ್ವೇ ಸಾಮಾನ್ಯವಾಗಿ ಮಳೆ, ಪ್ರವಾಹಗಳು, ಬಿರುಗಾಳಿ, ಅಗ್ನಿ, ಅಪಘಾತ, ಅತಿವೃಷ್ಠಿ ಅನಾವೃಷ್ಠಿ ವಿವಿಧ ರೋಗಗಳು ಮುಂತಾದ ಪ್ರಕೃತಿ ವಿಕೋಪಗಳಿಂದ ಅಪಾಯ

ಸಂಭವಿಸಿ ಬೆಳೆಗಳು ನಾಶವಾಗುತ್ತಿವೆ. ಇದರಿಂದ ರೈತರು ಸಂಕಷ್ಟಕ್ಕೆ ಗುರಿಯಾಗುತ್ತಿದ್ದಾರೆ. ಸರ್ಕಾರವು ದೇಶದ ಎಲ್ಲಾ ಬೆಳೆಗಳಿಗೂ ಕಡ್ಡಾಯ ವಿಮಾ ಯೋಜನೆ ಜಾರಿಗೆ ತರಬೇಕು. ಇದನ್ನು ಸರಕಾರದ ಸ್ವಾಮ್ಯಕ್ಕೆ ಒಳಪಡಿಸಬೇಕು. ವಿಮಾ ಕಂತಿನಲ್ಲಿ ಒಂದು ಭಾಗವನ್ನು ರೈತರು ಉಳಿದದ್ದನ್ನು ಸರ್ಕಾರವೇ ನೀಡುವ ವ್ಯವಸ್ಥೆ ಜಾರಿಗೆಯಾಗಬೇಕಾಗಿದೆ.

ಕೃಷಿ ಸಹಕಾರ ಸಂಸ್ಥೆಗಳು, ಕೃಷಿ ಕ್ಷೇತ್ರದ ಸಮಗ್ರ ಅಭಿವೃದ್ಧಿಗೆ ಸಹಾಯಕವಾಗಿವೆ. ಸ್ವಯಂ ಪ್ರೇರಿತ ಸಹಕಾರ, ಪ್ರಜಾತಂತ್ರ ಪರಸ್ಪರ ಸಹಾಯ ಈ ತತ್ವಗಳ ಕೃಷಿಯ ಅಭಿವೃದ್ಧಿಗೆ ಪೂರಕವಾಗಿವೆ. ಈ ಸಂಸ್ಥೆಗಳು ರೈತರಿಗೆ ಹಲವಾರು ರೀತಿಯಲ್ಲಿ ಸಹಾಯ ಮಾಡುತ್ತವೆ. ಅವುಗಳೆಂದರೆ ರೈತರಿಗೆ ಬೇಕಾದ ಕೃಷಿ ಯಂತ್ರೋಪಕರಣಗಳು, ರಸಗೊಬ್ಬರಗಳು, ಸುಧಾರಿತ ಬಿತ್ತನೆ ಬೀಜ ಸಾಲವನ್ನು ಸರಿಯಾದ ಸಮಯಕ್ಕೆ ಒದಗಿಸುತ್ತದೆ. ರೈತನು ಬೆಳೆದ ಧಾನ್ಯಗಳನ್ನು ಕೊಂಡು ದಾಸ್ತನು ಮಾಡಿ, ಮಾರುಕಟ್ಟೆ ಬೆಲೆಗಳು ಲಾಭದಾಯಕವಾಗಿರುವಾಗ ಮಾರಾಟ ಮಾಡಿ, ರೈತರಿಗೆ ಸೂಕ್ತ ಪ್ರತಿಫಲ ಸಿಗುವಂತೆ ಮಾಡುತ್ತದೆ. ಕೃಷಿಯನ್ನು ಆಧುನಿಕ ರೀತಿಯಲ್ಲಿ ನಡೆಸಿಕೊಂಡು ಹೋಗುವಂತೆ ರೈತರಿಗೆ ಅಗತ್ಯ ಸೇವೆಗಳನ್ನು ಒದಗಿಸುತ್ತದೆ.

ನಮ್ಮ ದೇಶದ ರೈತರ ಉತ್ಪನ್ನಗಳನ್ನು ಕೊಳ್ಳುವವರೇ ಇಲ್ಲದಂತಾಗಿದೆ. ಇದಕ್ಕೆ ಮೂಲಕ ಕಾರಣ ಭಾರತ ಸರ್ಕಾರ ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿರುವುದು. ಇದರ ಪರಿಣಾಮವೇ ವಿದೇಶಿ ರಾಷ್ಟ್ರಗಳು ಕೃಷಿ ಮೇಲೆ ಹತೋಟಿ ಸಾಧಿಸುತ್ತಿವೆ. ಇದರಿಂದಾಗಿ ರೈತ ಮತ್ತು ಕೃಷಿಗೆ ಗಂಡಾಂತರ ಬಂದೊದಗಿದೆ. ವಿವಿಧ ದೇಶಗಳು ತಮ್ಮ ರೈತರಿಗೆ ಹೆಚ್ಚಿನ ಸಬ್ಸಿಡಿ ನೀಡುತ್ತಿವೆ. ಉದಾಹರಣೆಗೆ ಜಪಾನ್ ೭೨% ಕೊರಿಯ ೬೧% ಅಮೇರಿಕಾ ೨೮% ಸಬ್ಸಿಡಿ ನೀಡುತ್ತಿವೆ. ಆದರೆ ಭಾರತ ತಮ್ಮ ದೇಶದ ರೈತರಿಗೆ ನೀಡುತ್ತಿರುವುದು ಕೇವಲ ಶೇ.೨% ರಷ್ಟು ಮಾತ್ರ. ಇದರಿಂದಾಗಿ ವಿದೇಶಿಯರು ನಮ್ಮ ದೇಶದಲ್ಲಿ ತಮ್ಮ ಕೃಷಿ ಉತ್ಪನ್ನಗಳನ್ನು ಕಡಿಮೆ ದರದಲ್ಲಿ ಮಾರುತ್ತಿದ್ದಾರೆ. ಭಾರತದಲ್ಲಿ ಕೃಷಿ ಉತ್ಪನ್ನದ ವೆಚ್ಚ ಹೆಚ್ಚಿರುವುದರಿಂದ ನಮ್ಮ ರೈತರು ಅವರೊಂದಿಗೆ ಸ್ಪರ್ಧಿಸಲು ಸಾಧ್ಯವಿಲ್ಲ. ಅಲ್ಲದೆ ನಮ್ಮ ರೈತರ ಉತ್ಪನ್ನಗಳನ್ನು ಕೊಳ್ಳುವವರೇ ಇಲ್ಲದಂತಾಗಿ, ನಮ್ಮ ರೈತರು ತಮ್ಮ ಉತ್ಪನ್ನಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಲು ಮುಂದಾಗುತ್ತಿರುವ ಪರಿಣಾಮ ಅಧಿಕ ನಷ್ಟ ಉಂಟಾಗಿ ಆತ್ಮಹತ್ಯೆಗೆ ಮುಂದಾಗುತ್ತಿದ್ದಾರೆ.

ರೈತರಿಗೆ ಆಧುನಿಕ ಬೇಸಾಯದ ವಿವಿಧ ತಂತ್ರಗಾರಿಗೆ ಹಾಗೂ ಅವುಗಳನ್ನು ಉತ್ತಮವಾಗಿ ಅನುಸರಿಸಬೇಕಾದರೆ, ರೈತರಿಗೆ ಉತ್ತಮ ತರಬೇತಿ ಅವಶ್ಯಕ. ಇದರಿಂದಾಗಿ ಲಭ್ಯವಿರುವ ಸಂಪನ್ಮೂಲಗಳನ್ನು ಸಮರ್ಥ ರೀತಿಯಲ್ಲಿ ಬಳಸಿಕೊಳ್ಳಲು ಸಾಧ್ಯವಾಗುತ್ತದೆ. ಉತ್ತಮ ತಳಿಯ ಬೀಜದ ಉಪಯೋಗ ರಸಗೊಬ್ಬರಗಳ ಸಮರ್ಥ ಬಳಕೆ, ಮಣ್ಣು ಮತ್ತು ನೀರಿನ ಯೋಗ್ಯ ನಿರ್ವಹಣೆ ಸಸ್ಯ ಸಂರಕ್ಷಣಾ ರಾಸಾಯನಿಕಗಳ ಸಮರ್ಪಕ ಬಳಕೆ ಕೃಷಿ ಯಂತ್ರೋಪಕರಣಗಳು ಮುಂತಾದ ವಿಚಾರಗಳ ಬಗ್ಗೆ ಖಚಿತವಾದ ವಿಷಯ ತಿಳಿಯುವುದು ಅವಶ್ಯಕ.

ರೈತರಿಗೆ ತರಬೇತಿ ನೀಡುವ ಮುಖ್ಯ ಉದ್ದೇಶವೇನೆಂದರೆ, ರೈತರಿಗೆ ಆತ್ಯಾಧುನಿಕ ತಾಂತ್ರಿಕ ಜ್ಞಾನವನ್ನು ಒದಗಿಸುವ ಮೂಲಕ ವ್ಯವಸಾಯಾಭಿವೃದ್ಧಿಯನ್ನು ತ್ವರಿತಗೊಳಿಸುವುದು. ಸಂಶೋಧನಾ ಫಲಿತಾಂಶಗಳನ್ನು ರೈತರು ತಮ್ಮ ಜಮೀನುಗಳಲ್ಲಿ ಪ್ರಾಯೋಗಿಕವಾಗಿ ಅಳವಡಿಕೊಳ್ಳಲು ನೆರವಾಗುವುದು. ಆಧುನಿಕ ಬೇಸಾಯ ಪದ್ಧತಿಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಅಗತ್ಯ ಕುಶಲತೆಗಳನ್ನು ಕಲ್ಪಿಸಿಕೊಡುತ್ತದೆ. ಉತ್ತಮ ನಿರ್ವಹಣೆಗಾರರಾಗಲು ಮಾರ್ಗದರ್ಶನ ಮಾಡುವುದು ಉತ್ತಮ ತಳಿಗಳನ್ನು ಪರಿಚಯಿಸುವುದರ ಮೂಲಕ ಅಧಿಕ ಇಳುವರಿ ಪಡೆಯುಬಹುದು.

ಮಿಶ್ರವ್ಯವಸಾಯ ಒಂದೇ ಭೂಮಿಯಲ್ಲಿ ವಿವಿಧ ಬೆಳೆಗಳನ್ನು ಏಕಕಾಲದಲ್ಲಿ ಬಿತ್ತನೆ ಮಾಡಿ ಬೆಳೆ ತೆಗೆಯುವುದು ಉದಾಹರಣೆಗೆ ಒಂದೇ ಜಮೀನಿನಲ್ಲಿ ಗೋಧಿ, ಬಾರ್ಲಿ, ಆಲೂಗಡ್ಡೆ, ಅಲಸಂದಿ, ಹೆಸರು, ಅವರೆ, ಅಡಿಕೆ, ತೆಂಗು, ವೀಳ್ಯದೆಲೆ, ಬಾಳೆ, ಕಾಳು ಮೆಣಸು ಮುಂತಾದವುಗಳನ್ನು ಮಿಶ್ರ ಬೆಳೆಗಳನ್ನಾಗಿ ಬೆಳೆಯಬಹುದು. ಮಿಶ್ರ ಬೇಸಾಯದಲ್ಲಿ ಮೂರು ವಿಭಾಗಗಳಿವೆ. ಅವುಗಳೆಂದರೆ ತರೀ ಜಮೀನಿನಲ್ಲಿ ಅನುಸರಿಸುವ ಮಿಶ್ರ ವ್ಯವಸಾಯ, ಖುಷ್ಕಿ ಜಮೀನಿನಲ್ಲಿ ಅನುಸರಿಸುವ ಮಿ.ವ್ಯ.ತೋಟಗಳಲ್ಲಿ ಅನುಸರಿಸುವ ಮಿ.ವ್ಯ. ಮಿಶ್ರವ್ಯವಸಾಯದಿಂದ ಹಿಡುವಳಿಯ ಫಲವಂತಿಕೆ ಹಿಂಗುವುದಿಲ್ಲ. ದೀರ್ಘಕಾಲದವರೆಗೆ ಲಾಭದಾಯಕ ಉತ್ಪನ್ನಗಳನ್ನು ಪಡೆಯಬಹುದು. ಕೀಟಭಾದೆ ಹಾಗೂ ವಿವಿಧ ರೋಗಗಳಿಂದ ಒದಗುವ ನಷ್ಟವನ್ನು ಕಡಿಮೆ ಮಾಡುತ್ತದೆ. ಬೆಳೆಯ ಬದುವಿನಲ್ಲಿ ಬೆಳೆಯುವ ಕಳೆಗಳ ಮೇಲೆ ಹತೋಟಿ ಸಾಧಿಸಬಹುದು.

ರೈತರ ಸಮಸ್ಯೆಗಳನ್ನು ತಡೆಗಟ್ಟಲು ಸರ್ಕಾರ ಈ ಕೆಳಕಂಡ ಅಗತ್ಯ ಕ್ರಮಗಳನ್ನು ಕೈಗೊಳ್ಳುತ್ತಿದೆ. ಶೇಖಡ ೪ರ ಬಡ್ಡಿ ದರದಲ್ಲಿ ಸಹಕಾರಿ ಸಂಸ್ಥೆಗಳ ಮೂಲಕ ರೈತರಿಗೆ ಸಾಲ ನೀಡುವುದು. ಶೇ.೭೫ರ ರಿಯಾಯಿತಿ ದರದಲ್ಲಿ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಬಿತ್ತನೆ ಬೀಜ ವಿತರಿಸುವುದು. ಬೆಂಬಲ ಬೆಲೆಗಿಂತ ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ದರವು ಕುಸಿದಲ್ಲಿ ಮಾರುಕಟ್ಟೆ ಮಧ್ಯೆ ಪ್ರವೇಶಿಸುವ ಮೂಲಕ ರೈತರ ಕೃಷಿ ಉತ್ಪನ್ನಗಳನ್ನುಖರೀದಿಸುವುದು. ಕೃಷಿ ಯಂತ್ರೋಪಕರಣಗಳಾದ ಟ್ರಾಕ್ಟರ್, ಪವರ್ ಟಿಲ್ಲರ್‌ಗಳನ್ನು ಶೇ.೫೦ ರಿಯಾಯಿತಿಯಲ್ಲಿ ವಿತರಣೆ ಮಾಡುವುದು. ಶೇ.೯೦ರಷ್ಟು ರಿಯಾಯಿತಿ ದರದಲ್ಲಿ ಹನಿ ನೀರಾವರಿ ಮತ್ತು ತುಂತುರು ನೀರಾವರಿ ಉಪಕರಣಗಳನ್ನು ವಿತರಿಸುವುದು.

**ಕೊನೆ ಟಿಪ್ಪಣಿಗಳು**


೧. ಚಂದ್ರಶೇಖರ್.ಎ.ಪಿ, ಅನ್ನದಾತನ ಆತ್ಮಹತ್ಯೆ, ೨೦೧೪, ಪುಟ ೨೮

೨. ಅದೇ, ಪುಟ ೩೫

೩. ಸಂದರ್ಶನ ಮಾಹಿತಿ, ಹೇಮಂತರಾಜ್, ಪ್ರಗತಿಪರ ರೈತರು, ಆಲೂರು, ದಾವಣಗೆರೆ, ದಿ.೧೧.೦೭.೨೦೧೬

೪. ಕೊಡ್ಲಿ ಎಂ.ಎ., ನಮ್ಮ ರೈತರೇಕೆ ಹಿಂದುಳಿದಿದ್ದಾರೆ?, ೧೯೭೫, ಪುಟ ೧೭

೫. ಮೊಗಳ್ಳಿ ಗಣೇಶ್, ಪೂರ್ವೋಕ್ತ, ಪುಟ ೦೯

೬. ಕೊಡ್ಲಿ ಎಂ.ಎ., ಪೂರ್ವೋಕ್ತ, ಪುಟ ೧೫

೭. ಶಿವರಾಮಯ್ಯ, ಕತ್ತಿ ಯಾವುದಾದರೇನು?, ೨೦೦೭, ಪುಟ ೦೯

೮. ಲೇಖನಗಳ ಸಂಕಲನ, ಕರ್ನಾಟಕದಲ್ಲಿ ವ್ಯವಸಾಯ, ಪುಟ ೧೩

೯. ಸಂದರ್ಶನ ಮಾಹಿತಿ, ಮಂಜುನಾಥ್, ಉಪನ್ಯಾಸಕರು, ಸಸ್ಯಶಾಸ್ತ್ರ ವಿಭಾಗ, ದಾವಣಗೆರೆ.

೧೦. ಲೇಖನಗಳ ಸಂಕಲನ, ಕರ್ನಾಟಕದಲ್ಲಿ ವ್ಯವಸಾಯ, ಪುಟ ೧೪

೧೧. ಯತಿರಾಜು.ಸಿ, ಕಾಯದ ಕೃಷಿ, ೨೦೧೬, ಪುಟ ೫೭

೧೨. ಶರಚ್ಚಂದ್ರ ರಾನಡೆ, ಕೃಷಿ ಸಂಚಲನ, ೨೦೧೪, ಪುಟ ೩೨

೧೩. ಹನುಮಂತಪ್ಪ, ಚಿತ್ರದುರ್ಗ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿನ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ೨೦೦೬, ಪುಟ ೧೬೧

ಅಧ್ಯಾಯ – ೧೦

# ಸಮಾರೋಪ

ಒಂದು ಕಾಳನ್ನು ಬಿತ್ತಿ ನೂರು ಕಾಳನ್ನು ಬೆಳೆಯುವ ರೈತನದೂ ಒಂದು ಬಗೆಯ ಉದ್ಯಮವೇ ಆಗಿದೆ. ರೈತನಿಗೆ ಭೂಮಿ ಹೆಚ್ಚಾಗಿ ಪಿತ್ರಾರ್ಜಿತವಾಗಿ ದೊರೆಯುತ್ತದೆ. ರೈತನ ಆದಾಯದ ಮೂಲ ಭೂಮಿಯೇ ಆಗಿದೆ. ರೈತನ ಮನೆಯಲ್ಲಿರುವ ಪ್ರತಿಯೊಬ್ಬರು ಚಳಿ, ಮಳೆ, ಬಿಸಿಲು ಎನ್ನದೆ ಹೊಲದಲ್ಲಿ ಕೃಷಿಯ ಕೆಲಸಗಳನ್ನು ಮಾಡುತ್ತಾರೆ. ಕೃಷಿಗೆ ಪೂರಕವಾದ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾನೆ ರೈತ. ಹಬ್ಬ–ಹರಿದಿನ, ಜಾತ್ರೆ, ಮದುವೆ ಮತ್ತು ಮನೆಯ ಕೆಲವೊಂದು ಸಮಾರಂಭಗಳನ್ನು ಹೊರತುಪಡಿಸಿ ರಜೆಯನ್ನು ಪಡೆಯದೆ ವರ್ಷದಲ್ಲಿ ೩೬೫ ದಿನಗಳ ಕಾಲ ಕೃಷಿ ಭೂಮಿಯಲ್ಲಿಯೇ ದುಡಿಮೆ ಮಾಡುತ್ತಾರೆ. ಬೆಳೆಯು ಸಂಪೂರ್ಣವಾಗಿ ಬಂದು ಸುಗ್ಗಿ ಮುಗಿದ ಮೇಲೆ ತಾನು ಬೆಳೆದ ಧಾನ್ಯಗಳನ್ನು ಪೇಟೆಗೆ ತೆಗೆದುಕೊಂಡು ಹೋಗುತ್ತಾನೆ. ಆಗ ರೈತನ ವಾರ್ಷಿಕ ಆದಾಯದ ಮೌಲ್ಯವು ನಿರ್ಣಯಿಸಲ್ಪಡುತ್ತದೆ. ಮಾರುಕಟ್ಟೆಯಲ್ಲಿ ರೈತ ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ನಿಗದಿ ಮಾಡುವಾಗ, ರೈತನ ವಾರ್ಷಿಕ ಸರಾಸರಿ ಖರ್ಚು ವೆಚ್ಚ ಲಾಭವನ್ನು ಗಮನದಲ್ಲಿಟ್ಟುಕೊಳ್ಳುವುದಿಲ್ಲ. ಕುಟುಂಬದ ಸದಸ್ಯರು ಶಕ್ತಿಯವ್ಯಯ, ಪಶುಸಂಪತ್ತು, ಬಂಡವಾಳ, ಸಾಲ, ಬಡ್ಡಿ, ಬಿತ್ತನೆ ಬೀಜ, ರಸಗೊಬ್ಬರ, ಕೀಟನಾಶಕ, ಕಳೆ ತೆಗೆಯುವುದು, ಕೊಯ್ಲು, ಒಕ್ಕಣಿ ಮಾಡುವುದು, ಚೀಲಗಳ ಖರೀದಿ, ಮಾರುಕಟ್ಟೆಯ ಸಾಗಾಣಿಕೆ ವೆಚ್ಚ ಮುಂತಾದವುಗಳೆಲ್ಲವನ್ನು ಗಮನಿಸದೆ ಬೆಲೆ ನಿಗದಿ ಮಾಡುವ ಮೂಲಕ ರೈತರನ್ನು ಆರ್ಥಿಕ ಸಂಕಷ್ಟಕ್ಕೆ ಒಳಪಡುಸುತ್ತಿದ್ದಾರೆ. ಹಾಗಾಗಿ ಕೃಷಿ ವಲಯವು ಕೈಗಾರಿಕಾ ವಲಯವಾಗಬೇಕು ಮತ್ತು ಕೃಷಿಗೆ ಉದ್ಯಮದ ಸ್ಥಾನಮಾನಗಳು ಸಿಗಬೇಕು. ಆದರೆ ಪ್ರಸ್ತುತದವರೆಗೆ ಆಳ್ವಿಕೆ ನಡೆಸಿರುವ ಎಲ್ಲಾ ಸರ್ಕಾರಗಳು ರೈತ ಪರವಾಗಿರದೆ ಉದ್ದಿಮೆಗಳ ಪರವಾಗಿವೆ.

ಉದ್ದಿಮೆದಾರನು ನಷ್ಟಕ್ಕೆ ಒಳಗಾದರೆ ಉದ್ಯಮವನ್ನು ನಿಲ್ಲಿಸಿ ಅದಕ್ಕೆ ಬೀಗ ಹಾಕುತ್ತಾರೆ. ಬ್ಯಾಂಕಿನವರು ಸೀಜ್ ಮಾಡುತ್ತಾರೆ. ನಂತರ ಅದೇ ಉದ್ದಿಮೆದಾರ ಬೇರೆ ಸ್ಥಳಕ್ಕೆ ಹೋಗಿ ಬ್ಯಾಂಕಿನಿಂದ ಸಾಲ ಮತ್ತು ಸಹಾಯಧನ ಪಡೆದು ಹೊಸ ಉದ್ದಿಮೆ ಆರಂಭಿಸುತ್ತಾನೆ. ಆದರೆ ರೈತ ಹಾಗಲ್ಲ ಅವರು ಎಷ್ಟೇ ಬಾರಿ ಹಾನಿ ನಷ್ಟವನ್ನು ಅನುಭವಿಸಿದರೂ ಹೊಲವನ್ನು ಬಿಟ್ಟು ಹೋಗಲಾರರು. ಅಪ್ಪ ಮಾಡಿದ ಸಾಲಕ್ಕೆ ಮಗ ವಾರಸುದಾರನಾಗಬೇಕು. ಮೂಕ ಬಸವನಂತೆ ಕೃಷಿಯ ನೊಗಕ್ಕೆ ಹೆಗಲು ಕೊಡುತ್ತಾನೆ. ಉದ್ದಿಮೆದಾರ ಆತ್ಮಹತ್ಯೆ ಮಾಡಿಕೊಂಡಿರುವ ನಿದರ್ಶನ ಒಂದೂ ಇಲ್ಲ. ಆದರೆ ಸಾವಿರಾರು ರೈತರು ಪ್ರತೀ ವರ್ಷ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ.

ಜಾಗತೀಕರಣದಿಂದಾಗಿ ನಮ್ಮ ರೈತರು ವಿಶ್ವ ವ್ಯಾಪಾರಿಗಳಾಗುತ್ತಿದ್ದಾರೆಂದು ಸರ್ಕಾರಗಳು ಹೇಳುತ್ತಿವೆ. ಆದರೆ ನಮ್ಮ ರೈತರಲ್ಲಿ ವ್ಯಾಪಕ ಮನೋಭಾವನೆಯಾಗಲಿ ಲೆಕ್ಕಚಾರದ ವ್ಯವಹಾರದ ಜಾಣ್ಮೆಯಾಗಲಿ ಇಲ್ಲವೇ ಇಲ್ಲ. ಪ್ರಸ್ತುತವಾಗಿ ರೈತರಿಗೆ ನೀಡುವ ತರಬೇತಿ ಮಾರ್ಗದರ್ಶನಗಳೆಲ್ಲವೂ ಹೆಚ್ಚು ಬೆಳೆಯ ಉತ್ಪಾದನೆಯನ್ನು ತೆಗೆಯುವದರತ್ತಲೇ ಕೇಂದ್ರೀಕೃತವಾಗಿದೆ. ಆದರೆ ರೈತರು ಬೆಳೆ ಬೆಳೆಯಲು ಬೇಕಾಗುವ ಉತ್ಪಾದನಾ ವೆಚ್ಚ ಕಡಿಮೆ ಮಾಡುವ ಮೂಲಕ ಹೆಚ್ಚು ಉತ್ಪಾದನೆ ತೆಗೆಯುವ ಮತ್ತು ಉತ್ಪಾದನೆಗೆ ಹೆಚ್ಚು ಬೆಲೆ ದೊರಕಿಸಿ, ರೈತರ ಆದಾಯ ಹೆಚ್ಚಿಸುವ ಯಾವ ಉಪಾಯಗಳು, ಉದ್ದೇಶಗಳು ಕಾರ್ಯಗತಗೊಂಡಿಲ್ಲ. ಆನ್‌ಲೈನ್ ಮಾರುಕಟ್ಟೆಯಿಂದ ರೈತರಿಗೆ ಉತ್ತಮ ಬೆಲೆಗಳು ದೊರಕುವಂತೆ ಮಾಡಲಾಗಿದೆಯೇ ಹೊರತು ಅವುಗಳ ಸಮರ್ಪಕ ಉಪಯೋಗ ರೈತರಿಗೆ ಲಭ್ಯವಾಗುತ್ತಿಲ್ಲ.

ಬೆಳೆ ಬೆಳೆಯಲು ರೈತನು ಏನೆಲ್ಲಾ ಕಷ್ಟಗಳನ್ನು ಅನುಭವಿಸಿ, ಕಸರತ್ತು ನಡೆಸುತ್ತಾನೆ. ಎಂಥದೋ ಬೀಜಗಳನ್ನು, ಹೆಸರು ಹೇಳಲು ಬಾರದ ಕೀಟನಾಶಕಗಳು, ರಸಗೊಬ್ಬರಗಳು, ಸಸ್ಯ ಪೋಷಕಾಂಶ ಬೆಳೆ ಬೆಳೆಯುವುದರಿಂದ ಹಾನಿ ಆಗುತ್ತದೆಯೋ ಹಾಗೂ ಲಾಭವಾಗುತ್ತದೆಯೋ ಎಂಬುದನ್ನು ಅವಲೋಕನ ಮಾಡುವುದಿಲ್ಲ. ಮುಂದೊಂದು ದಿನ ಲಾಭವಾಗುತ್ತದೆ ಎಂದು ಪ್ರತೀ ವರ್ಷ ಸಾಲ ಮಾಡಿ ಬೆಳೆ ಬೆಳೆಯಲು ಮುಂದಾಗುತ್ತಾನೆ. ಸರ್ಕಾರಗಳು, ಬ್ಯಾಂಕ್‌ಗಳು ಸಾಲದ ಹಾಗೂ ಸಬ್ಸಿಡಿ ಸೌಲಭ್ಯಗಳನ್ನು ನೀಡಿದ್ದೇವೆಂದು ಹೇಳುತ್ತಾ ಬಂದಿವೆ. ಆದರೆ ರೈತ ಆರ್ಥಿಕವಾಗಿ ಪ್ರಬಲವಾಗಲು ಇವುಗಳು ಯಾವುವು ವಿನಿಯೋಗವಾಗುತ್ತಿಲ್ಲ.

ರೈತ ಬೆಳೆ ಬೆಳೆಯಲು ಬೇಕಾಗುವ ಗೊಬ್ಬರಗಳು, ಬಿತ್ತನೆ ಬೀಜಗಳನ್ನು ಅಧಿಕ ಬೆಲೆಗೆ ಕೊಂಡುಕೊಳ್ಳುತ್ತಾರೆ. ಇದರಿಂದ ಗೊಬ್ಬರ ಹಾಗೂ ಬಿತ್ತನೆ ಬೀಜ ಕಂಪನಿಗಳ ಮಾಲೀಕರು ಶ್ರೀಮಂತರಾಗುತ್ತಿದ್ದಾರೆ ವಿನಃ ಭೂಮಿಯಲ್ಲಿ ಶ್ರಮವನ್ನು ಹಾಕಿ ಬಿತ್ತನೆ ಮಾಡುವ ರೈತ ಆರ್ಥಿಕವಾಗಿ ಸಬಲನಾಗುತ್ತಿಲ್ಲ. ರೈತ ಶ್ರೀಮಂತನಾಗಬೇಕಾದರೆ ಯಾರು ಅವರಿಗೆ ಮಾರ್ಗದರ್ಶನ ಮಾಡಬೇಕು, ಅಂತಹ ಮಾರ್ಗದರ್ಶಕರು ಯಾರಾದರು ಇದ್ದಾರೆಯೇ? ಎಂಬ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿದಿವೆ.

ಒಂದೆಡೆ ರೈತ ಶ್ರೀಮಂತನಾಗಲು ವಾಣಿಜ್ಯ ಬೆಳೆಗಳನ್ನು ಬೆಳೆಯಲು ದನಕರುಗಳು ಸಾಕುತ್ತಾರೆ. ಇವುಗಳನ್ನೆಲ್ಲಾ ಮಾಡಲು ರೈತ ಅಧಿಕ ಸಾಲ ಮಾಡುತ್ತಾನೆ, ಬಂಡವಾಳ ಹೂಡುತ್ತಾನೆ. ಸಾಲ ಪಡೆಯಲು ಭೂಮಿಯನ್ನು ಒತ್ತೆಯಿಡುತ್ತಾನೆ. ಅದರೂ ರೈತ ಆರ್ಥಿಕವಾಗಿ ಪ್ರಬಲನಾಗುತ್ತಿಲ್ಲ. ಸಾಯುವವರೆಗೂ ತನ್ನ ಜೀವನವನ್ನು ಸಾಲ ತೀರಿಸಲೇ ಮುಡುಪಾಗಿಡುತ್ತಾನೆ. ರೈತರನ್ನು ಆರ್ಥಿಕವಾಗಿ ಪ್ರಬಲಗೊಳಿಸಬೇಕೆಂದು ಹೇಳುತ್ತಾರೆಯೇ ವಿನಃ ಅವರನ್ನು ತಮ್ಮ ಜೀವನ ಮಟ್ಟಕ್ಕೆ ತರಬೇಕೆಂದು ಯಾವೊಬ್ಬ ರಾಜಕಾರಣಿ, ಅಧಿಕಾರಿಗಳು ಚಿಂತನೆ ಮಾಡುವುದಿಲ್ಲ. ರೈತ ಪಡುವ ಕಷ್ಟಗಳು ಅವರಿಗೆ ಬೇಕಿಲ್ಲ. ಆದರೆ ರೈತ ಬೆಳೆದ ಬೆಳೆ ಅವರಿಗೆ ಬೇಕು. ರೈತ ಬೆಳೆ ಬೆಳೆಯದೇ ಹೋದರೆ ಪ್ರಪಂಚದಲ್ಲಿರುವ ಪ್ರತಿಯೊಬ್ಬರು ನರಳಾಡುವ ಸ್ಥಿತಿ ಬರುತ್ತದೆ. ಇಂತಹ ಪರಿಸ್ಥಿತಿ ಇದ್ದರೂ ಸರ್ಕಾರವೇಕೆ ರೈತರ ಸಹಾಯಕ್ಕೆ ಬರುತ್ತಿಲ್ಲ. ಕೃಷಿ ಎಂಬುದು ಒಂದು ಉದ್ಯೋಗ ಅದನ್ನು ಅವಲಂಬಿಸಿರುವ ರೈತ ದೇಶದ ಬೆನ್ನೆಲುಬು. ಇಂತಹ ನಾಣ್ನುಡಿಗಳಿದ್ದರು, ರೈತ ಅವಲಂಬಿಸಿರುವ ಕೃಷಿ ಉದ್ಯೋಗವನ್ನು ಉಳಿದ ಉದ್ಯೋಗಗಳಂತೆ ಸರ್ಕಾರದ ಕೆಲಸವೆಂದು ಘೋಷಣೆ ಮಾಡುತ್ತಿಲ್ಲ. ವೇತನ ನಿಗದಿ ಮಾಡುತ್ತಿಲ್ಲ ಏಕೆ? ರೈತನಾದವನು ದಿನದ ೨೪ ಘಂಟೆಗಳ ಕಾಲ ಕೆಲಸ ನಿರ್ವಹಿಸಿ ಬೆಳೆ ಬೆಳೆದು ಕುಟುಂಬಕ್ಕೆ ಅಷ್ಟೇ ಅಲ್ಲದೇ ಇಡೀ ದೇಶಕ್ಕೆ ಅನ್ನವನ್ನು ನೀಡುತ್ತಿದ್ದಾನೆ. ಬೆಳೆಯಿಂದ ನಷ್ಟವಾದಾಗ ಎಂದಾದರು ತನ್ನ ಕಾಯಕವನ್ನು ಬಿಟ್ಟಿದ್ದಾರೆಯೇ? ಅದೇ ಒಬ್ಬ ಸರ್ಕಾರಿ ಉದ್ಯೋಗಿ ದಿನದ ಏಳೆಂಟು ಗಂಟೆಗಳನ್ನು ನೆರಳಲ್ಲಿ ಕುಳಿತು ಕೆಲಸ ಮಾಡುತ್ತಾನೆ. ಸಮಸ್ಯೆ, ಕಷ್ಟ ಬಂದಾಗ ತನ್ನ ಕೆಲಸವನ್ನು ನಿರ್ವಹಿಸದೆ ಕಪ್ಪು ಬಟ್ಟೆ ಧರಿಸಿ ಧರಣಿ ಕೂರುತ್ತಾರೆ. ಹಾಗಾದರೆ ರೈತ ದಿನಪೂರ್ತಿ ಕೆಲಸ ನಿರ್ವಹಿಸುತ್ತಾ ಸಮಸ್ಯೆಗಳ ಸುಳಿಯಲ್ಲೇ ಬದುಕುತ್ತಿರುವವರು ಏನು ಮಾಡಬೇಕು. ಬಹುಸಂಖ್ಯಾತರ ಶ್ರಮದ ಮೇಲೆ ಅಲ್ಪಸಂಖ್ಯಾತ ಆಳುವ ವರ್ಗ ಐಶಾರಾಮಿ ಜೀವನ ನಡೆಸುತ್ತಿದ್ದಾರೆ. ಹಾಗಾಗಿ ರೈತ ಇಡೀ ಸಮಾಜದ ಅಡಿಯಾಳಾಗುತ್ತಿದ್ದಾನೆ. ಹಣಕ್ಕಾಗಿ ರೈತ ತಾನು ಬೆಳೆದ ಬೆಳೆಯಲ್ಲಿ ಉತ್ತಮವಾದುದನ್ನು ಮಾರಾಟ ಮಾಡುತ್ತಾನೆ. ಜೊಳ್ಳು ಜೊಟ್ಟು ತಾನು ತಿನ್ನುತ್ತಾನೆ. ಪೌಷ್ಟಿಕಾಂಶಗಳಲ್ಲದ ಆಹಾರಗಳನ್ನು ತಿನ್ನುತ್ತಾ ಹಲವಾರು ರೈತರು ಅನಾರೋಗ್ಯದಿಂದ ಬಳಲುತ್ತಿದ್ದಾರೆ.

ಉದ್ಯೋಗಿಗಳು, ಉದ್ಯಮಿಗಳು ಅಧಿಕ ಲಾಭ ಪಡೆಯಲು ಎಲ್ಲದನ್ನು ನಕಲು ಮಾಡುತ್ತಾರೆ. ರೈತ ಯಾವುದಾದರು ಬೆಳೆಯನ್ನು ನಕಲಿಯಾಗಿ ತಯಾರಿಸಿ ಮಾರಾಟ ಮಾಡಿರುವುದು, ಎಲ್ಲಿಯಾದರು ತಿಳಿದು ಬಂದಿದೆಯೇ? ರೈತ ಚಲನಚಿತ್ರದ ಹಿರೋಗಳಂತೆ ರಾಜಕಾರಣಿಗಳಂತೆ ಮೆರೆದು ಕೋಟಿ ಕೋಟಿ ಹಣವನ್ನು ಪಡೆಯುತ್ತಿಲ್ಲ. ಯಾವುದೇ ಉದ್ಯಮಿಗಳ ಪಾಲುದಾರರಲ್ಲ. ಸರ್ಕಾರಿ ಉದ್ಯೋಗಿಗಳಾಗಿ ಯಾವುದೇ ಭತ್ಯೆ. ನಿವೃತ್ತಿ ವೇತನ ಪಡೆಯುವರಲ್ಲ. ಯಾವುದೇ ಲಾಭ ಪಡೆಯದೆ ಕಷ್ಟ ಕಹಿಗಳನ್ನು ತಾನೇ ನುಂಗಿಕೊಂಡು ಇಡೀ ದೇಶಕ್ಕೆ ಅನ್ನ ನೀಡುವ ರೈತನ ಸ್ಥಿತಿ ಏಕೆ ಹೀಗಾಯಿತು? ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ಆದರೆ ಇವರೆಲ್ಲ

ತಾವು ರೈತನೆಂದು ರೈತನ ಮಗನೆಂದು ಹೇಳಿಕೊಳ್ಳುತ್ತಾರೆ. ನೀವು ರೈತರ ಮಕ್ಕಳೇ ಹಾಗಿದ್ದರೆ ಹಾಗೂ ರೈತನಾಗಿ ಈ ಸ್ಥಾನಕ್ಕೆ ಬಂದಿದ್ದರೆ, ರೈತರ ಬಗ್ಗೆ ಹಾಗೂ ರೈತರ ಮಕ್ಕಳ ಬಗ್ಗೆ ಏಕೆ ಕಾಳಜಿ, ಕಳಕಳಿ ಎಂಬುದಿಲ್ಲ. ರೈತರ ಸಮಸ್ಯೆಗಳಿಗೆ ಏಕೆ ಸ್ಪಂದಿಸುತ್ತಿಲ್ಲ.

ಪ್ರಸ್ತುತ ಅಧ್ಯಯನವು ಬಯಲುಸೀಮೆಯ ಪ್ರದೇಶಗಳಾದ ಚಿತ್ರದುರ್ಗ, ದಾವಣಗೆರೆ ಹಾಗೂ ಬಳ್ಳಾರಿ ಜಿಲ್ಲೆಗಳ ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ. ಏಕೀಕರಣೋತ್ತರ ಕರ್ನಾಟಕದಲ್ಲಿ ನಡೆದ ರೈತ ಪ್ರತಿಭಟನೆಗಳು, ಬಯಲುಸೀಮೆಯಲ್ಲಿ ನಡೆದ ರೈತ ಪ್ರತಿಭಟನೆಗೆ ಕಾರಣಗಳು, ಕಾರಣಕ್ಕೆ ಅನುಗುಣವಾಗಿ ನಡೆದ ಬಯಲುಸೀಮೆಯ ರೈತ ಪ್ರತಿಭಟನೆಗಳು, ವಿಶೇಷವಾಗಿ ಈರುಳ್ಳಿ ಮತ್ತು ಶೇಂಗಾ ಬೆಂಬಲ ಬೆಲೆಗಾಗಿ ನಡೆದ ರೈತ ಪ್ರತಿಭಟನೆಗಳು, ರೈತ ಸಂಘಟನೆಗಳ ಅವಲೋಕನ, ಪ್ರತಿಭಟನೆಯಲ್ಲಿ ನಿರತವಾಗಿರುವ ರೈತ ಮುಖಂಡರು, ನಾಯಕರು, ಸಮಕಾಲೀನ ಸಂದರ್ಭದ ರೈತರ ಸಮಸ್ಯೆ ಹಾಗೂ ಸವಾಲುಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಯನ ಕುರಿತು ಸಂಶೋಧನೆ ಕೈಗೊಂಡಾಗ ಹೊಸ ವಿಷಯಗಳನ್ನು ಕಂಡುಕೊಳ್ಳಲಾಗಿದೆ. ಪ್ರಮುಖವಾಗಿ ಕೆಲವು ಸಂಗತಿಗಳನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

೧. ದೇಶದ ಬೆನ್ನೆಲುಬಾಗಿರುವ ಬಯಲುಸೀಮೆಯ ರೈತರ ಬಗ್ಗೆ ಚಾರಿತ್ರಿಕ ಅಧ್ಯಯನ ನಡೆದಿರುವುದು ವಿರಳ. ಈ ಹಿನ್ನೆಲೆಯಲ್ಲಿ ಅಲಕ್ಷಿತ ವರ್ಗವಾದ ರೈತರ ಬಗ್ಗೆ ಅಧ್ಯಯನ ಮಾಡುವುದು ಅಗತ್ಯವೆಂಬುದು ಸ್ಪಷ್ಟ.
೨. ೧೯೭೪ ರ ಭೂಸುಧಾರಣಾ ಕಾಯ್ದೆಯು ಉಳುವವನಿಗೆ ಭೂಮಿಯ ಹಕ್ಕು ಲಭ್ಯವಾಗುವಂತೆ ಮಾಡಿತು. ಈ ಕಾಯ್ದೆಯಿಂದಾಗಿ ಚಿತ್ರದುರ್ಗ, ಬಳ್ಳಾರಿ ಜಿಲ್ಲೆಯ ಭೂರಹಿತ ಗೇಣಿದಾರರಿಗೆ, ಕೃಷಿ ಕಾರ್ಮಿಕರಿಗೆ ಭೂಮಿ ಲಭ್ಯವಾಗಿರುವುದನ್ನು ಅಧ್ಯಯನದಲ್ಲಿ ಗುರುತಿಸಿರುವುದು ಗಮನಾರ್ಹ ಸಂಗತಿ.
೩. ೧೭೯೯ರ ನಂತರ ಮೈಸೂರು ಪ್ರಮುಖವಾಗಿ ನಾಲ್ಕು ಭಾಗಗಳಲ್ಲಿ ಹಂಚಿಕೆಯಾಗಿದೆ. ಇಂದಿನ ಕರ್ನಾಟಕದ ಬಹುಭಾಗ ಮೈಸೂರಿನ ಆಳ್ವಿಕೆಗೆ ಒಳಪಟ್ಟಿತ್ತು, ಆಗ ಈ ಸಂಸ್ಥಾನವನ್ನು ಬ್ರಿಟೀಷರು ಸಹಾಯಕ ಸೈನ್ಯ ಪದ್ಧತಿಗೆ ಒಳಪಡಿಸಿಕೊಂಡಿದ್ದರು. ಈ ಸಮಯದಲ್ಲಿ ಮೈಸೂರಿನ ಒಡೆಯರು ಮತ್ತು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ರೈತರ ಮೇಲಾದ ಶೋಷಣೆ, ಕೃಷಿ ಸಮಸ್ಯೆಗಳ ವಿರುದ್ಧ ನಡೆದ ರೈತ ಪ್ರತಿಭಟನೆಗಳನ್ನು ನೈಜವಾಗಿ ಗುರುತಿಸಿರುವುದು ಪಾರದರ್ಶಕವಾಗಿದೆ.
೪. ಸ್ವಾತಂತ್ರ್ಯ ನಂತರ ಜಾರಿಗೆ ಬಂದ ಭೂಸುಧಾರಣೆ ಕಾಯ್ದೆ ಹಾಗೂ ವಿವಿಧ ಹೊಸ ಆರ್ಥಿಕ ನೀತಿಗಳಿಂದ ಉಂಟಾದ ಸಮಸ್ಯೆಗಳ ವಿರುದ್ದ ನಡೆದ ರೈತ ಪ್ರತಿಭಟನೆಗಳನ್ನು ಚರ್ಚಿಸಲಾಗಿದೆ. ಅ ಸಮಯದಲ್ಲಿ ರೈತರ ಮೂಲ ಆದಾಯ ಕೃಷಿಯೇ ಆಗಿದೆ. ರೈತರ ಸಮಸ್ಯೆಗಳು ಏಕರೂಪವಾಗಿ ಕಂಡುಬರುವುದಿಲ್ಲ. ಪ್ರದೇಶದಿಂದ ಪ್ರದೇಶಕ್ಕೆ ವಿಭಿನ್ನವಾಗಿರುವುದು

ಕಂಡುಬರುತ್ತದೆ. ಈ ಸಮಸ್ಯೆಗಳೆಲ್ಲವೂ ರೈತರು ಬಿತ್ತನೆ ಮಾಡುವ ಬೆಳೆ ಹಾಗೂ ಪ್ರದೇಶವನ್ನು ಅವಲಂಬಿಸಿರುವುದು ಪ್ರಸ್ತುತ ಅಧ್ಯಯನದಲ್ಲಿ ಕಾಣಬಹುದು.

೫. ಬಯಲುಸೀಮೆಯ ರೈತ ಪ್ರತಿಭಟನೆಗೆ ಕಾರಣವಾದ ಅಂಶಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ. ಈ ಕಾರಣಗಳು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿದ್ದು, ಅ ಪ್ರದೇಶಗಳಲ್ಲಿ ಬೆಳೆಯುವ ಬೆಳೆ ಮತ್ತು ಭೂಮಿಯನ್ನು ಅವಲಂಬಿಸಿವೆ. ಈ ವಿಷಯವನ್ನು ಅಧ್ಯಯದಲ್ಲಿ ಸೂಕ್ಷ್ಮವಾಗಿ ಗಮನಿಸಲಾಗಿದೆ.

೬. ಬಯಲುಸೀಮೆಯಲ್ಲಿ ನಡೆದಿರುವ ರೈತ ಪ್ರತಿಭಟನೆಗಳು ಆರ್ಥಿಕ ಕ್ಷೇತ್ರಕ್ಕೆ ಸೀಮಿತವಾಗದೆ, ಸಾಮಾಜಿಕ ಪ್ರತಿಭಟನೆಗಳಾಗಿ ಮಾರ್ಪಟ್ಟಿರುವುದನ್ನು ಪ್ರಸ್ತುತ ವಿಷಯದಲ್ಲಿ ಗುರುತಿಸಲಾಗಿದೆ. ಬೆಂಬಲ ಬೆಲೆಗಾಗಿ, ಸಮರ್ಪಕ ಬಿತ್ತನೆ ಬೀಜ ಹಾಗೂ ಗೊಬ್ಬರದ ಪೂರೈಕೆಗಾಗಿ, ವಿದ್ಯುತ್ ಸಮಸ್ಯೆಯನ್ನು ವಿರೋಧಿಸಿ, ಸಾಲ ಮನ್ನಾ, ಭೂಸಾಗುವಳಿ ಪತ್ರ ಪಡೆಯಲು, ಬಸ್ಸಿನ ವ್ಯವಸ್ಥೆ ಕಲ್ಪಿಸಲು, ಸಾಮಾಜಿಕ ಅಸಮಾನತೆಯ ವಿರುದ್ಧ, ಮದ್ಯದ ಅಂಗಡಿಯನ್ನು ವಿರೋಧಿಸಿ, ವಿಧ್ಯಾರ್ಥಿಗಳಿಗೆ ಬಸ್ ಪಾಸು ವಿತರಿಸಲು ಮುಂತಾದ ಎಲ್ಲಾ ಕ್ಷೇತ್ರಗಳ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಪ್ರತಿಭಟನೆಯ ಮೂಲಕ ವಿರೋಧಿಸಿ, ನ್ಯಾಯ ದೊರಕಿಸಿ ಕೊಡುವ ಪ್ರಾಮಾಣಿಕ ಪ್ರಯತ್ನವಿದೆ.

೭. ೧೯೮೫ರಲ್ಲಿ ಉಂಟಾದ ಭೀಕರ ಬರಗಾಲದಿಂದ ಸಾಲ ತೀರಿಸಲಾಗದೆ ಆತ್ಮಹತ್ಯೆಯ ದಾರಿ ಇಡಿದಾಗ, ಎಂ.ಎಸ್.ಕೆ.ಶಾಸ್ತ್ರಿಯವರ ನಾಯಕತ್ವದಲ್ಲಿ ಸಾವಿರಾರು ರೈತರು ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರತಿಭಟನೆ ಮಾಡಿ, ಬ್ಯಾಂಕ್‌ಗಳ ೧೮೦ ಕೋಟಿ ಹಣವನ್ನು ಹಾಗೂ ಸಹಕಾರಿ ಸಂಘಗಳ ಸಾಲದ ಮೇಲಿನ ೨೬೦ ಕೋಟಿ ರೂಪಾಯಿಗಳ ಬಡ್ಡಿಯನ್ನು ಮನ್ನಾ ಮಾಡಿರುವ ಯಶಸ್ಸು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

೮. ೧೯೯೨ರಲ್ಲಿ ಗೊಬ್ಬರ ಬೆಲೆ ಏರಿಕೆ ವಿರುದ್ಧ ನಡೆದ ಪ್ರತಿಭಟನೆಯ ಸಮಯದಲ್ಲಿ ಶಾಸಕರಾದ ಮೋತಿ ವೀರಣ್ಣನವರು ಬೆಂಗಳೂರಿನಿಂದ ದಾವಣಗೆರೆಗೆ ಆಗಮಿಸುತ್ತಿರುವಾಗ ಮಾರ್ಗ ಬದಲಿಸುವಂತೆ ಸೂಚಿಸಿದ್ದರು. ಆದರೂ ಅದೇ ಮಾರ್ಗದಲ್ಲಿ ಬಂದಿದ್ದರಿಂದ ರೈತ ಪ್ರತಿಭಟನೆ ತೀವ್ರಗೊಂಡು, ಗೋಲಿಬಾರ್ ಆಗಿ ಇಬ್ಬರು ರೈತರು ಮರಣ ಹೊಂದಿದರು. ಈ ದುರ್ಘಟನೆ ನಡೆಯಲು ಶಾಸಕರು ಹಾಗೂ ಪೊಲೀಸರ ಅಜಾಗರೂಕತೆಯೆ ಕಾರಣವೆಬುಂದು ಅಧ್ಯಯನದ ಫಲಿತವಾಗಿದೆ.

೯. ಸೆಪ್ಟಂಬರ್ ೧೩ ೧೯೯೨ ರಲ್ಲಿ ಗೋಲಿಬಾರ್‌ನಿಂದಾಗಿ ಕಲ್ಲಿಂಗಪ್ಪ ಮತ್ತು ನಾಗರಾಜ್ ಆಚಾರಿಯವರು ಮರಣ ಹೊಂದಿದರು. ಇದರಿಂದಾಗಿ ಪ್ರತೀ ವರ್ಷ ಸೆಪ್ಟಂಬರ್ ೧೩ನ್ನು ರೈತ ಹುತಾತ್ಮರ ದಿನವನ್ನಾಗಿ ಅಚರಿಸುವ ಪರಿಪಾಠ ಆರಂಭವಾಯಿತು. ಇದು ರೈತ ಪ್ರತಿಭಟನೆಗೆ ಸ್ಪೂರ್ತಿ ಹಾಗೂ ಶ್ಲಾಘನೀಯವಾದ ಘಟನೆಯಾಗಿದೆ.

೧೦. ಕೆರೆಗಳ ಏತ ನೀರಾವರಿ ರೈತರ ಪ್ರತಿಭಟನೆಯಿಂದಾಗಿ, ಹರಿಹರದ ತುಂಗಾಭದ್ರಾ ನದಿಯಿಂದ ನೀರನ್ನು ಮೇಲೆತ್ತಿ ದಾವಣಗೆರೆ, ಜಗಳೂರು ತಾಲೂಕಿನ ೨೨ ಕೆರೆಗಳನ್ನು ತುಂಬಿಸುವ ಯೋಜನೆ ಜಾರಿಗೆ ಬಂದು, ಯಶಸ್ವಿಯಾಗಿ ಕೆರೆಗಳಿಗೆ ನೀರು ತಲುಪಿತು. ಇದರಿಂದಾಗಿ ಅಂತರ್ಜಲ ಮಟ್ಟ ಹೆಚ್ಚಾಗಿ, ಸಾವಿರಾರು ಬೋರ್‌ವೆಲ್‌ಗಳು ನೀರಿನಿಂದ ತುಂಬಿವೆ. ಕುಡಿಯುವ ನೀರಿನಲ್ಲಿ ಪ್ಲೋರೈಡ್ ಅಂಶ ಕಣ್ಮರೆಯಾಗಿದೆ, ಇನ್ನೂ ಮುಂತಾದ ಅಂಶಗಳು ಪ್ರಸ್ತುತ ಅಧ್ಯಯನದಿಂದ ಸಾಬೀತಾಗಿದೆ. ಇದು ಶ್ಲಾಘನೀಯ ಸಂಗತಿ ಹೌದು.

೧೧. ೨೦೦೩-೦೪ ರಲ್ಲಿ ಬಡ ರೈತರಿಗೆ ವಿತರಿಸುವ ನ್ಯಾಯ ಬೆಲೆ ಅಂಗಡಿಯ ಅಕ್ಕಿಯನ್ನು ಕದ್ದು, ಪೆಡಂಬೂರು ಬಂದರಿನ ಮೂಲಕ (ಸುಮಾರು ೪೬೦೦೦ ಮೆಟ್ರಿಕ್ ಟನ್) ದಕ್ಷಿಣ ಆಫ್ರಿಕಾಕ್ಕೆ ಕಳುಹಿಸಲು ಮುಂದಾದಾಗ, ಮಹೇಶ್ವರಸ್ವಾಮಿಯವರ ನಾಯಕತ್ವದಲ್ಲಿ ಸಾವಿರಾರು ರೈತರು ಮುತ್ತಿಗೆ ಹಾಕಿ ವಶಪಡಿಸಿಕೊಂಡಿರುವುದು ಗಮನಾರ್ಹ. ಇಂಥ ಘಟನೆಗಳಿಂದ ರೈತರಲ್ಲಿ ಸಂಘಟನೆ, ಪ್ರತಿಭಟನೆಯ ಮನೋಭಾವನೆ ಇಮ್ಮಡಿಯಾಯಿತು.

೧೨. ಭೂತಯ್ಯರವರ ಹಲವಾರು ವರ್ಷಗಳ ಹೋರಾಟದ ಫಲವಾಗಿ, ಚಿತ್ರದುರ್ಗದಿಂದ ಚಳ್ಳಕೆರೆ ತಾಲೂಕಿಗೆ, ಕೆ.ಎಸ್.ಆರ್.ಟಿ.ಸಿ. ಬಸ್ಸುಗಳ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಈಗಲೂ ಈ ಬಸ್ಸುಗಳನ್ನು ಅ ಭಾಗದಲ್ಲಿ ಭೂತಯ್ಯನ ಬಸ್ಸುಗಳೆಂದೇ ಕರೆಯುವುದು ವಿಶೇಷವಾಗಿದೆ. ಇದೊಂದು ಕ್ರಾಂತಿಕಾರಿ ಬದಲಾವಣೆ ಎಂದರೆ ತಪ್ಪಲ್ಲ.

೧೩. ರೈತರು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ಮತ್ತು ಖರೀದಿ ಕೇಂದ್ರ ಆರಂಭಿಸುವಂತೆ ಒತ್ತಾಯಿಸಿ ಮಾಡಿದ ಪ್ರತಿಭಟನೆಯ ಹಿನ್ನೆಲೆಯಲ್ಲಿ, ಪ್ರತೀ ವರ್ಷ ಸರ್ಕಾರ ಮತ್ತು ಜಿಲ್ಲಾಡಳಿತ ಸ್ಪಂದಿಸಿ ರೈತರ ಧಾನ್ಯಗಳನ್ನು ಕೊಳ್ಳಲು ಖರೀದಿ ಕೇಂದ್ರ ಆರಂಭಿಸುತ್ತವೆ. ಆದರೆ ಈ ಖರೀದಿ ಕೇಂದ್ರವನ್ನು ಸುಗ್ಗಿಯ ಸಮಯದಲ್ಲಿ ತೆರೆಯದೆ, ರೈತರು ದಲ್ಲಾಳಿಗೆ ಮಾರಾಟ ಮಾಡಿದ ನಂತರದ ಸಮಯದಲ್ಲಿ ಆರಂಭಿಸುತ್ತಾರೆ. ಇದರಿಂದ ಲಾಭವನ್ನು ರೈತರು ಪಡೆಯದೆ, ದಲ್ಲಾಳಿಗಳು ಪಡೆಯುತ್ತಿರುವುದು ಶೋಷಣೆಯ ಇನ್ನೊಂದು ಮುಖ ಅಧ್ಯಯನದಿಂದ ಅನಾವರಣಗೊಂಡಿದೆ.

೧೪. ನೀರಾ ಇಳಿಸಲು ಅನುಮತಿಗಾಗಿ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ರೈತ ಪ್ರತಿಭಟನೆಗಳು ನಡೆದಿವೆ. ನುಸಿ ರೋಗದಿಂದ ತೆಂಗಿನ ಮರಗಳನ್ನು ರಕ್ಷಿಸಲು ನೀರಾ ಇಳಿಸುವುದು ಅವಶ್ಯಕ. ಸರ್ಕಾರ ನೀರಾ ಇಳಿಸಲು ರೈತರಿಗೆ ಅನುಮತಿ ನೀಡಿದರೆ, ರೈತರು ಆರ್ಥಿಕವಾಗಿ ಸಬಲರಾಗುತ್ತಾರೆ. ಇದರಿಂದಾಗಿ ಸರ್ಕಾರಕ್ಕೆ ಅಧಿಕವಾಗಿ ನಷ್ಟವಾಗುತ್ತದೆ. ಹಾಗಾಗಿ ಸರ್ಕಾರ ನೀರಾ ಇಳಿಸಲು ಅನುಮತಿ ನೀಡುತ್ತಿಲ್ಲ ಎಂಬುದು ಗಮನಾರ್ಹ.

೧೫. ಸರ್ಕಾರಗಳು ನಗರ ಮತ್ತು ಗ್ರಾಮಗಳೆಂದು ತಾರತಮ್ಯ ನೀತಿಯನ್ನು ಅನುಸರಿಸುತ್ತಿವೆ. ಕಾರಣ ದೇಶಕ್ಕೆ ಅನ್ನ ಹಾಕುವ, ೨೪ ಗಂಟೆಗಳ ಕಾಲ ಕೃಷಿ ನಿರತ ರೈತರಿಗೆ ಕೇವಲ ಆರು ಗಂಟೆ ಮಾತ್ರ ವಿದ್ಯುತ್ ನೀಡುತ್ತಿದ್ದು, ನಗರಗಳಿಗೆ ೨೪ ಗಂಟೆಗಳ ಕಾಲ ವಿದ್ಯುತ್ ನೀಡಲಾಗುತ್ತಿದ್ದು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೧೬. ಬಯಲುಸೀಮೆಯ ರೈತರು ಈ ಭಾಗದ ಸಮಸ್ಯೆಗಳಿಗೆ ಸ್ಪಂದಿಸುವುದಲ್ಲದೆ, ಇತರೆ ಜಿಲ್ಲೆಗಳ ರೈತರ ಸಮಸ್ಯೆಗಳು ಕಂಡುಬಂದರೆ, ಅವರಿಗೆ ಬೆಂಬಲವಾಗಿ ನಿಂತು ಪ್ರತಿಭಟನೆ ಮಾಡಿರುವುದು ಕಾಣಬಹುದಾಗಿದೆ.

೧೭. ಈ ಭಾಗದ ಎಲ್ಲಾ ರೈತ ಪ್ರತಿಭಟನೆಗಳು ಹಿಂಸಾತ್ಮಕ ರೂಪ ತಾಳದೆ, ಆಹಿಂಸಾತ್ಮಕವಾಗಿ, ಶಾಂತ ರೀತಿಯಿಂದ ತಮ್ಮ ಬೇಡಿಕೆಗಳನ್ನಿಟ್ಟುಕೊಂಡು ಪ್ರತಿಭಟನೆಗಳನ್ನು ಮಾಡುತ್ತಾ ಬಂದಿರುವುದು ವಿಶೇಷತೆ ಹಾಗೂ ಭಿನ್ನ ಸ್ವರೂಪಗಳನ್ನೊಂದಿದೆ.

೧೮. ಪ್ರತಿಭಟನೆಗಳಲ್ಲಿ ರೈತರು ಸಂಪೂರ್ಣವಾಗಿ ಜಯಶಾಲಿಗಳಾಗದೇ ಇದ್ದರೂ, ಅಲ್ಪ ಪ್ರಮಾಣದಲ್ಲಿಯಾದರೂ ಬದಲಾವಣೆಯಾಗುತ್ತಿವೆ. ಇದಕ್ಕೆ ಮೂಲ ಕಾರಣ ಎಲ್ಲಾ ರೈತ ಸಂಘಟನೆಗಳು ಮತ್ತು ರೈತರು ಪ್ರತಿಭಟನೆಗಳಲ್ಲಿ ಪಾಲ್ಗೊಳ್ಳದೇ ಇರುವುದು, ಪ್ರಸ್ತುತ ಅಧ್ಯಯನದಲ್ಲಿ ನೋಡಬಹುದಾಗಿದೆ.

೧೯. ರೈತ ನಾಯಕರು ತಮ್ಮನ್ನು ಪ್ರತಿಭಟನೆಗಳಲ್ಲಿ ತೊಡಗಿಸಿಕೊಳ್ಳಲು ಮೂಲ ಪ್ರೇರಣೆಯೆಂದರೆ, ತಾವೇ ಅನುಭವಿಸಿದ ಕೃಷಿ ಸಮಸ್ಯೆಗಳು, ಆರ್ಥಿಕ ಸಮಸ್ಯೆ ಹಾಗೂ ಪ್ರೊ.ಎಂ.ಡಿ.ಎನ್, ಪುಟ್ಟಣ್ಣಯ್ಯ ಮೊದಲಾದ ರೈತ ನಾಯಕರ ಪ್ರೇರಣೆಗಳಿಂದ ಮಾತ್ರ ಸಾಧ್ಯ ಎಂಬುದು ವಿಚಾರಣೀಯ ಸಂಗತಿ.

೨೦. ಬಯಲುಸೀಮೆಯ ಪ್ರದೇಶಗಳಾದ ದಾವಣಗೆರೆ, ಚಿತ್ರದುರ್ಗ ಹಾಗೂ ಬಳ್ಳಾರಿ ಜಿಲ್ಲೆಯ ರೈತರ ಪ್ರಮುಖ ಬೆಳೆ ಕೃಷಿಯಾಗಿದೆ. ಕೃಷಿಯಲ್ಲಿರುವ ಸಮಸ್ಯೆಗಳಿಂದ ರೈತರನ್ನು ರಕ್ಷಿಸುವಲ್ಲಿ ರೈತ ನಾಯಕರ ಪಾತ್ರ ಪ್ರಮುಖವಾಗಿದೆ. ಈ ರೈತ ನಾಯಕರು ಕೇವಲ ಜಿಲ್ಲೆಗೆ ಸೀಮಿತವಾಗಿರದೆ, ರಾಜ್ಯಾದಾದ್ಯಂತ ಪ್ರತಿಭಟನೆಗಳ ಮೂಲಕ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

೨೧. ರೈತ ಸಂಘಟನೆಗಳು ಎಲ್ಲಾ ವರ್ಗದವರಿಗೆ ರಾಜಕೀಯ, ಸಾಮಾಜಿಕ ಹಾಗೂ ಇತರೆ ಸಮಾನ ಸ್ಥಾನಮಾನಗಳನ್ನು ಕಲ್ಪಿಸಿದ್ದು ನಿಜ.

೨೨. ರೈತ ಸಂಘಟನೆಗಳ ಮೂಲವೇ ರೈತ. ರೈತರ ಸಮಸ್ಯೆಗಳಿಗಾಗಿಯೇ ಸ್ಪಂದಿಸುತ್ತಿರುವ ಈ ಸಂಘಟನೆಗಳ ನಡುವೆ ಸಾಮರಸ್ಯ, ಹೊಂದಾಣಿಕೆ ಇಲ್ಲವಾಗಿದೆ. ಶತ್ರುಗಳನ್ನು ನೋಡುವ ಪರಿಪಾಠದಂತೆ ಈ ಸಂಘಟನೆಗಳು ಮಾಡುತ್ತಿರುವದು ಗಮನಾರ್ಹ. ರೈತ ಸಂಘಟನೆಗಳು ಒಂದಾದಾಗ ಮಾತ್ರ ಒಗ್ಗಟ್ಟು ಉಂಟಾಗಿ ಪ್ರತಿಯೊಂದು ಪ್ರತಿಭಟನೆಯಲ್ಲು ಯಶಸ್ಸು ಕಾಣಲು ಸಾಧ್ಯ. ಇದರಿಂದಾಗಿ ರೈತ ಸಂಘಟನೆಗಳು ಒಂದಾಗುವ ಅವಶ್ಯಕತೆ ಇದೆ.

ಬಯಲುಸೀಮೆಯ ರೈತರ ಚರಿತ್ರೆಯಲ್ಲಿ ಇದೊಂದು ಮರೆಯದ ಅಧ್ಯಾಯವಾಗಿದ್ದು ಈಗ ಹೊಸ ಸೇರ್ಪಡೆ ಎಂಬುದರಲ್ಲಿ ಅನುಮಾನವಿಲ್ಲ.

**ಅಧ್ಯಯನದಲ್ಲಿ ಕಂಡುಕೊಂಡ ರೈತರ ಸಮಸ್ಯೆಗಳಿಗೆ ಕೆಲವು ಸಲಹೆಗಳು**

೧. ಬಯಲುಸೀಮೆಯ ಕೃಷಿ ಭೂಮಿಯನ್ನು ನೀರಾವರಿಗೆ ಒಳಪಡಿಸಲು ಹಾಗೂ ಅಂತರ್ಜಲವನ್ನು ಹೆಚ್ಚಿಸಲು ಕರ್ನಾಟಕದಲ್ಲಿ ಪರಮಶಿವಯ್ಯರವರ ವರದಿಯನ್ನು ಜಾರಿಗೆ ತರಬೇಕು. ಅ ಪ್ರಕಾರ ಮಳೆ ಬಂದಾಗ ಪಶ್ಚಿಮ ಘಟ್ಟಗಳಲ್ಲಿ ಬಿದ್ದ ನೀರು ನೇತ್ರಾವತಿ ಮತ್ತು ಇತರೆ ನದಿಗಳ ಮೂಲಕ ವ್ಯರ್ಥವಾಗಿ ಹರಿದು(೨,೪೪೪.೯೯ ಟಿ.ಎಮ್.ಸಿ ನೀರು) ಅರಬ್ಬಿ ಸಮುದ್ರಕ್ಕೆ ಸೇರುತ್ತದೆ. ಅದರಲ್ಲಿ ಕೇವಲ ೨೦೯.೪೯ ಟಿ.ಎಮ್.ಸಿ. ನೀರನ್ನು ಪೂರ್ವಕ್ಕೆ ಹರಿಸಿಬೇಕು. ಇದರಿಂದ ನಿರಂತರ ಬರಗಾಲಕ್ಕೆ ತುತ್ತಾಗಿರುವ ಮಧ್ಯ ಕರ್ನಾಟಕದ ಎಂಟು ಜಿಲ್ಲೆಗಳಾದ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ತುಮಕೂರು, ಮಂಡ್ಯಗಳಲ್ಲಿನ ಕೃಷಿ ಭೂಮಿಯನ್ನು ನೀರಾವರಿಗೆ ಒಳಪಡಿಸುವುದರೊಂದಿಗೆ ಅಂತರ್ಜಲ ಮಟ್ಟವನ್ನು ಹೆಚ್ಚಿಸಬಹುದು. ಸರ್ಕಾರ ಈ ಯೋಜನೆ ಜಾರಿಗೆ ತರಲು ಹಿತಾಸಕ್ತಿಯನ್ನು ಪ್ರದರ್ಶಿಸುತ್ತಿಲ್ಲ. ಬದಲಾಗಿ ಎತ್ತಿಹೊಳೆ ಯೋಜನೆಯ ಬಗ್ಗೆ ಮಾತನಾಡುತ್ತಿದೆ. ಎತ್ತಿಹೊಳೆ ಯೋಜನೆ ಪರಮಶಿವಯ್ಯರವರ ವರದಿಯ ಒಂದು ಭಾಗವಾಗಿದೆ. ಈ ಯೋಜನೆಯಿಂದ ಕೇವಲ ೭-೮ ಟಿ.ಎಮ್.ಸಿ. ನೀರು ಸಿಗಲು ಮಾತ್ರ ಸಾಧ್ಯ. ಇದರಿಂದ ಒಂದು ಜಿಲ್ಲೆಗೆ ನೀರನ್ನು ನೀಡಲೂ ಸಾಧ್ಯವಿಲ್ಲ. ಪರಮಶಿವಯ್ಯರವರ ವರದಿ ಜಾರಿಗೆ ಪರಿಸರ ಸಮಸ್ಯೆ ಹಾಗೂ ಬೇರೆ ಬೇರೆ ಸಮಸ್ಯೆಗಳಿಗೆ ಕಾರಣವಾಗುತ್ತದೆ ಎಂದು ಸರ್ಕಾರ ಮಾತನಾಡುತ್ತಿದೆ. ಈ ಸಮಸ್ಯೆಗಳ ನಿವಾರಣೆ ಮಾಡುವುದು ಸರ್ಕಾರದ ಜವಾಬ್ದಾರಿಯಾಗಿದೆ. ಎತ್ತಿನಹೊಳೆ ಯೋಜನೆ ಹಾಗೂ ಭದ್ರಾ ಮೇಲ್ದಂಡೆ ಯೋಜನೆಗಳಿಂದ ಈ ಭಾಗದ ರೈತರು ನೀರು ತುಂಬಿಸುವ ಯೋಜನೆಯ ಮೂಲಕ ಫಲಾನುಭವಿಗಳಾಗಬೇಕಿದೆ.

೨. ರೈತರು ಸಾಗುವಳಿ ಮಾಡುವ ಭೂಮಿಯು ಸೇರಿದಂತೆ ಗೇಣಿಯು ನಿಗಧಿ ಮಾಡಬೇಕು. ಗೇಣಿ ಸುಧಾರಣೆಗಳನ್ನು ಜಾರಿಗೆ ತರುವುದುರ ಮೂಲಕ, ಗೇಣಿದಾರರಿಗೆ ಭೂಹಿಡುವಳಿಯ ಭದ್ರತೆ ಮತ್ತು ಮಾಲಿಕತ್ವದ ಹಕ್ಕುಗಳನ್ನು ನೀಡಬೇಕು. ಎಲ್ಲಾ ಭೂಮಿಗಳ ಮೇಲೆ ರೈತರ ಹಕ್ಕುಗಳನ್ನು ದಾಖಲು ಮಾಡಿ, ದಾಖಲೆಗಳನ್ನು ಸರಿಪಡಿಸುವುದು. ಅರಣ್ಯ ಭೂಮಿ, ಬಂಜರು ಭೂಮಿ, ಭೂದಾನದ ಭೂಮಿಗಳನ್ನು ಕೃಷಿಕಾರ್ಮಿಕರಿಗೆ, ಭೂಹೀನ ರೈತರಿಗೆ ಹಾಗೂ ಬಡ ರೈತರಿಗೆ ಹಂಚಿಕೆ ಮಾಡಿ ಭೂಸುಧಾರಣೆಗಳನ್ನು ಪೂರ್ಣಗೊಳಿಸಬೇಕು. ಭೂಮಿಯ ವಿತರಣೆಯಲ್ಲಿ ದಲಿತರಿಗೆ ಮತ್ತು ಆದಿವಾಸಿಗಳಿಗೆ ವಿಶೇಷ ಆದ್ಯತೆ ನೀಡಬೇಕು. ಈ ಹಿನ್ನಲೆಯಲ್ಲಿ ಭೂಮಿಗಳ ಮರುವರ್ಗೀಕರಣ ಮತ್ತು ಭೂ ಮಿತಿಗಳ ಪುನರ್ನಿಗದಿಯಾಗಬೇಕು.

೩. ಇಂದಿನ ಸರ್ಕಾರಗಳು ಕೃಷಿ ಭೂಮಿಯನ್ನು ಬೃಹತ್ ಕೈಗಾರಿಕೆಗಳಿಗೆ, ವ್ಯಾಪಾರೋದ್ಯಮಿಗಳಿಗೆ ಮಾರಾಟ ಮಾಡುತ್ತಿವೆ, ಇದರ ಬದಲಾಗಿ ಬಡ ರೈತರಿಗೆ, ಕೃಷಿಕಾರ್ಮಿಕರಿಗೆ ಭೂಮಿಯನ್ನು ಮುಕ್ಕಟೆಯಾಗಿ ಹಂಚಬೇಕು. ಬಂಜರು ಭೂಮಿಯನ್ನು ಅಭಿವೃದ್ಧಿಪಡಿಸಲು ಸರ್ಕಾರ ರೈತರಿಗೆ ಆರ್ಥಿಕ ನೆರವು ನೀಡಬೇಕು.

೪. ಸರ್ಕಾರ ರೈತರಿಗೆ ಭದ್ರತೆ ಒದಗಿಸಲು ಸರ್ಕಾರಿ ಉದ್ಯೋಗಿಗೆ ನೀಡುವ ರೀತಿಯಲ್ಲಿ ಮಾಸಿಕ ವೇತನ, ಭವಿಷ್ಯ ನಿಧಿ, ಪಿಂಚಣಿ, ಗ್ರಾಚ್ಯುಟಿ, ಅಪಘಾತ ಪರಿಹಾರ ಇತ್ಯಾದಿ ಸುರಕ್ಷತಾ ಕ್ರಮಗಳನ್ನು ಜಾರಿಗೆ ತರಬೇಕು. ಈ ಬಗ್ಗೆ ರೈತರ ಸಮಸ್ಯೆಗಳ ಆಯೋಗ ರಚಿಸುವುದು ಸೂಕ್ತ.

೫. ರೈತರಿಗಾಗಿ ವಿದ್ಯುತ್ ವಲಯದಲ್ಲಿ ಖಾಸಗೀಕರಣವನ್ನು ವಿರೋಧಿಸಬೇಕು. ರೈತರ ಕೃಷಿ ನೀರಾವರಿ ಪಂಪ್‌ಸೆಟ್‌ಗಳಿಗೆ ಹಾಗೂ ಗೃಹ ಬಳಕೆಗೆ ೨೪ ಗಂಟೆಗಳ ಕಾಲ ಉಚಿತ ವಿದ್ಯುತ್ ಪೂರೈಕೆಯಾಗುವಂತೆ ಕ್ರಮಕೈಗೊಳ್ಳಬೇಕಾಗಿದೆ.

೬. ಮಾರುಕಟ್ಟೆಯಲ್ಲಿ ಕಳಪೆ ಬೀಜಗಳ ಹಾವಳಿ, ರಸಗೊಬ್ಬರ ಮತ್ತು ಕೀಟನಾಶಕಗಳ ವಿರುದ್ಧ ಕಠಿಣ ಕಾನೂನು, ಕಾಯ್ದೆಗಳನ್ನು ಜಾರಿಗೆ ತರುವುದರ ಮೂಲಕ ಸರ್ಕಾರ ರೈತರ ಹಿತರಕ್ಷಣೆಗೆ ಮುಂದಾಗಬೇಕು. ಸುರಕ್ಷಿತ, ಅಭಿವೃದ್ಧಿಪಡಿಸಿದ ಬಿತ್ತನೆ ಬೀಜ, ಗೊಬ್ಬರ, ಕೀಟನಾಶಕಗಳು ಹಾಗೂ ವೈಜ್ಞಾನಿಕ ಮಾದರಿಯ ಅತ್ಯಾಧುನಿಕ ಯಂತ್ರಗಳನ್ನು ಬಳಸಲು ಪ್ರೋತ್ಸಾಹಿಸುವುದು. ಅಲ್ಲದೆ ಅವುಗಳನ್ನು ಕೊಂಡುಕೊಳ್ಳಲು ಹೆಚ್ಚು ಸಬ್ಸಿಡಿಯನ್ನು ನೀಡುವುದು ಉಚಿತವಾದ ಸಲಹೆಯಾಗಿದೆ.

೭. ರೈತರು ಬೆಳೆದ ಎಲ್ಲಾ ಬೆಳೆಗಳಿಗೆ ಉತ್ಪಾದನಾ ವೆಚ್ಚ ಆಧರಿಸಿ ಶೇ.೫೦ ರಷ್ಟು ಲಾಭದಾಯಕ ಬೆಲೆಗಳು ಸಿಗುವಂತೆ ಮಾಡಬೇಕು. ಕೇಂದ್ರ ಸರ್ಕಾರದ ನೆರವಿನಿಂದ ಬೆಳೆಗಳಿಗೆ ತಕ್ಕಂತೆ ಖರೀದಿ ಕೇಂದ್ರ ಆರಂಭಿಸಬೇಕು.

೮. ರೈತರಿಗೆ ಆರ್ಥಿಕವಾಗಿ ನಷ್ಟವಾಗಲು ಪ್ರಮುಖವಾಗಿ ಎರಡು ಅಂಶಗಳಿವೆ, ಅವುಗಳೆಂದರೆ. ಬೆಳೆನಷ್ಟ ಮತ್ತು ಬೆಂಬಲ ಬೆಲೆ ಇಲ್ಲದೆ ಇರುವುದು. ಬೆಳೆ ನಷ್ಟವು ಅತೀವೃಷ್ಟಿ, ಅನಾವೃಷ್ಟಿ, ಕ್ರಿಮಿಕೀಟ ಹಾಗೂ ವಿವಿಧ ರೋಗಗಳಿಂದ ಆಗುತ್ತದೆ. ಈ ಸಮಯದಲ್ಲಿ ಜಿಲ್ಲಾಧಿಕಾರಿಗಳು ಹದಿನೈದು ದಿನಗಳೊಳಗೆ ಬೆಳೆ ನಷ್ಟ ಭರಿಸುವವರಾಗಿರುತ್ತಾರೆ. ಹಾಗಾಗಿ ಜಿಲ್ಲಾಧಿಕಾರಿಗಳು ಪರಿಹಾರ ನೀಡುವಲ್ಲಿ ನಷ್ಟ ಅಂದಾಜು ಪ್ರಕ್ರಿಯೆಯಲ್ಲಿ ಮುಂದಾಗಬೇಕು. ಸರ್ಕಾರ ಇದಕ್ಕೆ ಪ್ರೋತ್ಸಾಹಿಸಬೇಕಾಗಿದೆ.

೯. ರೈತರ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಬೆಲೆ ಕುಸಿತ ಕಂಡರೆ, ಅದಕ್ಕೆ ಸಂಬಂಧಿಸಿದಂತೆ ೨೪ ಗಂಟೆಯೊಳಗೆ ಕನಿಷ್ಟ ಬೆಂಬಲ ಬೆಲೆಗೆ ಖರೀದಿಸಲು ಜಿಲ್ಲಾಧಿಕಾರಿಗಳು ಮುಂದಾಗಬೇಕು. ಏಕೆಂದರೆ ಪ್ರತಿಯೊಂದು ಜಿಲ್ಲೆಗಳಲ್ಲೂ ಖರೀದಿ ಮಾಡಿದ ಧಾನ್ಯಗಳನ್ನು

ಶೇಖರಿಸಲು ಮಾರುಕಟ್ಟೆ ಸೌಲಭ್ಯ, ಉಗ್ರಾಣ, ಖಾಸಗಿ ರೈಸ್ ಮಿಲ್, ಖಾಸಗಿ ಉಗ್ರಾಣಗಳ ಸಾಕಷ್ಟು ಸೌಲಭ್ಯವಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೆರಡು ಇಂತಹ ಸಮಸ್ಯೆ ಉಂಟಾದಾಗ, ಪ್ರತಿಯೊಂದು ಜಿಲ್ಲೆಗೆ ಅನುದಾನವನ್ನು ಅಯಾ ಜಿಲ್ಲಾವಾರು ಕೃಷಿ ಭೂಮಿಯನ್ನು ಆಧಾರಿಸಿ ಪರಿಹಾರ ವಿತರಿಸುವುದು ಸೂಕ್ತ.

೧೦. ಬೆಳೆ ನಷ್ಟಕ್ಕೆ ಪರಿಹಾರವಾಗಿ ಮತ್ತು ಬೆಂಬಲ ಬೆಲೆಯಲ್ಲಿ ಖರೀದಿ ಕೇಂದ್ರಗಳನ್ನು ಪ್ರತಿಯೊಂದು ಜಿಲ್ಲೆಗಳಲ್ಲಿ ತೆರೆಯಲು ಜಿಲ್ಲಾಧಿಕಾರಿಗೆ ರೂ ೨೫ ಕೋಟಿ ಹಣವನ್ನು ಪ್ರತೀ ವರ್ಷ ಅನುದಾನವಾಗಿ ನೀಡುವುದು.

೧೧. ರೈತರಿಗೆ ಅತೀವೃಷ್ಟಿ, ಅನಾವೃಷ್ಟಿ ಹಾಗೂ ಬೆಳೆಯ ವಿಫಲತೆಯಿಂದಾಗಿ ಆಗುವ ನಷ್ಟವನ್ನು ತುಂಬಲು, ಸರ್ಕಾರಗಳು ಎಲ್ಲಾ ಬೆಳೆಗಳಿಗೆ ಕಡಿಮೆ ಕಂತಿನ ದರದಲ್ಲಿ ಬೆಳೆ ವಿಮೆ ಯೋಜನೆ ಜಾರಿಗೆ ತರುವುದು. ಈ ಬೆಳೆ ವಿಮೆ ಯೋಜನೆಯು ಎಲ್ಲಾ ಪಲಾನುಭವಿ ರೈತರಿಗೆ ಲಭ್ಯವಾಗುವಂತೆ ಕ್ರಮವಹಿಸಬೇಕಾಗಿದೆ

೧೨. ರೈತರು ಆರ್ಥಿಕವಾಗಿ ಸ್ವಾವಲಂಬಿಯಾಗಬೇಕಾದರೆ ಸರ್ವತೋಮುಖ ಕೃಷಿ ಅಭಿವೃದ್ಧಿಯ ಗುರಿ ಹೊಂದಿರಬೇಕು. ಕೃಷಿ ಆಧಾರಿತ ಪಶುಸಂಗೋಪನೆ, ಕುರಿ ಸಾಕಾಣಿಕೆ, ಕೋಳಿ ಸಾಕಾಣಿಕೆ, ಮೀನು ಸಾಕಾಣಿಕೆ, ರೇಷ್ಮೆ, ತೋಟಗಾರಿಕೆ, ಹೂವು ಮತ್ತು ಹಣ್ಣುಗಳನ್ನು ಬೆಳೆಯುವುದು ಇತ್ಯಾದಿಗಳಿಂದ ಪರಸ್ಪರ ಸಂಬಂಧ ಹೊಂದಿರಬೇಕು. ಇದಕ್ಕೆ ಬೆಳೆ ಪರಿಹಾರ, ಸಾಲಮನ್ನಾ ಯೋಜನೆಗಳನ್ನು ಜಾರಿಗೆ ತರಬೇಕು.

೧೩. ರೈತರ ಆರ್ಥಿಕ ಸಂಕಷ್ಟಕ್ಕೆ ಮೂಲ ಕಾರಣ ಲೇವಾದೇವಿಗಾರರು. ಇವರಿಂದ ರೈತರನ್ನು ರಕ್ಷಿಸಬೇಕಾದರೆ ಬಡ್ಡಿ ವ್ಯಾಪಾರಿ ನಿಯಂತ್ರಣ ಕಾಯ್ದೆಯನ್ನು ಜಾರಿಗೆ ತರಬೇಕು. ಅ ಮೂಲಕ ಲೇವಾದೇವಿ ವ್ಯವಹಾರ ಮಾಡುವವರ ಮೇಲೆ ಕಠಿಣ ಕ್ರಮ ಕೈಗೊಳ್ಳಬೇಕು. ರಾಷ್ಟ್ರೀಕೃತ ಬ್ಯಾಂಕ್‌ಗಳ ಮೂಲಕ ಕಡಿಮೆ ಬಡ್ಡಿ ದರದಲ್ಲಿ ಹಾಗೂ ಸಹಕಾರಿ ಸಂಘಗಳ ಮೂಲಕ ಉಚಿತ ಸಾಲವನ್ನು ರೈತರಿಗೆ ಒದಗಿಸುವುದು.

೧೪. ಸರ್ಕಾರಗಳು ಕೃಷಿ ಸಂಶೋಧನೆಗೆ ಪ್ರೋತ್ಸಾಹಿಸಬೇಕು. ಉತ್ತಮ ಬೀಜ ಅಭಿವೃದ್ಧಿ, ಮಣ್ಣಿನ ಗುಣಮಟ್ಟದ ಪರೀಕ್ಷೆ, ಉತ್ತಮ ಗೊಬ್ಬರಗಳು, ವಿವಿಧ ರೋಗಗಳನ್ನು ತಡೆಗಟ್ಟಲು, ವಿವಿಧ ಕೀಟಗಳು, ಹುಳುಗಳು ಹಾಗೂ ಪ್ರಾಣಿಗಳಿಂದಾಗುವ ಬೆಳೆ ನಷ್ಟವನ್ನು ತಡೆಯಲು, ಸಾಕಷ್ಟು ಪ್ರಮಾಣದಲ್ಲಿ ಕೃಷಿ ಸಂಶೋಧನೆಯನ್ನು ನಡೆಸಲು ಕೃಷಿ ಇಲಾಖೆ, ತೋಟಗಾರಿಕೆ ಇಲಾಖೆ ಹಾಗೂ ವಿಶ್ವವಿದ್ಯಾಲಯಗಳು ಮುಂದಾಗಬೇಕು.

೧೫. ವೈಜ್ಞಾನಿಕ ಮಾದರಿಯ ಕೃಷಿ ಅಭಿವೃದ್ಧಿಗೆ ರಸಗೊಬ್ಬರ, ಕೀಟನಾಶಕ, ನೀರಾವರಿ ಸೌಲಭ್ಯ, ಸಾವಯವ ಕೃಷಿ, ಆಧುನಿಕ ಕೃಷಿ ಸಲಕರಣೆಗಳ ಉಪಯೋಗದ ಬಗ್ಗೆ ಅಗತ್ಯವಾದ ತರಬೇತಿ ಮತ್ತು ಕೃಷಿ ಶಿಕ್ಷಣದ ಬಗ್ಗೆ ಅರಿವು ಮೂಡಿಸಬೇಕಾಗಿದೆ.

೧೬. ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ವ್ಯವಸ್ಥೆಯಲ್ಲಿ ಅಮೂಲಾಗ್ರವಾದ ಬದಲಾವಣೆಯಾಗಬೇಕಾಗಿದೆ. ಇದರಿಂದ ವಿವಿಧ ಬಣಗಳಾಗಿ ವಿಭಜನೆಯಾಗಿರುವ ರೈತ ಸಂಘಟನೆಗಳು, ರಾಜ್ಯ ರೈತ ಸಂಘದ ಅಡಿಯಲ್ಲಿ ಸೇರಿಕೊಂಡು ಬೃಹತ್ ರೈತ ಪ್ರತಿಭಟನೆಗಳನ್ನು ಮಾಡುವ ಅವಶ್ಯಕತೆಯಿದೆ.

೧೭. ಪ್ರತಿಯೊಂದು ರಾಜ್ಯದಲ್ಲಿಯೂ ಕೃಷಿ ಯೋಜನಾ ಆಯೋಗವನ್ನು ಸ್ಥಾಪಿಸಬೇಕು. ರೈತರು ಬೆಳೆ ಬೆಳೆಯಲು ಬೇಕಾಗುವ ಸಾಲಕ್ಕೆ ೫೦% ಸಬ್ಸಿಡಿಯನ್ನು, ಕೃಷಿ ಸಾಲವನ್ನು ೩% ಬಡ್ಡಿ ದರದಲ್ಲಿ ಹಾಗೂ ಕೃಷಿ ಯಂತ್ರಗಳನ್ನು ಕೊಂಡುಕೊಳ್ಳಲು ಶೇ.೩ ರಷ್ಟು ಬಡ್ಡಿಯ ಸಾಲವನ್ನು ಒದಗಿಸುವುದು. ನೈಸರ್ಗಿಕ ವಿಕೋಪಗಳಿಗೀಡಾದಾಗ, ಅಲ್ಲಿಯ ರೈತರ ಸಾಮರ್ಥ್ಯ ಮರುಪೂರಣವಾಗುವವರೆಗೆ, ಸಾಂಸ್ಥಿಕೇತರ ಸಾಲಗಳೂ ಸೇರಿದಂತೆ ಸಾಲಾವಧಿ ವಿಸ್ತರಣೆ ಮತ್ತು ಬಡ್ಡಿ ಮನ್ನಾ ಮಾಡಬೇಕು. ನೈಸರ್ಗಿಕ ವಿಕೋಪಗಳು ಉಂಟಾದಾಗ ರೈತರಿಗೆ ನೆರವು ನೀಡುವುದಕ್ಕಾಗಿ ಪರಿಹಾರ ನಿಧಿ ಘೋಷಿಸಬೇಕು.

೧೮. ಪ್ರತಿಯೊಂದು ಜಿಲ್ಲೆಯಲ್ಲೂ ಕೃಷಿ ವಿಶ್ವವಿದ್ಯಾಲಯಗಳು ಸ್ಥಾಪನೆಯಾಗಿ, ಕೃಷಿ ಸಂಶೋಧನಾ ಚಟುವಟಿಕೆಗಳು ನಿರಂತರವಾಗಿ ನಡೆಯಬೇಕು. ಪ್ರಾಥಮಿಕ ಹಂತದಿಂದ ಪದವಿ ಹಂತದವರೆಗಿನ ವಿದ್ಯಾರ್ಥಿಗಳಿಗೆ ಕೃಷಿ ಶಿಕ್ಷಣ ನೀಡುವುದು. ಅ ಮೂಲಕ ಯುವಕರನ್ನು ಕೃಷಿ ಕ್ಷೇತ್ರಕ್ಕೆ ತೊಡಗಿಸಿಕೊಳ್ಳುವಂತೆ ಮಾಡುವುದು.

೧೯. ಕೃಷಿ ಯೋಜನೆ ಸಿದ್ದಪಡಿಸಲು ಪಂಚಾಯತ್ ರಾಜ್ ಮತ್ತು ಗ್ರಾಮಸಭೆಗಳಿಗೆ ಅಧಿಕಾರ ನೀಡುವ ಅಗತ್ಯವಿದೆ.

೨೦. ಸಹಕಾರಿ ತತ್ವವನ್ನು ಜಾರಿಗೆ ತರುವುದರ ಮೂಲಕ ಕೃಷಿಕರಿಗೆ ಉತ್ತೇಜನ ನೀಡಿ, ಕೃಷಿ ಉಪಕರಣಗಳು, ನೀರು ಹಾಗೂ ಭೂಮಿಯ ಸಮಾನ ಹಂಚಿಕೆ ಮಾಡುವ ಮೂಲಕ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಸಾಲ ಸೌಲಭ್ಯ ಕೊಟ್ಟು ಕಾಪಾಡುವ ಯೋಜನೆಗಳು ಜಾರಿಗೆಯಾಗಬೇಕು.

೨೧. ದೇಶದ ಅಗತ್ಯತೆಗಳನ್ನು ಪೂರೈಸುವ ಹಾಗೂ ಮಾರುಕಟ್ಟೆಗೆ ಅತೀ ಅವಶ್ಯಕವಾಗಿ ಬೇಕಾಗಿರುವ ಬೆಳೆಗಳನ್ನು ಬೆಳೆಯುವಂತೆ ಪ್ರೋತ್ಸಾಹಿಸಬೇಕು.

೨೨. ಉತ್ತರ ಭಾರತ ಮತ್ತು ದಕ್ಷಿಣ ಭಾರತದಲ್ಲಿರುವ ನದಿಗಳ ಜೋಡಣೆ ಕಾರ್ಯ ಆರಂಭವಾಗಬೇಕು. ಈ ಮೂಲಕ ರಾಜ್ಯದಲ್ಲಿರುವ ಅಣೆಕಟ್ಟುಗಳನ್ನು, ಕೆರೆ ಕಾಲುವೆಗಳನ್ನು ತುಂಬಿಸುವುದು ಅವಶ್ಯಕ. ಹಾಗಾಗಿ ಕೆರೆಗಳ ಒತ್ತುವರಿಯನ್ನು ತೆರವುಗೊಳಿಸಿ ಅವುಗಳ ರಕ್ಷಣೆಗೆ ಮುಂದಾಗುವುದು.

೨೩. ರೈತ ಹಾಗೂ ರೈತ ಪರಿವಾರದವರಿಗೆ ಉಚಿತ ಶಿಕ್ಷಣ, ಉಚಿತ ವೈದ್ಯಕೀಯ ಸೌಲಭ್ಯ, ಆರೋಗ್ಯ ವಿಮಾ ಯೋಜನೆಗಳನ್ನು ಜಾರಿಗೆಗೊಳಿಸಬೇಕು.

೨೪. ರೈತರಿಗೆ ನೀರಾ ಇಳಿಸಲು ಸರ್ಕಾರ ಅಬಕಾರಿ ಕಾಯ್ದೆಯ ಅಡಿಯಲ್ಲಿ ಅನುಮತಿ ನೀಡಬೇಕು.

೨೫. ರೈತರಿಗೆ ಸಾಮಾಜಿಕ ಭದ್ರತೆ ಒದಗಿಸಲು ಸರ್ಕಾರವು ವರದಕ್ಷಿಣೆ ನಿಷೇಧ ಕಾಯ್ದೆ ಜಾರಿಗೆ ತರುವುದು. ಅ ಮೂಲಕ ಸರಳ ವಿವಾಹಕ್ಕೆ ಪ್ರೋತ್ಸಾಹ ನೀಡಿ ರೈತರ ಆರ್ಥಿಕ ಮಟ್ಟವನ್ನು ಕಾಪಾಡುವುದು.

**ಈರುಳ್ಳಿ ಹಾಗೂ ಶೇಂಗಾ ಬೆಳೆಗಾರರಿಗೆ ಕೆಲವು ಸಲಹೆಗಳು**

೧. ಮಳೆ ಇಲ್ಲದೆ ಬೆಳೆ ನಾಶವಾಗುವುದರಿಂದ, ಜಲಕ್ಷಾಮ ಉಂಟಾದಾಗ ಬೋರ್‌ವೆಲ್ ಕೊರೆಸಬಾರದು.

೨. ಮಳೆ ಕಡಿಮೆ ಬೀಳುವಾಗ ಶೇಂಗಾ ಹಾಗೂ ಈರುಳ್ಳಿ ಬಿತ್ತನೆ ಬಗ್ಗೆ ರೈತರು ಪುನರ್ ಪರಿಶೀಲಿಸಬೇಕು.

೩. ಇತ್ತೀಚಿಗೆ ಇಸ್ರೇಲ್ ಮಾದರಿ ಕೃಷಿ ನೀತಿಯನ್ನು ಅಳವಡಿಸುವ ಪ್ರಯತ್ನವನ್ನು ಕರ್ನಾಟಕದಲ್ಲಿ ಪ್ರಯೋಗಿಸಿರುವುದು ಶ್ಲಾಘನೀಯವಾಗಿದೆ. ಅದೇ ರೀತಿ ಕಡಿಮೆ ವೆಚ್ಚದಲ್ಲಿ ಅಧಿಕ ಬೆಳೆ ಬೆಳೆದು ಲಾಭ ತರುವಂತಹ ಫಸಲನ್ನು ಬೆಳೆಯಬೇಕು.

೪. ಮಾರುಕಟ್ಟೆಯಲ್ಲಿ ಯಾವ ಬೆಳೆಗೆ ಬೇಡಿಕೆ ಇದೆ ಎಂಬುದನ್ನು ಅರಿತು ಆ ಬಗೆಯ ಬೆಳೆಗಳಿಗೆ ಮಾರುಹೋಗುವುದು ಅಗತ್ಯ.

೫. ಸರ್ಕಾರದಿಂದ ಈ ಬೆಳೆಗಳಿಗೆ ವಿಮೆ ಸೌಲಭ್ಯ ವ್ಯವಸ್ಥೆ ಮಾಡಬೇಕು.

೬. ಈರುಳ್ಳಿ ಬೆಳೆಯಲು ಹೆಚ್ಚು ಗೊಬ್ಬರ ಹಾಕಿದರೆ ಹೆಚ್ಚು ಇಳುವರಿ ಬರುತ್ತದೆ ಎನ್ನುವುದು ರೈತರ ಮೂಢನಂಬಿಕೆಯಾಗಿದೆ. ಇದರಿಂದ ಒಂದು ಎಕರೆಗೆ ಮೂವತ್ತರಿಂದ ನಲವತ್ತು ಸಾವಿರ ಖರ್ಚಾಗುತ್ತದೆ. ಅದಕ್ಕೆ ಪರ್ಯಾಯವಾಗಿ ಎರೆಹುಳುಗೊಬ್ಬರ, ಕೊಟ್ಟಿಗೆಗೊಬ್ಬರ, ಕೋಳಿಗೊಬ್ಬರ ಹಾಗೂ ಸಗಣಿಗೊಬ್ಬರ ಬಳಸುವುದರಿಂದ ಇಳುವರಿ ಹೆಚ್ಚಿಸಬಹುದು ಹಾಗೂ ಭೂಮಿಯ ಫಲವತ್ತತೆಯನ್ನು ಹೆಚ್ಚಿಸದಂತಾಗುತ್ತದೆ.

೭. ಸಾವಯವ ಕೃಷಿಯಲ್ಲಿ ಕೀಟಗಳ ಬಾಧೆ ಕಡಿಮೆ. ಹಾಗಾಗಿ ಈರುಳ್ಳಿ ಮತ್ತು ಶೇಂಗಾ ಬೆಳೆಗಾರರು ಸಾವಯವ ಕೃಷಿಪದ್ಧತಿಯನ್ನು ಅಳವಡಿಸಿಕೊಳ್ಳಬೇಕು.

೮. ಖಾಯಂ ಈರುಳ್ಳಿ ಬೆಳೆಗಾರರಾದರೆ ತಪ್ಪದೇ ಈರುಳ್ಳಿಯನ್ನು ಕೆಡದಂತೆ ಸಂಗ್ರಹಿಸಿ ಇಡುವ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು. ಕಾರಣ ಬೆಲೆ ತೀರ ಕಡಿಮೆ ಅನಿಸಿದರೆ ಕೆಲವು ದಿನಗಳ ಕಾಲ ಸಂಗ್ರಹಿಸಿಟ್ಟು ನಂತರ ಮಾರಬಹುದು. ನಾವು ಬೆಳೆದ ಬೆಳೆಗೆ ಸರ್ಕಾರ ವೈಜ್ಞಾನಿಕ ಬೆಲೆ ನಿಗಧಿಪಡಿಸುವವರೆಗೆ ರೈತರೇ ಇಂಥ ವ್ಯವಸ್ಥೆ ಮಾಡಿಕೊಳ್ಳುವುದು ಒಳ್ಳೆಯದು. ವಿಶಾಲವಾದ ಕಣಗಳು, ಗೊಡನ್‌ಗಳು ಹಾಗೂ ಸುರಕ್ಷಿತ ದಾಸ್ತಾನು ಮಳಿಗೆಗಳನ್ನು ನಿರ್ಮಿಸಬೇಕಾಗಿದೆ.

೯. ಈರುಳ್ಳಿ ಮತ್ತು ಶೇಂಗಾ ಬೆಳೆಗಾರರು ಮಿಶ್ರ ಬೆಳೆಯನ್ನು ಅನುಸರಿಸಬೇಕು. ಕಾರಣ ಇದರಿಂದ ರೈತರಿಗೆ ಅಗುವ ನಷ್ಟದ ಪ್ರಮಾಣವನ್ನು ಮೆಟ್ಟಿನಿಂತು ಲಾಭ ಪಡೆಯಬಹುದು.

೧೦. ಭೌಗೋಳಿಕತೆ, ಹವಾಗುಣ ಹಾಗೂ ಸರ್ಕಾರದ ಕೃಷಿ ಇಲಾಖೆಯ ನಿರ್ದೇಶನದಂತೆ ರೈತರು ಬೆಳೆಗಳನ್ನು ಬೆಳೆಯುವುದು ಸೂಕ್ತ.

೧೧. ಮುಂದಿನ ಅಧ್ಯಯನಕಾರರು ಇಡೀ ಕರ್ನಾಟಕದ ವ್ಯಾಪ್ತಿಯಲ್ಲಿರುವ ಈರುಳ್ಳಿ ಹಾಗೂ ಶೇಂಗಾ ಬೆಳೆಗಾರರ ಬಗ್ಗೆ, ತಲಸ್ಪರ್ಶಿ ಅಧ್ಯಯನ ಮಾಡಬಹುದಾಗಿದೆ.

ಈ ಮೇಲಿನ ಎಲ್ಲಾ ಸಲಹೆಗಳನ್ನು ಸರ್ಕಾರಗಳು ಹಾಗೂ ರೈತರು ಪರಸ್ಪರ ಅಳವಡಿಸಿಕೊಂಡರೆ ಸಮಸ್ಯೆಗಳಿಂದ ಹೊರಬರಬಹುದು.

# ಅನುಬಂಧಗಳು

೧. ಸಂದರ್ಶನ ಮಾಡಿದ ರೈತ ಮುಖಂಡರು

೨. ಮಾದರಿ ಪ್ರಶ್ನಾವಳಿ

೩. ಗ್ರಂಥಋಣ

೪. ನಕಾಶೆಗಳು

೫. ಛಾಯಾಚಿತ್ರಗಳು

## ೧. ಸಂದರ್ಶನ ಮಾಡಿದ ರೈತ ಮುಖಂಡರು

೧. **ಎಂ.ಎಸ್.ಕೆ. ಶಾಸ್ತ್ರಿ**
ಕರ್ನಾಟಕ ಪ್ರದೇಶದ ರೈತ ಸಂಘದ ರಾಜ್ಯಾಧ್ಯಕ್ಷರು,
ಮಾಯಕೊಂಡ ಗ್ರಾಮ, ದಾವಣಗೆರೆ ಜಿಲ್ಲೆ.

೨. **ಕೆ.ಪಿ. ಭೂತಯ್ಯ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಹಿರಿಯ ಗೌರವ ರಾಜ್ಯಾಧ್ಯಕ್ಷರು,
ಕಾಲುವೆಹಳ್ಳಿಯಲ್ಲಿ, ಚಳ್ಳಕೆರೆ ತಾಲೂಕು, ಚಿತ್ರದುರ್ಗ ಜಿಲ್ಲೆ.

೩. **ಎಸ್.ಬಿ.ಶಿವಕೂಮಾರ್**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾ ಗೌರವ ಅಧ್ಯಕ್ಷರು,
ಚಳ್ಳಕೆರೆ ತಾಲೂಕು, ಚಿತ್ರದುರ್ಗ,

೪. **ಪಿ.ಟಿ.ರಾಮಚಂದ್ರ ರೆಡ್ಡಿ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ತಾಲೂಕು ಅಧ್ಯಕ್ಷರು,
ಚಳ್ಳಕೆರೆ ತಾಲೂಕು, ಚಿತ್ರದುರ್ಗ,

೫. **ಓಬಳಯ್ಯ**
ರೈತ ಮುಖಂಡರು,
ಗುಡಿಹಳ್ಳಿ, ಚಳ್ಳಕೆರೆ ತಾಲೂಕು, ಚಿತ್ರದುರ್ಗ,

೬. **ಹುಚ್ಚವನಹಳ್ಳಿ ಮಂಜುನಾಥ್**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ(ಹುಚ್ಚವನಹಳ್ಳಿ ಮಂಜುನಾಥ್ ಬಣ)ರಾಜ್ಯಾಧ್ಯಕ್ಷರು, ಕೆ.ಟಿ.ಜೆ. ಬಡವಾಣೆ, ದಾವಣಗೆರೆ.

೭. **ಹೆಚ್.ಎಂ. ಮಹೇಶ್ವರಸ್ವಾಮಿ**
ಕರ್ನಾಟಕ ರಾಜ್ಯ ರೈತ ಮತ್ತು ಸ್ವ-ಸಹಾಯ ಸ್ತ್ರೀ ಶಕ್ತಿ ಸಂಘದ ರಾಜ್ಯಾಧ್ಯಕ್ಷರು,
ನಿಟ್ಟೂರು ಬಸಾಪುರ, ಹರಪನಹಳ್ಳಿ ತಾಲೂಕು, ದಾವಣಗೆರೆ.

೮. **ಟಿ. ನುಲೇನೂರು ಶಂಕ್ರಪ್ಪ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾಧ್ಯಕ್ಷರು,
ನುಲೇನೂರು, ಹೊಳಲ್ಕೆರೆ ತಾಲೂಕು, ಚಿತ್ರದುರ್ಗ ಜಿಲ್ಲೆ.

೯. **ಅವರಗೆರೆ ಉಮ್ಮೇಶ್**
ಅಖಿಲ ಭಾರತ ಕಿಸಾನ್ ಸಭಾದ ಜಿಲ್ಲಾಧ್ಯಕ್ಷರು,
ಅವರಗೆರೆ, ದಾವಣಗೆರೆ.

೧೦. **ಅರಣ್ ಕುಮಾರ್ ಕುರುಡಿ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯರಾಜ್ಯ ಸಂಘಟನಾ ಕಾರ್ಯದರ್ಶಿ,
ಕುರುಡಿ, ದಾವಣಗೆರೆ.

೧೧. **ಹೊನ್ನೂರು ಮುನಿಯಪ್ಪ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾಧ್ಯಕ್ಷರು,
ಹೊನ್ನೂರು ಗ್ರಾಮ, ದಾವಣಗೆರೆ

೧೨. **ಆವರಗೆರೆ ರುದ್ರಮುನಿ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಗೌರವಾಧ್ಯಕ್ಷರು,
ಆವರಗೆರೆ, ದಾವಣಗೆರೆ.

೧೩. **ಶೇಖರಾನಾಯ್ಕ್**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾ ಪ್ರಧಾನ ಕಾರ್ಯದರ್ಶಿ,
ಚಿನ್ನಸಮುದ್ರ, ದಾವಣಗೆರೆ.

೧೪. **ಬಲ್ಲೂರು ರವಿಕುಮಾರ್**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ರಾಜ್ಯ ಪ್ರಧಾನ ಕಾರ್ಯದರ್ಶಿಗಳು,
ಬಲ್ಲೂರು, ದಾವಣಗೆರೆ.

೧೫. **ಕೊಟ್ರೇಶ ನಾಯ್ಕ್**
೨೨ ಕೆರೆಗಳ ಏತನೀರಾವರಿ ಹೋರಾಟ ಸಮಿತಿಯ ಉಪಾಧ್ಯಕ್ಷರು,
ಹುಲಿಕಟ್ಟೆ, ದಾವಣಗೆರೆ

೧೬. **ಡಾ॥ ಜಿ. ಮಂಜುನಾಥ್ ಗೌಡ**
೨೨ ಕೆರೆಗಳ ಏತನೀರಾವರಿ ಹೋರಾಟ ಸಮಿತಿಯ ಅಧ್ಯಕ್ಷರು,
ದಾವಣಗೆರೆ

೧೭. **ಮಲ್ಲಾಪುರದ ಲಿಂಗರಾಜು**
ರೈತ ಮುಖಂಡ,
ಮಲ್ಲಾಪುರ, ದಾವಣಗೆರೆ.

೧೮. **ಕೆ.ಸಿ.ಚಂದ್ರಪ್ಪ**
ರೈತ ಸಂಘದ ಗ್ರಾಮ ಘಟಕದ ಅಧ್ಯಕ್ಷರು,
ಕೆಂಚಾಪುರ, ಹರಪನಹಳ್ಳಿ ತಾಲೂಕು, ದಾವಣಗೆರೆ.

೧೯. **ದೇವರಮನಿ ಮಹೇಶ್**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ಜಿಲ್ಲಾ ಉಪಾಧ್ಯಕ್ಷರು,
ಕೆರೆಕಾವಲರಹಟ್ಟಿ, ಕೂಡ್ಲಿಗಿ ತಾಲೂಕು, ಬಳ್ಳಾರಿ.

೨೦. **ಕಾಮದೋಡು ವೀರಣ್ಣ**
ಅಖಿಲ ಭಾರತ ಕಿಸಾನ್ ಸಭಾದ ರಾಜ್ಯ ಗೌರವ ಅಧ್ಯಕ್ಷರು,
ಕೂಡ್ಲಗಿ, ಬಳ್ಳಾರಿ

೨೧. **ರಾಜು ಗೌಡ**
ಅಖಿಲ ಭಾರತ ಕಿಸಾನ್ ಸಭಾದ ತಾಲೂಕು ಅಧ್ಯಕ್ಷರು,
ಕಂದಗಲ್ಲು ಗ್ರಾಮ, ಸಿರಗುಪ್ಪ ತಾಲೂಕು, ಬಳ್ಳಾರಿ,

೨೨. **ಕಾನನಕಟ್ಟೆ ತಿಪ್ಪೇಸ್ವಾಮಿ**
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆಯ ತಾಲೂಕು ಅಧ್ಯಕ್ಷರು,
ಜಗಳೂರು ತಾಲೂಕು, ದಾವಣಗೆರೆ.

೨೩. ಹೆಚ್. ಓಂಕಾರಪ್ಪ
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ), ರಾಜ್ಯ ಸಂಚಾಲಕರು ವಾಸನ ಗ್ರಾಮ,ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ.

೨೪. ಬುಳ್ಳಾಪುರದ ಹನುಮಂತಪ್ಪ
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ), ಜಿಲ್ಲಾ ಪ್ರಧಾನ ಕಾರ್ಯದರ್ಶಿ, ಆನಗೋಡು ಗ್ರಾಮ, ದಾವಣಗೆರೆ ತಾ.ಜಿ.

೨೫. ಕೊಗ್ಗನೂರು ಹನುಂತಪ್ಪ
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ)ತಾಲೂಕು ಅಧ್ಯಕ್ಷರು, ಕೊಗ್ಗನೂರು ಗ್ರಾಮ, ದಾವಣಗೆರೆ ತಾ.ಜಿ.

೨೬. ಎಸ್.ಬಿ. ಶಿವಕುಮಾರ್
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ), ತಾಲೂಕು ಗೌರವಾಧ್ಯಕ್ಷರು, ಹಿರಿಯೂರು ತಾಲೂಕು, ಚಿತ್ರದುರ್ಗ ಜಿಲ್ಲೆ.

೨೭. ಮಲ್ಲಾಪುರ ತಿಪ್ಪೇಸ್ವಾಮಿ
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯಬಣ) ತಾಲೂಕು ಉಪಾಧ್ಯಕ್ಷರು, ಹಿರಿಯೂರು ತಾಲೂಕು, ಚಿತ್ರದುರ್ಗ ಜಿಲ್ಲೆ.

೨೮. ಹನಗವಾಡಿ ರುದ್ರೇಶ್
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ)ತಾಲೂಕು ಅಧ್ಯಕ್ಷರು, ಹನಗವಾಡಿ ಗ್ರಾಮ, ಹರಿಹರ ತಾ. ದಾವಣಗೆರೆ ಜಿ.

೨೯. ಆಳೂರು ನಾಗರಾಜ
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ)ತಾಲೂಕು ಪ್ರಧಾನ ಕಾರ್ಯದರ್ಶಿ ಹೊಳೆ ಸಿರಿಗೆರೆ ಗ್ರಾಮ, ಹರಿಹರ ತಾ ದಾವಣಗೆರೆ ಜಿ.

೩೦. ಹಲಸಬಾಳು ಬಸವರಾಜಪ್ಪ
ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ (ಪುಟ್ಟಣ್ಣಯ್ಯ ಬಣ) ತಾಲೂಕುಕಾರ್ಯಾಧ್ಯಕ್ಷರು ಹಲಸಬಾಳು, ಹರಿಹರ ತಾ. ದಾವಣಗೆರೆ ಜಿ.

೩೧. ಪೂಜಾರ್ ಆಂಜನೇಯಪ್ಪ
ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ, ಎಂ.ಡಿ. ನಂಜುಂಡಸ್ವಾಮಿ ಬಣ, ಜಿಲ್ಲಾಧ್ಯಕ್ಷರು, ನಿಟುವಳ್ಳಿ, ದಾವಣಗೆರೆ.

೩೨. ತಿಪ್ಪೇಶಪ್ಪ
ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಎಂ.ಡಿ.ಎನ್ ಬಣ ಮತ್ತು ಪುಟ್ಟಣ್ಣಯ್ಯ ಬಣ ಸಂಯುಕ್ತ) ಚನ್ನಗಿರಿ ತಾಲೂಕು ಅಧ್ಯಕ್ಷರು, ಮಲಹಾಳು ಗ್ರಾಮ ಚನ್ನಗಿರಿ ತಾ. ದಾವಣಗೆರೆ.

೩೩. ಎ.ಜಿ. ಚನ್ನಪ್ಪಗೌಡ್ರು
ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ (ಎಂ.ಡಿ.ಎನ್. ಬಣ ಹಾಗೂ ಪುಟ್ಟಣ್ಣಯ್ಯ ಬಣ ಸಂಯುಕ್ತ) ಹೊನ್ನಾಳಿತಾಲೂಕು ಅಧ್ಯಕ್ಷರು, ದಿಡಗೂರು, ಹೊನ್ನಾಳಿ ತಾ.ದಾವಣಗೆರೆ.

# ೨. ಮಾದರಿ ಪ್ರಶ್ನಾವಳಿ

**ಏಕೀಕರಣೋತ್ತರ ಕರ್ನಾಟಕದ ಬಯಲುಸೀಮೆಯ ರೈತರ ಪ್ರತಿಭಟನೆಗಳು: ಚಾರಿತ್ರಿಕ ಅಧ್ಯಯನ**

1. ಸಂದರ್ಶಿತರ ಹೆಸರು :–
2. ಜನ್ಮ ದಿನಾಂಕ ಮತ್ತು ವಯಸ್ಸು :–
3. ಸ್ಥಳ:– ತಾಲೂಕು:– ಜಿಲ್ಲೆ:–
4. ಧರ್ಮ:–
5. ಜಾತಿ:–
6. ತಂದೆ ಮತ್ತು ತಾಯಿಯ ಹೆಸರು :–
7. ದೂರವಾಣಿ ಸಂಖ್ಯೆ:–
8. ವಿದ್ಯಾರ್ಹತೆ :–

| ಅನಕ್ಷರಸ್ಥರು | ಅಕ್ಷರಸ್ಥರು | ಪ್ರಾಥಮಿಕ | ಪ್ರೌಢ | ಪದವಿ | ಸ್ನಾತಕೋತ್ತರ | ತಾಂತ್ರಿಕ | ಇತರೆ |
|---|---|---|---|---|---|---|---|
| | | | | | | | |

9. ಕುಟುಂಬದ ಸದಸ್ಯರ ಸಂಖ್ಯೆ:– ಗಂಡು: ಹೆಣ್ಣು:
10. ಕುಟುಂಬದ ವಿಧ:– ವಿಭಕ್ತ ಕುಟುಂಬ: ಅವಿಭಕ್ತ ಕುಟುಂಬ:
11. ಮನೆಯ ಸ್ವರೂಪ:– ಗುಡಿಸಲು: ಹಂಚಿನ ಮನೆ: ಅರ್.ಸಿ.ಸಿ: ಬಂಗಲೆ:
12. ವ್ಯವಸಾಯಕ್ಕೆ ಒಳಪಡಿಸಿರುವ ಭೂಮಿ ಯಾವುದು? ಒಣ ಭೂಮಿ: ನೀರಾವರಿ ಭೂಮಿ:
13. ಜಮೀನಿನ ವಿವರ :– 1 ಎಕರೆಗಿಂತ ಕಡಿಮೆ: 1 – 5 ಎಕರೆ: 6 – 10 ಎಕರೆ:
    11 – 15 ಎಕರೆ: 16 – 20 ಎಕರೆ: 20 ಎಕರೆಗಿಂತ ಹೆಚ್ಚು
14. ನೀವು ಯಾವ ಯಾವ ಬೆಳೆಗಳನ್ನು ಬೆಳೆಯುತ್ತೀರಾ. ಮತ್ತು ವಾರ್ಷಿಕ ಅದಾಯ ಮತ್ತು ಖರ್ಚು(ರೂ)

| ಹಿಂದ | | | | | ಪ್ರಸ್ತುತ | | | | | ನಿಮ್ಮ ಅಭಿಪ್ರಾಯ |
|---|---|---|---|---|---|---|---|---|---|---|
| ಬೆಳೆಗಳು | ಎಕರೆ | ಕ್ವಿಂಟಾಲ್ | ವಾರ್ಷಿಕ ಖರ್ಚು | ಆದಾಯ | ಬೆಳೆಗಳು | ಎಕರೆ | ಕ್ವಿಂಟಾಲ್ | ವಾರ್ಷಿಕ ಖರ್ಚು | ಆದಾಯ | |
| | | | | | | | | | | |
| | | | | | | | | | | |
| | | | | | | | | | | |

15. ನೀವು ಯಾವುದಾದರು ಬೆಳೆಗಳಿಂದ ನಷ್ಟ ಅನುಭವಿಸಿದ್ದೀರಾ? ಹೌದು\ಇಲ್ಲ.
    - ಹೌದು ಎಂದಾದರೆ ಕಾರಣಗಳನ್ನು ತಿಳಿಸಿ?
    - ಇಲ್ಲ ಎಂದಾದರೆ, ಲಾಭ ಪಡೆಯಲು ಕೈಗೊಂಡಿರುವ ಕ್ರಮಗಳು ಯಾವುವು?
16. ಯಾವುದಾದರು ಉಪಕಸುಬುಗಳನ್ನು ಮಾಡುತ್ತೀದ್ದೀರಾ, ಹಾಗೂ ಕುಟುಂಬದ ಇತರೆ ಮೂಲಾದಾಯಗಳು ಯಾವುವು?
17. ಕುಟುಂಬದ ವಾರ್ಷಿಕ ಆದಾಯ:

| ವಾರ್ಷಿಕ ಆದಾಯ | | 1,00,001 – 5,00,000 | |
|---|---|---|---|
| 5000 ಕ್ಕಿಂತ ಕಡಿಮೆ | | 5,00,001 – 10,00,000 | |
| 50,001 – 1,00,000 | | 10,00,000 ಕ್ಕಿಂತ ಹೆಚ್ಚು | |

18. ಕುಟುಂಬದ ವಾರ್ಷಿಕ ಖರ್ಚು:

| ವಾರ್ಷಿಕ ಖರ್ಚು | | 1,00,001 – 5,00,000 | |
|---|---|---|---|
| 5000 ಕ್ಕಿಂತ ಕಡಿಮೆ | | 5,00,001 – 10,00,000 | |
| 50,001 – 1,00,000 | | 10,00,000 ಕ್ಕಿಂತ ಹೆಚ್ಚು | |

19. ನೀವು ಸಾಲವನ್ನು ಮಾಡಿದ್ದೀರಾ? ಹೌದು\ಇಲ್ಲ. ಹೌದಾದರೆ(ರೂಗಳಲ್ಲಿ

| ಕುಟುಂಬದ ಸಾಲ | | 1,00,001 – 5,00,000 | |
|---|---|---|---|
| 5001 – 50,000 | | 5,00,001 – 10,00,000 | |
| 50,001 – 1,00,000 | | 10,00,000 ಕ್ಕಿಂತ ಹೆಚ್ಚು | |

20. ನೀವು ಸಾಲ ಪಡೆಯುವ ಮೂಲಗಳು ಯಾವುವು?

| ಸಾಲದ ಮೂಲಗಳು | | ಬ್ಯಾಂಕುಗಳು | |
|---|---|---|---|
| ಬಂಧುಗಳು | | ಸಹಕಾರಿ ಸಂಸ್ಥೆಗಳು | |
| ಲೇವಾದೇವಿಗಾರರು | | ಇತರೆ | |

21. ನೀವು ಸಾಲವನ್ನು ಮಾಡಲು ಕಾರಣಗಳು?

| ಸಾಲದ ಕಾರಣಗಳು | | ಮನೆ ಕಟ್ಟಲು | |
|---|---|---|---|
| ಶಿಕ್ಷಣ | | ಕುಟುಂಬದ ನಿರ್ವಹಣೆ | |
| ವಿವಾಹ | | ಐಷಾರಾಮಿ ಬದುಕಿಗೆ | |
| ವ್ಯವಸಾಯ ಮಾಡಲು | | ಇತರೆ | |

22. ರೈತ ಎಂದರೆ ಯಾರು?

23. ರೈತರ ಸ್ವರೂಪ ಮತ್ತು ಲಕ್ಷಣಗಳು ಯಾವುವು?

24. ನೀವು ಯಾವುದಾದರು ಸರ್ಕಾರಿ/ಅರೆ ಸರ್ಕಾರಿ ಸಂಸ್ಥೆಯ ಸದಸ್ಯತ್ವ ಪಡೆದುಕೊಂಡಿದ್ದೀರಾ? ಹೌದು\ಇಲ್ಲ.
   - ಹೌದು ಎಂದಾದರೆ ಯಾವುದು?
   - ಇಲ್ಲ ಎಂದಾದರೆ ಏಕೆ ಪಡೆದುಕೊಂಡಿಲ್ಲ?

25. ನೀವು ರೈತ ಸಂಘಟನೆಯ ಸದಸ್ಯತ್ವ ಪಡೆದುಕೊಂಡಿದ್ದೀರಾ? ಹೌದು\ಇಲ್ಲ.
   - ಹೌದು ಎಂದಾದರೆ ಯಾವುದು?
   - ಇಲ್ಲ ಎಂದಾದರೆ ಏಕೆ ಪಡೆದುಕೊಂಡಿಲ್ಲ?

26. ನೀವು ಯಾವುದಾದರು ಸಂಘ ಸಂಸ್ಥೆಯ ನಾಯಕತ್ವ/ ರೈತ ಮುಖಂಡರಾಗಿದ್ದೀರಾ?

27. ರೈತರಿಗಿರುವ ಸಮಸ್ಯೆಗಳು ಯಾವುವು?

28. ಈ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕಂಡುಕೊಂಡ ಮಾರ್ಗೋಪಾಯಗಳು ಯಾವುವು?

29. ಸಾಲ ಮನ್ನಕ್ಕಾಗಿ ಚಳವಳಿ ನಡೆಸಿದ್ದೀರಾ? ಹೌದು\ಇಲ್ಲ.
   - ಹೌದು ಎಂದಾದರೆ ವಿವರಣೆ ನೀಡಿ?
   - ಇಲ್ಲ ಎಂದಾದರೆ ಏಕೆ ಮಾಡಿಲ್ಲ?

30. ಬಿತ್ತನೆ ಬೀಜದ ಅಭಾವ ವಿರೋಧಿಸಿ ಚಳವಳಿ ನಡೆಸಿದ್ದೀರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ
- ಇಲ್ಲ ಎಂದಾದರೆ ಏಕೆ ಚಳವಳಿ ಮಾಡಿಲ್ಲ?

31. ಗೊಬ್ಬರದ ಸಮಸ್ಯೆ ವಿರೋಧಿಸಿ ಚಳವಳಿ ನಡೆಸಿದ್ದೀರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ
- ಇಲ್ಲ ಎಂದಾದರೆ ಏಕೆ ಚಳವಳಿ ಮಾಡಿಲ್ಲ?

32. ಬೆಂಬಲ ಬೆಲೆಗಾಗಿ ಚಳವಳಿ ನಡೆಸಿದ್ದೀರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ
- ಇಲ್ಲ ಎಂದಾದರೆ ಏಕೆ ಚಳವಳಿ ಮಾಡಿಲ್ಲ?

33. ಬೆಳೆ ಪರಿಹಾರಕ್ಕಾಗಿ ಚಳವಳಿ ನಡೆಸಿದ್ದೀರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ
- ಇಲ್ಲ ಎಂದಾದರೆ ಏಕೆ ಚಳವಳಿ ಮಾಡಿಲ್ಲ?

34. ಭೂ-ವಿವಾದಕ್ಕೆ ಸಂಬಂಧಿಸಿದಂತೆ ಚಳವಳಿಗಳನ್ನು ನಡೆಸಿದ್ದೀರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ
- ಇಲ್ಲ ಎಂದಾದರೆ ಏಕೆ ಚಳವಳಿ ಮಾಡಿಲ್ಲ?

35. ಇತರೆ ಸಮಸ್ಯೆಗಳ ಹಿನ್ನಲೆಯಲ್ಲಿ ಚಳವಳಿ ನಡೆಸಿದ್ದೀರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ
- ಇಲ್ಲ ಎಂದಾದರೆ ಯಾವ ಸಮಸ್ಯೆಗಳು ಬಂದೊದಗಿಲ್ಲವ?

36. ರೈತ ಚಳವಳಿಯಲ್ಲಿ ಮಹಿಳೆಯರು ಭಾಗವಹಿಸುತ್ತಾರಾ? ಹೌದು\ಇಲ್ಲ.
- ಭಾಗವಹಿಸಿದ್ದರೆ ಹೆಸರುಗಳನ್ನು ತಿಳಿಸಿ.
- ಭಾಗವಹಿಸದಿದ್ದರೆ ಕಾರಣಗಳನ್ನು ತಿಳಿಸಿ.

37. ನೀವು ಭಾಗವಹಿಸಿ ಯಶಸ್ಸು ಕಂಡ ರೈತ ಚಳವಳಿಗಳು ಯಾವುವು?

38. ರಸ್ತೆ ತಡೆ, ಬಂದ್, ಸತ್ಯಾಗ್ರಹ ಹಾಗೂ ಇನ್ನಿತರ ಯಾವ ಚಳವಳಿಯಲ್ಲಾದರು ಭಾಗವಹಿಸಿದ್ದೀರ? ಹೌದು\ಇಲ್ಲ.
- ಹೌದು ಎಂದಾದರೆ ಯಾವುದು? ವಿವರಣೆ

39. ಈ ರೈತ ಚಳವಳಿಯಲ್ಲಿ ಎಲ್ಲಾ ಜನಸಮುದಾಯಗಳು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುವು? ವಿವರಣೆ

40. ರೈತರ ಮೇಲೆ ಯಾವುದಾದರು ಪೊಲೀಸ್ ಕೇಸ್‌ಗಳು ದಾಖಲಾಗಿದ್ದಾವಾ? ಹೌದು\ಇಲ್ಲ.
- ಹೌದು ಎಂದಾದರೆ, ಯಾವ ಕೇಸ್‌ಗಳು ದಾಖಲಾಗಿವೆ? ವಿವರಣೆ

41. ರೈತರ ಮೇಲೆ ಯಾವುದಾದರು ದೌರ್ಜನ್ಯ ಪ್ರಕರಣಗಳು ನಡೆದಿದ್ದಾವಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುವು? ವಿವರಣೆ

42. ರೈತರ ಆತ್ಮಹತ್ಯೆ ಪ್ರಕರಣಗಳು ನಡೆದಿದ್ದಾವಾ? ಹೌದು\ಇಲ್ಲ.
- ಹೌದು ಎಂದಾದರೆ ಯಾವುವು? ವಿವರಣೆ

43. ರೈತರ ಆತ್ಮಹತ್ಯೆಗೆ ಕಾರಣಗಳೇನು?

44. ರೈತರ ಆತ್ಮಹತ್ಯೆಯಿಂದ ಉಂಟಾಗುವ ಪರಿಣಾಮಗಳೇನು?

45. ಮುಂದಿನ ಭವಿಷ್ಯತ್ತಿನಲ್ಲಿ ರೈತ ಮತ್ತು ರೈತಸಂಘಟನೆಯ ಪಾತ್ರ ಹೇಗಿರಬೇಕೆಂಬುದನ್ನು ತಿಳಿಸಿ.

46. ರೈತಸಂಘಟನೆಗಳು ರೈತರನ್ನು ಒಂದುಗೂಡಿಸಿ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿದೆಯಾ? ಹೌದು\ಇಲ್ಲ.
   - ಹೌದು ಎಂದಾದರೆ ಯಾವುದು? ವಿವರಣೆ
   - ಇಲ್ಲ ಎಂದಾದರೆ ಏಕೆ ಮಾಡಿಲ್ಲ? ವಿವರಣೆ

47. ರೈತಸಂಘಟನೆ ಮತ್ತು ರೈತರು ರಾಜಕೀಯ ಪ್ರವೇಶ ಮಾಡಬೇಕೆ? ಹೌದು\ಇಲ್ಲ.
   - ಹೌದು ಎಂದಾದರೆ ಏಕೆ? ವಿವರಣೆ
   - ಇಲ್ಲ ಎಂದಾದರೆ ಏಕೆ? ವಿವರಣೆ

48. ಸರ್ಕಾರದ ಹೊಸ ಯೋಜನೆಗಳು ರೈತರ ಬಗೆಗೆ ಯಾವ ರೀತಿಯ ಪರಿವರ್ತನೆ ತಂದಿವೆ ಅಥವಾ ಸಹಾಯಕವಾಗಿವೆ?

49. ಸರ್ಕಾರದಿಂದ ರೈತರಿಗೆ ಯಾವ ರೀತಿಯ ಯೋಜನೆಗಳನ್ನು ನಿರೀಕ್ಷಿಸುತ್ತೀರಾ?

50. ನಗರೀಕರಣಕ್ಕಾಗಿ ರೈತರ ಭೂಮಿಯನ್ನು ಮುಟ್ಟುಗೋಲು ಹಾಕಿಕೊಂಡು ಒಕ್ಕಲೆಬ್ಬಿಸುತ್ತಿದ್ದಾರೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆಗಳೇನು?

51. ಸರ್ಕಾರದ ಎಲ್ಲಾ ಸವಲತ್ತುಗಳು ನಿಮಗೆ ಲಭ್ಯವಾಗಿದೆಯೇ? ಹೌದು ಅಥವಾ ಇಲ್ಲ
   - ಹೌದು ಎಂದಾದರೆ ಏಕೆ? ವಿವರಣೆ
   - ಇಲ್ಲ ಎಂದಾದರೆ ಏಕೆ? ವಿವರಣೆ

52. ರೈತರು ನಷ್ಟ ಅನುಭವಿಸಲು ಹಾಗೂ ಆತ್ಮಹತ್ಯೆಯಲ್ಲಿ ಮಧ್ಯವರ್ತಿಗಳ ಪಾಲು ಹೆಚ್ಚಾಗಿದೆ ಎಂಬುದು ಜನಾಭಿಪ್ರಾಯ. ಇದಕ್ಕೆ ನಿಮ್ಮ ಅಭಿಪ್ರಾಯವೇನು?

**ವಿಶ್ವನಾಥ .ಕೆ.ಎನ್**
ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಾದರಿ ಸಂದರ್ಶನ

**ಏಕೀಕರಣೋತ್ತರ ಕರ್ನಾಟಕದ ಬಯಲು ಸೀಮೆಯ ರೈತರ ಪ್ರತಿಭಟನೆಗಳು: ಚಾರಿತ್ರಿಕ ಅಧ್ಯಯನ.**

1. ಸಂದರ್ಶಿತರ ಹೆಸರು :- ಎಮ್.ಎಸ್.ಕೆ. ಶಾಸ್ತ್ರೀ
2. ಜನ್ಮ ದಿನಾಂಕ ಮತ್ತು ವಯಸ್ಸು :- ೨೫ ಮೇ ೧೯೪೦, ೭೮
3. ಸ್ಥಳ:- ಮಾಯಕೊಂಡ, ತಾಲೂಕು:- ದಾವಣಗೆರೆ ಜಿಲ್ಲೆ:- ದಾವಣಗೆರೆ
4. ಧರ್ಮ:- ಹಿಂದು
5. ಜಾತಿ:- ಬ್ರಾಹ್ಮಣ
6. ತಂದೆ ಮತ್ತು ತಾಯಿಯ ಹೆಸರು :- ಸುಬ್ರಮಣ್ಯ ಶಾಸ್ತ್ರಿ ಹಾಗೂ ಶಾಸ್ತ್ರಿ ಗೌರಮ್ಮ
7. ದೂರವಾಣಿ ಸಂಖ್ಯೆ:-9980032118
8. ವಿದ್ಯಾರ್ಹತೆ :- ಪಿ.ಯು.ಸಿ.
9. ಕುಟುಂಬದ ಸದಸ್ಯರ ಸಂಖ್ಯೆ:- 5 ಗಂಡು: 1 ಹೆಣ್ಣು: 2
10. ಕುಟುಂಬದ ವಿಧ:- ವಿಭಕ್ತ ಕುಟುಂಬ
11. ಮನೆಯ ಸ್ವರೂಪ:- ಅರ್.ಸಿ.ಸಿ
12. ವ್ಯವಸಾಯಕ್ಕೆ ಒಳಪಡಿಸಿರುವ ಭೂಮಿ ಯಾವುದು? ಒಣ ಭೂಮಿ
13. ಜಮೀನಿನ ವಿವರ :- 2.5 ಎಕರೆ
14. ನೀವು ಯಾವ ಯಾವ ಬೆಳೆಗಳನ್ನು ಬೆಳೆಯುತ್ತೀರಾ. ಮತ್ತು ವಾರ್ಷಿಕ ಅದಾಯ ಮತ್ತು ಖರ್ಚು(ರೂ)

| ಹಿಂದ | | | | | ಪ್ರಸ್ತುತ | | | | | ನಿಮ್ಮ ಅಭಿಪ್ರಾಯ |
|---|---|---|---|---|---|---|---|---|---|---|
| ಬೆಳೆಗಳು | ಎಕರೆ | ಕ್ವಿಂಟಾಲ್ | ವಾರ್ಷಿಕ ಖರ್ಚು | ಆದಾಯ | ಬೆಳೆಗಳು | ಎಕರೆ | ಕ್ವಿಂಟಾಲ್ | ವಾರ್ಷಿಕ ಖರ್ಚು | ಆದಾಯ | |
| | | | | | | | | | | |
| | | | | | | | | | | |
| | | | | | | | | | | |

15. ನೀವು ಯಾವುದಾದರು ಬೆಳೆಗಳಿಂದ ನಷ್ಟ ಅನುಭವಿಸಿದ್ದೀರಾ? ಹೌದು
    - ಹೌದು ಎಂದಾದರೆ ಕಾರಣಗಳನ್ನು ತಿಳಿಸಿ?

    ಮೆಕ್ಕೆಜೋಳವನ್ನು ಬೆಳೆಯುತ್ತಿದ್ದು ಅದಕ್ಕೆ ಬೆಂಬಲ ಬೆಲೆ ಸಿಗದೆ ನಷ್ಟವಾಗುತ್ತಿದೆ. ಬೆಳೆ ಪರಿಹಾರ ಸಿಗದೆ ಇರುವುದು.
16. ಯಾವುದಾದರು ಉಪಕಸುಬುಗಳನ್ನು ಮಾಡುತ್ತೀದ್ದೀರಾ, ಹಾಗೂ ಕುಟುಂಬದ ಇತರೆ ಮೂಲಾದಾಯಗಳು ಯಾವುವು? ಚಿಕ್ಕದಾದ ಕಿರಾಣಿ ಅಂಗಡಿ,
17. ಕುಟುಂಬದ ವಾರ್ಷಿಕ ಆದಾಯ:

| ವಾರ್ಷಿಕ ಆದಾಯ | | 1,00,001 – 5,00,000 | |
|---|---|---|---|
| 5000 ಕ್ಕಿಂತ ಕಡಿಮೆ | | 5,00,001 – 10,00,000 | |
| 50,001 – 1,00,000 | | 10,00,000 ಕ್ಕಿಂತ ಹೆಚ್ಚು | |

18. ಕುಟುಂಬದ ವಾರ್ಷಿಕ ಖರ್ಚು:

| ವಾರ್ಷಿಕ ಖರ್ಚು | | 1,00,001 – 5,00,000 | |
|---|---|---|---|
| 5000 ಕ್ಕಿಂತ ಕಡಿಮೆ | | 5,00,001 – 10,00,000 | |
| 50,001 – 1,00,000 | | 10,00,000 ಕ್ಕಿಂತ ಹೆಚ್ಚು | |

19. ನೀವು ಸಾಲವನ್ನು ಮಾಡಿದ್ದೀರಾ? ಹೌದು\ಇಲ್ಲ. ಹೌದಾದರೆ(ರೂಗಳಲ್ಲಿ

| ಕುಟುಂಬದ ಸಾಲ | | 1,00,001 – 5,00,000 | |
|---|---|---|---|
| 5001 – 50,000 | | 5,00,001 – 10,00,000 | |
| 50,001 – 1,00,000 | | 10,00,000 ಕ್ಕಿಂತ ಹೆಚ್ಚು | |

20. ನೀವು ಸಾಲ ಪಡೆಯುವ ಮೂಲಗಳು ಯಾವುವು?

| ಸಾಲದ ಮೂಲಗಳು | | ಬ್ಯಾಂಕುಗಳು | |
|---|---|---|---|
| ಬಂಧುಗಳು | | ಸಹಕಾರಿ ಸಂಸ್ಥೆಗಳು | |
| ಲೇವಾದೇವಿಗಾರರು | | ಇತರೆ | |

21. ನೀವು ಸಾಲವನ್ನು ಮಾಡಲು ಕಾರಣಗಳು?

| ಸಾಲದ ಕಾರಣಗಳು | | ಮನೆ ಕಟ್ಟಲು | |
|---|---|---|---|
| ಶಿಕ್ಷಣ | | ಕುಟುಂಬದ ನಿರ್ವಹಣೆ | |
| ವಿವಾಹ | | ಐಷಾರಾಮಿ ಬದುಕಿಗೆ | |
| ವ್ಯವಸಾಯ ಮಾಡಲು | | ಇತರೆ | |

22. ರೈತ ಎಂದರೆ ಯಾರು?– ಭೂಮಿಯನ್ನು ಉಳುಮೆ ಮಾಡಿ, ಬಿತ್ತನೆ ಮಾಡಿ, ಬೆಳೆ ತೆಗೆಯುವವನನ್ನು ರೈತ ಎಂದು ಕರೆಯಬಹುದು.

23. ರೈತರ ಸ್ವರೂಪ ಮತ್ತು ಲಕ್ಷಣಗಳು ಯಾವುವು?

ಭೂಮಿಯನ್ನೇ ನಂಬಿರುವವನು, ವ್ಯವಸಾಯದ ಕಾರ್ಯಗಳಲ್ಲಿ ತೊಡಗಿಕೊಂಡಿರುವವನು.

24. ನೀವು ಯಾವುದಾದರು ಸರ್ಕಾರಿ/ಅರೆ ಸರ್ಕಾರಿ ಸಂಸ್ಥೆಯ ಸದಸ್ಯತ್ವ ಪಡೆದುಕೊಂಡಿದ್ದೀರಾ? ಹೌದು

- ಹೌದು ಎಂದಾದರೆ ಯಾವುದು?

ದಾವಣಗೆರೆ ಎರಡನೇ ರಾಜಧಾನಿ ಹೋರಾಟ ಸಮಿತಿ, ನೈಋತ್ಯ ರೈಲ್ವೆವಲಯ ಪ್ರಯಾಣಿಕರ ಕುಂದುಕೊರತೆ ನಿವಾರಣೆ ಕ್ಷೇಮಾಭಿವೃದ್ಧಿ ಸಂಘಟನೆ

25. ನೀವು ರೈತ ಸಂಘಟನೆಯ ಸದಸ್ಯತ್ವ ಪಡೆದುಕೊಂಡಿದ್ದೀರಾ? ಹೌದು

- ಹೌದು ಎಂದಾದರೆ ಯಾವುದು? ಕರ್ನಾಟಕ ಪ್ರದೇಶ ರೈತ ಸಂಘದ

26. ನೀವು ಯಾವುದಾದರು ಸಂಘ ಸಂಸ್ಥೆಯ ನಾಯಕತ್ವ/ ರೈತ ಮುಖಂಡರಾಗಿದ್ದೀರಾ?

ದಾವಣಗೆರೆ ಎರಡನೇ ರಾಜಧಾನಿ ಹೋರಾಟ ಸಮಿತಿ, ನೈಋತ್ಯ ರೈಲ್ವೆವಲಯ ಪ್ರಯಾಣಿಕರ ಕುಂದುಕೊರತೆ ನಿವಾರಣೆ ಕ್ಷೇಮಾಭಿವೃದ್ಧಿ ಸಂಘಟನೆ

27. ರೈತರಿಗಿರುವ ಸಮಸ್ಯೆಗಳು ಯಾವುವು?

ಬೆಂಬಲ ಬೆಲೆ ಸಿಗದೆ ಇರುವುದು, ಅಂತರ್ಜಲದ ಅಭಾವ, ಸಾಲ ಮನ್ನಾ, ವಿದ್ಯುತ್ ನೀತಿ, ಕಳಪೆ ಬಿತ್ತನೆ ಬೀಜ ಮುಂತಾದುವು.

28. ಈ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕಂಡುಕೊಂಡ ಮಾರ್ಗೋಪಾಯಗಳು ಯಾವುವು?

ಬೆಂಬಲ ಬೆಲೆ ಸಿಗುವವರೆಗೆ ಬೆಳೆಗಳನ್ನು ಶೇಖರಣಾ ಗೊಡನ್‌ಗಳಲ್ಲಿ ಸಂಗ್ರಹಿವುದು. ಕೆರೆಗಳನ್ನು

ತುಂಬಿಸುವುದು, ಉತ್ತರ ಭಾರತನ ಹಾಗೂ ದಕ್ಷಿಣ ಭಾರತದ ನದಿಗಳ ಜೋಡಣಾ ಕಾರ್ಯ ಯೋಜನಾ ಕಾರ್ಯ ಜಾರಿಗೆ ತರುವುದು. ಸಕಾರಗಳು ಸಾಲ ಮನ್ನಾ ಮಾಡುವುದು.

29. ಸಾಲ ಮನ್ನಕ್ಕಾಗಿ ಚಳವಳಿ ನಡೆಸಿದ್ದೀರಾ? ಹೌದು

• ಹೌದು ಎಂದಾದರೆ ವಿವರಣೆ ನೀಡಿ?

೧೯೮೩ ಮಾರ್ಚ್ ೦೭ರಲ್ಲಿ ಉಂಟಾದ ಭೀಕರ ಬರಗಾಲದಿಂದ ರೈತರು ಸಾಲ ತೀರಿಸಲಾಗದೆ ಆತ್ಮಹತ್ಯೆಯ ದಾರಿ ಹಿಡಿದಿದ್ದರು. ಆ ಸಮಯದಲ್ಲಿ ಸಾವಿರಾರು ರೈತರು ನಾಯಕತ್ವ ವಹಿಸಿಕೊಂಡು, ಮುಖ್ಯಮಂತ್ರಿಯಾಗಿದ್ದ ರಾಮಕೃಷ್ಣ ಹೆಗಡೆಯವರನ್ನು ಭೇಟಿ ಮಾಡಿ ರೈತರ ಸಮ್ಮುಖದಲ್ಲಿಯೇ ವಿಫಲ ಬಾವಿಗಳ ಮೇಲಿರುವ ಸಾಲದ ಬಗ್ಗೆ ಚರ್ಚಿಸಿದರು. ರೈತರು ಪಿ.ಎಲ್.ಡಿ. ಬ್ಯಾಂಕ್ ಮತ್ತು ಇತರೆ ಬ್ಯಾಂಕ್‌ಗಳಿಂದ ಪಡೆದುಕೊಂಡಿದ್ದ ಒಟ್ಟು ೧೮೫ ಕೋಟಿ ರೂಗಳ ಸಾಲದ ಹಣವನ್ನು ಮನ್ನಾ ಮಾಡಿಸುವಲ್ಲಿ ಶಾಸ್ತ್ರಿಯವರು ಯಶಸ್ವಿಯಾದರು. ಅಲ್ಲದೆ ಆ ಸಮಯದಲ್ಲಿಯೇ ರೈತರಿಗೆ ಕ್ಲಿಯರೆನ್ಸ್ ಪತ್ರಗಳನ್ನು ರೈತರಿಗೆ ಕೊಡಿಸಿ ನೆಮ್ಮದಿಯ ಜೀವನವನ್ನು ಕಲ್ಪಿಸಿಕೊಟ್ಟರು. ಅದೇ ಸಮಯದಲ್ಲಿ ಸಹಕಾರಿ ಸಚಿವರಾಗಿದ್ದ ಹೆಚ್. ಏಕಾಂತಯ್ಯರವರ ಜೊತೆ ಚರ್ಚಿಸಿ ಬರಗಾಲದಿಂದ ರೈತರಿಗಾದ ನಷ್ಟವನ್ನು ವಿವರಿಸಿ. ಸಹಕಾರಿ ಸಂಘಗಳ ಸಾಲದ ಮೇಲಿನ ೨೬೦ ಕೋಟಿ ರೂಪಾಯಿಗಳ ಬಡ್ಡಿಯನ್ನು ಮನ್ನಾ ಮಾಡಿಸಿದರು.

30. ಬಿತ್ತನೆ ಬೀಜದ ಅಭಾವ ವಿರೋಧಿಸಿ ಚಳವಳಿ ನಡೆಸಿದ್ದೀರಾ? ಇಲ್ಲ.

31. ಗೊಬ್ಬರದ ಸಮಸ್ಯೆ ವಿರೋಧಿಸಿ ಚಳವಳಿ ನಡೆಸಿದ್ದೀರಾ? ಹೌದು

• ಹೌದು ಎಂದಾದರೆ ಯಾವುದು? ವಿವರಣೆ

೧೯೯೩ ಅಕ್ಟೋಬರ್ ತಿಂಗಳಲ್ಲಿ ಆಗಿನ ಪ್ರಧಾನಿಯಾಗಿದ್ದ ಪಿ.ವಿ. ನರಸಿಂಹರಾವ್ ಹಾಗೂ ಹಣಕಾಸು ಸಚಿವರಾದ ಮನಮೋಹನ್ ಸಿಂಗ್‌ರವರು ರಸಗೊಬ್ಬರಕ್ಕೆ ನೀಡುತ್ತಿದ್ದ ೧೬,೮೫೦/– ಕೋಟಿ ರೂಗಳಷ್ಟು ಸಬ್ಸಿಡಿ ಹಣವನ್ನು ಹಿಂತೆಗೆದುಕೊಂಡರು. ಇದರಿಂದ ರಸಗೊಬ್ಬರದ ಬೆಲೆ ಗಗನಕ್ಕೇರಿತು. ರೈತರೆಲ್ಲರೂ ಕಂಗಾಲಾದರು. ಇಂತಹ ಪರಿಸ್ಥಿತಿ ಮನಗಂಡ ಎಂ.ಎಸ್.ಕೆ. ಶಾಸ್ತ್ರಿಯವರು ಕರ್ನಾಟಕ ಪ್ರದೇಶ ರೈತ ಸಂಘದ ನೇತೃತ್ವದಲ್ಲಿ ಸಹಸ್ರಾರು ರೈತರನ್ನು ಒಗ್ಗೂಡಿಸಿ ರಾಷ್ಟ್ರೀಯ ಹೆದ್ದಾರಿ ಬಂದ್ ಮಾಡಿ, ನಿರಂತರ ರಸ್ತೆ ಚಳವಳಿ ನಡೆಸಿದರು. ೧೯೯೩ ಅಕ್ಟೋಬರ್ ೧೦ರಂದು ಪ್ರಧಾನಿಯವರು ಎಂ.ಎಸ್.ಕೆ ಶಾಸ್ತ್ರೀಯವರನ್ನು ತಮ್ಮ ನಿವಾಸಕ್ಕೆ ಕರೆಸಿಕೊಂಡಿದ್ದರು. ಡಾ.ಮನಮೋಹನ್ ಸಿಂಗ್ ರವರ ಸಮ್ಮುಖದಲ್ಲಿ ಮಾತನಾಡಿದ ಶಾಸ್ತ್ರೀಯವರು, ರಸಗೊಬ್ಬರದ ಮೇಲೆ ಹಾಕಿರುವ ಸಬ್ಸಿಸಿಡಿ ಹಣವನ್ನು ವಾಪಸ್ಸು ಪಡೆಯದಿದ್ದರೆ ನಿಸ್ಸಾಯಕರಾದ ರೈತರು ಬೆಳೆ ಬೆಳೆಯಲು ಸಾಧ್ಯವಿಲ್ಲ. ಇದರಿಂದ ಭಾರಿ ಹಾನಿಯುಂಟಾಗುತ್ತದೆ. ರಾಷ್ಟ್ರದ ಸಂಪತ್ತಿಗೂ ಭಾರೀ ಹೊಡೆತ ಬೀಳುತ್ತದೆ ಎಂದು ಮನವರಿಕೆ ಮಾಡಿಕೊಟ್ಟರು. ನಂತರ ಪ್ರಧಾನಿಯವರು ಸಬ್ಸಿಡಿ ನೀಡುವುದನ್ನು ಮುಂದುವರೆಸಿದ್ದರಿಂದ ಗೊಬ್ಬರದ ಬೆಲೆ ಯಥಾ ಸ್ಥಿತಿಗೆ ಬಂದಿತು.

32. ಬೆಂಬಲ ಬೆಲೆಗಾಗಿ ಚಳವಳಿ ನಡೆಸಿದ್ದೀರಾ? ಇಲ್ಲ.

33. ಬೆಳೆ ಪರಿಹಾರಕ್ಕಾಗಿ ಚಳವಳಿ ನಡೆಸಿದ್ದೀರಾ? ಇಲ್ಲ.

34. ಭೂ–ವಿವಾದಕ್ಕೆ ಸಂಬಂಧಿಸಿದಂತೆ ಚಳವಳಿಗಳನ್ನು ನಡೆಸಿದ್ದೀರಾ? ಇಲ್ಲ.

35. ಇತರೆ ಸಮಸ್ಯೆಗಳ ಹಿನ್ನಲೆಯಲ್ಲಿ ಚಳವಳಿ ನಡೆಸಿದ್ದೀರಾ? ಹೌದು

• ಹೌದು ಎಂದಾದರೆ ಯಾವುದು? ವಿವರಣೆ

ದಾವಣಗೆರೆಯು ಮಧ್ಯ ಕರ್ನಾಟಕದಲ್ಲಿದ್ದು ೧೯೪೭ರಿಂದಲೂ ಕರ್ನಾಟಕದ ರಾಜಧಾನಿಯನ್ನಾಗಿ ಮಾಡಬೇಕೆಂಬ ಹೋರಾಟ ನಡೆಯುತ್ತಲೇ ಬಂದಿದೆ. ಆದರೆ ಇದನ್ನು ೧೯೯೭ರವರೆಗೆ ಒಂದು ಜಿಲ್ಲಾ ಕೇಂದ್ರವನ್ನಾಗಿ ಮಾಡಲು ರಾಜಕಾರಣಿಗಳು ಸುಳ್ಳಿನ ಸರಮಾಲೆಯನ್ನೇ ಹೇಳುತ್ತಾ ಬಂದಿದ್ದರು. ಎಂ.ಎಸ್.ಕೆ. ಶಾಸ್ತ್ರೀಯವರು ದಾವಣಗೆರೆ ಜಿಲ್ಲೆ ರಚನಾ ಸಮಿತಿ ಹೋರಾಟಗಾರರ ಸಂಘಟನೆಯನ್ನು ಸ್ಥಾಪಿಸಿ, ನಿರಂತರವಾಗಿ ಹೋರಾಟ ಮಾಡಿದ ಫಲವಾಗಿ ಮುಖ್ಯ ಮಂತ್ರಿಗಳಾದ ದಿ: ಜೆ.ಹೆಚ್. ಪಟೇಲ್‌ರವರು ದಾವಣಗೆರೆಯನ್ನು ಆಗಸ್ಟ್ ೧೫ ೧೯೯೭ರಂದು ಜಿಲ್ಲಾ ಕೇಂದ್ರವನ್ನಾಗಿ ವಿದ್ಯುಕ್ತವಾಗಿ ಘೋಷಣೆ ಮಾಡಿದರು.

ದಾವಣಗೆರೆ ವಿಶ್ವವಿದ್ಯಾಲಯದ ಸ್ಥಾಪನೆಗಾಗಿ ಹೋರಾಟ ಸಮಿತಿಯ ಅಧ್ಯಕ್ಷರಾಗಿ ಹಲವು ದಶಕಗಳ ಕಾಲ ಹೋರಾಟ ನಡೆಸಿದ ಪ್ರತಿಫಲವಾಗಿ ೨೦೦೯ರಲ್ಲಿ ಮುಖ್ಯಮಂತ್ರಿಯಾಗಿದ್ದ ಬಿ.ಎಸ್. ಯಡಿಯೂರಪ್ಪರವರು. ದಾವಣಗೆರೆ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಘೋಷಣೆ ಮಾಡಿದರು.

ಮಧ್ಯ ಕರ್ನಾಟಕದ ದಾವಣಗೆರೆ ಜಿಲ್ಲೆಯು ಅಭಿವೃದ್ಧಿಯಾಗಬೇಕೆಂದು ಹಾಗಾಗಿ ದಾವಣಗೆರೆ ಜಿಲ್ಲೆಯ ಕೊಂಡಜ್ಜಿಯಲ್ಲಿ IIT (Indian Institute of Technology) ಎಂಬ ಶೈಕ್ಷಣಿಕ ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಆಶೋತ್ತರದಲ್ಲಿ, ರೈತ ಸಂಘಟನೆಯ ನೇತೃತ್ವದಲ್ಲಿ ಹೋರಾಟ ನಡೆಸಿ ವಿಫಲರಾಗಿದ್ದಾರೆ. ಪ್ರಸ್ತುತವಾಗಿ ದಾವಣಗೆರೆ ಜಿಲ್ಲೆಯ ಹುಚ್ಚವನಹಳ್ಳಿ ಹಾಗೂ ರಾಂಪುರದಲ್ಲಿ ೧೦೦೦ ಎಕರೆಯ ಗುಡ್ಡಗಾಡು ಪ್ರದೇಶವಿದೆ. ಈ ಸ್ಥಳದಲ್ಲಿ AIMSU (All India Medical Science University)ನ್ನು ಸ್ಥಾಪನೆ ಮಾಡಬೇಕೆಂದು ರೈತ ಸಂಘದ ಅಡಿಯಲ್ಲಿ ಹೋರಾಟ ಮಾಡುತ್ತ ಕೇಂದ್ರ ಸರ್ಕಾರವನ್ನು ಒತ್ತಾಯ ಪಡಿಸುತ್ತಿದ್ದಾರೆ.

36. ರೈತ ಚಳವಳಿಯಲ್ಲಿ ಮಹಿಳೆಯರು ಭಾಗವಹಿಸುತ್ತಾರಾ? ಇಲ್ಲ.

37. ನೀವು ಭಾಗವಹಿಸಿ ಯಶಸ್ಸು ಕಂಡ ರೈತ ಚಳವಳಿಗಳು ಯಾವುವು?

೧೯೮೩ ಮಾರ್ಚ್ ೦೭ರಲ್ಲಿ ಉಂಟಾದ ಭೀಕರ ಬರಗಾಲದಿಂದ ರೈತರು ಸಾಲ ತೀರಿಸಲಾಗದೆ ಆತ್ಮಹತ್ಯೆಯ ದಾರಿ ಹಿಡಿದಿದ್ದರು. ಆ ಸಮಯದಲ್ಲಿ ಸಾಲ ಮನ್ನಾ ಮಾಡಲಾಯಿತು. ೧೯೯೩ ಅಕ್ಟೋಬರ್ ೧೦ರಂದು ಪ್ರಧಾನಿಯವರು ಎಂ.ಎಸ್.ಕೆ ಶಾಸ್ತ್ರೀಯವರನ್ನು ತಮ್ಮ ನಿವಾಸಕ್ಕೆ ಕರೆಸಿಕೊಂಡಿದ್ದರು. ಡಾ.ಮನಮೋಹನ್ ಸಿಂಗ್ ರವರ ಸಮ್ಮುಖದಲ್ಲಿ ಮಾತನಾಡಿದ ಶಾಸ್ತ್ರೀಯವರು, ರಸಗೊಬ್ಬರದ ಮೇಲೆ ಹಾಕಿರುವ ಸಬ್ಸಿಸಿಡಿ ಹಣವನ್ನು ವಾಪಸ್ಸು ಪಡೆಯದಿದ್ದರೆ ನಿಸ್ಸಾಯಕರಾದ ರೈತರು ಬೆಳೆ ಬೆಳೆಯಲು ಸಾಧ್ಯವಿಲ್ಲ. ಇದರಿಂದ ಭಾರಿ ಹಾನಿಯುಂಟಾಗುತ್ತದೆ. ರಾಷ್ಟ್ರದ ಸಂಪತ್ತಿಗೂ ಭಾರೀ ಹೊಡೆತ ಬೀಳುತ್ತದೆ ಎಂದು ಮನವರಿಕೆ ಮಾಡಿಕೊಟ್ಟರು. ನಂತರ ಪ್ರಧಾನಿಯವರು ಸಬ್ಸಿಡಿ ನೀಡುವುದನ್ನು ಮುಂದುವರೆಸಿದ್ದರಿಂದ ಗೊಬ್ಬರದ ಬೆಲೆ ಯಥಾ ಸ್ಥಿತಿಗೆ ಬಂದಿತು. ದಾವಣಗೆರೆ ವಿಶ್ವವಿದ್ಯಾಲಯದ ಸ್ಥಾಪನೆಗಾಗಿ ಹೋರಾಟ ಸಮಿತಿಯ ಅಧ್ಯಕ್ಷರಾಗಿ ಹಲವು ದಶಕಗಳ ಕಾಲ ಹೋರಾಟ ನಡೆಸಿದ ಪ್ರತಿಫಲವಾಗಿ ೨೦೦೯ರಲ್ಲಿ ಮುಖ್ಯಮಂತ್ರಿಯಾಗಿದ್ದ ಬಿ.ಎಸ್. ಯಡಿಯೂರಪ್ಪರವರು. ದಾವಣಗೆರೆ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಘೋಷಣೆ ಮಾಡಿದರು.

38. ರಸ್ತೆ ತಡೆ, ಬಂದ್, ಸತ್ಯಾಗ್ರಹ ಹಾಗೂ ಇನ್ನಿತರ ಯಾವ ಚಳವಳಿಯಲ್ಲಾದರು ಭಾಗವಹಿಸಿದ್ದೀರ? ಹೌದು

• ಹೌದು ಎಂದಾದರೆ ಯಾವುದು? ವಿವರಣೆ

೧೯೯೩ ಅಕ್ಟೋಬರ್ ತಿಂಗಳಲ್ಲಿ ರಸಗೊಬ್ಬರದ ಬೆಲೆ ಗಗನಕ್ಕೇರಿತು. ರೈತರೆಲ್ಲರೂ ಕಂಗಾಲಾದರು. ಇಂತಹ ಪರಿಸ್ಥಿತಿ ಮನಗಂಡ ಎಂ.ಎಸ್.ಕೆ. ಶಾಸ್ತ್ರಿಯವರು ಕರ್ನಾಟಕ ಪ್ರದೇಶ ರೈತ ಸಂಘದ ನೇತೃತ್ವದಲ್ಲಿ ಸಹಸ್ರಾರು ರೈತರನ್ನು ಒಗ್ಗೂಡಿಸಿ ರಾಷ್ಟ್ರೀಯ ಹೆದ್ದಾರಿ ಬಂದ್ ಮಾಡಿ, ನಿರಂತರ ರಸ್ತೆ ಚಳವಳಿ ನಡೆಸಿದರು

39. ಈ ರೈತ ಚಳವಳಿಯಲ್ಲಿ ಎಲ್ಲಾ ಜನಸಮುದಾಯಗಳು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರಾ? ಹೌದು

40. ರೈತರ ಮೇಲೆ ಯಾವುದಾದರು ಪೊಲೀಸ್ ಕೇಸ್‌ಗಳು ದಾಖಲಾಗಿದ್ದಾವಾ? ಹೌದು

• ಹೌದು ಎಂದಾದರೆ, ಯಾವ ಕೇಸ್‌ಗಳು ದಾಖಲಾಗಿವೆ? ವಿವರಣೆ

ರಸ್ತೆ ತಡೆ ಹಾಗೂ ಪ್ರತಿಭಟನೆಗಳು ತೀವ್ರ ಸ್ವರೂಪ ಪಡೆದಾಗ.

41. ರೈತರ ಮೇಲೆ ಯಾವುದಾದರು ದೌರ್ಜನ್ಯ ಪ್ರಕರಣಗಳು ನಡೆದಿದ್ದಾವಾ? ಹೌದು

• ಹೌದು ಎಂದಾದರೆ ಯಾವುವು? ವಿವರಣೆ

೧೯೯೨ರ ಸಮಯದಲ್ಲಿ ಗೊಬ್ಬರ ಬೆಲೆ ಏರಿಕೆಯಾಗಿ ಪ್ರತಿಭಟನೆ ಮಾಡಿದಾಗ, ಬಂದೂಕು ದಾರಿ ಪೊಲೀಸರಿಬ್ಬರು ಹೊಲ ಮನೆಗಳತ್ತ ಓಡುತ್ತಿದ್ದ ರೈತರನ್ನು ಬೆನ್ನಟ್ಟಿ ಗುಂಡು ಹಾರಿಸ ತೊಡಗಿದರು. ಆಗ ನೇರ್ಲಿಗೆ ರಸ್ತೆಯ ಮೆಣಸಿನ ಹೊಲದಲ್ಲಿ ಅಡಗಿಕೊಂಡಿದ್ದ ಓಬೇನ ಹಳ್ಳಿಯ ಕಲ್ಲಿಂಗಪ್ಪನ ಮೇಲೆ ಗುಂಡು ಹಾರಿಸಿದಾಗ, ಗುಂಡು ತಗುಲಿ ಆ ರೈತ ಅಲ್ಲಿಯೇ ಮಡಿದನು. ಮುನ್ನುಗ್ಗಿದ ಪೊಲೀಸರು ಗುಂಡು ಹಾರಿಸಿದಾಗ ನಾಲ್ಕೈದು ಜನರಿಗೆ ಗಾಯಗಳಾಯಿತು. ಈ ಪೈಕಿ ಸಿದ್ದನೂರಿನ ಕುಶಲಕರ್ಮಿ ನಾಗರಾಜ ಆಚಾರಿಯ ಕಾಲನ್ನೇ ವೈದ್ಯರುಗಳು ಕತ್ತರಿಸಿ ಜೀವ ಉಳಿಸಲು ಯತ್ನಿಸಿದರು, ಆತ ಆಸ್ಪತ್ರೆಯಲ್ಲಿ ಅಸುನೀಗಿದರು.

42. ರೈತರ ಆತ್ಮಹತ್ಯೆ ಪ್ರಕರಣಗಳು ನಡೆದಿದ್ದಾವಾ? ಹೌದು.

• ಹೌದು ಎಂದಾದರೆ ಯಾವುವು? ವಿವರಣೆ

೨೦೧೭-೧೮ ರಲ್ಲಿ ೬೦ಕ್ಕೂ ಹೆಚ್ಚು ಪ್ರಕರಣಗಳು ದಾಖಲಾಗಿವೆ.

43. ರೈತರ ಆತ್ಮಹತ್ಯೆಗೆ ಕಾರಣಗಳೇನು? ಹೆಚ್ಚಿನ ಸಾಲ, ಬೆಳೆಗಳಿಗೆ ಬೆಂಬಲ ಬೆಲೆ ಸಿಗದೆ ಇರುವುದು.

44. ರೈತರ ಆತ್ಮಹತ್ಯೆಯಿಂದ ಉಂಟಾಗುವ ಪರಿಣಾಮಗಳೇನು? ದೇಶದ ಆರ್ಥಿಕ ಸ್ಥಿತಿಯ ಮೇಲೆ ಪರಿಣಾಮ ಬೀರುತ್ತದೆ. ಅ ರೈತನ ಕುಟುಂಬ ಸಾಮಾಜಿಕ ವ್ಯವಸ್ಥೆಯ ಎಲ್ಲಾ ಕ್ಷೇತ್ರಗಳಿಂದ ಹಿಂದುಳಿಯುತ್ತದೆ.

45. ಮುಂದಿನ ಭವಿಷ್ಯತ್ತಿನಲ್ಲಿ ರೈತ ಮತ್ತು ರೈತಸಂಘಟನೆಯ ಪಾತ್ರ ಹೇಗಿರಬೇಕೆಂಬುದನ್ನು ತಿಳಿಸಿ.ರೈತ ರಾಜ್ಯ ಹಾಗೂ ರೈತ ಸರ್ಕಾರಗಳು ಅಸ್ತಿತ್ವಕ್ಕೆ ಬರಬೇಕು.

46. ರೈತಸಂಘಟನೆಗಳು ರೈತರನ್ನು ಒಂದುಗೂಡಿಸಿ ಪ್ರತಿಭಟನೆಯಲ್ಲಿ ಸಕ್ರಿಯವಾಗಿ ಪಾಲ್ಗೋಳ್ಳುವಂತೆ ಮಾಡಿದೆಯಾ? ಹೌದು.

• ಹೌದು ಎಂದಾದರೆ ಯಾವುದು? ವಿವರಣೆ. ಹಾಗಾಗಿಯೇ ಈ ಭಾಗದಲ್ಲಿ ಹಲವಾರು ರೈತ ಪ್ರತಿಭಟನೆಗಳು ನಡೆದಿರುವುದನ್ನು ಕಾಣಬಹುದು

47. ರೈತಸಂಘಟನೆ ಮತ್ತು ರೈತರು ರಾಜಕೀಯ ಪ್ರವೇಶ ಮಾಡಬೇಕೆ? ಹೌದು

• ಹೌದು ಎಂದಾದರೆ ಏಕೆ? ವಿವರಣೆ. ರೈತರ ನೇತೃತ್ವದಲ್ಲಿ ಸರ್ಕಾರ ರಚಿಸಲು

48. ಸರ್ಕಾರದ ಹೊಸ ಯೋಜನೆಗಳು ರೈತರ ಬಗೆಗೆ ಯಾವ ರೀತಿಯ ಪರಿವರ್ತನೆ ತಂದಿವೆ ಅಥವಾ ಸಹಾಯಕವಾಗಿವೆ?

49. ಸರ್ಕಾರದಿಂದ ರೈತರಿಗೆ ಯಾವ ರೀತಿಯ ಯೋಜನೆಗಳನ್ನು ನಿರೀಕ್ಷಿಸುತ್ತೀರಾ?ಬೆಂಬಲ ಬೆಲೆ ಘೋಷಿಸಬೇಕು, ಸಾಲ ಮನ್ನಾ ಯೋಜನೆ, ಉಚಿತ ವಿದ್ಯುತ್. ಎಲ್ಲಾ ಬೆಳೆಗಳಿಗೂ ವಿಮಾ ಸೌಲಭ್ಯ ಯೋಜನೆ ಮುಂತಾದುವು.

50. ನಗರೀಕರಣಕ್ಕಾಗಿ ರೈತರ ಭೂಮಿಯನ್ನು ಮುಟ್ಟುಗೋಲು ಹಾಕಿಕೊಂಡು ಒಕ್ಕಲೆಬ್ಬಿಸುತ್ತಿದ್ದಾರೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆಗಳೇನು?

51. ಸರ್ಕಾರದ ಎಲ್ಲಾ ಸವಲತ್ತುಗಳು ನಿಮಗೆ ಲಭ್ಯವಾಗಿದೆಯೇ? ಇಲ್ಲ

52. ರೈತರು ನಷ್ಟ ಅನುಭವಿಸಲು ಹಾಗೂ ಆತ್ಮಹತ್ಯೆಯಲ್ಲಿ ಮಧ್ಯವರ್ತಿಗಳ ಪಾಲು ಹೆಚ್ಚಾಗಿದೆ ಎಂಬುದು ಜನಾಭಿಪ್ರಾಯ. ಇದಕ್ಕೆ ನಿಮ್ಮ ಅಭಿಪ್ರಾಯವೇನು?ದಾವಣಗೆರೆಯಲ್ಲಿರುವ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಅನಾದಿಕಾಲದಿಂದ ಒಂದು ಪಿಡುಗು ಜಾರಿಯಲ್ಲಿತ್ತು. ಅದೇನೆಂದರೆ ತಳಗಾಯಿ, ತಳಗಾಳು, ಸ್ಯಾಂಪಲ್ ಎಂಬ ಮೂರು ಹೆಸರುಗಳನ್ನು ಹೇಳಿಕೊಂಡು ಮಾರುಕಟ್ಟೆಯಲ್ಲಿರುವ ಅಮಾಲರು ರೈತರು ತಂದಂತಹ ಧಾನ್ಯಗಳನ್ನು ಹಗಲು ದರೋಡೆ ಹಾಗೂ ಲೂಟಿ ಮಾಡುತ್ತಿದ್ದರು. ಇಂತಹ ಪಿಡುಗನ್ನು ಸುಮಾರು ಇಪ್ಪತ್ತು ಸಾವಿರ ರೈತರುಗಳ ನೆರವಿನೊಡನೆ ಪ್ರತಿಭಟನೆ ಮಾಡಿ ನಿಲ್ಲಿಸುವ ಪ್ರಯತ್ನ ಮಾಡಿದರುಎಂಬುದನ್ನು ಸ್ಮರಿಸುವ ಮೂಲಕ ಆಭಿಪ್ರಾಯ ವ್ಯಕ್ತಪಡಿಸಿದರು.

**ವಿಶ್ವನಾಥ .ಕೆ.ಎನ್**
ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ೩. ಗ್ರಂಥಋಣ

೦೧. ಅಕ್ಷತಾ ಕೆ., ೨೦೧೫, **ಕಡಿದಾಳು ಶಾಮಣ್ಣನ ಕಾಡುತೊರೆಯ ಜಾಡು**, ಅಭಿನವ ಪ್ರಕಾಶನ, ಬೆಂಗಳೂರು.

೦೨. ಅರುಣ್ ಜೋಳದ ಕೂಡ್ಲಿಗಿ, ೨೦೦೭, **ಸೊಂಡೂರು ಭೂಹೋರಾಟ**, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ.

೦೩. ಅಶೋಕ್ ಎಸ್.ಆಲೂರಾ, ೨೦೧೦, **ಸಮಗ್ರ ಕೃಷಿ ಅಭಿವೃದ್ಧಿಗೆ ಬಲಶಾಲಿ ರೈತ ಸಂಘಟನೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೪. ಈರಯ್ಯ ಕಿಲ್ಲೇದಾರ, ೨೦೧೦, **ರೈತ ಪ್ರಹಸನಗಳು**, ಆದಿತ್ಯ ಪಬ್ಲಿಕೇಶನ್, ಬೆಳಗಾವಿ.

೦೫. ಈಶ್ವರಪ್ಪ ಎಂ.ಜಿ., ೨೦೦೪, **ಕೃಷಿ ಜಾನಪದ**,ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ

೦೬. ಉಜ್ಜನಪ್ಪ ಜಿ.ಎಸ್., ೨೦೧೦, **ಬಯಲುಸೀಮೆಯಲ್ಲಿ ಕೃಷಿ ಮತ್ತು ತೋಟಗಾರಿಕೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೭. ಕುಮಾರ್ ಕೆ.ಎಂ., ೨೦೦೮, **ಕರ್ನಾಟಕದಲ್ಲಿನ ರೈತ ಚಳವಳಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೦೮. ಕೋಟಿ ಎಸ್.ವಿ., ೨೦೦೯, **ಕರ್ನಾಟಕ ಭೂಕಂದಾಯ ಅಧಿನಿಯಮ, ೧೯೬೪ ಮತ್ತು ೧೯೬೬**, ವಿದ್ಯಾನಿಧಿ ಪ್ರಕಾಶನ, ಗದಗ.

೦೯. ಚಂದ್ರಪ್ಪ ಸಿ., ೨೦೦೫, **ರೈತ ಮತ್ತು ಆದಿವಾಸಿ ಚಳವಳಿ(ಸ್ವಾತಂತ್ರ್ಯ ಪೂರ್ವ)**, ಮನೋಜ ಪಬ್ಲಿಕೇಷನ್ಸ್, ಬೆಂಗಳೂರು.

೧೦. ಚಂದ್ರ ಪೂಜಾರಿ, ೨೦೧೦, **ಯಾಕೀಗ ಭೂಮಿ ಪ್ರಶ್ನೆ**, ಪ್ರಸಾರಾಂಗ ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಚಂದ್ರಶೇಖರ್ಎ.ಪಿ., ೨೦೧೪, **ಅನ್ನದಾತನ ಆತ್ಮಹತ್ಯೆ**, ವಿಸ್ಮಯ ಪ್ರಕಾಶನ, ಮೈಸೂರು

೧೨. ಚಂದ್ರಶೇಖರ್ ಸಿ.ಬಿ., ೨೦೦೭, **ಕಾಗೋಡು ಒಂದು ನೆನಪು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೩. ಚಂದ್ರಶೇಖರ್ ಅರ್.ವಿ., ೨೦೧೨, **ಭೂಮಿ ಮತ್ತು ಬದುಕು**, ಸಿವಿಜಿ ಬುಕ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೧೪. ಚಂದ್ರಶೇಖರ್ ಎಸ್., ೨೦೦೨,**ಆಧುನಿಕ ಕರ್ನಾಟಕದ ಆಂದೋಲನಗಳು**, ನಮ್ಮ ಪ್ರಕಾಶನ, ತಿಪಟೂರು.

೧೫. ಚನ್ನಬಸಪ್ಪ ಬೆಟ್ಟದೂರು, ೨೦೦೯, **ನನ್ನ ಜೀವನಾನುಭವಗಳು**, ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ

೧೬. ಚಂದ್ರಪೂಜಾರಿ ಎಂ., ೨೦೧೦, **ಯಾಕೀಗ ಭೂಮಿ ಪ್ರಶ್ನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಚಿನ್ನಸ್ವಾಮಿ ಸೋಸಲೆ ಎನ್., ೨೦೦೪, **ಸಾಮ್ರಾಜ್ಯ ಮತ್ತು ಸಂಸ್ಥಾನ**, ಪ್ರಸಾರಾಂಗ ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ತಿಮ್ಮನಹಳ್ಳಿ ವೇಣುಗೋಪಾಲ್, ೨೦೧೦, **ರೈತರು, ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳವಳಿ ೧೮೮೧-೧೯೭೪**, ಧಾತ್ರಿ ಪುಸ್ತಕ ಮಾಲೆ, ಬೆಂಗಳೂರು

೧೯. ಧನಗೆರೆ ಡಿ.ಎನ್., ೨೦೧೨, **ಭಾರತದಲ್ಲಿ ರೈತ ಚಳವಳಿಗಳು ೧೯೨೦-೧೯೫೦**, ಕ್ರಿಯಾ ಪ್ರಕಾಶನ, ಬೆಂಗಳೂರು

೨೦. ದಾಸನೂರು ಕೂಸಣ್ಣ. ೨೦೦೫, **ರೈತರ ಆತ್ಮಹತ್ಯೆ ಮತ್ತು ದಲಿತ ನವಬ್ರಾಹ್ಮಣಿಕೆ**, ಮಾತಂಗ ಪ್ರಕಾಶನ, ಮೈಸೂರು.

೨೧. ದೇವಕುಮಾರ್ ಎನ್., ೨೦೧೮, **ಎರೆ ಗೊಬ್ಬರ ಉತ್ಪಾದನೆ**, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೨೨. ದೇವಕುಮಾರ್ ಎನ್., ೨೦೧೮, **ಸಾವಯವ ಗೊಬ್ಬರಗಳು ಹಾಗೂ ಅವುಗಳ ಮಹತ್ವ**, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೨೩. ದೇವಕುಮಾರ್ ಎನ್., ೨೦೧೮, **ಸಾವಯವ ಕೃಷಿ**, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೨೪. ದೇವಕುಮಾರ್ ಎನ್., ೨೦೧೮, **ದ್ರವ ರೂಪದ ಗೊಬ್ಬರಗಳು**, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೨೫. ದೊರೆಸ್ವಾಮಿ.ಎಚ್ ಎಸ್., ೨೦೦೬, **ಹೋರಾಟದ ದಿಟ್ಟ ಹೆಜ್ಜೆಗಳು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಬೆಂಗಳೂರು.

೨೬. ನಟರಾಜ್ ಹುಳಿಯಾರ್, ೨೦೧೨, **ಹಸಿರು ಸೇನಾನಿ**, ವಿಶ್ವಾಸ್ ಪ್ರಿಂಟ್ಸ್, ಬೆಂಗಳೂರು

೨೭. ನಟರಾಜ್ ಹುಳಿಯಾರ್ (ಸಂ). ೨೦೧೨, **ಹಸಿರು ಸೇನಾನಿ : ಪ್ರೊ, ಎಂ.ಡಿ. ನಂಜುಂಡಸ್ವಾಮಿ : ಹೋರಾಟ ಮತ್ತು ಚಿಂತನೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೨೮. ನರೇಂದ್ರ ರೈ ದೇರ್ಲ, ೨೦೧೧, **ಹಸಿರು ಕೃಷಿಯ ನಿಟ್ಟುಸಿರುಗಳು**, ಕನಸು ಪ್ರಕಾಶನ, ದಕ್ಷಿಣ ಕನ್ನಡ.

೨೯. ನಾಗರಾಜ್ ಎಂ.ಜಿ., ೨೦೦೬, **ಕರ್ನಾಟಕ ರೈತ ಚಳವಳಿ ಮತ್ತು ಸತ್ಯಾಗ್ರಹಗಳು**, ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನ ಮಂಡಲ, ವಿಧಾನ ಸೌದ, ಬೆಂಗಳೂರು.

೩೦. ನಾಗಭೂಷಣ ೨೦೦೮, **ಭಾರತದಲ್ಲಿ ರೈತ ಹೋರಾಟಗಳು**, ಚಂದ್ರನಾಥ, ಪ್ರಕಾಶನ, ಧಾರವಾಡ.

೩೧. ನಾಡಕರ್ಣಿ ಎಂ.ವಿ., ೧೯೮೬, **ಕರ್ನಾಟಕದ ರೈತ ಹೋರಾಟಗಳು**, ಪ್ರಿಂಟರ್ ಪ್ರಕಾಶನ, ಬೆಂಗಳೂರು.

೩೨. ನಾರಾಯಣಸ್ವಾಮಿ ಜಿ.ಹೋ., ೨೦೧೦, **ಭಾರತದ ರೈತ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ**,ಬೆಂಗಳೂರು

೩೩. ಪುಟ್ಟಣ್ಣಯ್ಯ ಕೆ.ಎಸ್., ೨೦೧೭, **ಸದನದಲ್ಲಿ ರೈತನಾಯಕ ಕೆ.ಎಸ್.ಪುಟ್ಟಣ್ಣಯ್ಯ**, ಅಭಿರುಚಿ ಪ್ರಕಾಶನ, ಮೈಸೂರು

೩೪. ಬಸವರಾಜು ತಂಬಾಕೆ, ೨೦೧೧, **ನಾಕಂಡ ಪ್ರೊ, ನಂಜುಂಡಸ್ವಾಮಿ**, ಕರ್ನಾಟಕ ರಾಜ್ಯ ರೈತ ಸಂಘ, ಬೀದರ್.

೩೫. ಬಸವರಾಜ್, ೧೯೮೧, **ಶಿವಮೊಗ್ಗ ರೈತ ಚಳವಳಿ**, ಸಮುದಾಯ ಪ್ರಕಾಶನ, ಬೆಂಗಳೂರು.

೩೬. ಬಸವರಾಜ್ ತಂಬಾಕರೆ, ೨೦೧೧, **ನಾಕಂಡ ಪ್ರೊ, ನಂಜುಂಡಸ್ವಾಮಿ**, ಕರ್ನಾಟಕ ರಾಜ್ಯ ರೈತ ಸಂಘ, ಬೀದರ್.

೩೭. ಬೋರಲಿಂಗಯ್ಯ ಹಿ.ಚಿ., ೨೦೦೨,**ಕಾಗೋಡು ಚಳವಳಿ, ಸುವರ್ಣ ಸಂಪುಟ**, ಮಲೆನಾಡು ಜಾನಪದ ಲೋಕ, ಸಾಗರ.

೩೮. ಮಲ್ಲಣ್ಣ ಶಂಕರಣ್ಣ ನಾಗರಾಳ, ೨೦೧೦, **ಒಣ ಬೇಸಾಯ ಪದ್ಧತಿಗಳು**,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಮುಜಾಫರ್ ಅಸ್ಸಾದಿ, ೨೦೦೯, **ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ ರೈತ ಹೋರಾಟ ಹಾಗೂ ಸಾಮಾಜಿಕ ಚಳವಳಿ**, ವಿಶ್ವಾಸ್ ಪ್ರಿಂಟರ್ಸ್, ಬೆಂಗಳೂರು.

೪೦. ಮುಜಾಫರ್ ಅಸ್ಸಾದಿ, ೨೦೦೯, **ಇನ್ನೊಂದು ಮುಖ**, ವಿಶ್ವಾಸ್ ಪ್ರಿಂಟರ್ಸ್, ಬೆಂಗಳೂರು

೪೧. ಮೇಟಿ ಮಲ್ಲಿಕಾರ್ಜುನ, ೨೦೧೩, **ಸಬಾಲ್ಟರ್ನ್ ಓದು**, ಅರುಹು ಕುರುಹು ಪ್ರಕಾಶನ, ಮೈಸೂರು.

೪೨. ಮೊಗಳ್ಳಿ ಗಣೇಶ್, ೨೦೦೯, **ಉರಿದಾವೊ ನೇಗಿಲು**, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಮೋಹನ್‌ಕೃಷ್ಣ ರೈ ಕೆ., ೨೦೧೦, **ಕೆನರಾದ ವಿಭಜನೆ**, ಪ್ರಸಾರಾಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಯಡಿಯೂರಪ್ಪ ತುಮಕೂರು, **ಸಕ್ಕರೆ ವಲಯದಿಂದ ಕಬ್ಬು ಬೆಳೆಗಾರರೆಡೆಗೆ**, ರಾಜ್ಯ ಕಬ್ಬು ಬೆಳೆಗಾರರ ಸಂಘ, ಕರ್ನಾಟಕ

೪೫. ಯತಿರಾಜು ಚಂದ್ರಶೇಖರ್ ಬಾಳೆ ಸಿ., ೨೦೧೬, **ಕಾಯದ ಕೃಷಿ**, ಕೃಷಿ ಭಾರತ್ ಪ್ರಕಾಶನ, ಬೆಂಗಳೂರು.

೪೬. ರಮೇಶ್ ಎಸ್.ಜಿ., ೨೦೧೧, **ಕೃಷಿ : ಪಾರಂಪರಿಕ ಜ್ಞಾನ**,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ರಮೇಶ್ ಬಿ.ಕೆ., ೨೦೦೭, **ಕಾವೇರಿ ಸಚಿತ್ರ ಚರಿತೆ**, ರಾಜಧಾನಿ ಪ್ರಕಾಶನ, ಬೆಂಗಳೂರು.

೪೮. ರಾಜಶೇಖರ್ ನಾಯ್ಡು ಗುಡಿಬಂಡೆ, ೨೦೧೫, **ಕರ್ನಾಟಕ ರಾಜ್ಯದಲ್ಲಿ ಭೂ ಹಕ್ಕು ಚಳವಳಿ**, ಕರ್ನಾಟಕ ಭೂ ಹಕ್ಕುದಾರರ ವೇದಿಕೆ, ಬೆಂಗಳೂರು.

೪೯. ರಾಮಾಶ್ರಯ, ೨೦೦೯, **ಕರ್ನಾಟಕದ ಭೂಸ್ವಾಧೀನ ಅಧಿನಿಯಮ,** ಚೈತನ್ಯ ಪ್ರಕಾಶನ,

೫೦. ರಾಮಚಂದ್ರೇಗೌಡ ಹಿ.ಶಿ., ೨೦೧೦, **ರೈತ ಚಳವಳಿ ಸುಮ್ಮನೆ,** ದಾರಿದೀಪ ಪ್ರಕಾಶನ, ಮೈಸೂರು.

೫೧. ರಾಮಕೃಷ್ಣರಾವ್ ಎಲ್., ೨೦೧೬, **ಕೃಷಿ ಮತ್ತು ತೋಟಗಾರಿಕೆ ಬೆಳೆಗಳ ಆಧುನಿಕ ಬೇಸಾಯ ಪದ್ಧತಿಗಳು,** ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು.

೫೨. ರಾಮಮನೋಹರ ಲೋಹಿಯಾ, ೨೦೧೦, **ಭಾರತದ ರೈತ,** ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ, ಬೆಂಗಳೂರು.

೫೩. ಲಿಂಗದಹಳ್ಳಿ ಚೇತನ್ ಕುಮಾರ್ (ಸಂ), **ಗೋಲಿಬಾರ್ ಗೌರ್ನಮೆಂಟಿನಲ್ಲಿ ರೈತರ ಕಗ್ಗೊಲೆ,** ನೆಲದವ್ವ ಪ್ರಕಾಶನ, ಬೆಂಗಳೂರು.

೫೪. ವಾಸುದೇವ ಬಡಿಗೇರ, ೨೦೧೨, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ವಿಜಯ ಪೂಣಚ್ಚ ತಂಬಡ (ಪ್ರಸಂ), **ಸಮಕಾಲೀನ ಕರ್ನಾಟಕ –ಚರಿತ್ರೆಯ ವಿವಿಧ ಅಯಾಮಗಳು,** ಸಂ. ೪, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೬. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೦, **ಜಲಸಂಬಂಧಿ ಚಳವಳಿಗಳು,** ಪ್ರಸಾರಾಂಗ ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೧೪, **ಏಕೀಕರಣ ಚಳವಳಿ ಮತ್ತು ಬಳ್ಳಾರಿ ಜಿಲ್ಲೆ,** ಪ್ರಸಾರಾಂಗ ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೮. ವೀರಭದ್ರಪ್ಪ ಬಿಸ್ಲಳ್ಳಿ (ಸಂ)., ೨೦೦೮, **ಪ್ರೊ.ಎಂ.ಡಿ.ಎನ್,** ಅಭಿರುಚಿ ಪ್ರಕಾಶನ, ಸರಸ್ವತಿಪುರ, ಮೈಸೂರು.

೫೯. ಶರಶ್ಚಂದ್ರ ರಾನಡೆ, ೨೦೧೪, **ಕೃಷಿ ಸಂದರ್ಶನ,** ಎಸ್.ಎಲ್.ಎನ್.ಪಬ್ಲಿಕೇಶನ್, ಬೆಂಗಳೂರು.

೬೦. ಶರಶ್ಚಂದ್ರ ರಾನಡೆ ಜಿ., ೨೦೧೪, **ಕೃಷಿ ಸಂಚಯ,** ಎಸ್.ಎಲ್.ಎನ್.ಪಬ್ಲಿಕೇಶನ್, ಬೆಂಗಳೂರು.

೬೧. ಶೂದ್ರ ಶ್ರೀನಿವಾಸ, ೨೦೦೬, **ದೇವರಾಜು ಅರಸು ಒಂದು ಅವಲೋಕನ,** ಕನ್ನಡ ಸಾಂಸ್ಕೃತಿಕ ಇಲಾಖೆ, ಕನ್ನಡ ಭವನ, ಬೆಂಗಳೂರು.

೬೨. ಶಿವರಾಮಯ್ಯ, ೨೦೦೭, **ಕತ್ತಿಯಾವುದಾದರೇನು?,** ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ, ಬೆಂಗಳೂರು

೬೩. ಸತೀಶ್ ಪಾಟೀಲ್, ೨೦೦೭, **ಹೆಬ್ಬಳ್ಳಿ ಭೂಹೋರಾಟ,**ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೪. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೮, **ಸಂತೇಬೆನ್ನೂರು ನಾಯಕರು,** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ಬೆಂಗಳೂರು.

೬೫. ಸವಿತ ಬಿ.ಸಿ., ೨೦೧೦, **ರೈತ ಹೋರಾಟಗಾರ ಪ್ರೊ. ಎಂ.ಡಿ. ನಂಜುಂಡ ಸ್ವಾಮಿ,**ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ಸಿದ್ಧರಾಮಯ್ಯ ಬಿ.ಎಸ್., ೨೦೦೯, **ಸಾವಯವ ಕೃಷಿ,** ಸಪ್ನ ಬುಕ್ ಹೌಸ್, ಬೆಂಗಳೂರು.

೬೭. ಸುಜ್ಞಾನ ಮೂರ್ತಿ, ೨೦೧೬, **ಭಾರತದ ಚರಿತ್ರೆಯಲ್ಲಿ ರೈತ,** ಲಡಾಯಿ ಪ್ರಕಾಶನ, ಗದಗ.

೬೮. ಸೂರಿ ಕೆ.ಸಿ., ೨೦೦೬, **ರೈತರ ಆತ್ಮಹತ್ಯೆಗಳಿಗೆ ಕಾರಣಗಳೇನು?,** ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೬೯. ಸೊಪ್ಪಿನ್ ಬಿ.ಎಸ್., ೨೦೧೧, **ಮಲಪ್ರಭೆಯ ಮಡಿಲಿನಿಂದ ಸಿಡಿದೆದ್ದ ರೈತ,** ಚಿಂತನ ಪುಸ್ತಕ, ಬೆಂಗಳೂರು

೭೦. ಸೋಮಣ್ಣ, ೨೦೧೦, **ವ್ಯವಸಾಯ ಸಂಬಂಧಿ ಆಚರಣೆಗಳು,**ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೧. ಸೋಮಶೇಖರ್ ಎಸ್.ವೈ., **ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ – ಜಗಳೂರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೨. ಹಯವದನರಾವ್, ೧೯೪೩, **ಹಿಸ್ಟರಿ ಆಫ್ ಮೈಸೂರು, ಸಂಪುಟ–೦೧,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೭೩. ಹಯವದನರಾವ್, ೧೯೪೫, **ಹಿಸ್ಟರಿ ಆಫ್ ಮೈಸೂರು, ಸಂಪುಟ–೦೨,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೭೪. ಹುರುಗಲವಾಡಿ ರಾಮಯ್ಯ, ೨೦೦೫, **ಸೂರು ಸೂರಿನ ದೀಪ ಹೋರಾಟ ಮತ್ತು ಜಾಗೃತಿ,** ಜನಕಲಾರಂಗ, ಮದ್ದೂರು

**ಗ್ಯಾಸೆಟಿಯರ್ಸ್**

೦೧. ಅಭಿಶಂಕರ್‌ಕೆ., ೧೯೭೫, **ರಾಯಚೂರು ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೨. ಅಭಿಶಂಕರ್ ಕೆ., ೧೯೭೫, **ಶಿವಮೊಗ್ಗ ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೩. ಚಂದ್ರಶೇಖರ್ ಎನ್., ೨೦೧೭, **ತುಮಕೂರು ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೪. ಚಿತ್ತರಂಜನ್, ೨೦೦೫, **ಕೋಲಾರ ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೫. ಜಿಲಾನಿ ಎಸ್.ಎ., ೨೦೦೭, **ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೬. ಪಾಟೀಲ್ ಎಮ್.ಬಿ., ೧೯೯೭, **ಕಲ್ಬುರ್ಗಿ ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೭. ಪಾರ್ಥಸಾರಥಿ ಟಿ.ಎ., ೨೦೦೩, **ಮಂಡ್ಯ ಜಿಲ್ಲಾ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೮. ಮುನಿಸ್ವಾಮಿ ಆರ್., ೧೯೯೯, **ವಿಜಯಾಪುರ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೦೯. ಸತ್ಯನ್ ಬಿ.ಎನ್., ೧೯೬೭, **ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೦. ಸೂರ್ಯನಾಥ ಯು. ಕಾಮತ್, ೧೯೯೫, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಧಾರವಾಡ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೧. ಸೂರ್ಯನಾಥ ಯು. ಕಾಮತ್, ೧೯೯೨, **ಕೊಡಗು ಜಿಲ್ಲಾ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೨. ಸೂರ್ಯನಾಥ ಯು. ಕಾಮತ್, ೧೯೮೫, **ಉತ್ತರ ಕನ್ನಡ ಜಿಲ್ಲಾ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೩. ಸೂರ್ಯನಾಥ್ ಯು., ಕಾಮತ್, ೧೯೮೮, **ಮೈಸೂರು ಜಿಲ್ಲಾ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೪. ಸೂರ್ಯನಾಥ್ ಯು. ಕಾಮತ್, ೧೯೮೪, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ–೧**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೫. ಸೂರ್ಯನಾಥ್ ಯು. ಕಾಮತ್, ೧೯೮೫, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ–೨**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

೧೬. ಸೂರ್ಯನಾಥ್ ಯು. ಕಾಮತ್, ೧೯೮೬, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ–೩**, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು.

**ಸರ್ಕಾರಿ ದಾಖಲೆಗಳು**

೦೧. **ಕರ್ನಾಟಕ ಆರ್ಥಿಕ ಸಮೀಕ್ಷೆ, ೨೦೧೬–೧೭**, ಕರ್ನಾಟಕ ಸರ್ಕಾರ, ಬೆಂಗಳೂರು.

೦೨. **ಗ್ರೌಂಡ್ ವಾಟರ್ ಇನ್ಫಾರ್ಮೇಶನ್ ಬುಕ್ಲೆಟ್ ದಾವಣಗೆರೆ ಡಿಸ್ಟ್ರಿಕ್ಟ್, ೨೦೦೭**, ಸೌತ್ ವೆಸ್ಟರ್ನ್ ರೀಜನ್, ಬೆಂಗಳೂರು.

೦೩. **ಗ್ರೌಂಡ್ ವಾಟರ್ ಇನ್ಫಾರ್ಮೇಶನ್ ಬುಕ್ಲೆಟ್ ಚಿತ್ರದುರ್ಗ ಡಿಸ್ಟ್ರಿಕ್ಟ್, ೨೦೦೭**, ಸೌತ್ ವೆಸ್ಟರ್ನ್ ರೀಜನ್, ಬೆಂಗಳೂರು.

೦೪. **ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ: ೨೦೧೫–೧೬** ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತ್, ಚಿತ್ರದುರ್ಗ.

೦೫. **ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ಬುಕ್ – ಚಿತ್ರದುರ್ಗ, ೨೦೧೧**, ಡೈರೆಕ್ಟೊರೇಟ್ ಆಫ್ ಸೆನ್ಸಸ್ ಅಪೆರೆಷನ್ಸ್, ಕರ್ನಾಟಕ,

೦೬. **ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ಬುಕ್ – ದಾವಣಗೆರೆ, ೨೦೧೧**, ಡೈರೆಕ್ಟೊರೇಟ್ ಆಫ್ ಸೆನ್ಸಸ್ ಅಪೆರೆಷನ್ಸ್, ಕರ್ನಾಟಕ.

